# ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯಪುಸ್ತಕಗಳ ಭಾಷಿಕ ಮತ್ತು ಶೈಕ್ಷಣಿಕ ಅಧ್ಯಯನ

(ಪ್ರಚಲಿತ ಪ್ರಥಮ ಕನ್ನಡ ಭಾಷಾ ಪಠ್ಯಪುಸ್ತಕಗಳನ್ನು ಅನುಲಕ್ಷಿಸಿ)

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ) ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
ವಾಗೀಶ. ಎನ್.ಎಂ

ಮಾರ್ಗದರ್ಶಕರು
ಡಾ. ಅಶೋಕಕುಮಾರ
ಪ್ರವಾಚಕರು



ಭಾಷಾ ನಿಕಾಯ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೯

# ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯಪುಸ್ತಕಗಳ ಭಾಷಿಕ ಮತ್ತು ಶೈಕ್ಷಣಿಕ ಅಧ್ಯಯನ

(ಪ್ರಚಲಿತ ಪ್ರಥಮ ಕನ್ನಡ ಭಾಷಾ ಪಠ್ಯಪುಸ್ತಕಗಳನ್ನು ಅನುಲಕ್ಷಿಸಿ)

**ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ) ಪದವಿಗಾಗಿ**
**ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ**


ಸಂಶೋಧಕರು
**ವಾಗೀಶ. ಎನ್.ಎಂ**

ಮಾರ್ಗದರ್ಶಕರು
**ಡಾ. ಅಶೋಕಕುಮಾರ**
ಪ್ರವಾಚಕರು







ಭಾಷಾ ನಿಕಾಯ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೯

# ದೃಢೀಕರಣ ಪತ್ರ

ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯಪುಸ್ತಕಗಳ ಭಾಷಿಕ ಮತ್ತು ಶೈಕ್ಷಣಿಕ ಅಧ್ಯಯನ (ಪ್ರಚಲಿತ ಪ್ರಥಮ ಕನ್ನಡ ಭಾಷಾ ಪಠ್ಯಪುಸ್ತಕಗಳನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ವಾಗೀಶ. ಎನ್.ಎಂ. ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೨೬-೧೧-೨೦೦೮
ಸ್ಥಳ : ವಿದ್ಯಾರಣ್ಯ

(ಡಾ. ಅಶೋಕಕುಮಾರ)
ಮಾರ್ಗದರ್ಶಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಪ್ರಮಾಣ ಪತ್ರ

ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯಪುಸ್ತಕಗಳ ಭಾಷಿಕ ಮತ್ತು ಶೈಕ್ಷಣಿಕ ಅಧ್ಯಯನ (ಪ್ರಚಲಿತ ಪ್ರಥಮ ಕನ್ನಡ ಭಾಷಾ ಪಠ್ಯಪುಸ್ತಕಗಳನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ **ಡಾ. ಅಶೋಕಕುಮಾರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ ವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ :

ಸ್ಥಳ : ವಿದ್ಯಾರಣ್ಯ

(ವಾಗೀಶ. ಎನ್.ಎಂ)
ಸಂಶೋಧಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ –೫೮೩ ೨೭೬

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಅಧ್ಯಯನ ಕೈಗೊಳ್ಳಲು ಅವಕಾಶ ಕಲ್ಪಿಸಿಕೊಟ್ಟ ಅಂದಿನ ಮಾನ್ಯ ಕುಲಪತಿಗಳಾದ ಡಾ. ಬಿ.ಎ.ವಿವೇಕ ರೈ ಮತ್ತು ಇಂದಿನ ಕುಲಪತಿಗಳಾದ ಡಾ. ಎ.ಮುರಿಗೆಪ್ಪ ಅವರಿಗೆ ಕೃತಜ್ಞತೆಗಳು. ಮಾನ್ಯ ಕುಲಸಚಿವರಾದ ಎಸ್.ಎಸ್. ಪೂಜಾರ ಅವರಿಗೆ ಮತ್ತು ಅಧ್ಯಯನಾಂಗದ ನಿರ್ದೇಶಕರಾದ ಡಾ. ವಿರೇಶ ಬಡಿಗೇರ ಅವರಿಗೂ ಸಹ ಕೃತಜ್ಞತೆಗಳು.

ಸೂಕ್ತ ಸಲಹೆ, ಹಾಗೂ ನಿರಂತರ ಮಾರ್ಗದರ್ಶನ ನೀಡಿ ಈ ಮಹಾಪ್ರಬಂಧವು ರೂಪು ಪಡೆಯುವುದಕ್ಕೆ ಕಾರಣರಾದ ನನ್ನ ಪ್ರೀತಿಯ ಮೇಷ್ಟ್ರು ಡಾ. ಅಶೋಕಕುಮಾರ ಅವರಿಗೆ ಗೌರವಪೂರ್ವಕ ಕೃತಜ್ಞತೆಗಳು. ಅಧ್ಯಯನಕ್ಕೆ ಸಹಕರಿಸಿ ತಿದ್ದಿ, ತೀಡಿದಂತಹ ಪ್ರೀತಿಯ ಮೇಷ್ಟ್ರುಗಳಾದ ಡಾ. ಕೆ.ವಿ.ನಾರಾಯಣ, ಮುಖ್ಯಸ್ಥರಾದ ಡಾ. ಡಿ.ಪಾಂಡುರಂಗಬಾಬು, ಡಾ.ಸಾಂಬಮೂರ್ತಿ, ಡಾ. ಪಿ.ಮಹಾದೇವಯ್ಯ, ಅವರಿಗೂ ಗೌರವಪೂರ್ವಕ ನಮನಗಳು.

ವಿಷಯದ ಕುರಿತಂತೆ ಚರ್ಚಿಸಿ ಸೂಕ್ತ ಸಲಹೆಗಳನ್ನು ನೀಡಿದ ಹಿರಿಯರಾದ ಡಾ. ಮಹಾಬಲೇಶ್ವರರಾವ್, ಸತ್ಯನಾರಾಯಣ ಮಲ್ಲಿಪಟ್ಣ, ಸುಬ್ಬಕೃಷ್ಣ, ವಿಜಯಲಕ್ಷ್ಮೀ ಗೀತಾ,ಜಿ. ಬಸವಕುಮಾರಯ್ಯ, ಸಿ.ಎಸ್. ರಾಮಚಂದ್ರ, ಲಿಂಗದೇವರು ಹಳೆಮನೆ, ಬಸವರಾಜ ಕೋಡಗುಂಟೆ, ಡಾ.ಅನ್ವನ್, ಸಂಗಮೇಶ ಸೌದತ್ತಿಮಠ, ಮಾರುತಿ ಎಸ್, ತಳವಾರ, ಮಲ್ಲೇಪುರಂ ಜಿ.ವೆಂಕಟೇಶ್, ಸುಬ್ಬಣ್ಣ ರೈ ಮಾಧವ ಪೆರಾಜೆ, ರಹಮತ್ ತರೀಕೆರೆ, ಸುಚೇತ ನವರತ್ನ ಮತ್ತು ಪರೋಕ್ಷವಾಗಿ ಸಹಕರಿಸಿದ ವಿಶ್ವವಿದ್ಯಾಲಯದ ಎಲ್ಲಾ ಅಧ್ಯಾಪಕ ವರ್ಗದವರಿಗೆ ಕೃತಜ್ಞತೆಗಳು.

ವಿಷಯಕ್ಕೆ ಸಂಬಂಧಿಸಿದಂತೆ ಆಕರ ಸಾಮಗ್ರಿಗಳನ್ನು ಸಂಗ್ರಹಿಸುವಲ್ಲಿ ಸಹಕರಿಸಿದ ಕನ್ನಡ ವಿಶ್ವವಿದ್ಯಾಲಯ ಹಂಪಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಮೈಸೂರು ವಿಶ್ವವಿದ್ಯಾಲಯ, ಮಂಗಳೂರು ವಿಶ್ವವಿದ್ಯಾಲಯ, ಹಾಗೂ ಸಿ.ಐ.ಐ.ಎಲ್, ಎನ್.ಸಿ.ಇ.ಆರ್.ಟಿ, ಡಿ.ಎಸ್.ಇ.ಆರ್.ಟಿ, ಗ್ರಂಥಾಲಯಗಳ ಅಧಿಕಾರಿಗಳಿಗೆ ಮತ್ತು ರುದ್ರಮುನಿ(ಚಳ್ಳಕೇರಿ) ಮಹಾಲಿಂಗಭಟ್, ಬೆನೆಟ್ ಅಮ್ಮಣ್ಣ, (ಮಂಗಳೂರು) ಅವರಿಗೆ ಕೃತಜ್ಞತೆಗಳು.

ನನ್ನ ಶ್ರೇಯೋಭಿವೃದ್ಧಿಯನ್ನು ಬಯಸುತ್ತಿರುವ ಪೂಜ್ಯ ತಂದೆಯವರಾದ ಶಿವಲಿಂಗಯ್ಯ ಎನ್.ಎಂ, ತಾಯಿ ಸಿದ್ಧಲಿಂಗಮ್ಮ ಎನ್.ಎಂ, ಹಾಗೂ ಸಹೋದರ ಸಹೋದರಿಯರ ಕುಟುಂಬ ವರ್ಗದವರನ್ನೆಲ್ಲಾ ನೆನೆಯುತ್ತೇನೆ.

ಅಧ್ಯಯನ ಸಂದರ್ಭದಲ್ಲಿ ಸಹಕರಿಸಿದ ಗೆಳೆಯರಾದ ವಿರೂಪಾಕ್ಷಪ್ಪ, ಯು.ಮಂಜುನಾಥ, ಹೆಚ್.ಜಿ.ನಾಗಭೂಷಣ, ಕಲ್ಲಯ್ಯ ಹಿರೇಮಠ, ವೀರಾಕ್ಷಿ, ವೆಳ್ಳಿಮಾ, ಕುಪ್ಪೇರಾವ್, ಗಜಾನನ, ಪ್ರವೀಣ ಮುತ್ತು ಬಜಂತ್ರಿ, ಸೋಮಕ್ಕ ಎಂ, ನಾಗರಾಜ ಚಿಂತ್ರಪಳ್ಳಿ, ಶಾಂತಕುಮಾರ ಎ.ಜಿ. ಅವರಿಗೆ ಮತ್ತು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ಹೃತ್ಪೂರ್ವಕ ಕೃತಜ್ಞತೆಗಳು. ಈ ಮಹಾಪ್ರಬಂಧವನ್ನು ಸಕಾಲದಲ್ಲಿ ಅಂದವಾಗಿ ಅಕ್ಷರ ಸಂಯೋಜಿಸಿ ಕೊಟ್ಟ ವಿರೂಪಾಕ್ಷಯ್ಯ ಹಿರೇಮಠ ಮತ್ತು ಬಸವರಾಜ ಜೆ. ಅವರಿಗೂ ಕೃತಜ್ಞತೆಗಳು.

ಎನ್.ಎಂ. ವಾಗೀಶ

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆ

# ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆ

## ಪ್ರಾಸ್ತಾವಿಕ ಮಾತು

ಪಠ್ಯಕ್ರಮವು ಶಿಕ್ಷಣದ ವ್ಯಾಪ್ತಿಯಲ್ಲಿ ಬರುವ ಅತ್ಯಂತ ಅಮೂಲ್ಯವಾದ ಭಾಗವಾಗಿದೆ. ಇದೊಂದು ವ್ಯಾಪಕವಾದ ವಿಸ್ತಾರ ಹೊಂದಿದ ಶೈಕ್ಷಣಿಕ ಚಟುವಟಿಕೆಯಾಗಿದೆ. ಈ ಚಟುವಟಿಕೆಯ ಮೂಲಕ ವಯಸ್ಕರು ಮತ್ತು ವಿದ್ಯಾರ್ಥಿಗಳು ಶೈಕ್ಷಣಿಕ ಗುರಿಯನ್ನು ಸಾಧಿಸಬೇಕೆಂಬ ನಿಟ್ಟಿನಲ್ಲಿ ರಚನೆಯಾಗಿರುತ್ತದೆ. ಶೈಕ್ಷಣಿಕ ಚಟುವಟಿಕೆಗಳಿಗೆ ಪಠ್ಯಕ್ರಮ ಮಾರ್ಗದರ್ಶಿಯಾಗಿದೆ. ಪ್ರಾಥಮಿಕ ಹಂತದ ಶಿಕ್ಷಣದ ಉದ್ದೇಶಗಳನ್ನು ಸಂಧಿಸಲು ಸಹಾಯಕವಾಗಿದೆ.

ನಾವೆಗೆ ಅಂಬಿಗನ ಚುಕ್ಕಾಣಿ ಎಷ್ಟು ಮುಖ್ಯವೋ ಶಿಕ್ಷಣದಲ್ಲಿ ಪಠ್ಯಕ್ರಮವು ಅಷ್ಟೇ ಮುಖ್ಯವಾದುದ್ದಾಗಿದೆ. ಪಠ್ಯಕ್ರಮವು ಶಿಕ್ಷಣದ ಒಂದು ಅವಿಭಾಜ್ಯ ಅಂಗವಾಗಿದೆ. ಶಿಕ್ಷಣದ ಗುರಿಗಳನ್ನು ಯಶಸ್ವಿಗೊಳಿಸಲು ಪಠ್ಯಕ್ರಮವು ಒಂದು ಸಾಧನೆಯಾಗಿದೆ. ಶಿಕ್ಷಣ ವ್ಯವಸ್ಥೆಯಲ್ಲಿ ನಿರ್ದಿಷ್ಟ ಚೌಕಟ್ಟನ್ನು ಹಾಕಿಕೊಂಡು ವಿದ್ಯಾರ್ಥಿಗಳಿಗೆ ಮಾನಸಿಕ ಮತ್ತು ದೈಹಿಕ ಬೆಳವಣಿಗೆ ಮೂಡಿಸುವಲ್ಲಿ ಪಠ್ಯಕ್ರಮ ಮುಖ್ಯವೆನಿಸಿದೆ. ಆದ್ದರಿಂದ ಪಠ್ಯಕ್ರಮ, ಪಠ್ಯವಸ್ತು, ಶಿಕ್ಷಣ ವ್ಯವಸ್ಥೆಯಲ್ಲಿ ವಿಶಾಲಾರ್ಥವನ್ನು ಪಡೆದುಕೊಂಡಿದೆ. ಈ ಪಠ್ಯಕ್ರಮವು ಶಿಕ್ಷಣದ ಒಂದು ವಿಧಾನವಾಗಿದೆ. ಮಕ್ಕಳ ವಯಸ್ಸಿಗೆ ಅನುಗುಣವಾಗಿ ವ್ಯವಸ್ಥಿತ ರೀತಿಯಲ್ಲಿ ಶಿಕ್ಷಣದ ಕಾರ್ಯಕ್ರಮ ಮತ್ತು ಯೋಜನೆಯನ್ನು ರೂಪಿಸುತ್ತದೆ. ಪಠ್ಯಕ್ರಮವು ತರಗತಿಯ ಒಳಗೂ ಮತ್ತು ಹೊರಗೂ ಪಡೆಯುವ ಎಲ್ಲಾ ಮೌಲ್ಯಯುತವಾದ ಅನುಭವಗಳನ್ನು ಒಳಗೊಂಡಿರುವಂತದ್ದಾಗಿದೆ. ಮಗುವಿನ ಸರ್ವತೋಮುಖ ಅಭಿವೃದ್ಧಿ ಅನ್ವಯ ರಚನೆಯನ್ನು ಮಾಡಲಾಗಿರುತ್ತದೆ. ಶಿಕ್ಷಣವೇ ಜೀವನದ ಬೆಳವಣಿಗೆಯ ಆಧಾರ ಸ್ತಂಭದೋಪಾದಿಯಲ್ಲಿ ಪಠ್ಯಕ್ರಮ ರಚನೆಯಾಗಿರುತ್ತದೆ. ಪ್ರತಿಯೊಂದು ಮಗುವಿನ ಜ್ಞಾನ, ಸೃಜನಶೀಲತೆಯನ್ನು ಬೆಳಗಿಸಲು ಸಹಾಯಕವಾದುದಾಗಿದೆ.

ಶಿಕ್ಷಕ ಮತ್ತು ವಿದ್ಯಾರ್ಥಿಯನ್ನು ಬೆಸುಗೆ ಮಾಡುವ ಕೊಂಡಿ ಪಠ್ಯಪುಸ್ತಕ. ಪಠ್ಯಪುಸ್ತಕ ಕೌಶಲಗಳನ್ನು ಕಲಿಸಲು ಶಿಕ್ಷಕರಿಗೆ ಸಾಧನವಾಗಿದೆ. ಕಲಿಸಲು ಬೇಕಾದ ವಿಷಯ, ವಸ್ತು

ಮತ್ತು ವಿಧಾನವನ್ನು ತಿಳಿಸುವ ಮಾರ್ಗದರ್ಶಿಯಾಗಿದೆ. ಪಠ್ಯಕ್ರಮ ಕಲಿಸಲು ನಿರ್ದಿಷ್ಟಪಡಿಸಿದ ಒಂದು ವಿಧದ ಜ್ಞಾನ ನಿಧಿಯಾಗಿದೆ. ವೇಳಾಪಟ್ಟಿಯಲ್ಲಿ ಏನನ್ನು ಮತ್ತು ಎಷ್ಟನ್ನು ಎಂದೆಂದು ಕಲಿಸಬೇಕು. ಹೇಗೆ ಕಲಿಸಿಕೊಡಬೇಕು ಎಂಬ ಅಂಶವನ್ನು ತಿಳಿಸುವ ಸಾಧನ ಪಠ್ಯಕ್ರಮವಾಗಿದೆ.

ಮಕ್ಕಳ ಶಿಕ್ಷಣ ದೀರ್ಘಾವಧಿಯ ಶಿಕ್ಷಣವಾಗಿರುವುದರಿಂದ ಹಲವಾರು ಹಂತಗಳಲ್ಲಿ ಪಠ್ಯಪುಸ್ತಕಗಳು ಬಳಕೆಯಾಗುತ್ತವೆ. ಈ ಪಠ್ಯಗಳ ಪಠ್ಯಕ್ರಮ ಮಾತ್ರ ತರಗತಿಗೆ ತಕ್ಕಂತೆ ರಚನೆಯಾಗಿರುವುದನ್ನು ಕಾಣುತ್ತೇವೆ. ಪಠ್ಯಕ್ರಮ ಮಾತ್ರ ಕಾಲಕ್ಕೆ ತಕ್ಕಂತೆ ಪರಿಷ್ಕರಣೆ ನಡೆಯುತ್ತಿರುತ್ತದೆ. ಈ ವಿಧಾನದಿಂದ ಪಠ್ಯಕ್ರಮದ ಲೋಪದೋಷಗಳನ್ನು ಸರಿಪಡಿಸಿಕೊಳ್ಳುವ ಪ್ರಕ್ರಿಯೆ ನಿರಂತರವಾಗಿ ನಡೆಯುತ್ತಲೆ ಇರುತ್ತದೆ.

ಕಳೆದ ಹತ್ತು ವರ್ಷಗಳಿಂದೀಚೆಗೆ ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಅಮೂಲಾಗ್ರ ಬದಲಾವಣೆಯನ್ನು ಮಾಡಲಾಗುತ್ತಿದೆ. ಅದರಲ್ಲಿ ಕನ್ನಡಭಾಷಾ ಪಠ್ಯಕ್ರಮ ಸಹ ಒಂದಾಗಿದೆ. ಪಠ್ಯಕ್ರಮದಲ್ಲಿ ಮನೆಮಾತಿಗೆ ವಿಶೇಷ ಗಮನ ನೀಡಲಾಗುತ್ತಿದೆ. ಕಾರಣ ಮನೆಮಾತಿನ ಮಕ್ಕಳ ಪಠ್ಯಪುಸ್ತಕಗಳ ಸ್ವರೂಪ ಮತ್ತಷ್ಟು ಶಿಸ್ತು ಬದ್ಧವಾಗಿರಬೇಕೆಂಬ ಅಭಿಪ್ರಾಯಗಳು ಅಲ್ಲಲ್ಲಿ ಕೇಳಿ ಬರುತ್ತಿವೆ. ಈ ಹಿನ್ನೆಲೆಯಿಂದ ಪಠ್ಯಪುಸ್ತಕಗಳು ಭಾಷೆಯನ್ನು ಮಾತ್ರ ಕಲಿಸದೆ, ಭಾಷಾ ಪ್ರೌಢಿಮೆಯನ್ನು, ವಿಷಯ ಜ್ಞಾನವನ್ನು, ಸಾಹಿತ್ಯಾಭಿರುಚಿಯನ್ನು ಸಹಬಾಳ್ವೆ, ಸಾಂಸ್ಕೃತಿಕ ಚಟುವಟಿಕೆಗಳಂತಹ ಮುಂತಾದ ಸಾಮಾಜಿಕ ಅಂಶಗಳನ್ನು ಕಲಿಸುತ್ತಿರುವುದು ಪ್ರಾಥಮಿಕ ಕನ್ನಡಭಾಷಾ ಪಠ್ಯಕ್ರಮಗಳಿಂದ ಸ್ಪಷ್ಟವಾಗುತ್ತದೆ.

ಪ್ರಾಥಮಿಕ ಕನ್ನಡಭಾಷಾ ಪಠ್ಯಪುಸ್ತಕಗಳಲ್ಲಿ ನಾಲ್ಕು ಕೌಶಲಗಳ ಜೊತೆಗೆ ಪದ್ಯ, ಗದ್ಯ, ವ್ಯಾಕರಣ ಬೋಧನೆಯನ್ನು ಸಮರ್ಪಕವಾಗಿ ನಿರ್ವಹಿಸಲಾಗಿದೆಯೇ ಎಂಬುದು ಅಧ್ಯಯನಕ್ಕೆ ಅರ್ಹವಾದ ವಿಷಯವಾಗಿದೆ. ಈ ನಾಲ್ಕು ಕೌಶಲಗಳು ಕೇವಲ ಭಾಷೆಯನ್ನು ಮಾತ್ರ ಕಲಿಸದೆ ಮಗುವಿನ ಸರ್ವತೋಮುಖ ಅಭಿವೃದ್ಧಿಯ ಜೀವನದ ಮೌಲ್ಯಗಳನ್ನು ಬೆಳೆಸುವಂತಹ ಸಾಮಗ್ರಿಗಳಾಗಿವೆ ಎಂಬುದು ತಿಳಿದು ಬರುತ್ತದೆ.

ಪಠ್ಯಕ್ರಮವನ್ನು ಬೋಧಿಸಲು ಮತ್ತು ವಿದ್ಯಾರ್ಥಿಗಳನ್ನು ಕಲಿಕೆಗೆ ತೊಡಗಿಸಲು ತರಬೇತಿ ಪಡೆದ (ಡಿ.ಇಡಿ) ಶಿಕ್ಷಕರನ್ನು ನೇಮಿಸಿಕೊಳ್ಳಲಾಗುತ್ತದೆ. ಶಿಕ್ಷಕರು ತರಬೇತಿ ಸಂದರ್ಭದಲ್ಲಿ ಪಠ್ಯಕ್ರಮ ಮತ್ತು ಶೈಕ್ಷಣಿಕ ಚಟುವಟಿಕೆಯಲ್ಲಿನ ಜ್ಞಾನವನ್ನು, ವಾಸ್ತವಿಕತೆಯ ಮನೋಭಾವವನ್ನು, ದೃಢನಿರ್ಧಾರವನ್ನು ತಿಳಿದವರಾಗಿರುತ್ತಾರೆ, ಎಂಬ ನಿಟ್ಟಿನಲ್ಲಿ ಶಿಕ್ಷಕರನ್ನು ಆಯ್ಕೆ ಮಾಡಿಕೊಳ್ಳಲಾಗುತ್ತದೆ. ನೇಮಕಾತಿಯ ನಂತರವು ಸಹ ಹಲವಾರು ರೀತಿಯಲ್ಲಿ ತರಬೇತಿಯನ್ನು ಕೊಡಲಾಗುತ್ತದೆ. ಪ್ರಾಥಮಿಕ ಹಂತದ ಶಿಕ್ಷಕರಿಗೆ ಭಾಷೆಯ ಪರಿಚಯ ಮತ್ತು ಭಾಷಾ ಬೋಧನೆಯ ವಿಧಾನಗಳನ್ನು ತರಬೇತಿಯ ಸಂದರ್ಭದಲ್ಲಿ ಪ್ರಾಯೋಗಿಕ ಪಾಠಗಳ ಮೂಲಕ ಹೇಳಿಕೊಡಲಾಗುತ್ತದೆ. ಇದನ್ನು ಪ್ರಚಲಿತ ಶಿಕ್ಷಣ ವ್ಯವಸ್ಥೆಯ ಯೋಜನೆಗಳನ್ನು ಗಮನಿಸಿದಾಗ ಸ್ಪಷ್ಟವಾಗುತ್ತದೆ.

ಮಕ್ಕಳ ನಾಲಿಗೆ ಚೆನ್ನಾಗಿ ಹೊರಳುವುದರಿಂದ ಅವರಿಗೆ ಅನುಕರಣ ಶಕ್ತಿ ಇದೆ.(ಶೈಕ್ಷಣಿಕ ಮನೋವಿಜ್ಞಾನಿಗಳ ಪ್ರಕಾರ) ಇದು ಅವರಲ್ಲಿ ಸ್ವಾಭಾವಿಕವಾಗಿ ಕಂಡು ಬರುವ ಲಕ್ಷಣವಾಗಿದೆ. ಶಿಕ್ಷಕರು ಇದನ್ನು ಅರಿತು 'ಅ' ಮತ್ತು 'ಹ' 'ಶ' ಮತ್ತು 'ಷ' 'ಡ' ಮತ್ತು 'ಢ' 'ಕ'ಮತ್ತು 'ಖ' ಇಂತಹ ಇತ್ಯಾದಿ ಅಕ್ಷರಗಳ ಉಚ್ಚಾರಣೆಯ ಸ್ಪಷ್ಟತೆ ಇರಬೇಕು. ಶಿಕ್ಷಕರು 'ಆಧುನಿಕ' ಎನ್ನುವಲ್ಲಿ 'ಅದುನಿಕ' ಎಂದು ಬಳಸಿದರೆ ಮಗು ಅದನ್ನೇ ಅನುಕರಣೆ ಮಾಡಿ ರೂಢಿಯಲ್ಲಿ ತಂದುಕೊಳ್ಳುತ್ತದೆ. ಆದ್ದರಿಂದ ಶಿಕ್ಷಕರು ಇದರ ಬಗ್ಗೆ ತಿಳಿದು ಬೋಧಿಸುವುದು ಮುಖ್ಯ ವೆನಿಸುತ್ತದೆ.

ಮಕ್ಕಳಿಗೆ ಬಾಲ್ಯಾವಸ್ಥೆಯಲ್ಲಿ ಜ್ಞಾಪಕಶಕ್ತಿ ಹೆಚ್ಚಿರುತ್ತದೆ. ಇದನ್ನು ಶಿಕ್ಷಕರಾದವರು ಅರಿತಿರಬೇಕು. ಏಕೆಂದರೆ ಒಂದು ಸಲ ಹೇಳಿಕೊಟ್ಟ ಪಾಠಗಳಲ್ಲಿ ತಪ್ಪು ನಡೆದರೆ ಮಗು ಅದನ್ನೇ ಪರಿಪಾಲಿಸುವುದುಂಟು. ಹೇಗೆಂದರೆ ಕನ್ನಡ ಪಠ್ಯದಲ್ಲಿ ಕನ್ನಡದ ವರ್ಣಮಾಲೆ ಒಟ್ಟು ನಲವತ್ತೊಂಭತ್ತು ಎಂದು ಹೇಳಿದೆ. ಶಿಕ್ಷಕರಾದವರು ನಲವತ್ತೆಂಟು ಎಂದು ಹೇಳಿದರೆ ಮಗು ಅದನ್ನೇ ಗ್ರಹಿಸಿ ಬಿಡುತ್ತದೆ. ಪೋಷಕರು ಮಗುವನ್ನು ಕನ್ನಡದ ಒಟ್ಟು ಅಕ್ಷರಗಳು ಎಷ್ಟು ಎಂದಾಗ ನಲವತ್ತೆಂಟು ಎಂದು ಹೇಳುತ್ತದೆ. ಪೋಷಕರು ನಲವತ್ತೊಂಭತ್ತು ಎಂದು ಹೇಳಿದರೂ ಮಗು ತಪ್ಪು ನಲವತ್ತೆಂಟು ಎಂದು ಹೇಳುತ್ತದೆ. ಆದ್ದರಿಂದ ಶಿಕ್ಷಕ ರಾದವರು ಬೋಧಿಸುವಾಗ ವಿಷಯದ ಸ್ಪಷ್ಟತೆಯನ್ನು ಮೂಡಿಸುವುದು ಅವಶ್ಯಕ ಎಂಬುದು ಈ ಮೇಲಿನ ಉದಾಹರಣೆಯಿಂದ ಸ್ಪಷ್ಟವಾಗುತ್ತದೆ.

ಪಠ್ಯಕ್ರಮ ವಿದ್ಯಾರ್ಥಿಗಳಲ್ಲಿ ಆಲೋಚನಾಶಕ್ತಿಯನ್ನು ಮೂಡಿಸಲು, ಬೆಳೆಸಲು ಹಾಗೂ ಅಕ್ಷರಗಳನ್ನು ಕಲಿಸುವುದಕ್ಕೆ ಮಾತ್ರ ಸೀಮಿತವಾಗಿರದೆ, ಧ್ವನಿ, ಪದ, ವಾಕ್ಯಗಳ ಉಚ್ಚಾರಣೆಯನ್ನು ಬರವಣಿಗೆಯನ್ನು ಹೇಳಿ ಕೊಡಲಾಗುತ್ತದೆ. ಜೊತೆಗೆ ಭಾಷಾ ಕೌಶಲಗಳ ಉಳಿದ ಅಂಶಗಳನ್ನು ಹೇಳುವ ರೀತಿಯಲ್ಲಿ ಪಠ್ಯಕ್ರಮ ರಚನೆಯಾಗಿರುತ್ತದೆ. ಪದಗಳು ಪದರಚನೆಯ ವಿಧಾನವನ್ನು ಹೇಳಿಕೊಡುವಂತೆ, ವಾಕ್ಯಗಳು ವಾಕ್ಯ ರಚನೆಯ ಚೌಕಟ್ಟನ್ನು ವ್ಯಾಕರಣದ ಹಿನ್ನೆಲೆಯಲ್ಲಿ ಬಿಡಿ ಬಿಡಿಯಾಗಿ ಹಂತ ಹಂತವಾಗಿ ಬೋಧನೆಯ ಮೂಲಕ ಕಲಿಸುವಂತೆ ರಚನೆಯಾಗಿರುವು ದನ್ನು ಕಾಣುತ್ತೇವೆ.

ಪಠ್ಯಕ್ರಮ ಮಕ್ಕಳಲ್ಲಿ ಚಿಂತನಾಶಕ್ತಿಯನ್ನು, ಸೃಜನಶೀಲತೆಯನ್ನು ಪ್ರಚೋದಿಸುವಂತೆ ರಚಿತವಾಗಿರುತ್ತದೆ. ಪಠ್ಯಪುಸ್ತಕ ಕೇವಲ ಓದುವ ಬರೆಯುವ ವಿಧಾನವನ್ನು ಕಲಿಸುವುದೊಂದೆ ಪಠ್ಯಪುಸ್ತಕದ ಉದ್ದೇಶವಾಗಿರದೆ, ಜೊತೆಗೆ ಮಗುವಿನ ಭಾವಿ ಭವಿಷ್ಯತ್ತನ್ನು ರೂಪಿಸುವ ನಿಟ್ಟಿನಲ್ಲಿ ರಚಿತವಾಗಿರುತ್ತದೆ. ನಾಡು, ನುಡಿ, ರಾಷ್ಟ್ರದ ತಿಳುವಳಿಕೆಯನ್ನು ಸಹ ಪರಿಚಯಿಸಲು ಪ್ರಯತ್ನಿಸುತ್ತಿರುವುದು ತಿಳಿದು ಬರುತ್ತದೆ. ಮಗುವಿನ ವಿದ್ಯಾಭ್ಯಾಸವೆಂದರೆ ಕುತೂಹಲ ಮತ್ತು ಉತ್ಸಾಹ ಮೊದಲನೆಯ ದಿನದಿಂದಲೇ ಉಂಟಾಗಲು ಚಿತ್ರಗಳ ಮೂಲಕ ಬೋಧನೆ ಪ್ರಾರಂಭವಾಗುತ್ತದೆ. ಇದರಿಂದ ಮಕ್ಕಳಿಗೆ ಆಲಿಸುವ ಪ್ರಕ್ರಿಯೆ ಸ್ಪಷ್ಟವಾಗಿ, ಕಲಿಕೆ ಅರ್ಥಪೂರ್ಣ

ವಾಗಬಲ್ಲದು. ಇದರಿಂದ ಮಕ್ಕಳು ಸುಲಭವಾಗಿ ನೆನಪಿನಲ್ಲಿಟ್ಟುಕೊಳ್ಳುವರು. ನಿತ್ಯ ಜೀವನದಲ್ಲಿ ಬಳಕೆಯಲ್ಲಿರುವ ಹಾಗೂ ಪರಿಚಯವಾದ ಪದಗಳನ್ನು ಪ್ರಾರಂಭದ ಪ್ರಾಥಮಿಕ ಪಠ್ಯಗಳಲ್ಲಿ ಕಲಿಸಲಾಗುತ್ತದೆ. ಏಕೆಂದರೆ ಕನ್ನಡ ಭಾಷೆಯ ರಚನೆಯ ತಿಳುವಳಿಕೆಯನ್ನು, ರೂಢಿಯನ್ನು ತರಲು ಇಂತಹ ಪಠ್ಯಕ್ರಮ ರಚನೆಯಾಗಿರುವುದನ್ನು ಕಾಣುತ್ತೇವೆ.

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಪಠ್ಯಗಳಲ್ಲಿ ಅಧ್ಯಕ್ಷರು ಪ್ರತಿ ಪುಸ್ತಕದಲ್ಲಿ ಮುನ್ನುಡಿಯನ್ನು ಬರೆದಿದ್ದಾರೆ. ನಿರ್ದಿಷ್ಟವಾಗಿ ಮತ್ತು ನಿಖರವಾಗಿ ಸಿದ್ಧಪಡಿಸಿದ ಪಠ್ಯವಸ್ತುವಿನಿಂದ ಪಠ್ಯಕ್ರಮ ರಚನೆಯಾಗಿದೆ ಎಂದು ಹೇಳಿದ್ದಾರೆ. ಇದರಿಂದ ಮಕ್ಕಳು ಚೆನ್ನಾಗಿ ಅರಿತು ಕಲಿಯುವವರು. ಅಂತಹ ವಸ್ತು ಪಠ್ಯಪುಸ್ತಕದ ಹೆಸರಿನ ಅನ್ವಯ ರಚನೆಯಾಗಿರುತ್ತದೆ. ಈ ಪಠ್ಯಕ್ರಮಗಳಲ್ಲಿ ವಿಷಯದ ವಸ್ತು, ಭಾಷೆ, ಸ್ವರೂಪ, ಶೈಲಿ ಒಳಗೊಂಡಂತೆ ಸಣ್ಣ ಸಣ್ಣ ಘಟಕಗಳಲ್ಲಿ ಅನುಕ್ರಮಣಿಕೆಯ ರೀತಿಯಲ್ಲಿ ರಚನೆಯಾಗಿದೆ ಎಂದು ಹೇಳುತ್ತಾರೆ. ಇಂತಹ ಚೌಕಟ್ಟಿನಲ್ಲಿ ರಚಿತವಾದ ಪಠ್ಯಕ್ರಮದ ಪಾಠ/ಪದ್ಯ ಮತ್ತು ಅಭ್ಯಾಸ ಚಟುವಟಿಕೆಗಳು ಒಂದಕ್ಕೊಂದು ಕೊಂಡಿಯಂತೆ ರಚನೆಯಾಗಿದೆ ಎಂದು ವಿವರಿಸುತ್ತಾರೆ.

ಈ ಪಠ್ಯಗಳು ಕಲಿಸುವ ವಿಷಯ ಮತ್ತು ಬೋಧನಾ ತಂತ್ರಕ್ಕೆ ಹೊಂದಾಣಿಕೆ ಇರುವಂತೆ ಪಠ್ಯಕ್ರಮ ರಚಿತವಾಗಿದ್ದರೂ ಕೆಲವೊಂದು ಸಂದರ್ಭಗಳನ್ನು ಗಮನಿಸಿದಾಗ ಪಠ್ಯಗಳಲ್ಲಿ ಪದ್ಯ/ಪಾಠ ಹಾಗೂ ಅಭ್ಯಾಸ ಚಟುವಟಿಕೆಗಳಿಗೆ ಸಂಬಂಧವಿಲ್ಲದ ರೀತಿಯಲ್ಲಿ ರಚನೆ ಮಾಡಿರುವುದನ್ನು ಕಾಣಬಹುದಾಗಿದೆ. ಜೊತೆಗೆ ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿ ಕೊಡದೆ ಕಠಿಣ ಪದಗಳು, ವ್ಯಾಕರಣಾಂಶಗಳನ್ನು ಪೂರ್ವಪ್ರಾಥಮಿಕ ಹಂತದಲ್ಲಿಯೇ ಕೊಟ್ಟಿರುವುದನ್ನು ನೋಡಬಹುದಾಗಿದೆ. ಅಲ್ಲದೆ ಪಾಠೋಪಕರಣಗಳ ಬಳಕೆಯಲ್ಲಿಯೂ ಸಹ ಪಾಠಕ್ಕೂ, ಪದ್ಯಕ್ಕೂ ಹಾಗೂ ಅಭ್ಯಾಸ ಚಟುವಟಿಕೆಗಳಿಗೂ ಸಾಮ್ಯತೆ ಇಲ್ಲದೆ ಇರುವುದನ್ನು ಗುರುತಿಸಬಹುದಾಗಿದೆ.

ಉದಾ: ೨ನೇ ತರಗತಿಯ 'ಮೂರು ಕೊಡಲಿಗಳು' (ಪಾಠ–೩, ಪುಟ–೧೦) ಎಂಬ ಪಾಠದಲ್ಲಿ ರಂಗಪ್ಪ ಒಣಗಿದ ಮರವನ್ನು ಕಡಿಯುತ್ತಾನೆ ಎಂಬುದನ್ನು ವಿವರಿಸುತ್ತದೆ. ಆದರೆ ಚಿತ್ರದಲ್ಲಿ ರಂಗಪ್ಪ ಹಸಿರು ಮರವನ್ನು ಕಡಿಯುತ್ತಿರುವ ದೃಶ್ಯವನ್ನು ಕೊಡಲಾಗಿದೆ. ಇಂತಹ ಸಮಸ್ಯೆಗಳು ಪ್ರಾಥಮಿಕ ಕನ್ನಡಭಾಷಾ ಪಠ್ಯಗಳಲ್ಲಿ ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ. ಇಂತಹವುಗಳನ್ನು ವಿಶ್ಲೇಷಣೆಗೆ ಒಳಪಡಿಸುವುದರ ಮೂಲಕ ಅಧ್ಯಯನ ಮಾಡಲಾಗಿದೆ.

ಮುಖ್ಯವಾಗಿ ಕನ್ನಡಭಾಷಾ ಪಠ್ಯಗಳ ಸ್ವರೂಪವನ್ನು ವಿವರಿಸಲಾಗಿದೆ. ಅದರಲ್ಲಿ ಧ್ವನಿ, ಪದ, ವಾಕ್ಯಗಳ ಬಳಕೆ ಹಾಗೂ ಬೋಧನೆ, ಶಿಕ್ಷಕ, ವಿದ್ಯಾರ್ಥಿ, ಪರೀಕ್ಷೆ ಮೌಲ್ಯಮಾಪನ ಲೇಖನ ಚಿಹ್ನೆಗಳ ಬಳಕೆ ಪಾಠ/ಪದ್ಯ ಮತ್ತು ಅಭ್ಯಾಸ ಚಟುವಟಿಕೆಯಲ್ಲಿ ಮಕ್ಕಳ ಸಾಮರ್ಥ್ಯಾನುಸಾರ ಬಳಕೆಯಾಗಿದೆಯೇ ಅಥವಾ ಇಲ್ಲವೇ ಎಂಬುದನ್ನು ಗಮನಿಸಲಾಗಿದೆ. ಬಳಕೆಯಾಗಿದ್ದರೂ ಬಳಕೆಯ ಕ್ರಮ, ಕಲಿಸುವ ವಿಧಾನಗಳು ಸರಿ ಇದೆಯೇ ಇಲ್ಲವೇ

ಎಂಬುದನ್ನು ಚರ್ಚಿಸಲಾಗಿದೆ. ಅಲ್ಲದೆ ಈ ಮೇಲಿನ ಶಿಕ್ಷಣದ ಅಂಶಗಳಲ್ಲಿಯೇ ಕೊರತೆಗಳು ದ್ವಂದ್ವಗಳು ಪಠ್ಯಗಳಲ್ಲಿರುವುದು ಈಗಾಗಲೇ ತಿಳಿದು ಬಂದಿದೆ. ಇಂತಹ ಕೊರತೆಗಳಿಗೆ ಕಾರಣಗಳನ್ನು ಶೈಕ್ಷಣಿಕ ಮನೋವಿಜ್ಞಾನಿಗಳು, ಭಾಷಾಚಿಂತಕರು, ಶಿಕ್ಷಣಚಿಂತಕರು ಅಲ್ಲಲ್ಲಿ ಪ್ರತಿಕ್ರಿಯಿಸಿ ಉಲ್ಲೇಖಿಸಿದ್ದಾರೆ. ಅವರುಗಳ ಅಭಿಪ್ರಾಯದ ಹಿನ್ನೆಲೆಯಲ್ಲಿ ನಿದರ್ಶನಗಳನ್ನು ಕೊಡುತ್ತಾ ಚರ್ಚಿಸಿ ವಿಶ್ಲೇಷಣೆಯನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

**ಪಠ್ಯಕ್ರಮದ ವ್ಯಾಖ್ಯಾನಗಳು**

ಆಂಗ್ಲ ಭಾಷೆಯ Curriculm (ಕರಿಕ್ಯುಲಂ) ಎನ್ನುವಂತ ಪದವು ಲ್ಯಾಟಿನ್ ಭಾಷೆಯ Currere (ಕ್ಯುರೇರ್) ಪದದಿಂದ ಉತ್ಪತ್ತಿಯಾಗಿದೆ. Currer ಎಂಬ ಪದದ ಅರ್ಥ A Course to be run for Reaching a certain goal or distination ಅಂದರೆ ವಿದ್ಯಾರ್ಥಿಯು ನಿಗದಿತವಾದಂತಹ ಗುರಿಯನ್ನು ತಲುಪಲು ಅನುಸರಿಸುವ ಪಥ, ದಾರಿ, ಮಾರ್ಗ ಎಂದಾಗುತ್ತದೆ. ಆಂಗ್ಲ ಭಾಷೆಯ ಈ Curriculm ಪದ ಸಂವಾದಿಯಾಗಿ ಕನ್ನಡದಲ್ಲಿ ಪಠ್ಯವಸ್ತು ಅಥವಾ ಪಠ್ಯಕ್ರಮ ಎಂದು ಕರೆಯುತ್ತಾರೆ.

ಪಠ್ಯಕ್ರಮದ ಬಗ್ಗೆ ಅನೇಕ ಶಿಕ್ಷಣತಜ್ಞರು ಹಾಗೂ ಆಯೋಗಗಳು ವ್ಯಾಖ್ಯೆಗಳನ್ನು ನೀಡಿರುವವರು ಅವುಗಳಲ್ಲಿ ಕೆಲವು ವ್ಯಾಖ್ಯಾಎಗಳನ್ನು ಗಮನಿಸಬಹುದು.

**ಬ್ಲೊಂಡರ ಶಿಕ್ಷಣದ ವಿಶ್ವಕೋಶ ಹೇಳುವಂತೆ–** (Blond's Encyclopedia of education) ಶಾಲಾ ಮಾರ್ಗದರ್ಶನದ ಮೂಲಕ ಒಬ್ಬ ವಿದ್ಯಾರ್ಥಿಯು ಪಡೆದುಕೊಳ್ಳುವ ಸರ್ವ ಅನುಭವಗಳೇ ಪಠ್ಯಕ್ರಮವಾಗಿದೆ.

**ಮಾಧ್ಯಮಿಕ ಶಿಕ್ಷಣ ಆಯೋಗ ಹೇಳುವಂತೆ** : ಪಠ್ಯಕ್ರಮವೆಂದರೆ ಕಲಿಯುವವರು ಪಡೆದುಕೊಳ್ಳುವ ವಿವಿಧ ಪ್ರಕಾರಗಳ ಅನುಭವಗಳ ಸಮಗ್ರ ವಿಷಯಗಳ ಸಮೂಹ

**ಕೋಠಾರಿ ಆಯೋಗ ಹೇಳುವಂತೆ** : ಆಧುನಿಕ ಶೈಕ್ಷಣಿಕ ವೈಚಾರಿಕತೆಯಲ್ಲಿ ಪಠ್ಯಕ್ರಮವು ಕೇವಲ ಶಾಲೆಗಳಲ್ಲಿ ಶೈಕ್ಷಣಿಕ ವಿಷಯಗಳನ್ನು ಸಂಪ್ರದಾಯಿಕ ರೀತಿಯಲ್ಲಿ ಬೋಧಿಸುವುದು ಆಗಿರದೇ ಅದು ಶಾಲೆಗಳಲ್ಲಿ ಜರುಗುವ ವೈವಿಧ್ಯಮಯ ಚಟುವಟಿಕೆಗಳ ಮುಖಾಂತರ ಮಗುವು ಪಡೆದುಕೊಳ್ಳುವ ಸಮಗ್ರ ಅನುಭವಗಳ ಸಮೂಹವಾಗಿದೆ.

**ಜಾನ್‌ಡ್ಯೂಯಿ ಹೇಳುವಂತೆ** : ಪಠ್ಯಕ್ರಮದ ಕಲಿಯುವಿಕೆಯ ವಿಷಯವು ಕ್ರಿಯೆಯ ಅವಿರತ ಬೆಂಬತ್ತುವಿಕೆಯಲ್ಲಿ ಬರುವ ಆಶ್ರಯ ಇಲ್ಲವೇ ಅಡೆಚಡೆಗಳ ಆದರ್ಶ ಮತ್ತು ತತ್ವಗಳಿಗೆ ಸಮನಾಗಿರುತ್ತದೆ.

**ಜಾನ್ಸನ್** : ಉದ್ದೇಶಿತ ಕಲಿಕೆಯ ಫಲಿತಗಳ ವ್ಯವಸ್ಥಿತ ಸರಣಿಯೇ ಪಠ್ಯಕ್ರಮ. ಈ ವಾಖ್ಯೆಯು ಕಲಿಕೆಯ ಫಲಿತಗಳಿಗೆ ಮಹತ್ವ ನೀಡುತ್ತದೆ. ಕಲಿಕೆಯ ಅನುಭವಗಳಿಗಲ್ಲ. ಈ ಫಲಿತಗಳಿಗೂ, ಉದ್ದೇಶಗಳಿಗೂ ಸಂಬಂಧವಿದೆ.

ಜೆನರೆನ್ (೧೯೭೫) : ಶೈಕ್ಷಣಿಕವಾದ ಪ್ರಸ್ತಾವವೊಂದರ ರೂಪಣೆ ಮತ್ತು ಅನುಷ್ಠಾನ. ಶಾಲೆ ಅಥವಾ ಕಾಲೇಜುಗಳ ಒಳಗೆ ಅದನ್ನು ಕಲಿಸುವ, ಬೋಧಿಸುವ ವ್ಯವಸ್ಥೆಯಿದ್ದು, ಸಂಸ್ಥೆಯ ಪ್ರಸ್ತಾವದ ತಾರ್ಕಿಕತೆ ಮಾದರಿಯ ಅನುಷ್ಠಾನ ಮತ್ತು ಅದರ ಪರಿಣಾಮದ ಜವಾಬ್ದಾರಿಗಳನ್ನು ಹೊತ್ತುಕೊಳ್ಳುತ್ತದೆ. ಈ ಎಲ್ಲ ಅಂಶಗಳ ತರಬೇತಿಯ ಉದ್ದೇಶಗಳನ್ನು ಹೊಂದಿ ರಚಿತವಾದದ್ದೇ ಪಠ್ಯಕ್ರಮ ಎನ್ನುತ್ತಾರೆ. **(ವ್ಯಾಖ್ಯಾನಗಳು : ಪಠ್ಯಕ್ರಮ ಮತ್ತು ಶೈಕ್ಷಣಿಕ ತಂತ್ರಜ್ಞಾನ : ಡಾ. ಮಹಾಬಲೇಶ್ವರರಾವ್ ಪು.ಸಂಖ್ಯೆ-೭೨)**

ಮೇಲಿನ ವ್ಯಾಖ್ಯಾನಗಳನ್ನು ಗಮನಿಸಿದಾಗ ಪಠ್ಯಕ್ರಮದ ಅರ್ಥವು ವಿಶಾಲವಾದುದೆಂದು ತಿಳಿಯುತ್ತದೆ. ಜಗತ್ತಿನಲ್ಲಿ ಅಭಿವೃದ್ಧಿ ಹೊಂದಿದ ಮತ್ತು ಸ್ವಾಭಾವಿಕವಾಗಿರುವ ಜ್ಞಾನವನ್ನು ಸಾಮಾನ್ಯೀಕರಣದ ರೂಪದಲ್ಲಿ ಪಠ್ಯಕ್ರಮವನ್ನು ಅಳವಡಿಸಲಾಗಿರುತ್ತದೆ. ಈ ಅಂಶ ವಿದ್ವಾಂಸರ ಅಭಿಪ್ರಾಯಗಳಿಂದ ಸ್ಪಷ್ಟವಾಗುತ್ತದೆ. ಶಾಲಾ ಪಠ್ಯಕ್ರಮವು ಕೇವಲ ತರಗತಿಯಲ್ಲಿ ಓದಬೇಕಾದ ಒಂದೇ ವಿಷಯಕ್ಕೆ ಸಂಬಂಧಿಸಿರದೆ ಅದು ಒಬ್ಬ ವಿದ್ಯಾರ್ಥಿಯ ಸಂಪೂರ್ಣ ವ್ಯಕ್ತಿತ್ವ ವಿಕಾಸಕ್ಕೆ ಅನುಕೂಲವಾಗುವ ಎಲ್ಲಾ ವಿಷಯಗಳನ್ನು ಸಮನಾಂತರವಾಗಿ ರಚನೆಯಾಗಿರುತ್ತದೆ. ಆದ್ದರಿಂದ ಪಠ್ಯಕ್ರಮವು ಕಲಿಸುವವನಿಗೆ ಮತ್ತು ಕಲಿಯುವವನಿಗೆ ಮಾರ್ಗದರ್ಶಿಯಾಗಿರುತ್ತದೆ ಎಂಬುದನ್ನು ಈ ಮೇಲಿನ ವಿದ್ವಾಂಸರ, ಆಯೋಗಗಳ ವ್ಯಾಖ್ಯಾನಗಳು ವಿಶ್ಲೇಷಿಸುತ್ತವೆ.

ಪಠ್ಯಕ್ರಮವು ಬೋಧನೆ-ಕಲಿಕೆಯ ಶಿಕ್ಷಣದ ಗುರಿಗಳನ್ನು ಗಮನಿಸಿ ವ್ಯಕ್ತಿಯ ವೈಯಕ್ತಿಕ ಮತ್ತು ಸಾಮಾಜಿಕ ಅವಶ್ಯಕತೆಗಳನ್ನು ಕ್ರೂಢೀಕರಿಸಿ ರಚಿಸಲಾಗಿರುತ್ತದೆ. ಕಾಲಕಾಲಕ್ಕೆ ಬದಲಾದ ಪರಿಸ್ಥಿತಿಗಳಿಗನುಗುಣವಾಗಿ ಪಠ್ಯಕ್ರಮ ರಚಿಸಲಾಗುತ್ತದೆ. ಇವರೆಲ್ಲರೂ ಹೇಳುವ ಹಾಗೆ ಪಠ್ಯಕ್ರಮವೆಂದರೆ ಶಿಕ್ಷಣದ ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗೆ ಲಭಿಸುವ ಅನುಭವಗಳ ಮೊತ್ತವಾಗಿದೆ. ಈ ಕಾರ್ಯಕ್ರಮದ ಉದ್ದೇಶ ವ್ಯಾಪಕವೂ ನಿರ್ದಿಷ್ಟವೂ ಆದ ಗುರಿಗಳನ್ನು ಸಾಧಿಸಲಾಗಿರುತ್ತದೆ. ಈ ಅಂಶಗಳನ್ನು ತಾತ್ವಿಕವಾಗಿ ಹಾಗೂ ಪ್ರಾಯೋಗಿಕವಾಗಿ ಯೋಜಿಸಲಾಗಿರುತ್ತದೆ ಎಂಬುದನ್ನು ಈ ವ್ಯಾಖ್ಯಾನಗಳು ವಿವರಿಸುತ್ತವೆ.

### ಪಠ್ಯಕ್ರಮದ ತಾತ್ವಿಕತೆ ಮತ್ತು ಸೈದ್ಧಾಂತಿಕತೆ

ಪಠ್ಯಕ್ರಮವು ಮಗುವಿನ ವಯಸ್ಸಿಗೆ ಅನುಗುಣವಾಗಿ ರಚನೆಯಾಗಬೇಕಾದರೆ ತಾತ್ವಿಕತೆ ಮತ್ತು ಸೈದ್ಧಾಂತಿಕತೆಗೆ ಒಳಪಡುವುದು ಅವಶ್ಯಕವಾದ ಅಂಶ. ಈ ಎರಡು ಅಂಶಗಳು ಪಠ್ಯಕ್ರಮ ರಚನೆಯ ವ್ಯವಸ್ಥೆಯಲ್ಲಿ ಮುಖ್ಯವಾದವುಗಳಾಗಿವೆ. ಇವುಗಳ ಬಳಕೆ ಪಠ್ಯಕ್ರಮದ ರಚನೆಯಲ್ಲಿ ಬಳಕೆಯಾಗದಿದ್ದಲ್ಲಿ ಶಿಕ್ಷಣದಲ್ಲಿ ಹಾಕಿಕೊಂಡ ಯೋಜನೆಗಳು ನಿಗದಿತವಾಗಿ, ನಿರಂತರವಾಗಿ ನಡೆಯದೆ ಕುಂಠಿತವಾಗುವುದನ್ನು ಕಾಣುತ್ತೇವೆ. ಈ ಎರಡು ಅಂಶಗಳ ಸ್ಪಷ್ಟತೆ ಇಲ್ಲದಿದ್ದಾಗ ಪಠ್ಯಕ್ರಮದ ಪ್ರಾಮುಖ್ಯತೆ ಕಳೆದು ಹೋಗುವ ಸಂಭವ ಹೆಚ್ಚಾಗಿರುತ್ತದೆ.

ಪ್ರಾಥಮಿಕ ಶಿಕ್ಷಣದ ಪಠ್ಯಕ್ರಮವನ್ನು ಗಮನಿಸಿದಾಗ ಕಾಲಕ್ಕೆ ಅನುಗುಣವಾಗಿ ತತ್ವ ಮತ್ತು ಸೈದ್ಧಾಂತಿಕತೆಗೆ ಒಳಪಟ್ಟು ರಚಿತವಾಗಿರುವುದು ಸ್ಪಷ್ಟವಾಗುತ್ತದೆ. ಯಾವುದೇ ಒಂದು

ಪಠ್ಯವನ್ನು ರೂಪಿಸುವಾಗ ತನ್ನದೇ ಆದ ಸಿದ್ಧಾಂತಗಳು ಮತ್ತು ತಾತ್ವಿಕತೆಗೆ ಒಳಪಟ್ಟು ರಚನೆಯಾಗಬೇಕೆಂದು ವಿದ್ವಾಂಸರುಗಳು ವ್ಯಾಖ್ಯಾನಿಸುತ್ತಾರೆ. ಉದಾಹರಣೆಗೆ : ಶಿಕ್ಷಣವು ಮೋಕ್ಷ ಸಾಧನೆಗಾಗಿಯೇ ಇರಬೇಕಾದ ಕಾರಣ ಪಠ್ಯವಸ್ತುವು ಇದನ್ನು ಸಾಧಿಸುವಂತೆ ರಚಿತವಾಗಿರಬೇಕೆಂದು **ಆದರ್ಶವಾದಿಗಳು** ಅಭಿಪ್ರಾಯ ಪಡುತ್ತಾರೆ. ಶಿಕ್ಷಣವು ಮಗುವಿನ ನೈಜ ಬೆಳವಣಿಗೆಯ ವಿಕಾಸಕ್ಕೆ ಪೂರಕವಾಗಿರಬೇಕಾದ ಕಾರಣ ಚಟುವಟಿಕೆ ಆಧಾರಿತ ಪಠ್ಯಕ್ರಮ ಇರಬೇಕೆಂದು **ನಿಸರ್ಗವಾದಿಗಳು** ಸಾರುತ್ತಾರೆ. ಶಿಕ್ಷಣವು ಜೀವನದ ಸರ್ವ ಸತ್ಯಾಂಶಗಳ ಕಡೆಗೆ ಸಾಗಬೇಕಾದ ಕಾರಣ ವಿಜ್ಞಾನ ಹಾಗೂ ಅನ್ವೇಷಣೆಗಳನ್ನೊಳಗೊಂಡ ಪಠ್ಯ ವಸ್ತುವಿರಬೇಕೆಂದು **ವಾಸ್ತವ ವಾದಿಗಳು** ಒತ್ತಿ ಹೇಳುತ್ತಾರೆ. ಈ ಹೇಳಿಕೆಗಳನ್ನು ಗಮನಿಸಿದಾಗ ಪಠ್ಯಕ್ರಮ ರಚನೆಯ ವ್ಯವಸ್ಥೆಯು ಕಾಲದಿಂದ ಕಾಲಕ್ಕೆ ತಾತ್ವಿಕವಾಗಿ ಮತ್ತು ಸೈದ್ಧಾಂತಿಕತೆಯಲ್ಲಿಯೂ ಭಿನ್ನರೂಪಗಳ ರೀತಿಯಲ್ಲಿ ಬದಲಾಯಿಸಲು ಮುಂದಾಗಿದ್ದವು ಎಂಬುದು ಸ್ಪಷ್ಟವಾಗುತ್ತದೆ.

ಪಠ್ಯಕ್ರಮ ರಚನೆಯ ಪೂರ್ವದಲ್ಲಿ ತತ್ವಶಾಸ್ತ್ರದ ಚೌಕಟ್ಟಿನ ಅನ್ವಯ ಪಠ್ಯಕ್ರಮದ ವಸ್ತು, ಉದ್ದೇಶ, ವಿಧಾನ, ಶೈಕ್ಷಣಿಕ ಕಾರ್ಯಕ್ರಮಗಳ ಯೋಜನೆ, ಸಮಾಜ, ಸಂಸ್ಕೃತಿ, ಮಾನಸಿಕ ಅಗತ್ಯತೆಗಳು ಮತ್ತು ಮೌಲ್ಯಮಾಪನದಂತಹ ಇತ್ಯಾದಿ ಶೈಕ್ಷಣಿಕ ಚಟುವಟಿಕೆಗಳು ತಾತ್ವಿಕತೆಗೆ ಒಳಪಟ್ಟು ಪಠ್ಯಕ್ರಮ ರಚನೆಯಾಗಿರುವುದನ್ನು ಶಾಲಾ ಪಠ್ಯಗಳನ್ನು ನೋಡಿದಾಗ ಸ್ಪಷ್ಟವಾಗುತ್ತದೆ. ಈ ರೀತಿಯಲ್ಲಿ ರಚನೆಯಾದ ಪಠ್ಯಕ್ರಮ ಆಧುನಿಕ ಸಂದರ್ಭದಲ್ಲಿ ಶೈಕ್ಷಣಿಕ ಮನೋವಿಜ್ಞಾನಿಗಳು, ಭಾಷಾ ಶಾಸ್ತ್ರಜ್ಞರು, ಶಿಕ್ಷಣ ಚಿಂತಕರ ಅಭಿಪ್ರಾಯಗಳು ತಾತ್ವಿಕತೆಗೆ ಒಳಪಟ್ಟು ಪಠ್ಯಕ್ರಮ ರಚನೆ ಆಗಿರುವುದನ್ನು ಕಾಣುತ್ತೇವೆ. ಜೊತೆಗೆ ಪಠ್ಯಕ್ರಮವನ್ನು ಶಿಕ್ಷಣ ವ್ಯವಸ್ಥೆಯಲ್ಲಿ ಒಂದು ಬಹುಮಖ್ಯವಾದ ಪ್ರಕ್ರಿಯೆಯಾಗಿ ಬೆಳೆದು ಬಂದಿರುವುದನ್ನು ಈ ಕಾಲಘಟ್ಟದ ಸಂದರ್ಭದಲ್ಲಿ ಗುರುತಿಸಬಹುದಾಗಿದೆ.

ಪ್ರಾಚೀನ ಕಾಲದಲ್ಲಿ ಪಠ್ಯಕ್ರಮ 3 R.S. ಎಂಬ (ಓದು, ಬರಹ, ಲೆಕ್ಕ) ಸಿದ್ಧಾಂತಕ್ಕೆ ಒಳಪಟ್ಟು ರಚನೆಯಾಗಿರುವುದನ್ನು ಕಾಣುತ್ತೇವೆ. ಆದರೆ ಇಂದಿನ ಪಠ್ಯಕ್ರಮ 7 R.S. ಸಿದ್ಧಾಂತಕ್ಕೆ ಒಳಪಟ್ಟು ರಚಿತವಾಗಿರುತ್ತವೆ ಎಂದು ಮಹಾಬಲೇಶ್ವರರಾವ್ ಅಭಿಪ್ರಾಯ ಪಡುತ್ತಾರೆ. 7 R.Sಗಳು ಯಾವುವೆಂದರೆ ಓದು, ಬರಹ, ಗಣಿತ, ಹಕ್ಕುಗಳು, ಹೊಣೆಗಾರಿಕೆಗಳು, ಮನರಂಜನೆ, ಸಂಬಂಧಗಳು ಎಂದು ಗುರುತಿಸುತ್ತಾರೆ. ಅಂದರೆ ಇಂದಿನ ಪಠ್ಯಗಳು ಮಗುವಿನ ವ್ಯಕ್ತಿತ್ವವನ್ನು ಬೆಳೆಸುವ ರೀತಿಯಲ್ಲಿ ರಚನೆಯಾಗಬೇಕು ಎಂಬ ತತ್ವಕ್ಕೆ ಒಳಪಟ್ಟಿವೆ ಎಂಬುದು ಇವರ ಅಭಿಪ್ರಾಯದಿಂದ ಸ್ಪಷ್ಟವಾಗುತ್ತದೆ.

### ೧.೧. ಅಧ್ಯಯನದ ಉದ್ದೇಶ

ಕರ್ನಾಟಕ ಸರ್ಕಾರ ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯನ್ವಯ ಶಿಕ್ಷಣ ಕ್ಷೇತ್ರವನ್ನು ಸಬಲೀಕರಣಗೊಳಿಸುವ ನಿಟ್ಟಿನಲ್ಲಿ ಸಾಗಿದೆ. ಪ್ರಾಥಮಿಕ ಕನ್ನಡಭಾಷಾ ಪಠ್ಯಪುಸ್ತಕಗಳನ್ನು

ವೈಜ್ಞಾನಿಕವಾಗಿ ರಚನೆ ಮಾಡುತ್ತಾ, ಅಮೂಲಾಗ್ರ ಬದಲಾವಣೆಯನ್ನು ತಂದಿದೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಸಾಮಾನ್ಯೀಕರಿಸಲಾಗಿದೆ. ಮಕ್ಕಳ ಕಲಿಕೆ, ಬೋಧನೆ ಮತ್ತು ಮೌಲ್ಯಮಾಪನದ ಗುಣಮಟ್ಟವನ್ನು ಸಂಮೋದನೆಗೊಳಿಸುವ ನಿಟ್ಟಿನಲ್ಲಿ ಪಠ್ಯಪುಸ್ತಕಗಳ ಪಠ್ಯಕ್ರಮ ರಚನೆಯ ಸ್ವರೂಪ ಮತ್ತು ಅಭ್ಯಾಸ ಚಟುವಟಿಕೆಗಳಲ್ಲಿ ಹಲವಾರು ಬದಲಾವಣೆಗಳನ್ನು ತಂದಿದೆ. ಈ ಕುರಿತು ಅನೇಕ ಕಾರ್ಯಾಗಾರಗಳನ್ನು, ಪ್ರಬಂಧ ಮಂಡನೆಯನ್ನು ಮಾಡಲಾಗಿದೆ.

ಪ್ರಾಥಮಿಕ ಕನ್ನಡಭಾಷಾ ಪಠ್ಯಪುಸ್ತಕಗಳ ಪಠ್ಯಕ್ರಮವು ಭಾಷೆಯನ್ನು ಮಾತ್ರ ಕಲಿಸುತ್ತಿಲ್ಲ. ಅದರೊಂದಿಗೆ ನಮ್ಮ ಸಾಮಾಜಿಕ, ಸಾಂಸ್ಕೃತಿಕ ಮತ್ತು ಬದುಕಿನ ಬೌದ್ಧಿಕ ವಲಯ ಪ್ರತಿಬಿಂಬಿಸುವಂತಹ ಅಂಶಗಳನ್ನು ಕಲಿಸಲು ಅವಕಾಶ ಮಾಡಿಕೊಟ್ಟಿದೆ. ಈ ಹಿನ್ನೆಲೆಯಿಂದ ಭಾಷಾತಜ್ಞರು, ಶಿಕ್ಷಣ ಚಿಂತಕರು ಮತ್ತು ಶೈಕ್ಷಣಿಕ ಮನೋವಿಜ್ಞಾನಿಗಳನ್ನೊಳಗೊಂಡ ಮನಸ್ಸುಗಳಿಂದ ಈ ಭಾಷಾ ಪಠ್ಯಪುಸ್ತಕಗಳ ಪಠ್ಯಕ್ರಮವನ್ನು ರಚನೆ ಮಾಡಿಸಲಾಗಿದೆ. ಈ ರೀತಿ ರಚನೆ ಮಾಡುವಾಗ ಸಮಕಾಲೀನ ಸಮಸ್ಯೆಗಳಿಗೆ ಪ್ರಾಧಾನ್ಯತೆಯನ್ನು ನೀಡಲಾಗಿದೆ.

ಪ್ರಾಚೀನ ಕನ್ನಡಭಾಷಾ ಪಠ್ಯಪುಸ್ತಕಗಳನ್ನು ಚಾರಿತ್ರಿಕವಾಗಿ ಗಮನಿಸಿದಾಗ ಪಠ್ಯಕ್ರಮ ರಚನೆಯಲ್ಲಿ ಏಕರೂಪತೆ ಇಲ್ಲದಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಅಂದರೆ ಆಯಾ ಕಾಲದ ಸಾಮಾಜಿಕ ಬದಲಾವಣೆಯಲ್ಲಿ ಜರುಗಿದ ವ್ಯತ್ಯಾಸವನ್ನು ಗಮನಿಸಿ ಪಠ್ಯಪುಸ್ತಕ ರಚನೆಯಾಗಿರುವುದು ತಿಳಿದು ಬರುತ್ತದೆ. ಉದಾಹರಣೆಗೆ ಬ್ರಿಟೀಶರ ಕಾಲದಲ್ಲಿ ರಚನೆಯಾದ ಪ್ರಾಥಮಿಕ ಪಠ್ಯಗಳಲ್ಲಿ 'ಋ' 'ೠ' ಎರಡು ಸ್ವರಾಕ್ಷರಗಳೆಂದು ಕಲಿಸಲಾಗುತ್ತಿತ್ತು. ನಂತರದ ಪಠ್ಯಗಳಲ್ಲಿ ಇವೆರಡನ್ನು ಕೈಬಿಡುವ ಪ್ರಯತ್ನಗಳು ನಡೆದವು. ಆದರೆ ಸಾಂಪ್ರದಾಯಿಗಳ ತೀವ್ರತರನಾದ ವಿರೋಧದಿಂದಾಗಿ 'ಋ' ಕಾರವನ್ನು ಉಳಿಸಿಕೊಳ್ಳಲಾಯಿತು. ಈ ಕಾಲಘಟ್ಟದಲ್ಲಿ ಕಲಿಸುವ ಗುಣಿತಾಕ್ಷರವನ್ನು ಸಹ ಗಮನಿಸಿದಾಗ ಒಂದೊಂದು ಸ್ವರ ಚಿನ್ಹೆಗೂ ಇರುವ ಹೆಸರನ್ನು ಹೇಳುತ್ತಾ ಬರೆಯುವ ಅಭ್ಯಾಸದ ಪಾಠಗಳನ್ನು ಕಾಣಬಹುದಾಗಿದೆ. ಉದಾಹರಣೆಗೆ ತಲೆಕಟ್ಟು, ಇಳಿ, ಗುಡಿಸು, ಗುಡಿಸಿನದೀರ್ಘ, ಕೊಂಬು, ಕೊಂಬಿನ ದೀರ್ಘ, (ಇಳಿ) ಎತ್ವ, ಎತ್ವದದೀರ್ಘ, ಐತ್ವ, ಒತ್ವ, ಒತ್ವದದೀರ್ಘ, ಔತ್ವ ಹೀಗೆ ಹೇಳುತ್ತಾ ಕಲಿಸುವುದನ್ನು ಹಿಂದಿನ ಪಠ್ಯಗಳಲ್ಲಿ ಕಾಣುತ್ತೇವೆ. ಆದರೆ ಕಳೆದ ಕೆಲವು ದಶಕಗಳಿಂದೀಚೆಗೆ ಈ ವಿಧಾನವನ್ನು ಕಲಿಸುತ್ತಿಲ್ಲ.

ಪ್ರಚಲಿತ ಕನ್ನಡಭಾಷಾ ಪಠ್ಯಗಳು ಮಕ್ಕಳ ವಯೋಮಾನಕ್ಕೆ ಅನುಸಾರವಾಗಿ ಪಾಠ, ಪದ್ಯ, ವ್ಯಾಕರಣ, ಪಾಠೋಪಕರಣಗಳ ಬಳಕೆ, ಪಠ್ಯಮಾದರಿ ವಿನ್ಯಾಸ, ಅಭ್ಯಾಸ ಚಟುವಟಿಕೆ, ಭಾಷಾಭ್ಯಾಸ ಚಟುವಟಿಕೆ, ಕಲಿಕಾ ಸಾಮರ್ಥ್ಯ ಮತ್ತು ಪ್ರಚಲಿತ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಲ್ಲಿ ಬರುವಂತಹ ಬೋಧನೆಯ ವಿಧಾನಗಳು, ಶಿಕ್ಷಕ, ವಿದ್ಯಾರ್ಥಿ, ಪರೀಕ್ಷೆ, ಪ್ರಶ್ನಾವಳಿ, ಲೇಖನಚಿಹ್ನೆಗಳ ಬಳಕೆ, ಸಂಸ್ಕೃತಿಯಂತಹ ಅಂಶಗಳು ಪ್ರಾಥಮಿಕ ಕನ್ನಡಭಾಷಾ ಪಠ್ಯಗಳಲ್ಲಿ ಸಮರ್ಪಕವಾಗಿ ಬಳಕೆ ಆಗಿದೆಯೆ? ಅಥವಾ ಇಲ್ಲವೆ? ಎಂಬುದನ್ನು ಕಂಡು

ಕೊಳ್ಳಬೇಕಾಗಿದೆ. ಏಕೆಂದರೆ ಇತ್ತೀಚಿನ ವರದಿಗಳ ಪ್ರಕಾರ ಕನ್ನಡ ಮನೆಮಾತುಳ್ಳ ಮಕ್ಕಳು ಮತ್ತು ಕನ್ನಡೇತರ ಮಕ್ಕಳು ಶಾಲಾ ವಾತಾವರಣದಲ್ಲಿ ಕನ್ನಡ ಭಾಷೆಯನ್ನು ಓದುವ ಮತ್ತು ಬರೆಯುವ ಕೌಶಲದಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬ ಕೂಗು ಅಲ್ಲಲ್ಲಿ ಕೇಳಿ ಬರುತ್ತಿದೆ. ಇದಕ್ಕೆ ಕಾರಣಗಳನ್ನು ಭಾಷಾತಜ್ಞರು, ಶಿಕ್ಷಣಚಿಂತಕರು ಮತ್ತು ಶೈಕ್ಷಣಿಕ ಮನೋವಿಜ್ಞಾನಿಗಳು ತಮ್ಮ ತಮ್ಮ ಶಿಸ್ತಿನ ಅಧ್ಯಯನಗಳ ಮೂಲಕ ವಿಶ್ಲೇಷಣೆ ನಡೆಸುತ್ತಿದ್ದಾರೆ.

ಭಾಷಾತಜ್ಞರು ಕಲಿಕೆಯಲ್ಲಿ ಈ ಮಾದರಿ ಸಮಸ್ಯೆಗಳು ಕಂಡು ಬರುವುದಕ್ಕೆ ಕನ್ನಡಭಾಷಾ ಪಠ್ಯಗಳಲ್ಲಿ ವ್ಯಾಕರಣಾಂಶಗಳು ಸಂಸ್ಕೃತ ಭಾಷೆಯ ಮಾದರಿಯಲ್ಲಿ ರಚನೆಯಾಗಿವೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅಲ್ಲದೆ ನಾಲ್ಕು ಭಾಷಾ ಕೌಶಲಗಳಿಗೆ ಅನುಗುಣವಾಗಿ ಭಾಷಾ ಪಠ್ಯಗಳು ಸರಿಯಾಗಿ ರಚನೆಯಾಗಿಲ್ಲ ಎಂಬ ಆತಂಕವನ್ನೂ ಸಹ ವ್ಯಕ್ತಪಡಿಸಿದ್ದಾರೆ. ಶಿಕ್ಷಣತಜ್ಞರು ಪಠ್ಯಗಳನ್ನು ಬೋಧಿಸುವ ವಿಧಾನ ಮತ್ತು ಮೌಲ್ಯಮಾಪನದ ಬಗ್ಗೆ ಆತಂಕ ವ್ಯಕ್ತಪಡಿಸಿದ್ದಾರೆ. ಇನ್ನು ಶೈಕ್ಷಣಿಕ ಮನೋವಿಜ್ಞಾನಿಗಳು ಪಠ್ಯಕ್ರಮ ಮತ್ತು ಅಭ್ಯಾಸ ಚಟುವಟಿಕೆ ತರಗತಿಯ ಮಕ್ಕಳ ಮಾನಸಿಕ ವಯಸ್ಸಿಗೆ ಅನುಗುಣವಾಗಿ ಧ್ವನಿ, ಪದ, ವಾಕ್ಯಗಳು ರಚನೆಯಾಗುತ್ತಿಲ್ಲ ಎಂಬ ಮಾತನ್ನು ಹೇಳುತ್ತಾರೆ. ಈ ಮೇಲಿನ ಎಲ್ಲಾ ವಿದ್ವಾಂಸರ ಅಭಿಪ್ರಾಯಗಳನ್ನು ಪ್ರಚಲಿತ ಪ್ರಾಥಮಿಕ ಪ್ರಥಮ ಕನ್ನಡಭಾಷಾ ಪಠ್ಯಗಳ ಸ್ವರೂಪದ ಹಿನ್ನೆಲೆಯಲ್ಲಿ, ನಿದರ್ಶನಗಳನ್ನು ಕೊಡುವುದರ ಮೂಲಕ ಚರ್ಚಿಸಬೇಕಿದೆ. ಆದ್ದರಿಂದ ಪ್ರಾಥಮಿಕ ಹಂತದ ಕನ್ನಡಭಾಷಾ ಪಠ್ಯಪುಸ್ತಕಗಳ ಭಾಷಿಕ ಮತ್ತು ಶೈಕ್ಷಣಿಕ ಅಧ್ಯಯನ ಎಂಬ ಶೀರ್ಷಿಕೆಯ ಅಡಿಯಲ್ಲಿ ಅಧ್ಯಯನ ಮಾಡುವ ಮಹದುದ್ದೇಶವನ್ನು ಈ ಮಹಾಪ್ರಬಂಧ ಹೊಂದಿದೆ.

### ೧.೨. ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವನ್ನು **ಪ್ರಾಥಮಿಕ ಹಂತದ ಕನ್ನಡಭಾಷಾ ಪಠ್ಯಪುಸ್ತಕಗಳ ಭಾಷಿಕ ಮತ್ತು ಶೈಕ್ಷಣಿಕ ಅಧ್ಯಯನ (ಪ್ರಚಲಿತ ಪ್ರಥಮ ಕನ್ನಡಭಾಷಾ ಪಠ್ಯಗಳನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯಲ್ಲಿ ಅಧ್ಯಯನ ಮಾಡಲಾಗಿದೆ. ಇಲ್ಲಿ ಬಳಕೆಮಾಡಿಕೊಂಡ 'ಶೈಕ್ಷಣಿಕ' ಎಂಬ ಪದವು ವಿಶಾಲಾರ್ಥವುಳ್ಳದ್ದಾಗಿದೆ. ಆದರೆ ಈ ಅಧ್ಯಯನದಲ್ಲಿ ಪದವು ಪ್ರಾಥಮಿಕ ಹಂತದ ಕನ್ನಡಭಾಷಾ ಪಠ್ಯಗಳ ಅನ್ವಯ ಬಳಕೆಯನ್ನು ಮಾಡಿಕೊಂಡು ಸಂಕ್ಷಿಪ್ತಗೊಳಿಸಿ ಕೊಂಡಿದೆ. ಅಲ್ಲದೆ ಭಾಷಿಕ ಮತ್ತು ಶಿಕ್ಷಣದ ನೆಲೆಗಳನ್ನು ಬೇರೆ ಬೇರೆಯಾಗಿ ನೋಡದೆ, ಸಹಸಂಬಂಧದ ರೀತಿಯಲ್ಲಿ ನೋಡುವ ಪ್ರಯತ್ನ ಮಾಡಲಾಗಿದೆ. ಏಕೆಂದರೆ ಶಿಕ್ಷಣ ವ್ಯವಸ್ಥೆಯಲ್ಲಿ ಇವೆರಡು ಒಂದೇ ನಾಣ್ಯದ ಎರಡು ಮುಖಗಳಿಂತಿವೆ.

ಈ ಅಧ್ಯಯನದ ಸ್ವರೂಪವನ್ನು ಮೂರು ಮುಖ್ಯ ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಈ ಮೂರು ಭಾಗಗಳಲ್ಲಿ ಎಂಟು ಅಧ್ಯಾಯಗಳಿವೆ. ಪ್ರಾಥಮಿಕ ಶಿಕ್ಷಣದ ಕನ್ನಡಭಾಷಾ ಬೋಧನೆಯ ಪಠ್ಯಕ್ರಮ, ಭಾಷಾಭ್ಯಾಸ ಚಟುವಟಿಕೆ, ವ್ಯಾಕರಣಾಂಶಗಳ ವ್ಯವಸ್ಥೆಯ ಸ್ವರೂಪವನ್ನು

ಕುರಿತು ಚರ್ಚಿಸಲಾಗಿದೆ. ಭಾಷಾಬೋಧನೆಯ ಅಂಗವಾಗಿ ಬರುವ ಕೌಶಲಗಳು ನಾಲ್ಕು. ಅವು ಕೇಳುವಿಕೆ, ಮಾತನಾಡುವಿಕೆ, ಓದು ಮತ್ತು ಬರಹ. ಸಾಮಾನ್ಯವಾಗಿ ಓದು ಮತ್ತು ಬರಹದ ಕೌಶಲಗಳು ಶಾಲೆಯ ಔಪಚಾರಿಕ ರೀತಿಯ ಶಿಕ್ಷಣದಿಂದ ಬೆಳೆಯುತ್ತವೆ. ಆದರೆ ಕನ್ನಡಭಾಷಾ ಬೋಧನೆಯನ್ನು ಕುರಿತು ಹೇಳುವುದಾದರೆ, ಪ್ರಾರಂಭದ ಹಂತಗಳಲ್ಲಿ ಈ ಮೇಲಿನ ನಾಲ್ಕು ಕೌಶಲಗಳನ್ನು ಕೇಂದ್ರಿಕರಿಸಿ ಪಠ್ಯಗಳು ರಚನೆಯಾಗಿವೆ ಎಂದು ಹೇಳಲಾಗುತ್ತದೆ. ಈ ಮಾತನ್ನು ಪ್ರಾಥಮಿಕ ಕನ್ನಡಭಾಷಾ ಪಠ್ಯಗಳ ಮುನ್ನುಡಿಯಲ್ಲೂ ಸಹ ಹೇಳಲಾಗಿದೆ. ಆದರೆ ಭಾಷಾ ಚಿಂತಕರು, ಶಿಕ್ಷಣ ತಜ್ಞರು ಮತ್ತು ಶೈಕ್ಷಣಿಕ ಮನೋವಿಜ್ಞಾನಿಗಳು ಈ ನಾಲ್ಕು ಕೌಶಲಗಳು ಸಮರ್ಪಕವಾಗಿ ಬಳಕೆಯಾಗಿಲ್ಲ. ಜೊತೆಗೆ ಬೋಧನೆ, ಶಿಕ್ಷಕ, ವಿದ್ಯಾರ್ಥಿ, ಪರೀಕ್ಷೆಗಳು, ಪ್ರಶ್ನಾವಳಿ, ಮೌಲ್ಯಮಾಪನದಂತಹ ಅಂಶಗಳು ಕನ್ನಡಭಾಷಾ ಚಟುವಟಿಕೆಯ ಹಿನ್ನೆಲೆಯಲ್ಲಿ ನಡೆಯುತ್ತಿಲ್ಲ ಎಂಬ ಅಂಶಗಳನ್ನು ಸಂಶೋಧನಾ ಬರಹಗಳಲ್ಲಿ ಉಲ್ಲೇಖಿಸಿದ್ದಾರೆ. ಅಂತಹ ಬರಹಗಳನ್ನು ಕೈಗೆತ್ತಿಕೊಂಡು ಪಠ್ಯಕ್ರಮದ ಸ್ವರೂಪದ ಹಿನ್ನೆಲೆಯಲ್ಲಿ ಚರ್ಚಿಸಿ, ವಿಶ್ಲೇಷಿಸುವ ಸ್ವರೂಪವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

## ಭಾಗ–೧

ಪ್ರಾರಂಭದ ಈ ಭಾಗದಲ್ಲಿ ಮೂರು ಅಧ್ಯಾಯಗಳನ್ನು ಕೊಡಲಾಗಿದೆ. ಅವುಗಳ ಸ್ವರೂಪ ಈ ಕೆಳಗಿನಂತಿದೆ.

**ಅಧ್ಯಾಯ : ೧. ಅಧ್ಯಯನದ ಉದ್ದೇಶ, ಸ್ವರೂಪ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆ**

ಈ ಅಧ್ಯಾಯದಲ್ಲಿ ಇಡೀ ಸಂಶೋಧನಾ ವಿಷಯದ ಉದ್ದೇಶವನ್ನು ಮೊದಲು ಸ್ಪಷ್ಟಪಡಿಸಿದೆ. ನಂತರ ಸಂಶೋಧನೆಯ ಮಹತ್ವ ತಿಳಿಸುತ್ತಾ ಅದರ ಸ್ವರೂಪ, ವ್ಯಾಪ್ತಿ, ವೈಧಾನಿಕತೆಯನ್ನು ವಿವರಿಸಿದೆ. ಈ ರೀತಿಯ ಪ್ರಾಥಮಿಕ ಶಿಕ್ಷಣದ ವಿಶಿಷ್ಟ ಅಧ್ಯಯನದಿಂದ ಸಾಮಾಜಿಕರಿಗೆ ಮತ್ತು ಬೌದ್ಧಿಕ ವಲಯಕ್ಕೆ ಆಗುವಂತಹ ಮಹತ್ವಪೂರ್ಣ ಅಂಶಗಳನ್ನು ಚರ್ಚಿಸಲಾಗಿದೆ.

**ಅಧ್ಯಾಯ : ೨. ಅಧ್ಯಯನದ ಸಮೀಕ್ಷೆ**

ಈ ಅಧ್ಯಾಯದಲ್ಲಿ ಅಧ್ಯಯನಕ್ಕೆ ಸಂಬಂಧಿಸಿದ ಪಿಎಚ್.ಡಿ. ಮಹಾಪ್ರಬಂಧಗಳು, ಎಂ.ಫಿಲ್ ಪ್ರಬಂಧಗಳು, ಎಂ.ಎ. ಶಿಕ್ಷಣ ಮತ್ತು ಎಂ.ಇಡಿ. ಸ್ನಾತಕೋತ್ತರ ಪದವಿಗಾಗಿ ಸಲ್ಲಿಸಿದ ಕಿರುಪ್ರಬಂಧಗಳು, ಸಂಶೋಧನಾಲೇಖನಗಳು ಹಾಗೂ ಕೃತಿ ಮತ್ತು ನಿಯತಕಾಲಿಕೆ ಗಳನ್ನು ಸಂಕ್ಷಿಪ್ತವಾಗಿ ವಿಶ್ಲೇಷಿಸಿ ಚರ್ಚಿಸಲಾಗಿದೆ. ಪ್ರಾರಂಭದಲ್ಲಿ ಪ್ರಾಥಮಿಕ ಹಂತದ ಕನ್ನಡಭಾಷಾ ಪಠ್ಯಗಳಿಗೆ ಸಂಬಂಧಿಸಿದಂತೆ ನಡೆದ ಅಧ್ಯಯನಗಳನ್ನು ತೆಗೆದುಕೊಂಡಿದೆ. ನಂತರ ಕನ್ನಡ ಪಠ್ಯಗಳಿಗೆ ಮತ್ತು ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದ ಪೂರಕ ವಿಷಯ ಕುರಿತು ಚರ್ಚೆಯನ್ನು ಪ್ರಬಂಧದನುಸಾರವಾಗಿ, ಸಂಶೋಧನಾ ಬರಹಗಳನ್ನು ಸಮೀಕ್ಷೆ ಮಾಡಲಾಗಿದೆ.

**ಅಧ್ಯಾಯ : ೩ ಪ್ರಾಥಮಿಕ ಶಿಕ್ಷಣದ ಚಾರಿತ್ರಿಕ ಹಿನ್ನೆಲೆ**

ಈ ಅಧ್ಯಾಯದಲ್ಲಿ ಪ್ರಾಚೀನ ಭಾರತೀಯ ಶಿಕ್ಷಣ ಪರಂಪರೆಯನ್ನು ಪ್ರಾಸ್ತವಿಕವಾಗಿ ವಿವರಿಸಿದೆ. ಕಾಲಕಾಲಕ್ಕೆ ಬದಲಾದ ಬೋಧನೆ, ಪಠ್ಯಕ್ರಮ, ಗುರು ಶಿಷ್ಯರ ಸಂಬಂಧ ಮತ್ತು ಶಿಕ್ಷಣ ವ್ಯವಸ್ಥೆಯನ್ನು ಅಧ್ಯಯನಕ್ಕೆ ಪೂರಕವಾಗಿ ವಿಶ್ಲೇಷಿಸಿದೆ. ನಂತರದಲ್ಲಿ ಬ್ರಿಟೀಷರ ಕಾಲದಲ್ಲಿ ಬಂದ ಭಾಷಾಶಿಕ್ಷಣ ಪರಂಪರೆ ಕನ್ನಡ ಪಠ್ಯ, ಪಠ್ಯಕ್ರಮದ ಇತಿಹಾಸವನ್ನು ಕನ್ನಡ ಪಠ್ಯಪುಸ್ತಕಗಳ ಸ್ವರೂಪದ ಹಿನ್ನೆಲೆಯಲ್ಲಿ ವಿಶ್ಲೇಷಣೆಗೆ ಒಳಪಡಿಸಿದೆ.

**ಭಾಗ–೨**

ಎರಡನೇ ಭಾಗದಲ್ಲಿಯೂ ಸಹ ಮೂರು ಅಧ್ಯಾಯಗಳಿದ್ದು ಅವುಗಳು ಇಂತಿವೆ. (೪)ಧ್ವನಿರಚನೆ (೫)ಪದರಚನೆ (೬)ವಾಕ್ಯರಚನೆ ಮತ್ತು ಅರ್ಥಸಹಿತ ಪದಕೋಶಿಗಳಾಗಿವೆ. ಇವುಗಳು ಪ್ರಸ್ತುತ ಅಧ್ಯಯನದ ಒಂದು ಕೇಂದ್ರಭಾಗವಾಗಿ ರಚನೆಯಾಗಿವೆ. ಈ ಮೂರು ಅಧ್ಯಾಯಗಳಲ್ಲಿಯೂ ಪ್ರಚಲಿತ ಪ್ರಥಮ ಕನ್ನಡಭಾಷಾ ಪಠ್ಯಪುಸ್ತಕಗಳ ಅಭ್ಯಾಸ ಚಟುವಟಿಕೆಯ ಸ್ವರೂಪವನ್ನು ಅಧ್ಯಾಯಾನುಸಾರ ಚರ್ಚಿಸಲಾಗಿದೆ. ನಂತರ ಈ ಭಾಗದ ಎಲ್ಲಾ ಅಧ್ಯಾಯಗಳಲ್ಲಿಯೂ ಆಧುನಿಕ ಚಿಂತಕರ ಅಭಿಪ್ರಾಯಗಳನ್ನು ವಿಶ್ಲೇಷಣೆ ಮಾಡುವುದರ ಮೂಲಕ ಕನ್ನಡಭಾಷಾ ಪಠ್ಯಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ.

**ಅಧ್ಯಾಯ : ೪ ಧ್ವನಿರಚನೆ**

ಪ್ರಾರಂಭದಲ್ಲಿ ಕನ್ನಡಭಾಷಾ ಪಠ್ಯಪುಸ್ತಕಗಳ ಮುನ್ನುಡಿಯಲ್ಲಿ ಹೇಳಿದ ಪಠ್ಯಕ್ರಮ ರಚನೆಯ ಉದ್ದೇಶವನ್ನು ಸ್ವರೂಪವನ್ನು ವಿಶ್ಲೇಷಿಸಿದೆ. ನಂತರ ಕನ್ನಡ ಪಠ್ಯ ಪುಸ್ತಕಗಳಲ್ಲಿ ವರ್ಣಮಾಲೆಯ ಪರಿಚಯದ ಬಗ್ಗೆ ಚರ್ಚೆ ಮಾಡಿದೆ. ಇಲ್ಲಿ ಮುಖ್ಯವಾಗಿ 'ಋ' ಕಾರದ ಚರ್ಚೆಯನ್ನು ಕೈಗೆತ್ತಿಕೊಂಡು, ನಂತರದಲ್ಲಿ ಅಕ್ಷರಗಳ ಬಗೆಗೆ ಆಧುನಿಕ ಚಿಂತಕರ ಅಭಿಪ್ರಾಯಗಳನ್ನು ಮಂಡಿಸಲಾಗಿದೆ. ಜೊತೆಗೆ ಧ್ವನಿರಚನೆಗೆ ಸಂಬಂಧಿಸಿದಂತೆ ಪಠ್ಯಗಳ ಸ್ವರೂಪವನ್ನು ಕೈಗೆತ್ತಿಕೊಳ್ಳಲಾಗಿದೆ. ಕನ್ನಡ ವರ್ಣಮಾಲೆಯ ಬಗೆಗೆ ಇರುವ ಚಿಂತಕರ ಅಭಿಪ್ರಾಯಗಳನ್ನು ಪಠ್ಯಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದೆ.

**ಅಧ್ಯಾಯ : ೫ ಪದರಚನೆ**

ಈ ಅಧ್ಯಾಯದ ಪ್ರಾರಂಭದ ಭಾಗದಲ್ಲಿ ಪದರಚನೆಗೆ ವ್ಯಾಖ್ಯಾನ ಮಾಡಿದೆ. ಭಾಷಾ ವಿಜ್ಞಾನದ ದೃಷ್ಟಿಯಲ್ಲಿ ಪದರಚನೆಯ ವಿಧಾನವನ್ನು ಸಂಕ್ಷಿಪ್ತವಾಗಿ ವಿವರಿಸಿದೆ. ಜೊತೆಗೆ ಪದರೂಪಗೊಳ್ಳುವ ಬಗೆಯನ್ನು ವ್ಯಾಕರಣದ ಹಿನ್ನೆಲೆಯಲ್ಲಿ ವಿಶ್ಲೇಷಿಸಿದೆ. ಇಲ್ಲಿ ಮುಖ್ಯವಾಗಿ ಸಂಧಿ, ಸಮಾಸ ರಚನೆಗಳನ್ನು ಸಂಸ್ಕೃತದ ಹಿನ್ನೆಲೆಯಲ್ಲಿ ಹೆಚ್ಚಾಗಿ ಕಲಿಸಲಾಗುತ್ತಿದೆ. ಇಂತಹ ಅಂಶಗಳನ್ನು ಕೈಗೆತ್ತಿಕೊಂಡು ಚಿಂತಕರ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಅಲ್ಲದೇ ಇಲ್ಲಿ ಬಳಕೆಯಾದ ವ್ಯಾಕರಣ ಕನ್ನಡದ್ದಲ್ಲ ಎಂದು ಹೇಳಲಾಗಿದೆ. ಇಲ್ಲಿ ಬಳಕೆಯಾದ ಪಾಠ/ಪದ್ಯಗಳಲ್ಲಿ ಪದಗಳು ಮಕ್ಕಳ ಸಾಮರ್ಥ್ಯಾನುಸಾರವಾಗಿ ಇದೆಯೇ? ಎಂಬುದನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ : ೬ ವಾಕ್ಯರಚನೆ.**

ಪ್ರಾರಂಭದಲ್ಲಿ ಪ್ರಾಸ್ತವಿಕವಾಗಿ ವಾಕ್ಯರಚನೆಯ ಸ್ವರೂಪವನ್ನು ಉದಾಹರಣೆಗಳ ಮೂಲಕ ಚರ್ಚಿಸಲಾಗಿದೆ. ನಂತರ ಕನ್ನಡಭಾಷಾ ಪಠ್ಯಗಳ ವಾಕ್ಯರಚನೆಯ ಸ್ವರೂಪವನ್ನು ವಿವರಿಸಿದೆ. ವಾಕ್ಯರಚನೆ ಕಲಿಸುವ ವಿಧಾನ ಮಕ್ಕಳಿಗೆ ಸರಳವಾಗಿದೆಯೇ ಅಥವಾ ಕಠಿಣವಾಗಿದೆಯೇ ಎಂಬುದನ್ನು ಈ ಅಧ್ಯಾಯದಲ್ಲಿ ಹಿಡಿದಿಡುವ ಪ್ರಯತ್ನ ಮಾಡಿದೆ. ಜೊತೆಗೆ ಪಠ್ಯಗಳಲ್ಲಿನ ಅರ್ಥಸಹಿತ ಪದಕೋಶಗಳು ಮಕ್ಕಳ ಸಾಮರ್ಥ್ಯಕ್ಕೆ ಅನುಸಾರವಾಗಿ ರಚನೆಗೊಂಡಿಲ್ಲ ಎಂಬುದನ್ನು ಉದಾಹರಣೆಗಳ ಮೂಲಕ ವಿವರಿಸಲಾಗಿದೆ.

**ಭಾಗ–೩**

ಈ ಭಾಗವು ಅಧ್ಯಯನದ ಇನ್ನೊಂದು ಕೇಂದ್ರಭಾಗವಾಗಿ ರಚನೆಗೊಂಡಿದೆ. ಇಲ್ಲಿ ಪ್ರಾಥಮಿಕ ಶಿಕ್ಷಣ ನಡೆಯುತ್ತಿರುವ ಬಗೆಯನ್ನು ವಿವರಿಸಿದೆ. ಕನ್ನಡಭಾಷಾ ಪಠ್ಯಗಳ ಹಿನ್ನೆಲೆಯಲ್ಲಿ ಪ್ರಚಲಿತ ಕಾರ್ಯವೈಖರಿಯ ಚಟುವಟಿಕೆಗಳನ್ನು ಚರ್ಚೆ ಮಾಡಲಾಗಿದೆ. ಜೊತೆಗೆ ಈ ಮೇಲಿನ ಅಧ್ಯಾಯಗಳಿಂದ ಕಂಡುಕೊಂಡ ಫಲಿತಗಳನ್ನು ಕೊಡಲಾಗಿದೆ. ಅಲ್ಲದೆ ಈ ಅಧ್ಯಾಯಕ್ಕೆ ಬಳಸಿಕೊಂಡ ಆಕರಗಳ ಪಟ್ಟಿಯನ್ನು ಸಹ ಈ ಭಾಗದಲ್ಲಿಯೆ ಕೊಡಲಾಗಿದೆ. ಇಲ್ಲಿ ಒಟ್ಟು ಎರಡು ಅಧ್ಯಾಯಗಳು ಮತ್ತು ಬಳಸಿಕೊಂಡ ಆಕರಗಳ ಪಟ್ಟಿ ಹಾಗೂ ಮುಂದೆ ನಡೆಯಬಹುದಾದ ಅಧ್ಯಯನದ ಸಾಧ್ಯತೆಗಳನ್ನು ಕೊಡಲಾಗಿದೆ. ಅವುಗಳ ಸ್ವರೂಪ ಈ ಕೆಳಗಿನಂತಿದೆ.

**ಅಧ್ಯಾಯ : ೭ ಪ್ರಚಲಿತ ಪ್ರಾಥಮಿಕ ಶಿಕ್ಷಣ ವ್ಯವಸ್ಥೆ**

ಪ್ರಚಲಿತ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಲ್ಲಿನ ಬೋಧನೆ, ಪಠ್ಯಕ್ರಮ, ಶಿಕ್ಷಕ, ವಿದ್ಯಾರ್ಥಿ, ಪರೀಕ್ಷೆಗಳು ನಡೆಯುವ ಕ್ರಮ, ಪಾಠೋಪಕರಣಗಳ ಬಳಕೆ, ಪ್ರಶ್ನೆಪತ್ರಿಕೆ ಮೌಲ್ಯಮಾಪನದಂತಹ ಇತ್ಯಾದಿ ಅಂಶಗಳನ್ನು ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಲ್ಲಿ ಮತ್ತು ಕನ್ನಡಭಾಷಾ ಪಠ್ಯಗಳಲ್ಲಿ ಹೇಗೆ ಬಳಸಿಕೊಳ್ಳಲಾಗಿದೆ ಎಂಬುದನ್ನು ಗಮನಿಸಿದೆ. ನಂತರ ಈ ಮೇಲಿನ ಶಿಕ್ಷಣ ಚಟುವಟಿಕೆಗಳು ಕನ್ನಡಭಾಷಾ ಪುಸ್ತಕದನುಸಾರ ನಡೆಯುತ್ತಿಲ್ಲ ಎಂಬುದನ್ನು ನಿದರ್ಶನಗಳ ಮೂಲಕ ಚರ್ಚೆಗೊಳಪಡಿಸಿದೆ.

**ಅಧ್ಯಾಯ : ೮ ಸಮಾರೋಪ**

ಈ ಅಧ್ಯಾಯವು ಅಧ್ಯಯನದ ಕೊನೆಯ ಭಾಗವಾಗಿದ್ದು, ಸಂಶೋಧನೆಯಲ್ಲಿ ಕಂಡುಕೊಂಡ ಒಳನೋಟಗಳನ್ನು ಸಂಕ್ಷಿಪ್ತವಾಗಿ ವಿವರಿಸಿದೆ. ಜೊತೆಗೆ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ಪರಿವಿಡಿಯಾನುಸಾರ ದಾಖಲಿಸಲಾಗಿದೆ. ನಂತರ ಮುಂದೆ ಕೈಗೊಳ್ಳಬಹುದಾದ ಅಧ್ಯಯನ ಸಾಧ್ಯತೆಗಳನ್ನು ಸಹ ಕೊಡಲಾಗಿದೆ. ಒಟ್ಟಾರೆಯಾಗಿ ಈ ಅಧ್ಯಯನವನ್ನು ಅರ್ಥಪೂರ್ಣವಾಗಿ ನ್ಯಾಯಯುತವಾಗಿ, ಪ್ರಾಮಾಣಿಕ ಪ್ರಯತ್ನದ ಮೂಲಕ ಮುಕ್ತಾಯಗೊಳಿಸಲಾಗಿದೆ.

### ೧.೩. ಅಧ್ಯಯನದ ಮಹತ್ವ

ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡಭಾಷಾ ಪಠ್ಯಗಳು ಭಾಷಿಕ ಮತ್ತು ಶೈಕ್ಷಣಿಕ ಕ್ಷೇತ್ರಕ್ಕೆ ಪ್ರಸ್ತುತ ಅಧ್ಯಯನ ಹೆಚ್ಚು ಪ್ರಯೋಜನಕಾರಿಯಾಗಿದೆ. ಹೇಗೆಂದರೆ ಪ್ರಾಥಮಿಕ ಶಿಕ್ಷಣ ಇಲಾಖೆಯು ಸದರಿ ಅಧ್ಯಯನವನ್ನು ಗಮನದಲ್ಲಿಟ್ಟುಕೊಂಡು ಹಲವಾರು ಸುಧಾರಣೆಯ ಕಾರ್ಯಕ್ರಮಗಳನ್ನು ಅಳವಡಿಸಿಕೊಳ್ಳಬಹುದಾಗಿದೆ. ಜೊತೆಗೆ ಕನ್ನಡಭಾಷಾ ಪಠ್ಯಪುಸ್ತಕಗಳ ರಚನೆಯ ಪೂರ್ವದಲ್ಲಿ ಕೆಲವು ಕಾರ್ಯಾಗಾರಗಳನ್ನು ಮತ್ತು ವಿಚಾರಸಂಕಿರಣಗಳನ್ನು ಹಮ್ಮಿ ಕೊಳ್ಳುವುದರ ಮೂಲಕ ಮೂಲ ತೊಡಕುಗಳನ್ನು ಗುರುತಿಸಿ. ಅಂತಹ ತೊಡಕುಗಳಿಗೆ ಪರಿಹಾರವನ್ನು ಅಲ್ಲಿಯೇ ಕಂಡುಕೊಳ್ಳಲು ಪ್ರಸ್ತುತ ಅಧ್ಯಯನದ ವಿಚಾರಗಳು ಸಹಾಯಕ ವಾದವುಗಳಾಗಿವೆ.

ಪ್ರಾಥಮಿಕ ಕನ್ನಡಭಾಷಾ ಪಠ್ಯಪುಸ್ತಕಗಳು ಮನೆಮಾತುಳ್ಳ ಮಕ್ಕಳಿಗೂ ಮತ್ತು ಬೇರೆ ಮನೆಮಾತಿನ ಮಕ್ಕಳಿಗೆ ಪ್ರತ್ಯೇಕವಾಗಿ ಪಠ್ಯಪುಸ್ತಕಗಳು ಅಗತ್ಯವಿದೆ ಎಂಬುದನ್ನು ಈ ಅಧ್ಯಯನದಿಂದ ತಿಳಿಯಬಹುದಾಗಿದೆ. ಈ ಪಠ್ಯಗಳಿಂದ ಭಾಷಿಕ ಮತ್ತು ಶೈಕ್ಷಣಿಕ ನೆಲೆಯಲ್ಲಿ ಕಲಿಸಲು ಮತ್ತು ಅಳವಡಿಸಿಕೊಳ್ಳಲು ಈ ಅಧ್ಯಯನವು ಸಹಾಯಕವಾದುದಾಗಿದೆ.

ಚಾರಿತ್ರಿಕವಾಗಿ ಕನ್ನಡಭಾಷಾ ಪಠ್ಯಪುಸ್ತಕಗಳ ಭಾಷಿಕ ರಚನೆ ಮತ್ತು ಶೈಕ್ಷಣಿಕ ಚಟುವಟಿಕೆಗಳು ಒಂದೇ ಮಾದರಿಯಲ್ಲಿ ಅಳವಡಿಕೆಯಾಗಿಲ್ಲ ಎಂಬುದು ಪ್ರಸ್ತುತ ಅಧ್ಯಯನ ದಿಂದ ತಿಳಿದು ಬರುತ್ತದೆ. ಇದರ ಸುಧಾರಣೆಯ ಬಗೆಗೆ ಏನೆಲ್ಲಾ ಕ್ರಮಗಳನ್ನು ಕೈಗೊಳ್ಳಬಹುದು ಎಂಬುದನ್ನು ಪ್ರಸ್ತುತ ಅಧ್ಯಯನದಿಂದ ಸಾಬೀತುಪಡಿಸಲಾಗಿದೆ. ಈ ರೀತಿಯ ವಿಶಿಷ್ಟ ಅಧ್ಯಯನದಿಂದ ಸಾಮಾಜಿಕರಿಗೆ ಮತ್ತು ಬೌದ್ಧಿಕ ವಲಯಕ್ಕೆ ಆಗುವಂತಹ ಮಹತ್ವದ ಅಂಶಗಳ ಬಗೆಗೆ ಚರ್ಚಿಸಲಾಗಿದೆ.

### ೧.೪. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನಕ್ಕೆ ಸಮಕಾಲೀನ ಸಂದರ್ಭದಲ್ಲಿ ಬಳಕೆಯಲ್ಲಿರುವ, ಕರ್ನಾಟಕ ಸರ್ಕಾರದಿಂದ ಮುದ್ರಣಗೊಂಡ ಕನ್ನಡ ಕಲಿ–ನಲಿ–೧ (ಅಭ್ಯಾಸ ಸಹಿತ ಪಠ್ಯಪುಸ್ತಕ) ಕನ್ನಡ ಕಲಿ–ನಲಿ–೨ (ಪಠ್ಯಸಹಿತ ಅಭ್ಯಾಸ ಪುಸ್ತಕ) ಕನ್ನಡ ಕಲಿ–ನಲಿ–೩ (ಅಭ್ಯಾಸ ಸಹಿತ ಪಠ್ಯಪುಸ್ತಕ–೨೦೦೮) ಕನ್ನಡ ಕಲಿ–ನಲಿ–೪ (ಅಭ್ಯಾಸ ಸಹಿತ ಪಠ್ಯಪುಸ್ತಕ–೨೦೦೮) ಕನ್ನಡ ಕಸ್ತೂರಿ–೫ (ಮೊದಲನೇ ಸೆಮಿಸ್ಟರ್ –೨೦೦೮)ಕನ್ನಡ ಕಸ್ತೂರಿ–೫ (ಎರಡನೇ ಸೆಮಿಸ್ಟರ್ ೨೦೦೮)ಕನ್ನಡಕಸ್ತೂರಿ–೬ (೨೦೦೭–೦೮) ಕನ್ನಡಕಸ್ತೂರಿ–೭ (೨೦೦೭–೨೦೦೮) ಎಂಬ ಪ್ರಥಮ ಕನ್ನಡಭಾಷಾ ಪಠ್ಯಪುಸ್ತಕಗಳನ್ನು ಮಾತ್ರ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ವಿಶ್ಲೇಷಣೆಯನ್ನು ಧ್ವನಿ, ಪದ, ವಾಕ್ಯ, ಮತ್ತು ಪದಕೋಶ ಹಾಗೂ ಬೋಧನೆ, ಶಿಕ್ಷಕ, ವಿದಾರ್ಥಿ, ಪರೀಕ್ಷೆ, ಮೌಲ್ಯಮಾಪನ, ಸಂಸ್ಕೃತಿ, ಲೇಖನ ಚಿಹ್ನೆಗಳ ಬಳಕೆಯಂತಹ ಇತ್ಯಾದಿ ಅಂಶಗಳಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಏಕೆಂದರೆ ಈ ಅಧ್ಯಯನವು

ಪಿಎಚ್.ಡಿ. ಮಹಾಪ್ರಬಂಧವಾಗಿರುವುದರಿಂದ ಕಾಲದ ಪರಿಮಿತಿಗೆ ಒಳಪಟ್ಟಿದೆ. ಆದ್ದರಿಂದ ಇದನ್ನು ಅನುಸರಿಸಲಾಗಿದೆ. ಇದು ಪ್ರಸ್ತುತ ಅಧ್ಯಯನದ ಮಿತಿಯು ಹೌದು, ವ್ಯಾಪ್ತಿಯು ಹೌದು.

**೧.೫. ಅಧ್ಯಯನಕ್ಕೆ ಅಳವಡಿಸಿದ ವೈಧಾನಿಕತೆ :**

ಪ್ರಸ್ತುತ ಅಧ್ಯಯನ ಈಗಾಗಲೇ ಚಾಲ್ತಿಯಲ್ಲಿರುವ ಕನ್ನಡಭಾಷಾ ಪಠ್ಯಗಳನ್ನು ಗಮನದಲ್ಲಿಟ್ಟುಕೊಂಡು ವಿವರಣೆಯ ಮೂಲಕ ವಿಶ್ಲೇಷಣೆ ಮಾಡಲಾಗಿದೆ. ವಿಶ್ಲೇಷಣೆ ಮಾಡುವಾಗ ಕ್ಷೇತ್ರಕಾರ್ಯ ಆಧಾರಿತ ಮಾಹಿತಿಯನ್ನು ತುಂಬಾ ಕಡಿಮೆ ಪ್ರಮಾಣದಲ್ಲಿ ಬಳಸಲಾಗಿದೆ. ಪ್ರಾಥಮಿಕ ಹಂತದ ಕನ್ನಡಭಾಷಾ ಪಠ್ಯಗಳನ್ನು ಸಾಹಿತ್ಯಕ ನೆಲೆಯಲ್ಲಿ ಅಧ್ಯಯನ ಮಾಡದೆ ಭಾಷಿಕ ಮತ್ತು ಶೈಕ್ಷಣಿಕ (ಧ್ವನಿ, ಪದ, ವಾಕ್ಯ, ಪದಕೋಶ, ಬೋಧನೆ, ಪಠ್ಯಕ್ರಮ, ಶಿಕ್ಷಕ, ವಿದ್ಯಾರ್ಥಿ, ಪರೀಕ್ಷೆ, ಪ್ರಶ್ನೆಪತ್ರಿಕೆ, ಮೌಲ್ಯಮಾಪನ, ಇತ್ಯಾದಿ) ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಜೊತೆಗೆ ವಿಶ್ಲೇಷಣೆಯ ಸಂದರ್ಭದಲ್ಲಿ ಭಾಷಾತಜ್ಞರು, ಶೈಕ್ಷಣಿಕ ಮನೋವಿಜ್ಞಾನಿಗಳು ಮತ್ತು ಶಿಕ್ಷಣ ತಜ್ಞರನ್ನು ಸಂದರ್ಶಿಸಿ, ಅವರು ನೀಡಿದ ವಿಧಾನಗಳನ್ನು ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಅಲ್ಲದೆ ಈಗಾಗಲೇ ಕರ್ನಾಟಕ ಸರ್ಕಾರ ಪ್ರಕಟಿಸಿರುವ ಶಿಕ್ಷಕರ ಕೈಪಿಡಿ, ಕನಿಷ್ಠ ಕಲಿಕಾಮಟ್ಟ, ಬೋಧನೆಯ ವ್ಯವಸ್ಥೆ, ಪಾಠೋಪಕರಣಗಳಂತಹ ಅಂಶಗಳು ಹಾಗೂ ಸಂಶೋಧನಾ ಬರಹಗಳನ್ನು ಬಳಸಿಕೊಳ್ಳುವುದರ ಮೂಲಕ ಅಧ್ಯಯನದ ವೈಧಾನಿಕತೆಯನ್ನು ರೂಪಿಸಿಕೊಳ್ಳಲಾಗಿದೆ.

• • •

## ಅಧ್ಯಾಯ : ಎರಡು

# ಇದುವರೆಗು ನಡೆದ ಅಧ್ಯಯನಗಳ ಸಮೀಕ್ಷೆ

---

೨.೧. ಪಿಎಚ್.ಡಿ. ಮಹಾಪ್ರಬಂಧಗಳು

೨.೨. ಎಂ.ಫಿಲ್. ಪ್ರಬಂಧಗಳು

೨.೩. ಎಂ.ಇಡಿ. ಪದವಿಗಾಗಿ ಸಲ್ಲಿಸಿದ ಕಿರುಪ್ರಬಂಧಗಳು

೨.೪. ಎಂ.ಎ. ಶಿಕ್ಷಣ ಪದವಿಗಾಗಿ ಸಲ್ಲಿಸಿದ ಕಿರುಪ್ರಬಂಧಗಳು

೨.೫. ಸಂಶೋಧನಾ ಕೃತಿಗಳು ಮತ್ತು ಲೇಖನಗಳು

೨.೬. ನಿಯತಕಾಲಿಕೆಗಳು

## ಅಧ್ಯಾಯ : ಎರಡು

# ಇದುವರೆಗು ಅಧ್ಯಯನದ ಸಮೀಕ್ಷೆ

ಕಳೆದ ಐವತ್ತು ವರ್ಷಗಳ ಇತಿಹಾಸದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಹಲವಾರು ರೀತಿಯಲ್ಲಿ ಅಧ್ಯಯನಗಳು ನಡೆದಿವೆ. ಅವುಗಳು ಪಿಎಚ್.ಡಿ, ಎಂ.ಫಿಲ್, ಕೃತಿಗಳು, ಲೇಖನಗಳು, ಕಿರುಪ್ರಬಂಧಗಳೋಪಾದಿಯಲ್ಲಿ ಬೆಳಕಿಗೆ ಬಂದು ಪ್ರಾಥಮಿಕ ಶಿಕ್ಷಣಕದ ಸುಧಾರಣೆಗೆ ಪ್ರಮುಖ ಪಾತ್ರವಾದವುಗಳಾಗಿವೆ. ಈ ಅಧ್ಯಯನಗಳು ಸಾಮಾಜಿಕ, ಸಾಂಸ್ಕೃತಿಕ, ಶಿಕ್ಷಕ, ವಿದ್ಯಾರ್ಥಿ ಬೋಧನೆ, ಪಾಠೋಪಕರಣಗಳು ಹಾಗೂ ಪಠ್ಯಕ್ರಮಗಳ ರಚನೆಯ ವಿಚಾರವಾಗಿಯೂ ಸಂಶೋಧನೆಯ ಲೇಖನಗಳು ಬಂದಿವೆ. ಈ ಎಲ್ಲಾ ಸಂಶೋಧನೆಗಳಿಂದಲೇ ಪ್ರಾಥಮಿಕ ಶಿಕ್ಷಣದ ಸುಧಾರಣೆಯ ದಾರಿ ಸುಗಮವಾಗಲು ಈ ಮೇಲಿನ ಅಂಶಗಳು ಸಹಾಯಕವಾಗಿವೆ. ಪ್ರಾಥಮಿಕ ಶಿಕ್ಷಣದ ಬಗ್ಗೆ ಇತ್ತೀಚಿನ ದಿನಮಾನಗಳಲ್ಲಿ ಚರ್ಚೆಗಳು ಹೆಚ್ಚಾಗಿದ್ದು ಇವೆಲ್ಲವು ಸುಧಾರಣೆಯ ಮೆಟ್ಟಲಿಗೆ ಸಹಾಯಕವಾದವುಗಳಾಗಿವೆ. ಆದರೆ ಕನ್ನಡ ಭಾಷಾ ಪಠ್ಯಗಳ ಬಗ್ಗೆ ಲೇಖನಗಳು ಮಾತ್ರ ಹೊರಬಂದಿದ್ದು ಅವುಗಳ ಸಂಖ್ಯಾ ಬಲ ಕಡಿಮೆ ಎಂದೇ ಹೇಳಬಹುದು. ಮಾನವನ ಮಾನವೀಯ ಮೌಲ್ಯಗಳನ್ನು ಬೆಳೆಸುವಲ್ಲಿ ಸಹಾಯಕವಾಗಬಲ್ಲ ಶಿಕ್ಷಣದ ಮುಖ್ಯ ಅಂಗವಾದ ಪಠ್ಯಕ್ರಮ ವ್ಯವಸ್ಥೆ ಇಂದು ಇನ್ನೂ ಅಧ್ಯಯನದಲ್ಲಿ ಪ್ರಗತಿಯನ್ನು ಕಂಡುಕೊಳ್ಳಬೇಕಾಗಿದೆ.

### ೨.೧. ಪಿಎಚ್.ಡಿ. ಮಹಾಪ್ರಬಂಧಗಳು

ಗಜಾನನ ನಾಯ್ಕರವರು 'ಇಂಗ್ಲೀಷ್ ಗೀತಗಳು' ಪೂರ್ವದ ಭಾಷಾಂತರ ಪ್ರಕ್ರಿಯೆ (೧೮೫೦ರಿಂದ೧೯೨೦) ಎನ್ನುವ ಪಿಎಚ್.ಡಿ. ಮಹಾಪ್ರಬಂಧವನ್ನು ಡಾ. ಎಂ.ಉಷಾ ಅವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಸಲ್ಲಿಸಿದ್ದಾರೆ. ಅಧ್ಯಾಯ ೩ರಲ್ಲಿ ಆಧುನಿಕ ಶಿಕ್ಷಣ ಮತ್ತು ಭಾಷಾಂತರ ಎಂಬ ಶಿರೋನಾಮೆ ಅಡಿಯಲ್ಲಿ ಪಠ್ಯಪುಸ್ತಕಗಳ ಭಾಷಾಂತರ, ಕನ್ನಡ ಸಾಹಿತ್ಯವನ್ನು ಶಾಲಾ ಪಠ್ಯಕ್ರಮಕ್ಕೆ ಅಳವಡಿಸುವ ಪ್ರಯತ್ನ, ಶಾಲಾಪಠ್ಯಗಳ ಭಾಷಾಂತರ ಸ್ವರೂಪದ ಬಗ್ಗೆ ಅಧ್ಯಯನ ಮಾಡಿದ್ದಾರೆ. ಬ್ರಿಟೀಶರ ಕಾಲದಲ್ಲಿ ಮೊದಲ ಕನ್ನಡ ಪಠ್ಯಗಳು ರಚನೆಯಾಗಿದ್ದು, ಭಾಷಾಂತರ ಪ್ರಕ್ರಿಯೆಯಲ್ಲಿ ಎಂಬುದನ್ನು ಉದಾಹರಣೆಗಳ

ಮೂಲಕ ಸಾದರಪಡಿಸಿದ್ದಾರೆ. ಆಧುನಿಕ ಶಿಕ್ಷಣವನ್ನು ಕನ್ನಡಿಗರಿಗೆ ಪರಿಚಯಿಸಿದವರು ಬ್ರಿಟೀಷರು ಎಂಬುದನ್ನು ವಿವರಿಸಿದ್ದಾರೆ. ಅಂದರೆ ಕೆಲವೇ ವರ್ಗಕ್ಕೆ ಮೀಸಲಾಗಿದ್ದ ಶಿಕ್ಷಣ ಎಲ್ಲರಿಗೂ ತಲುಪುವಂತೆ ಮಾಡಲು ಪ್ರಯತ್ನದ ಮೊದಲ ಹೆಜ್ಜೆ ಹಾಕಿದವರು ಬ್ರಿಟೀಶರು ಎಂಬುದನ್ನು ವಿವರಿಸಿದ್ದಾರೆ. ೧೮೨೦ರ ನಂತರದಲ್ಲಿ ಆಧುನಿಕ ಶಿಕ್ಷಣದ ಪ್ರಸಾರ ಆರಂಭಗೊಂಡಿತು. ವಿದ್ಯಾರ್ಥಿಗಳಿಗೆ ಅವಶ್ಯಕವಿದ್ದ ಪಠ್ಯಪುಸ್ತಕಗಳನ್ನು ಬೇರೆ ಬೇರೆ ನೆಲೆಗಳಿಂದ ಭಾಷಾಂತರ ಪ್ರಕ್ರಿಯೆಯ ಮೂಲಕ ತಂದುಕೊಂಡರು. ಅವುಗಳೆಂದರೆ ಅಂಕಗಣಿತದ ಮೊದಲ ಪುಸ್ತಕ (೧೮೭೫) ಕನ್ನಡ ಶಿಸ್ತು ಬೋಧನೆ, ವರ್ಣಮಾಲೆ (೧೮೯೬) 'ಗಣಿತ ತತ್ವಗಳು' (೧೮೭೦) ಚಿಕ್ಕವರಿಗೆ ತಕ್ಕಂತಹ ಪಾಠಗಳು (೧೮೫೩) ನೀನು ವಿಜ್ಞಾನಿಯಾಗು (೧೮೫೯) ಇಂದಿನ ವಿಜ್ಞಾನಿ ಮತ್ತು ಇಂದಿನ ಮಾನವ (೧೮೯೩)ಪದಾರ್ಥ ವಿಜ್ಞಾನದ ಮೂಲ ತತ್ವಗಳು (೧೮೯೧) ಈ ಎಲ್ಲಾ ಕೃತಿಗಳು ಯಾವುದೇ ಒಂದು ಕೃತಿ ನೇರವಾಗಿ ಕನ್ನಡದಲ್ಲಿ ರಚನೆಗೊಂಡವಲ್ಲ. ಗ್ಯಾರೆಟ್, ಜಗ್ಲರ್, ಜೇಮ್ಸ್ ಬಿ ಮತ್ತು ಓಡರ್ ಮುಂತಾದ ಮಿಶನರಿಗಳು ಈಗಾಗಲೇ ಇಂಗ್ಲೀಶ್ ಮತ್ತಿತರ ಭಾಷೆಗಳಲ್ಲಿರುವ ಕೃತಿಗಳನ್ನು ಅನುಸರಿಸಿ ಕನ್ನಡದ ಪಠ್ಯಪುಸ್ತಕಗಳಾಗಿ ರೂಪಿಸಿದರು. ಈ ವಿವರಣೆಯನ್ನು ಗಮನಿಸಿದಾಗ ಆಧುನಿಕ ಶಿಕ್ಷಣ ಪದ್ಧತಿಯಲ್ಲಿ ರಚನೆಗೊಂಡ ಪಠ್ಯಗಳು ಮೂಲಭೂತವಾಗಿ ಭಾಷಾಂತರ ಕ್ರಮದಿಂದಲೇ ಬಂದವುಗಳು ಎಂಬುದು ಸ್ಪಷ್ಟವಾಗುತ್ತದೆ. ಕಾಲಾಂತರದಲ್ಲಿ ಪಠ್ಯಗಳನ್ನು ಸಿದ್ದಪಡಿಸುವಲ್ಲಿ ಲಿಂಗ, ವಯೋಮಾನಗಳನ್ನು ಗಣನೆಗೆ ತೆಗೆದುಕೊಂಡು ಮಹಿಳಾ ಶಿಕ್ಷಣಕ್ಕಾಗಿ, ಮಕ್ಕಳಿಗಾಗಿ ಎನ್ನುವ ರೀತಿಯಲ್ಲಿ ಪಠ್ಯಪುಸ್ತಕಗಳು ರಚನೆಯಾಗಿರುವುದು ಕಂಡುಬರುತ್ತದೆ. ಮಹಿಳೆಯರಿಗಾಗಿ ಪ್ರತ್ಯೇಕ ಶಾಲೆ, ಕಾಲೇಜುಗಳನ್ನು ತೆರೆದಿರುವುದನ್ನು ಕಾಣಬಹುದು. ಅವರಿಗಾಗಿಯೇ ಪ್ರತ್ಯೇಕ ಪಠ್ಯಕ್ರಮ ಸಹ ಸಿದ್ಧಗೊಂಡಿರುವುದನ್ನು ಕಾಣಬಹುದು. ಇಂತಹ ಪಠ್ಯಕ್ರಮದ ವ್ಯಾಪ್ತಿಗೆ ಒಳಪಡುವ ಪುಸ್ತಕಗಳೆಂದರೆ 'ಕನ್ನಡ ಕಲಿಕೆಯ ಮೊದಲ ಪುಸ್ತಕ ೧೯೬೩ ಇದರಲ್ಲಿ ಹೆಣ್ಣು ಮಕ್ಕಳ ಉಪದೇಶ, ವಿಕ್ಟೋರಿಯ ರಾಣಿ ಸ್ತುತಿ ಮುಂತಾದ ಭಾಗಗಳಿವೆ. ಇವರು ಈ ಅಧ್ಯಯನದಲ್ಲಿ ಮುಖ್ಯವಾಗಿ ಕನ್ನಡ ಪಠ್ಯಗಳು ರಚನೆಯಾದ ಬಗೆಯನ್ನು ವಿವರಿಸುತ್ತಾ ಅವುಗಳ ರಚನೆಗೆ ಭಾಷಾಂತರ ಪ್ರಕ್ರಿಯೆ ಹೇಗೆ ಪ್ರೇರಕವಾಯಿತು ಎಂಬುದನ್ನು ಹಿಡಿದಿಡುವ ಪ್ರಯತ್ನ ಮಾಡಿದ್ದಾರೆ. ಅಲ್ಲದೆ ಕನ್ನಡದ ಸ್ವತಂತ್ರ ಪಠ್ಯಪುಸ್ತಕಗಳ ರಚನೆಗೆ ಭಾಷಾಂತರಗೊಂಡ ಕನ್ನಡ ಪುಸ್ತಕಗಳೇ ಪ್ರೇರಕ ಎಂಬುದನ್ನು ವಿವರಿಸಿದ್ದಾರೆ.

ಬಿ. ಪ್ರಕಾಶರವರು ಮಂಗಳೂರು ವಿಶ್ವವಿದ್ಯಾಲಯಕ್ಕೆ ದಕ್ಷಿಣ ಕನ್ನಡದ ಪ್ರಾಥಮಿಕ ಮತ್ತು ಪ್ರೌಢಶಾಲಾ ಕನ್ನಡ ಪಠ್ಯಪುಸ್ತಕಗಳ ರಾಚನಿಕ, ಸಾಹಿತ್ಯಕ ಮತ್ತು ಸಾಂಸ್ಕೃತಿಕ ಸ್ವರೂಪಗಳ ಅಧ್ಯಯನವನ್ನು ಪ್ರೊ. ಉಪ್ಪಂಗಳ ರಾಮಭಟ್ಟ ಅವರ ಮಾರ್ಗದರ್ಶನದಲ್ಲಿ ಸಂಶೋಧನೆಯನ್ನು ಮಾಡಿದ್ದಾರೆ. ಪ್ರಾಚೀನ ಕಾಲದಲ್ಲಿನ ಕನ್ನಡ ಪಠ್ಯಗಳು ಹೇಗೆ ರಚನೆಗೊಂಡವು. ಆ ಪಠ್ಯಗಳ ರಚನೆ ಹಿಂದೆ ಬೀರಿರುವ ಪ್ರಭಾವಗಳೇನು, ಉದ್ದೇಶವೇನು, ಕನ್ನಡವನ್ನು ಬಳಸುತ್ತಿದ್ದ ಬಗೆ ಹೇಗೆ? ಸಾಹಿತ್ಯದ ಯಾವ ಪ್ರಕಾರಗಳಿಗೆ ಮಹತ್ವವನ್ನು

ನೀಡಲಾಗಿತ್ತು. ವಸ್ತುವಿನ ಆಯ್ಕೆ ಹೇಗೆ? ಸ್ವಾತಂತ್ರ ಪೂರ್ವ ಕಾಲದಲ್ಲಿ ಮತ್ತು ಸ್ವಾತಂತ್ರ್ಯ ನಂತರ ಪಠ್ಯಪುಸ್ತಕದ ರಚನೆಯಲ್ಲಾದ ಗಮನಾರ್ಹ ಬದಲಾವಣೆಗಳೇನು? ಶಿಕ್ಷಣದ ಉದ್ದೇಶಗಳನ್ನು ಈಡೇರಿಸಿಕೊಳ್ಳುವಲ್ಲಿ ಅದು ಎಷ್ಟರ ಮಟ್ಟಿಗೆ ಸಫಲವಾಗಿದೆ? ಇಂದಿನ ಸಮಾಜವನ್ನು ಪಠ್ಯಪುಸ್ತಕಗಳು ಕಂಡುಕೊಂಡ ಬಗೆ ಹೇಗೆ ಎಂಬುದನ್ನು ಉದಾಹರಣೆಗಳ ಮೂಲಕ ವಿದ್ವಾಂಸರ ಚರ್ಚೆಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ.

ಸೋಮಕ್ಕ ಎಂ 'ಲಂಬಾಣಿ ಮಕ್ಕಳ ಕಲಿಕಾ ಸಮಸ್ಯೆಗಳು' ಎಂಬ ವಿಷಯ ಕುರಿತು ಪಿಎಚ್.ಡಿ ಮಹಾಪ್ರಬಂಧವನ್ನು ಮಂಡಿಸಿದ್ದಾರೆ. ಇದರಲ್ಲಿ ಇವರು ಮುಖ್ಯವಾಗಿ ಧ್ವನಿ, ಪದ, ವಾಕ್ಯಗಳಲ್ಲಿ ಲಂಬಾಣಿ ಮಕ್ಕಳು ಕನ್ನಡ ಕಲಿಯುವಾಗ ಅಂದರೆ ಓದುವಾಗ ಮತ್ತು ಬರೆಯುವಾಗ ಮಾಡುವ ಅಕ್ಷರ ದೋಷಗಳನ್ನು ಕ್ಷೇತ್ರಕಾರ್ಯದ ಮೂಲಕ ದಾಖಲಿಸಿದ್ದಾರೆ. ಇದೊಂದು ಉತ್ತಮವಾದ ಅಧ್ಯಯನವಾಗಿದೆ. ಆದರೆ ಇದಕ್ಕೆ ಕಾರಣಗಳನ್ನು ಸರಿಯಾದ ರೀತಿಯಲ್ಲಿ ಕೊಟ್ಟಿದ್ದರೆ ಅಧ್ಯಯನ ಪರಿಪೂರ್ಣವಾಗುತ್ತಿತ್ತು ಎಂದು ಹೇಳಬಹುದು.

ಡಾ. ಪಿ.ಮಹಾದೇವಯ್ಯ ಅವರ ಮಾರ್ಗದರ್ಶನದಲ್ಲಿ ಭೀಮಣ್ಣ ಮೇಟಿಯವರು 'ಕನ್ನಡ ಭಾಷೆಯ ಕಲಿಕೆಯ ಸಮಸ್ಯೆಗಳು' ಎಂಬ ವಿಷಯ ಕುರಿತು ಪಿಎಚ್.ಡಿ ಮಹಾಪ್ರಬಂಧ ವನ್ನು ಮಂಡಿಸಿದ್ದಾರೆ. ಇದರಲ್ಲಿ ಮುಖ್ಯವಾಗಿ ಗುಲಬರ್ಗಾ ಜಿಲ್ಲೆಯ ಉರ್ದು ಭಾಷಿಕ ಪ್ರೌಢಶಾಲಾ ಮಕ್ಕಳನ್ನು ಅನುಲಕ್ಷಿಸಿ ಅಧ್ಯಯನ ಕೈಗೊಂಡಿದ್ದಾರೆ. ಈ ಮಕ್ಕಳಲ್ಲಿನ ಓದಿನ ಸಮಸ್ಯೆಗಳು, ಬರವಣಿಗೆಯ ಸಮಸ್ಯೆಗಳು, ಗುಣಿತಾಕ್ಷರ ಮತ್ತು ಒತ್ತಕ್ಷರಗಳನ್ನು ಗುರುತಿಸಿದ್ದಾರೆ. ಪದಾದಿ, ಪದಮದ್ಯ, ಪದಾಂತ್ಯ ಪರಿಸರದಲ್ಲಿ ಮಕ್ಕಳು ಮಾಡುವ ದೋಷಗಳನ್ನು ಉದಾಹರಣೆ ಗಳ ಮೂಲಕ ಅಂಕಿ ಸಂಖ್ಯೆಗಳಲ್ಲಿ ನೀಡಿದ್ದಾರೆ. ಇದರಿಂದ ಉರ್ದು ಭಾಷಾ ಪ್ರೌಢಶಾಲೆಗಳ ಮಕ್ಕಳು ಸ್ವರ, ಅರ್ಧಸ್ವರ, ವ್ಯಂಜನಗಳ ದೋಷಗಳನ್ನು ಓದಿನ, ಬರವಣಿಗೆಯ ಸಂದರ್ಭದಲ್ಲಿ ಮಾಡುತ್ತಾರೆ ಎಂಬುದನ್ನು ದೃಢಪಡಿಸಿದ್ದಾರೆ. ಜೊತೆಗೆ ಓದು ಮತ್ತು ಬರವಣಿಗೆಯಲ್ಲಿ ವ್ಯಾಕರಣಾಂಶಗಳನ್ನು ವಿದ್ಯಾರ್ಥಿ ತಪ್ಪು ಮಾಡುವ ಬಗೆಯನ್ನು ಗುರುತಿಸಿದ್ದಾರೆ. ಅಲ್ಲದೆ ಅವುಗಳ ಪರಿಹಾರಕ್ಕಾಗಿ ಕೈಗೊಳ್ಳಬಹುದಾದ ಅಂಶಗಳ ಪಟ್ಟಿಯನ್ನು ಕೊಟ್ಟಿದ್ದಾರೆ. ಇದರಿಂದ ನಮಗೆ ತಿಳಿದು ಬರುವ ಸಂಗತಿ ಎಂದರೆ ಬೋಧನೆ ಮತ್ತು ಪಠ್ಯಕ್ರಮ ರಚನೆಯಲ್ಲಿ ಬದಲಾಗಬೇಕು. ಜೊತೆಗೆ ಮಕ್ಕಳ ಮಾನಸಿಕ ಸಾಮರ್ಥ್ಯಕ್ಕನುಸಾರ ಕಲಿಕೆ ಮತ್ತು ಪಠ್ಯಕ್ರಮದಲ್ಲಿ ಸರಳತೆಯನ್ನು ಕಂಡುಕೊಳ್ಳಬೇಕು ಎಂಬುದನ್ನು ಈ ಮಹಾಪ್ರಬಂಧದ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಜಿ.ಎಚ್. ಪಾರ್ವತಮ್ಮನವರು ಡಾ. ಕೆ.ಯಶೋಧರ ಅವರ ಮಾರ್ಗದರ್ಶನದಲ್ಲಿ 'ಕಿರಿಯ ಪ್ರಾಥಮಿಕ ಶಾಲಾ ಶಿಕ್ಷಣದ ಮೂಲಕ ಮೂಲಭೂತ ಗ್ರಹಿಕೆಗಳ ಮತ್ತು ಕೌಶಲಗಳ ಸಾಧನೆ' ಎಂಬ ವಿಷಯ ಕುರಿತು ಮೈಸೂರು ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಮಹಾಪ್ರಬಂಧ ವನ್ನು ಮಂಡಿಸಿದ್ದಾರೆ. ಪ್ರಾಥಮಿಕ ಶಾಲೆಗಳ ಮೂಲಭೂತ ಗ್ರಹಿಕೆಗಳಿಂದ ಯಾವ ಯಾವ

ವಿಷಯಗಳ ಆಧಾರಿತವಾಗಿ ಕೌಶಲಗಳನ್ನು ಸಾಧನೆ ಮಾಡಲು ಶಿಕ್ಷಣ ವ್ಯವಸ್ಥೆ ಯೋಜನೆಯನ್ನು ಮಾಡಿಕೊಂಡಿದೆ ಎಂಬುದನ್ನು ವಿವರಿಸಿದ್ದಾರೆ. ವಾರ್ಷಿಕವಾಗಿ ಗಣನೀಯ ಸಾಧನೆಯನ್ನು ಮಾಡಿದ ವಿದ್ಯಾರ್ಥಿಗಳ ಅಂಕಿ, ಅಂಶಗಳನ್ನು ನೀಡುತ್ತಾ, ಸುಧಾರಣೆಯಾದ ಅಂಶಗಳು ಹಾಗೂ ತೊಡಕಾದ ಅಂಶಗಳನ್ನು ವಿವರಿಸಿದ್ದಾರೆ. ಈ ಒಂದು ಅಧ್ಯಯನದಿಂದ ಪ್ರಾಥಮಿಕ ಶಿಕ್ಷಣದಲ್ಲಿ ಮೂಲಭೂತ ಪರಿಕಲ್ಪನೆ ತಂದುಕೊಳ್ಳಲು ಉಂಟಾಗ ಬಹುದಾದ ಸುಧಾರಣೆಯನ್ನು ಗ್ರಹಿಸಬಹುದು. ಕೌಶಲ್ಯಗಳ ಸಾಧನೆಯನ್ನು ಚಟುವಟಿಕೆಯ ಆಧಾರಿತವಾಗಿ ಸುಧಾರಿಸಬಹುದು ಎಂಬುದನ್ನು ವಿವರಿಸಿದ್ದಾರೆ. ಜೊತೆಗೆ ಕನ್ನಡ ಮಾಧ್ಯಮ ಮತ್ತು ಇಂಗ್ಲೀಷ್ ಮಾಧ್ಯಮದ ವಿದ್ಯಾರ್ಥಿಗಳನ್ನು ವಿಷಯಾನುಸಾರ ಪರೀಕ್ಷೆಗೆ ಒಳಪಡಿಸಿ ಅದರಲ್ಲಿನ ಸಾಧನೆಯನ್ನು ವಿವರಿಸಿದ್ದಾರೆ. ಕೆಲವೊಂದು ವಿಷಯಗಳಲ್ಲಿ ಕನ್ನಡ ಮಾಧ್ಯಮ ವಿದ್ಯಾರ್ಥಿಗಳು ಗಣನೀಯವಾಗಿ ಹೆಚ್ಚು ಅಂಕಗಳನ್ನು ಪಡೆದರೆ, ಇನ್ನು ಕೆಲವು ವಿಷಯಗಳಲ್ಲಿ ಇಂಗ್ಲೀಷ್ ಮಾಧ್ಯಮದ ವಿದ್ಯಾರ್ಥಿಗಳು ಗಣನೀಯವಾಗಿ ಹೆಚ್ಚು ಅಂಕಗಳನ್ನು ಪಡೆದಿರುವುದನ್ನು ದಾಖಲೆ ಆಧಾರಿತ ವಾಗಿ ಸ್ಪಷ್ಟಪಡಿಸುತ್ತಾರೆ. ಇವರ ಚರ್ಚೆಯನ್ನು ಗಮನಿಸಿದಾಗ ಮಕ್ಕಳಿಗೆ ಮೊದಲು ಪ್ರಾಥಮಿಕ ಹಂತದಲ್ಲಿ ಮಾತೃಭಾಷಾ ಶಿಕ್ಷಣದಿಂದ ಕಲಿಕೆ ಅರ್ಥಪೂರ್ಣವಾಗಿ, ಗಣನೀಯವಾಗಿ ಸಾಗುತ್ತದೆ. ಕಲಿಕೆ ಸಾಮಾನ್ಯದಿಂದ ವಿಶಿಷ್ಟತೆಯ ಕಡೆಗೆ ಸಾಗುತ್ತದೆ. ಆದರೆ ಬೋಧನೆಯಲ್ಲಿ ಸರಳ ವಿಧಾನವಿರಬೇಕು ಎಂಬುದನ್ನು ವಿಶ್ಲೇಷಣೆಯ ಮೂಲಕ ಸ್ಪಷ್ಟಪಡಿಸುತ್ತಾರೆ.

**'ಭಾರತದಲ್ಲಿ ವಿದ್ಯಾರ್ಥಿ ಅಶಾಂತಿ ಸಮಸ್ಯೆ'** ಎಂಬ ಶೀರ್ಷಿಕೆಯಲ್ಲಿ ಸೋಮಶೇಖರಪ್ಪ ಸಿ.ಎ. ಅವರು ಎಚ್. ಮಣ್ಣವಡ್ಡರ ಮಾರ್ಗದರ್ಶನದಲ್ಲಿ ಪಿಎಚ್.ಡಿ ಮಹಾಪ್ರಬಂಧವನ್ನು ಮಂಡಿಸಿದ್ದಾರೆ. ಈ ಒಂದು ಅಧ್ಯಾಯನದಲ್ಲಿ 'ವಿದ್ಯಾರ್ಥಿ' ಅಶಾಂತಿಯಿಂದ ಸಾಮಾಜಿಕ, ಸಾಂಸ್ಕೃತಿಕ, ನೈತಿಕ, ಧಾರ್ಮಿಕವಾಗಿ ಪ್ರಭಾವ ಬೀರುವ ಅಂಶಗಳನ್ನು ದಾಖಲಿಸಿದ್ದಾರೆ. ವಿದ್ಯಾರ್ಥಿಯ ಅಶಾಂತಿಯಿಂದ ಶೈಕ್ಷಣಿಕ ರಂಗದಲ್ಲಿ ಆಗುವ ತೊಂದರೆಗಳನ್ನು ಸೂಕ್ಷ್ಮವಾಗಿ ಚರ್ಚಿಸಿದ್ದಾರೆ. ವಿದ್ಯಾರ್ಥಿ ಅಶಾಂತಿಯಿಂದ ಮಾನವೀಯ ಮೌಲ್ಯಗಳು ಹೇಗೆ ಸಂಕುಚಿತ ಅರ್ಥಕ್ಕೆ ಒಳಗಾಗುತ್ತವೆ ಎಂಬುದನ್ನು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸುತ್ತಾರೆ. ವಿದ್ಯಾರ್ಥಿಗಳ ಅಶಾಂತಿಗಳ ದಾಖಲೆಗಳನ್ನು ಕೊಡುತ್ತಾರೆ. ಸಮಾಜಮುಖಿಯಲ್ಲಿ ಆಗುವ ತೊಂದರೆಗಳನ್ನು ವಿವರಿಸಿದ್ದಾರೆ. ಅಲ್ಲದೆ ಈ ಅಶಾಂತಿಗೆ ಕಾರಣವಾದ ಪರಿಸರವನ್ನು ಸುಧಾರಿಸುವ ಪ್ರಯತ್ನ ನಡೆಯಬೇಕು ಎಂಬುದನ್ನು ಅಧ್ಯಯನದ ಫಲಿತದಲ್ಲಿ ದಾಖಲಿಸಿದ್ದಾರೆ.

'ಶಿವಮೊಗ್ಗ ಜಿಲ್ಲೆಯ ಪ್ರೌಢ ಶಾಲೆಗಳು ಶೈಕ್ಷಣಿಕ, ಸಮಾಜಶಾಸ್ತ್ರೀಯ ಒಂದು ತೌಲನಿಕ ಅಧ್ಯಯನ'ವನ್ನು ಎಂಟು, ಒಂಭತ್ತು ಮತ್ತು ಹತ್ತನೇ ತರಗತಿಯನ್ನು ಅನುಲಕ್ಷಿಸಿ ಅಧ್ಯಯನ ಮಾಡಿದ್ದಾರೆ. (ಸಂಶೋಧಕರು ಕುಮಾರಸ್ವಾಮಿ ಕೆ.ಎಚ್) ಮಾರ್ಗದರ್ಶನ ಡಾ. ಎಚ್.ಎಂ. ಪಂಚಾಕ್ಷರಯ್ಯ.

'An interanction effect of Teachers Teaching effectiveness, Teachers Personality and Teachers Attitude on Accadamic Achivement in Social Science amoung Studying in Secondary Schools' (k. Dakshinamurthy Guide – Dr. P.Basavakumarayya)

Rehabilitaion of the neglected Childrens : A Case study of two N.G.O.S. in South Delhi (Research Scholar – Syed tri Ahamad Guid- Dr. Vignesh N. Bhat) ಪಿಎಚ್.ಡಿ ಪದವಿಗಾಗಿ ಸಲ್ಲಿಸಿ ಪದವಿಯನ್ನು ಪಡೆದಿದ್ದಾರೆ.

ಎನ್.ಕೆ. ಮಂಜುಳ 'ಮಕ್ಕಳಲ್ಲಿ ವಾಕ್ಯರಚನಾ ನಿಯಮಗಳ ಬೆಳವಣಿಗೆ' ಎಂಬ ಅಧ್ಯಯನವನ್ನು ಕನ್ನಡ ಮಾತೃಭಾಷೆಯ ಮಕ್ಕಳನ್ನು ಅನುಲಕ್ಷಿಸಿ ಅಧ್ಯಯನ ಮಾಡಿದ್ದಾರೆ. ಪ್ರಾರಂಭದ ಭಾಗದಲ್ಲಿ ಮೆದುಳಿನ ರಚನೆ ಮತ್ತು ಮೆದುಳು–ಭಾಷೆಗೆ ಇರುವ ಸಂಬಂಧವನ್ನು ವಿಶ್ಲೇಷಿಸಿದ್ದಾರೆ. ಅದು ಕಾರ್ಯನಿರ್ವಹಿಸುವ ಬಗೆಯನ್ನು ಚರ್ಚಿಸಿದ್ದಾರೆ. ಮಕ್ಕಳು ಭಾಷಾ ಸಾಮಥರ್ಯವನ್ನು ಹೇಗೆ ಪಡೆದುಕೊಳ್ಳಲು ಪ್ರಯತ್ನಿಸುತ್ತಾರೆ ಎಂಬುದನ್ನು ವಿಶ್ಲೇಷಿಸುತ್ತಾರೆ. ವಾಕ್ಯ ರಚನಾ ನಿಯಮಗಳನ್ನು ಹೇಳದ ಇವರು ಮಕ್ಕಳು ವಾಕ್ಯರಚನೆಯನ್ನು ಹೇಗೆ ಮಾಡುತ್ತಾರೆ. ಅದು ಹೇಗೆ ಸಾಧ್ಯ ಎಂಬ ಅಂಶಗಳನ್ನು ಚರ್ಚೆ ಮಾಡಿದ್ದಾರೆ.

'ಪ್ರೌಢಶಾಲಾ ರೇಡಿಯೋ ಕನ್ನಡ ಪಾಠಗಳು – ಒಂದು ಮೌಲ್ಯಮಾಪನ' ಈ ವಿಷಯದ ಮೇಲೆ ಮಹಾಬಲೇಶ್ವರರಾವ್. ಇವರು ೧೯೯೪ರಲ್ಲಿ ಮಹಾಪ್ರಬಂಧವನ್ನು ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿ, ಪಿಎಚ್.ಡಿ. ಪಡೆದಿದ್ದಾರೆ.

ಪ್ರೊ. ಬಿ. ಜಗದೀಶರವರು "A Critical Evaluation of Kannada Text Books on Karnataka" ಎಂಬ ವಿಷಯದ ಮೇಲೆ ಪಿಎಚ್.ಡಿ.ಗಾಗಿ ಪ್ರಬಂಧವನ್ನು ಮಂಡಿಸಿದ್ದಾರೆ. ಈ ಒಂದು ಅಧ್ಯಯನವು ಮುಖ್ಯವಾಗಿ ಮೌಲ್ಯಮಾಪನದಲ್ಲಿ ಸಂದಿಗ್ಧ ಪರಿಸ್ಥಿತಿಯನ್ನು ಕನ್ನಡ ಪಠ್ಯಗಳಲ್ಲಿನ ಉದಾಹರಣೆಗಳ ಮೂಲಕ ಸಾದರಪಡಿಸಿದ್ದಾರೆ. ಈ ಪ್ರಬಂಧದಿಂದ ಕನ್ನಡ ಪಠ್ಯಪುಸ್ತಕಗಳಲ್ಲಿ ಒದಗಿರುವ ಸಮಸ್ಯೆಗಳನ್ನು ಬಿಡಿಸಿಕೊಳ್ಳಲು ಸಹಾಯಕ ವಾಗಿದೆ. ಅಲ್ಲದೆ ಕನ್ನಡ ಪಠ್ಯಪುಸ್ತಕಗಳ ಮೌಲ್ಯಮಾಪನಕ್ಕೆ ಮಾದರಿಯ ರೂಪದಲ್ಲಿ ಚರ್ಚಿತವಾದ ವಿಷಯವಾಗಿದೆ. ಒಟ್ಟಾರೆಯಾಗಿ ಈ ಅಧ್ಯಯನವು ಪಠ್ಯಪುಸ್ತಕಗಳಲ್ಲಿ ಮೌಲ್ಯಮಾಪನದ ಸಮಸ್ಯೆಗಳನ್ನು ಗುರುತಿಸುವುದಾಗಿದೆ. ಆದರೆ ಈ ಅಧ್ಯಯನ ಸಂದರ್ಭದಲ್ಲಿ ಈ ಮಹಾಪ್ರಬಂಧದ ಮೂಲ ಪ್ರತಿ ದೊರಕಿಲ್ಲ.

'Lexical Study of Primary Text 1to 5th Standard Text' (ಒಂದನೆಯ ತರಗತಿಯಿಂದ ಐದನೆಯ ತರಗತಿಯವರೆಗಿನ ಕನ್ನಡ ಪಠ್ಯಪುಸ್ತಕಗಳಲ್ಲಿನ ಪದಗಳ ಅಧ್ಯಯನ)

ಎಂಬ ಶೀರ್ಷಿಕೆಯಲ್ಲಿ ನಂದಾ. ಆರ್. ಇಟ್ಕರ್, ಡಾ. ಕೃ. ಅನ್ಬನ್ ಮಾರ್ಗದರ್ಶನದಲ್ಲಿ ಧಾರವಾಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಶೀರ್ಷಿಕೆಯಂತೆ ಪದಗಳ ರೂಪಗಳನ್ನು ಪಟ್ಟಿ ಮಾಡಿದ್ದಾರೆ. ಅಲ್ಲದೇ ಒಂದು ಪದವನ್ನು ತೆಗೆದುಕೊಂಡು ಮೂಲ ಪದ, ರೂಪಾಂತರಪದ ಎಂದು ವಿಂಗಡಿಸಿ ವಿಶ್ಲೇಷಣೆ ಮಾಡಿದ್ದಾರೆ. ಉದಾ: ಮೂಲ ಪದದಲ್ಲಿನ ಪದ ರಚನೆ ಹೇಳಿದ್ದಾರೆ. ಅಂಕು. ಅಂಕುಶ ಅಂಗಡಿ ಎಂದಾಗಿದೆ ಎಂದು ಹೇಳುತ್ತಾರೆ. ಇದೇ ಪದ ರೂಪಾಂತರದಲ್ಲಿ ಅಂಗಡಿಗಳು, ಅಂಗಡಿಗೆ ಎಂದು ರೂಪಗೊಂಡಿದೆ. ಎಂದು ವಿಶ್ಲೇಷಿಸಿದ್ದಾರೆ. ಇದರಿಂದ ಹಿಂದಿನ ಮತ್ತು ಇಂದಿನ ಪದರೂಪಗಳನ್ನು ಸುಲಭವಾಗಿ ತಿಳಿದುಕೊಳ್ಳಬಹುದು.

ಕೆ. ಸವಿತರವರು 'ಪ್ರಾಥಮಿಕ ಶಿಕ್ಷಣದಲ್ಲಿ ಲಿಂಗಸಂಬಂಧಿ ಆಯಾಮಗಳು : ಸಮಾಜೋ, ಆರ್ಥಿಕ ಅಂಶಗಳು' ಅಧ್ಯಯನವನ್ನು (ಮಾರ್ಗದರ್ಶನ ಡಾ. ಎಚ್.ಡಿ. ಪ್ರಶಾಂತ) ಮಾಡಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ್ದಾರೆ. ಇವರು ಮುಖ್ಯವಾಗಿ ಶಾಲಾ ಶಿಕ್ಷಣ ಸಾರ್ವತ್ರಿಕರಣಕ್ಕೆ ನಡೆದಿರುವ ಪ್ರಯತ್ನಗಳ ವಿಶ್ಲೇಷಿಸುವುದು, ಮಹಿಳಾ ಶಿಕ್ಷಣ ನಡೆದು ಬಂದ ದಾರಿಯನ್ನು ಗುರುತಿಸಿ ಸಾಕ್ಷರತೆ, ಶಾಲಾ ದಾಖಲಾತಿ, ಹಾಜರಾತಿ, ಶಾಲೆಯನ್ನು ಮಧ್ಯದಲ್ಲಿ ಬಿಟ್ಟು ಮಕ್ಕಳಲ್ಲಿ ಲಿಂಗ ಸಂಬಂಧಿ ಸ್ವರೂಪವನ್ನು ಗುರುತಿಸಿ ಮಕ್ಕಳ ಶಿಕ್ಷಣದ ಬಗ್ಗೆ ಪೋಷಕರ ಮನೋ ಪ್ರವೃತ್ತಿಯನ್ನು ವಿಶ್ಲೇಷಿಸಿದ್ದಾರೆ. ವಿವಾಹ ಮತ್ತು ಕುಟುಂಬದ ರಚನೆಗೂ ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಗೂ ಇರುವ ಸಂಬಂಧ ಮತ್ತು ಅರ್ಥ ಮಾಡಿಕೊಳ್ಳುವುದನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ. ಪಠ್ಯಗಳಲ್ಲಿನ ಲಿಂಗ ಸಂಬಂಧಿ ತಾರತಮ್ಯತೆಯ ಬಗ್ಗೆ ವಿವರಿಸಿದ್ದಾರೆ. ಅಲ್ಲದೇ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಇರುವ ವಿರೋಧಗಳು ಕೇವಲ ಪೋಷಕರಿಂದಲೇ ಹುಟ್ಟಿಕೊಂಡಿರುವಂತವುಗಳಲ್ಲ. ಇದು ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕವಾದದ್ದು, ಅಂದರೆ ಒಪ್ಪಿತ ಸಾಂಸ್ಕೃತಿಕ ನಡವಳಿಕೆಗಳು ಹೆಣ್ಣುಮಕ್ಕಳ ಶಿಕ್ಷಣದ ಬೆಳವಣಿಗೆಯ ಮೇಲೆ ತನ್ನ ಪ್ರಭಾವವನ್ನು ಬೀರುತ್ತದೆ ಎಂಬುದನ್ನು ಅಧ್ಯಯನದಿಂದ ಕಂಡುಕೊಳ್ಳುವಲ್ಲಿ ಪ್ರಯತ್ನಿಸಿದ್ದಾರೆ. ಗಂಡು ಹೆಣ್ಣು ಎಂದು ಬೇದವಿಲ್ಲದೆ ಶಿಕ್ಷಣದಲ್ಲಿ ಸಮಾನತೆ ತರುವಲ್ಲಿ ನಡೆದ ವಿವರಗಳನ್ನು ದಾಖಲಿಸಿದ್ದಾರೆ.

ಉಪಾಧ್ಯಾಯ ಯು.ಪಿ. ಅವರ ಮಾರ್ಗದರ್ಶನದಲ್ಲಿ ಎಚ್.ಎಸ್. ಶಿವಸ್ವಾಮಿಯವರು 'ಪದವಿ ತರಗತಿಗಳ ಕನ್ನಡಭಾಷಾ ಸಾಹಿತ್ಯ ಕಲಿಕೆ' ಎಂಬ ಶೀರ್ಷಿಕೆ ಯಲ್ಲಿ ಅಧ್ಯಯನ ಕೈಗೊಂಡಿದ್ದಾರೆ. ಈ ಅಧ್ಯಯನವು ಮುಖ್ಯವಾಗಿ ಪದವಿಯಲ್ಲಿ ಕನ್ನಡ ಭಾಷಾ ಸಾಹಿತ್ಯ ಕಲಿಕೆ ಹೇಗೆ ಮತ್ತು ಏಕೆ ನಡೆಯುತ್ತದೆ. ಅದರ ಪರಿಣಾಮಗಳೇನು ಎಂಬುದನ್ನು ವಿದ್ವಾಂಸರ ಮಾತುಗಳ ಹಿನ್ನೆಲೆಯಲ್ಲಿ ಚರ್ಚೆಯನ್ನು ಬೆಳೆಸಿದ್ದಾರೆ. ಪದವಿ ತರಗತಿಯಲ್ಲಿ ನಡೆಯುವ ಬೋಧನೆ ವಿದ್ಯಾರ್ಥಿಗಳಿಗೆ ಆಳವಾದ ಅಧ್ಯಯನವನ್ನು ತೋರಿಸುವ ದಾರಿಯಂತಿರ ಬೇಕು ಎಂಬುದನ್ನು ವಿಶ್ಲೇಷಿಸಿದ್ದಾರೆ. ವಿಷಯದಲ್ಲಿ ಸದೃಡ ಸ್ಪಷ್ಟವಾದ ತಿಳುವಳಿಕೆಯೋಪಾದಿ ಯಲ್ಲಿ ಕನ್ನಡ ಕಲಿಕೆಯಾಗಲು ಪ್ರಯತ್ನಗಳು ನಡೆದಿರುವ ಅಂಶಗಳನ್ನು ದಾಖಲಿಸಿದ್ದಾರೆ.

## ೨.೨. ಎಂ.ಫಿಲ್. ಪ್ರಬಂಧಗಳು

'ಉನ್ನತ ಶಿಕ್ಷಣದಲ್ಲಿ ಕನ್ನಡ' : ಒಂದು ಅಧ್ಯಯನ–ಸ್ನಾತಕೋತ್ತರ ಪದವಿದರರನ್ನು ಅನುಲಕ್ಷಿಸಿಕೊಂಡು ಹೆಚ್. ವರಲಕ್ಷ್ಮಿ ಅವರು ಡಾ. ಮಾಧವ ಪೆರಾಜೆಯವರ ಮಾರ್ಗದರ್ಶನ ದಲ್ಲಿ ಎಂ.ಫಿಲ್ ಪದವಿಯನ್ನು ಕನ್ನಡ ವಿಶ್ವವಿದ್ಯಾಲಯದಲ್ಲಿ ಪಡೆದಿದ್ದಾರೆ. ಕನ್ನಡಕ್ಕೆ ಸಂಬಂಧಿಸಿದಂತೆ ಇಂತಹ ಅಧ್ಯಯನಗಳು ನಡೆದಿರುವುದು ವಿರಳ. ಕರ್ನಾಟಕದಲ್ಲಿ ಎಲ್ಲಾ ಸ್ನಾತಕೋತ್ತರ ಪದವಿದರರ ಕನ್ನಡ ಪಠ್ಯಕ್ರಮ ಕುರಿತು ಅಧ್ಯಯನ ಮಾಡಲಾಗಿದೆ. ಪಠ್ಯಕ್ರಮ ಗಳನ್ನು ಬಳಸಿಕೊಂಡು ಕನ್ನಡದ ಸ್ಥಾನ ಸ್ನಾತಕೋತ್ತರ ಪದವಿಯಲ್ಲಿ ಹೇಗೆ? ಪಡೆದಿದೆ. ಅದರ ಉಪಯೋಗ ಪದವಿದರರಿಗೆ ಉಪಯೋಗವಾಗಬಲ್ಲದೆ? ಎಂಬುದನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

ಬಸವರಾಜ ಕೊಡಗುಂಟಿರವರು 'ಮಕ್ಕಳ ಭಾಷೆ ಒಂದು ಅಧ್ಯಯನ' ಎಂಬ ವಿಷಯ ಕುರಿತು ಡಾ. ಸಂಗಮೇಶ ಸವದತ್ತಿಮಠ ಅವರ ಮಾರ್ಗದರ್ಶನದಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ ಎಂಫಿಲ್. ಪದವಿಯನ್ನು ಪಡೆದಿದ್ದಾರೆ. ಇದರಲ್ಲಿ ಮುಖ್ಯವಾಗಿ ಮಕ್ಕಳ ಭಾಷೆಯ ವಿಕಾಸದ ಹಂತಗಳು ಹೇಗೆ ಪ್ರಾರಂಭವಾಗುತ್ತದೆ ಎಂಬುದನ್ನು ಸ್ಪಷ್ಟ ಉದಾಹರಣೆಗಳನ್ನು ನೀಡುವುದರ ಮೂಲಕ ಚರ್ಚೆ ನಡೆಸಿ ಅಧ್ಯಯನಕ್ಕೆ ಹೊಸ ಬೆಳಕನ್ನು ತಂದು ಕೊಟ್ಟಿದ್ದಾರೆ. ಅಲ್ಪಪ್ರಾಣ, ಮಹಾಪ್ರಾಣ, ಹ್ರಸ್ವಸ್ವರ, ದೀರ್ಘಸ್ವರಗಳು, ವ್ಯಂಜನಗಳ ಬಗ್ಗೆ ತಿಳುವಳಿಕೆ ಇದ್ದು ಆ ಮಕ್ಕಳು ಪದಗಳನ್ನು ಬಳಸುವಾಗ ಆಗುವ ವ್ಯತ್ಯಾಸಗಳನ್ನು ವಿವರಿಸುತ್ತಾರೆ. ಮಹಾಪ್ರಾಣವಾಗಿ ಪಠ್ಯಪುಸ್ತಕದಲ್ಲಿ ಬಂದಿರುವ ಪದಗಳನ್ನು ಮಕ್ಕಳು ಹೇಗೆ ಉಚ್ಚಾರ ಮಾಡುತ್ತಾರೆ ಎಂಬುದನ್ನು ಚರ್ಚೆಯ ಮುಖಾಂತರ ವಿವರಿಸಿದ್ದಾರೆ.

'ಪ್ರೌಢಶಾಲಾ ಮಕ್ಕಳ ಕನ್ನಡದ ಬಳಕೆಯಲ್ಲಿ ಕಾಗುಣಿತ ದೋಷಗಳು' ಎಂಬ ವಿಷಯ ಕುರಿತು ಸಿದ್ಧಲಿಂಗಪ್ಪ ಎಸ್. ಅವರು ಡಾ. ಕೃಷ್ಣಪರಮೇಶ್ವರ ಭಟ್ಟ ಅವರ ಮಾರ್ಗದರ್ಶನದಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಎಂ.ಫಿಲ್ ಪದವಿಯನ್ನು ಪಡೆದಿದ್ದಾರೆ. ಈ ಒಂದು ಅಧ್ಯಯನವು ಪ್ರಶ್ನಾವಳಿ ಮುಖಾಂತರ ನಡೆದಿದೆ. ಆಂಗ್ಲ ಮತ್ತು ಕನ್ನಡ ಮಾಧ್ಯಮದ ಮಕ್ಕಳನ್ನು ಅನುಲಕ್ಷಿಸಿಕೊಳ್ಳಲಾಗಿದೆ. ಕಾಗುಣಿತದಲ್ಲಿ ಮಾಡುವ ದೋಷಗಳ ವಿಂಗಡಣೆ ಹಾಗೂ ದೋಷಕ್ಕೆ ಕಾರಣಗಳೇನು, ಪರಿಹಾರವೇನು ಎಂಬುದನ್ನು ವಿಶ್ಲೇಷಿಸಿದ್ದಾರೆ. ಪ್ರೌಢಶಾಲಾ ಹಂತದಲ್ಲಿ ಮಾಡುವ ವಿದ್ಯಾರ್ಥಿಗಳ ದೋಷಗಳ ಪಟ್ಟಿಯನ್ನು ವಿವರವಾಗಿ ನೀಡಲಾಗಿದೆ. ಕನ್ನಡ ವರ್ಣಮಾಲೆಯಲ್ಲಿ ಬರುವ ಕಾಗುಣಿತ ದೋಷಗಳನ್ನು ಹ್ರಸ್ವಸ್ವರ, ದೀರ್ಘಸ್ವರ, ಶ,ಷ,ಸ, 'ಅ' ಕಾರದಿ, ಸ್ವರಾದಿ, ಅಲ್ಪಪ್ರಾಣ, ಮಹಾಪ್ರಾಣ, ಒತ್ತಕ್ಷರ ಮತ್ತು ಇತರೆ ಅಂಶಗಳಲ್ಲಿನ ದೋಷ ಪ್ರಮಾಣವನ್ನು ಕಂಡುಕೊಂಡಿದ್ದಾರೆ. ಈ ಅಂಶಗಳಿಂದ ಯಾರು ಯಾವ ಯಾವ ಪ್ರಮಾಣದಲ್ಲಿ ಮತ್ತು ಎಂತಹ ದೋಷಗಳನ್ನು ಹೆಚ್ಚು ಮಾಡುವರೆಂದು ಸಮೀಕ್ಷಾ ವರದಿಯ ಮೂಲಕ ವಿಶ್ಲೇಷಿಸಿದ್ದಾರೆ. ಅಲ್ಲದೆ ಈ

ಅಂಶಗಳ ಮೇಲೆ ವಿದ್ವಾಂಸರು ಕೊಟ್ಟಿರುವ ಪರ ವಿರೋಧಗಳ ವಾದವನ್ನು ಮಂಡಿಸಿದ್ದಾರೆ. ಇದೊಂದು ಉತ್ತಮವಾದ ಅಧ್ಯಯನದ ವಿಷಯವೆಂದು ಹೇಳಬಹುದು.

ಡಾ. ಪಿ.ಮಹಾದೇವಯ್ಯ ಮಾರ್ಗದರ್ಶನದಲ್ಲಿ ಎಸ್.ಪಿ. ತಿಪ್ಪಾನಾಯಕ ಎಂ.ಫಿಲ್. ಪದವಿಗಾಗಿ 'ಕನ್ನಡ ಸಂಧಿ : ಸಮಸ್ಯೆಯ ಸ್ವರೂಪ ಎಂದು ಅಧ್ಯಯನ ಮಾಡಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇದರಲ್ಲಿ ಕನ್ನಡಸಂಧಿ : ಸಮಸ್ಯೆಯ ಸ್ವರೂಪವನ್ನು ಪ್ರಾಥಮಿಕ ಕನ್ನಡಭಾಷಾ ಪಠ್ಯಗಳನ್ನು ಅನುಲಕ್ಷಿಸಿಕೊಂಡು ಅಧ್ಯಯನ ಮಾಡಿದ್ದಾರೆ. ಅಂದರೆ ಕನ್ನಡ ಭಾಷಾ ಪಠ್ಯಗಳಲ್ಲಿ ಕನ್ನಡ, ಸಂಸ್ಕೃತ ಸಂಧಿಗಳೆಂದು ಬೇರೆ ಬೇರೆ ಎಂದು ಹೇಳಿಕೊಡಲಾಗುತ್ತದೆ. ಆದರೆ ಅವೆರಡು(ಕನ್ನಡ, ಸಂಸ್ಕೃತ) ಸಂಧಿಗಳು ಒಂದಕ್ಕೊಂದು ಹೇಗೆ ಭಿನ್ನ ಎಂಬುದನ್ನು ಯಾವ ಕನ್ನಡಭಾಷಾ ಪಠ್ಯಗಳಲ್ಲೂ ಹೇಳಿ ಕೊಡುತ್ತಿಲ್ಲ ಎಂಬುದನ್ನು ಉದಾಹರಣೆಗಳ ಮೂಲಕ ವಿಶ್ಲೇಷಿಸಿದ್ದಾರೆ.

**೨.೩. ಎಂ.ಇಡಿ. ಪದಗಿಗಾಗಿ ಸಲ್ಲಿಸಿದ ಕಿರುಪ್ರಬಂಧಗಳು**

ಡಾ. ಮೇರಿಸುವರ್ಣ ಅವರ ಮಾರ್ಗದರ್ಶನದಲ್ಲಿ 'ಕುಷ್ಟಗಿ ತಾಲ್ಲೂಕಿನ ಹಿರೇಮನ್ನಾಪುರ ಗ್ರಾಮದ ೫ನೇತರಗತಿ ವಿದ್ಯಾರ್ಥಿಗಳ ಕನ್ನಡ ಭಾಷೆಯ ಓದುಗಾರಿಕೆಯಲ್ಲಿನ ದೋಷಗಳ ಕುರಿತು ಒಂದು ಅಧ್ಯಯನ' ಎಂ.ಇಡಿ. ಸ್ನಾತಕೋತ್ತರ ಪದವಿಗಾಗಿ ಹಿರೇಮಠ ಬಸವರಾಜರವರು ಕಿರುಪ್ರಬಂಧವನ್ನು ಮಂಡಿಸಿದ್ದಾರೆ. ಮಕ್ಕಳು ಓದುಗಾರಿಕೆಯಲ್ಲಿ ಮಾಡುವ ದೋಷಗಳನ್ನು ಪ್ರಾಯೋಗಿಕವಾಗಿ ವಿದ್ಯಾರ್ಥಿಗಳನ್ನು ಬಳಸಿಕೊಂಡು ತಪ್ಪುಗಳನ್ನು ದಾಖಲಿಸಿದ್ದಾರೆ. ತಪ್ಪುಗಳಿಗೆ ಕಾರಣವಾದ ಅಂಶಗಳನ್ನು ವಿವರಿಸಿದ್ದಾರೆ. ಉದಾಹರಣೆಗೆ **ಅಮ್ಮ ಹಸು ಹಾಲು ಕರೆಯಿತು** ಎಂಬುದಕ್ಕೆ ಮಗು **ಅಮ್ಮ ಅಸು ಆಲು ಕರೆಯಿತು** ಎಂದು ತಪ್ಪಾಗಿ ಓದುತ್ತದೆ ಎಂದು ಹೇಳುತ್ತಾರೆ. ಅಂದರೆ ಇಲ್ಲಿ ಮಗುವಿಗೆ 'ಹ' ಕ್ಕೂ ಮತ್ತು 'ಅ' ಕ್ಕೂ ಸರಿಯಾದ ಪರಿಕಲ್ಪನೆಯಾಗಿಲ್ಲ ಎಂಬುದನ್ನು ತಿಳಿಸಿದ್ದಾರೆ.

'ಏಳನೇ ತರಗತಿಯ ವಿದ್ಯಾರ್ಥಿಗಳು ಕನ್ನಡದಲ್ಲಿ ಲೇಖನ ಚಿಹ್ನೆಗಳನ್ನು ಬಳಸುವಾಗ ಮಾಡುವ ದೋಷಗಳು : ಒಂದು ತೌಲನಿಕ ಅಧ್ಯಯನ' ಎಂದು ಕಲಾವತಿ ಬಿ ಸಂಶೋಧನೆ ಕೈಗೊಂಡಿದ್ದಾರೆ. ಡಾ. ಎಚ್.ಎಸ್. ಜಯಪ್ಪ ಮಾರ್ಗದರ್ಶನದಲ್ಲಿ ಎಂ.ಇಡಿ. ಪದವಿಗಾಗಿ ಕಿರುಪ್ರಬಂಧವನ್ನು ಕುವೆಂಪು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇದೊಂದು ಉತ್ತಮವಾದ ಸಂಶೋಧನೆಯಾಗಿದೆ. ಇದರ ದೋಷಕ್ಕೆ ಕಾರಣಗಳನ್ನು ವಿವರಿಸುತ್ತಾ ಅದಕ್ಕೆ ಪರಿಹಾರಗಳನ್ನು ಕಂಡುಕೊಳ್ಳಲು ಮಾಡಬಹುದಾದ ಯೋಜನೆಗಳನ್ನು ಕಟ್ಟಿಕೊಟ್ಟಿದ್ದಾರೆ.

'ಏಳನೇ ತರಗತಿಯ ಕನ್ನಡ ಮಾಧ್ಯಮ ಮತ್ತು ಇಂಗ್ಲೀಶ್ ಮಾಧ್ಯಮದ ವಿದ್ಯಾರ್ಥಿಗಳು ಕನ್ನಡದ ಸಂಯುಕ್ತಾಕ್ಷರ ಪದಗಳಲ್ಲಿ ಮಾಡುವ ಸ್ಖಾಲಿತ್ಯಗಳ ತೌಲನಿಕ ಅಧ್ಯಯನ' ರವೀಂದ್ರ ಗ ಕರ್ಜಗಿ ಕಿರುಪ್ರಬಂಧ ಮಂಡಿಸಿದ್ದಾರೆ. (ಮಾ.ಹೆಚ್.ಎಸ್.ಜಯಪ್ಪ) ರಾಣೆಬೆನ್ನೂರು

ತಾಲ್ಲೂಕಿನ ಮಕ್ಕಳಲ್ಲಿ ಕಾಣುವ ಸಂಯುಕ್ತಾಕ್ಷರಗಳ ಪಟ್ಟಿಯನ್ನು ಮಾಡಿದ್ದಾರೆ. ಇದರಿಂದ ಆಗುವ ದೋಷಗಳನ್ನು ದಾಖಲಿಸಿದ್ದಾರೆ. ಉದಾಹರಣೆಗೆ 'ಇಲ್ಲಿ ಮಲ್ಲ' ಎನ್ನುವ ಶಬ್ಧಕ್ಕೆ 'ಲ' ಅಕ್ಷರದ ಒತ್ತನ್ನು ಹಾಕದೇ ಬಿಟ್ಟರೆ ಇಲಿ, ಮಲ, ಎಂಬ ಪದ ರಚನೆಯಾಗಿ ಅರ್ಥ ಬದಲಾವಣೆಯಾಗುತ್ತದೆ. ಇಂತಹ ತಪ್ಪುಗಳನ್ನು ಏಕೆ ಮತ್ತು ಯಾವ ಸಂದರ್ಭಗಳಲ್ಲಿ ಮಾಡುತ್ತಾರೆ ಎಂಬುದನ್ನು ಚರ್ಚಿಸಿದ್ದಾರೆ.

ಮಂಜುನಾಥಗೌಡ ಟಿ ಇವರು ಪ್ರಾಥಮಿಕ ಆಂಗ್ಲ ಮಾಧ್ಯಮ ಶಾಲಾ ಮಕ್ಕಳನ್ನು ಕನ್ನಡ ಭಾಷೆಯ ಓದುಗಾರಿಕೆಯಲ್ಲಿನ ದೋಷಗಳ ಒಂದು ವಿಶ್ಲೇಷಣಾತ್ಮಕ ಅಧ್ಯಯನವನ್ನು ಮಾಡಿದ್ದಾರೆ. ನಾಲ್ಕನೇ ತರಗತಿಯ ಮಕ್ಕಳನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಓದುಗಾರಿಕೆಯ ಕ್ಲಿಷ್ಟತೆಯುಳ್ಳ ಮಕ್ಕಳ ದೋಷಗಳನ್ನು ವಿಶ್ಲೇಷಣೆ ಮಾಡಿರುವುದನ್ನು ಕಾಣುತ್ತೇವೆ. ಆದರೆ ಇವರು ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮ ಮಕ್ಕಳ ದೋಷಗಳಲ್ಲಿ ವ್ಯತ್ಯಾಸವಿರುವುದನ್ನು ಗಮನಿಸಿಲ್ಲ.

ಪುಷ್ಪಾವತಿ ಎಸ್.ಕೆ. ಅವರು ಎಂ.ಇಡಿ.ಪದವಿಗಾಗಿ 'ಐದನೇತರಗತಿಯ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮದ ವಿದ್ಯಾರ್ಥಿಗಳು ಕನ್ನಡ ಓದುಗಾರಿಕೆಯಲ್ಲಿ ಮಾಡುವ ದೋಷಗಳ ತೌಲನಿಕ ಅಧ್ಯಯನ' ಎಂಬ ಕಿರುಪ್ರಬಂಧವನ್ನು ಮಂಡಿಸಿದ್ದಾರೆ. ಓದುಗಾರಿಕೆಯ ಒಟ್ಟು ಅಂಶಗಳನ್ನು ದಾಖಲೆ ಮಾಡುವ ಇವರು ಇದಕ್ಕೆ ಕಾರಣವಾದ ಅಂಶಗಳನ್ನು ವಿವರಿಸಿದ್ದಾರೆ. ಉದಾಹರಣೆಗೆ ಮನಸ್ಸನ್ನು ಏಕಾಗ್ರತೆಗೊಳಿಸದೆ ಓದುವುದು ಬೇರೆನೋ ಯೋಚಿಸುತ್ತಾ ಓದುವುದು, ಮಾನಸಿಕ ವೀಕ್ಷಿಪ್ತಗೊಳಗಾಗುವುದು, ಆತುರವಾಗಿ ಭಯದಿಂದ, ಸಂಕೋಚದಿಂದ ಓದುವುದು, ಮಾನಸಿಕ ಅನಾರೋಗ್ಯದಿಂದ ಓದುವುದು ಎಂದು ಓದುಗಾರಿಕೆಯಲ್ಲಿನ ದೋಷಗಳಿಗೆ ಕಾರಣವನ್ನು ಕೊಟ್ಟಿದ್ದಾರೆ. ಅಲ್ಲದೇ ಭಾಷಾ ಸಾಮರ್ಥ್ಯ ಇಲ್ಲದಿರುವುದು, ಶಬ್ಧ ಭಂಡಾರದ ಕೊರತೆ, ಚಾಕ್ಷುಷ ದೋಷಗಳು, ಶ್ರವಣದೋಷಗಳು, ಧ್ವನ್ಯಾಂಗದೋಷಗಳು, ವಿಷಯದ ಕ್ಲಿಷ್ಟತೆ, ಮುದ್ರಣ ದೋಷಗಳು, ಓದುವ ಬಗ್ಗೆ ಸೂಕ್ತ ತರಬೇತಿ ಮತ್ತು ನಿರಂತರ ಅಭ್ಯಾಸಗಳಿಲ್ಲದಿರುವುದು ಶಿಕ್ಷಕರ ಮತ್ತು ಪಾಲಕರ ಮಾರ್ಗದರ್ಶನದ ಕೊರತೆ, ಓದಲು ಆಸಕ್ತಿಯಿಲ್ಲದಿರುವುದು ಅನಾರೋಗ್ಯಕರ ಸನ್ನಿವೇಶದಲ್ಲಿ ಓದುವ ಕಾರಣ ಗಳಿಂದಾಗಿ ಮಕ್ಕಳ ಓದುಗಾರಿಕೆಯ ಸಮಸ್ಯೆಗಳು ಉಂಟಾಗುತ್ತವೆ ಎಂಬುದನ್ನು ವಿವರಿಸಿದ್ದಾರೆ.

ನಾರನಗೌಡ್ರು ಮಂಜುನಾಥರವರು–ಜಿ.ಎಸ್.ಲೋಕೇಶಪ್ಪನವರ ಮಾರ್ಗದರ್ಶನದಲ್ಲಿ 'ಏಳನೇ ತರಗತಿಯ ಪ್ರಚಲಿತ ಕನ್ನಡ ಪಠ್ಯಪುಸ್ತಕದಲ್ಲಿನ ನೈತಿಕ ಮೌಲ್ಯಗಳನ್ನು ಗುರುತಿಸುವ ಬಗ್ಗೆ ಒಂದು ಸ್ಥೂಲ ಅಧ್ಯಯನ'ವನ್ನು ಮಾಡಿದ್ದಾರೆ. ಈ ಅಧ್ಯಯನದಲ್ಲಿ ಮುಖ್ಯವಾಗಿ ನೈತಿಕ ಶಿಕ್ಷಣದ ಅರ್ಥ ಮಹತ್ವ ಅವಶ್ಯಕತೆ ಹಾಗೂ ಪ್ರಾಮುಖ್ಯತೆಯನ್ನು ವಿವರಿಸಿದ್ದಾರೆ. ನೈತಿಕತೆಯನ್ನು ಮಕ್ಕಳಿಗೆ ಬೆಳೆಸುವಲ್ಲಿ ಪೋಷಕರು, ಶಿಕ್ಷಕರು ಹಾಗೂ ಸಂಘ, ಸಂಸ್ಥೆಗಳ

ಪಾತ್ರವೇನು ಎಂಬುದನ್ನು ಸಂಕ್ಷಿಪ್ತವಾಗಿ ವಿಶ್ಲೇಷಿಸಿದ್ದಾರೆ. ನ್ಯಾಯ, ಸ್ಥಿರತೆ, ದಯೆ. ತ್ಯಾಗ, ಸತ್ಯ, ಪ್ರಮಾಣಿಕತೆ, ಅಹಿಂಸೆ, ಶೀಲ, ಪರೋಪಕಾರ ಇತ್ಯಾದಿ ನೈತಿಕ ಮೌಲ್ಯಗಳನ್ನು ಶಿಕ್ಷಕರು ಕಲಿಸಿಕೊಡುವಲ್ಲಿ ಮುಖ್ಯರಾಗಿದ್ದಾರೆ ಎಂಬುದನ್ನು ವಿವರಿಸಿದ್ದಾರೆ. ಇದು ಪಠ್ಯಪುಸ್ತಕ ದಲ್ಲಿ ಅವಶ್ಯಕವಾಗಿ ರಚನೆಯಾಗಬೇಕಾಗಿದೆ. ಈ ಕಲಿಕೆಯಿಂದ ಸಾಮಾಜಿಕ, ಸಾಂಸ್ಕೃತಿಕ ಅಭಿವೃದ್ಧಿ ಸಾಧ್ಯ ಎಂದು ಹೇಳಿದ್ದಾರೆ.

ವೀರಭದ್ರಪ್ಪ ಕೆ ಅವರು ಡಾ. ಬಸವಕುಮಾರಯ್ಯ. ಪಿ. ಅವರ ಮಾರ್ಗದರ್ಶನದಲ್ಲಿ ಆರನೇ ತರಗತಿಯ ಕನ್ನಡಭಾಷಾ ಪಠ್ಯಪುಸ್ತಕದಲ್ಲಿನ ಮೌಲ್ಯಗಳು ಒಂದು ವಿಶ್ಲೇಷಣಾತ್ಮಕ ಅಧ್ಯಯನ ಮಾಡಿದ್ದಾರೆ. ಮೌಲ್ಯಗಳು ಕನ್ನಡ ಭಾಷಾ ಪಠ್ಯಗಳಲ್ಲಿ ಏಕೆ ಬೇಕು ಅದರಿಂದ ಆಗುವ ಪ್ರಯೋಜನವಾದರು ಏನು ಎಂಬುದನ್ನು ಚರ್ಚಿಸಿದ್ದಾರೆ. ಪಠ್ಯಗಳಲ್ಲಿನ ನೈತಿಕ ಮೌಲ್ಯಗಳು ಬೋಧನೆ ಸಂದರ್ಭದಲ್ಲಿ ಸೋಲುತ್ತಿರುವುದರಿಂದಲೇ ಇಂದಿನ ಸಂಸ್ಕೃತಿ, ನಾಗರಿಕತೆಯ ಪರಿಕಲ್ಪನೆಗಳು ಸಂಕುಚಿತ ಅರ್ಥದಲ್ಲಿ ಬಳಕೆಯಾಗಿ ಸಮಾಜ ಘಾತಕ ಕೃತ್ಯಗಳು ಹೆಚ್ಚಾಗುತ್ತಿವೆ ಎಂಬುದನ್ನು ವಿಶ್ಲೇಶಿಸಿದ್ದಾರೆ. 'ಪ್ರಾಥಮಿಕ ಮತ್ತು ಪ್ರೌಢಶಾಲೆಯ ಕನ್ನಡ ಭಾಷಾ ಪಠ್ಯಪುಸ್ತಕಗಳಲ್ಲಿನ ಮೌಲ್ಯಗಳ ಒಂದು ವಿಶ್ಲೇಷಣಾತ್ಮಕ ಅಧ್ಯಯನವನ್ನು' ಸುಮಿತ್ರ ಕೆ.ಟಿ. ಅವರು ಮಾಡಿದ್ದಾರೆ. ಪಠ್ಯಗಳು ಮಕ್ಕಳಿಗೆ ಏಕೆ ಬೇಕು ಮಗು ಅದರಿಂದ ಎಷ್ಟನ್ನು ಕಲಿಯುತ್ತದೆ ಪ್ರಸ್ತುತ ಕನ್ನಡ ಭಾಷಾ ಪಠ್ಯಗಳು ಮೌಲ್ಯಗಳನ್ನು ತಿಳಿಸುವಲ್ಲಿ ಸಹಾಯಕವಾಗಿಲ್ಲ ಎಂಬುದನ್ನು ನಿದರ್ಶನಗಳ ಮೂಲಕ ಚರ್ಚಿಸಿದ್ದಾರೆ.

ಈ ಮೇಲಿನ ಕಿರುಪ್ರಬಂಧಗಳಲ್ಲದೆ 'ಹಿರಿಯ ಪ್ರಾಥಮಿಕ ಶಾಲಾ ಮಕ್ಕಳ ಕಲಿಕಾ ಸಾಧನೆಯ ಮೇಲೆ ಕರ್ನಾಟಕ ಶಾಲಾ ಗುಣಮಟ್ಟ ಮೌಲ್ಯಾಂಕದ ಸಂಸ್ಥೆಯ ಪರಿಣಾಮ ಹಾಗೂ ಶಿಕ್ಷಕರ ಅಭಿಪ್ರಾಯ' (ಸಂ. ಶ್ರೀಮತಿ ಮಲ್ಲಮ್ಮ ಮಾ–ಉಮಾದೇವಿ) '೬ನೇತರಗತಿ ಯಲ್ಲಿ ಓದುತ್ತಿರುವ ಅಲ್ಪ ಹಾಗೂ ಉನ್ನತ ಸಾಧಕರ ಓದುಗಾರಿಕೆಯ ಸಾಮರ್ಥ್ಯದ ಒಂದು ಅಧ್ಯಯನ' (ಸಂ. ರಾಜೀವ್.ಇ. ಮಾ–ಡಾ. ಮೇರಿಸುವರ್ಣ) 'ಪ್ರಸ್ತುತ ಶಾಲಾ ಹಂತದಲ್ಲಿ ವಚನಗಳ ಅಳವಡಿಕೆಯ ಔಚಿತ್ಯತೆ ಹಾಗೂ ತರಗತಿವಾರು ಕನ್ನಡ ಭಾಷಾ ಪಠ್ಯಕ್ರಮದಲ್ಲಿನ ವಚನಗಳಲ್ಲಿನ ಮೌಲ್ಯಗಳನ್ನು ಕುರಿತು ಒಂದು ವಿಶ್ಲೇಷಣಾತ್ಮಕ ಅಧ್ಯಯನ' (ಸಂ.ಶಿಲ್ಪ ಡಿ ಅನ್ವೇರಿ ಮಾ–ಉಮಾದೇವಿ) 'ಏಳನೇತರಗತಿ ವಿದ್ಯಾರ್ಥಿಗಳ ಸಮಾಜ ವಿಜ್ಞಾನ ಸಾಧನೆಯನ್ನು ಉತ್ತಮಪಡಿಸುವಲ್ಲಿ ಅನ್ವೇಷಣಾ ತರಬೇತಿ ಮಾದರಿ ಬೋಧನೆಯ ಪರಿಣಾಮದ ಅಧ್ಯಯನ' (ಸಂ. ಶ್ರೀಮತಿ ಬೇಬಿ ಸುನಿತ ಕೆ ಮಾ– ಮೇರಿಸುವರ್ಣ) 'ಪ್ರಾಥಮಿಕ ಶಾಲಾ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸುವಲ್ಲಿ ಸಮೂಹ ಸಂಪನ್ಮೂಲಗಳು ನಿರ್ವಹಿಸುತ್ತಿರುವ ಕಾರ್ಯಗಳ ಬಗ್ಗೆ ಪ್ರಾಥಮಿಕ ಶಾಲಾ ಮುಖ್ಯೋಪಾಧ್ಯಯರು ಹೊಂದಿರುವ ಅಭಿಪ್ರಾಯದ ಒಂದು ಅಧ್ಯಯನ' (ಸಂ: ಶಂಕರ ಎಸ್.ಕೆ. ಮಾ–ಜಿ.ಎಸ್.ಲೋಕೇಶಪ್ಪ)

‘ಆರನೇತರಗತಿಯ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮದ ವಿದ್ಯಾರ್ಥಿಗಳ ಕನ್ನಡ ಕಾಗುಣಿತಾಕ್ಷರಗಳಲ್ಲಿ ಮಾಡುವ ದೋಷಗಳು ಒಂದು ತೌಲನಿಕ ಅಧ್ಯಯನ’ (ಸಂ–ವಿಶಾಲ ಎಂ.ಆರ್.) ‘ಲನೇತರಗತಿ ಕನ್ನಡ ಮತ್ತು ಇಂಗ್ಲೀಶ್ ಮಾಧ್ಯಮದ ವಿದ್ಯಾರ್ಥಿಗಳು ಕನ್ನಡ ವ್ಯಾಕರಣ ಕಲಿಕೆಯ ಹೋಲಿಕಾ ಅಧ್ಯಯನ’ (ಸಂ. ಶಶಿ ಜಿ.ಎಚ್. ಮಾ–ವಾಮದೇವಪ್ಪ)’ ಒಂದನೇ ತರಗತಿಯ ವಿದ್ಯಾರ್ಥಿಗಳಿಗೆ ಇಂಗ್ಲೀಶ್ ಭಾಷೆಯನ್ನು ಕಲಿಸುವಲ್ಲಿ ಶಿಕ್ಷಕರು ಎದುರಿಸುತ್ತಿರುವ ಸಮಸ್ಯೆಗಳ ಅಧ್ಯಯನ’ (ಸಂ: ರಾಧಿಕಾ ಡಿ.ಎಂ. ಮಾ– ಪ್ರೊ.ಜಿ.ಎಸ್. ಶಿವಲಿಂಗಪ್ಪ) ‘ಹರಪನಹಳ್ಳಿ ಪಟ್ಟಣದ ಆರನೇ ತರಗತಿಯ ಕನ್ನಡ ಮತ್ತು ಉರ್ದು ಮಾಧ್ಯಮದ ವಿದ್ಯಾರ್ಥಿಗಳು ಕನ್ನಡ ಕಾಗುಣಿತಾಕ್ಷರಗಳಲ್ಲಿ ಮಾಡುವ ದೋಷಗಳ ಒಂದು ತೌಲನಿಕ ಅಧ್ಯಯನ’ (ಸಂ: ಬಸವರಾಜಪ್ಪ ಎಂ. ಮಾ – ಡಾ. ಪಿ. ಬಸವಕುಮಾರಯ್ಯ) ‘ಏಳನೇತರಗತಿಯ ಕನ್ನಡ ಮತ್ತು ಇಂಗ್ಲೀಷ್ ಮಾಧ್ಯಮ ವಿದ್ಯಾರ್ಥಿಗಳು ಕನ್ನಡ ಬರವಣಿಗೆಯಲ್ಲಿ ಮಾಡುವ ಕಾಗುಣಿತ ದೋಷಗಳ ಅಧ್ಯಯನ ಮತ್ತು ನಿವಾರಣೋಪಾಯಗಳ ಮೌಲ್ಯನಿರ್ಧಾರ’ (ಸಂ: ಮೀನಾ ಪಿ.ಟಿ. ಮಾ – ಜಿ.ಎಸ್. ಲೋಕೇಶಪ್ಪ) ‘ಶಿಕಾರಿಪುರ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಏಳನೇತರಗತಿ ಸಾಮಾನ್ಯ ಹಾಗೂ ಬಣಜಾರ್ ಜಾತಿಯ ವಿದ್ಯಾರ್ಥಿಗಳ ಕನ್ನಡ ಓದುಗಾರಿಕೆ ಕೌಶಲ್ಯದ ತೌಲನಿಕ ಅಧ್ಯಯನ’ (ಸಂ: ನಾಗರಾಜ ಎ.ಕೆ. ಮಾ–ಡಾ. ಜಿ.ಎಸ್. ಲೋಕೇಶಪ್ಪ ೨೦೦೪) ‘ರಾಣೆಬೆನ್ನೂರ ತಾಲ್ಲೂಕಿನ ೫ನೇತರಗತಿ ವಿದ್ಯಾರ್ಥಿಗಳ ಕನ್ನಡ ಭಾಷೆಯ ವಾಚನಾ ಸಾಮರ್ಥ್ಯದ ದೋಷಗಳಿಗೆ ಸಂಬಂಧಿಸಿದ ಕಾರಣಗಳ ಅಧ್ಯಯನ’ (ಸಂ: ಬಣಕಾರ ಮಮತಾ ಮಾ– ಮೇರಿಸುವರ್ಣ) ‘ಕನ್ನಡ ಮಾಧ್ಯಮದ ಏಳನೇತರಗತಿ ವಿದ್ಯಾರ್ಥಿಗಳ ಮನೋಭಾವನೆಯ ಅಧ್ಯಯನ’ (ಸಂ– ಭಾಗ್ಯಲಕ್ಷ್ಮಿ ಎನ್. ಮಾ–ಉಮಾದೇವಿ) ‘ಕನ್ನಡ ಮಾಧ್ಯಮದ ಏಳನೇತರಗತಿ ವಿದ್ಯಾರ್ಥಿಗಳ ಓದುಗಾರಿಕೆಯ ಕೌಶಲಗಳು ಹಾಗೂ ಅವರುಗಳ ಶೈಕ್ಷಣಿಕ ಸಾಧನೆಯ ಬಗ್ಗೆ ಒಂದು ಅಧ್ಯಯನ’ (ಸಂ: ಲಿಂಗರಾಜ ಆರ್. ಹಂಚಿನಮನಿ. ಮಾ–ಡಾ. ಪಿ. ಬಸವಕುಮಾರಯ್ಯ)ಗಳು ನಡೆದಿವೆ. ಈ ಮೇಲಿನವೆಲ್ಲವುಗಳು ಎಂ.ಇಡಿ. ಪದವಿಗಾಗಿ ಕಿರುಪ್ರಬಂಧವನ್ನು ಮಂಡಿಸಿದವು ಗಳಾಗಿವೆ. ಅಲ್ಲದೇ ಈ ಅಧ್ಯಯನಗಳು ಶೈಕ್ಷಣಿಕ ದೃಷ್ಟಿಯಿಂದ ಅಧ್ಯಯನ ನಡೆದಂತವು ಗಳಾಗಿದ್ದು ಭಾಷಾ ಹಿನ್ನೆಲೆಯಲ್ಲಿ ಸಂಕ್ಷಿಪ್ತವಾಗಿ ಚರ್ಚೆ ನಡೆದವುಗಳಾಗಿವೆ ಎಂಬುದು ಈ ಅಧ್ಯಯಗಳಿಂದ ಸ್ಪಷ್ಟವಾಗುತ್ತದೆ.

### ೨.೪. ಎಂ.ಎ. ಶಿಕ್ಷಣ ಪದಗಿಗಾಗಿ ಸಲ್ಲಿಸಿದ ಕಿರುಪ್ರಬಂಧಗಳು

ಎಂ.ಎ ಶಿಕ್ಷಣ ಸ್ನಾತಕೋತ್ತರ ಪದವಿಗಾಗಿ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ್ದಾರೆ. ಆ ಅಧ್ಯಯನಗಳು ಇಂತಿವೆ. ‘ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳ ಓದುಗಾರಿಕೆಯ ಸಾಮರ್ಥ್ಯ ಕುರಿತು ಒಂದು ಅಧ್ಯಯನ’ (ಸಂ: ಭೀಮಾಶಂಕರ ಎಂ. ಅತನೂರ ಮಾ–

ಡಾ. ಹೂವಿನಭಾವಿ ಬಿ.ಎಲ್.) 'ಪ್ರಾಥಮಿಕ ಶಾಲಾ ಶಿಕ್ಷಕರ ಶೈಕ್ಷಣಿಕ ಆಡಳಿತದ ಬಗೆಗೆ ಹೊಂದಿರುವ ಮನೋವೃತ್ತಿ ಕುರಿತು ಒಂದು ಅಧ್ಯಯನ' (ಸಂ:ಅಶೋಕ ಆರ್ ರೆಡ್ಡಿ. ಮಾ- ಡಾ. ಹೂವಿನಭಾವಿ ಬಿ.ಎಲ್.) 'ರಾಯಚೂರು ತಾಲ್ಲೂಕಿನ ಪ್ರಾಥಮಿಕ ಶಾಲಾ ಶಿಕ್ಷಕರ ಮೌಲ್ಯಗಳ ಮೌಲ್ಯಮಾಪನ ಕುರಿತು ಒಂದು ಅಧ್ಯಯನ' (ಸಂ: ವಿಜಯರಾಜೇಂದ್ರ .ಬಿ. ಮಾ–ಡಾ.ಹೂವಿನಭಾವಿ ಬಿ.ಎಲ್.) ಈ ಎಲ್ಲಾ ಕಿರು ಪ್ರಬಂಧಗಳು ಪ್ರಾಥಮಿಕ ಶಿಕ್ಷಣದ ಪ್ರಕ್ರಿಯೆಯ ಸಫಲತೆ, ವಿಫಲತೆಗೆ ಕಾರಣಗಳೇನು ಎಂಬುದನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಿವೆ. ಆದರೆ ಇದು ಅಂಕಿ–ಸಂಖ್ಯೆಗಳ ದಾಖಲಾತಿಯಾಗಿದೆ.

### ೨.೫. ಸಂಶೋಧನ ಕೃತಿಗಳು ಮತ್ತು ಲೇಖನಗಳು

ಡಾ. ಪ್ರಧಾನ್ ಗುರುದತ್ತ ಬರೆದಿರುವ 'ಆಡಳಿತದ ಭಾಷೆ ಕೆಲವು ವಿಚಾರಗಳು ಎಂಬ ಪುಸ್ತಕದಲ್ಲಿ ಭಾಷಾ ದೋಷಗಳು' ಒಂದು ಲೇಖನದಲ್ಲಿ ಮಾತನಾಡುವ ಪದಗಳು ಅರ್ಥದ ವ್ಯತ್ಯಾಸ ತಿಳಿಯದೆ ಅಲ್ಪಪ್ರಾಣ ಸಂದರ್ಭದಲ್ಲಿ ಮಹಾಪ್ರಾಣ, ಮಹಾಪ್ರಾಣ ಸಂದರ್ಭದಲ್ಲಿ ಅಲ್ಪಪ್ರಾಣ ಬಳಕೆಯನ್ನು ಮಾಡಿ ಉಚ್ಚರಿಸುತ್ತಾರೆ. ಈ ರೀತಿಯ ದೋಷಗಳು ಕಾಗುಣಿತದುದ್ದಕ್ಕೂ ವಿದ್ಯಾರ್ಥಿಗಳು ಮಾಡುವುದನ್ನು ಕಾಣುತ್ತೇವೆ ಎಂದು ವಿವರಿಸುತ್ತಾರೆ. ಉದಾಹರಣೆಗೆ: ದೂರದರ್ಶನದ ಭಾಷಾ ಸಂಬಂಧವಾದ ಕಾರ್ಯಕ್ರಮದಲ್ಲಿ ನಿರೂಪಕರೊಬ್ಬರು ವಿದ್ಯಾರ್ಥಿಯೊಬ್ಬನಿಗೆ ಘಂಟೆ ಮತ್ತು ಗಂಟೆಗಳ ನಡುವಣ ವ್ಯತ್ಯಾಸವನ್ನು ಸ್ಪಷ್ಟಪಡಿಸುವಂತೆ ಹೇಳಿದರು. ವಿದ್ಯಾರ್ಥಿ ಉತ್ತರ ಹೇಳಿದ ಸಂಸ್ಕೃತದ ಘಂಟಾ ಶಬ್ಧವೇ ಕನ್ನಡದಲ್ಲೂ ಗಂಟೆ ಎಂದಾಗುತ್ತದೆ. ಅದರ ತದ್ಭವ (ಕನ್ನಡ) ಎಂದು ಹೇಳಿದರು. ಇಂತಹ ತಪ್ಪುಗಳು ಇಂದು ಸಾಮಾಜಿಕತೆಯಲ್ಲಿ ನಡೆಯುತ್ತಿರುತ್ತದೆ. ಆದ್ದರಿಂದ ಪ್ರಾಥಮಿಕ ಹಂತದಲ್ಲೂ ಇದರ ತಿಳುವಳಿಕೆ ಇಂದು ಅಗತ್ಯವಾಗಿ ಬೋಧನೆಯ ಮುಖಾಂತರ ನಡೆಯಬೇಕಿದೆ ಎಂದು ವಿಶ್ಲೇಷಿಸುತ್ತಾರೆ.

'ಕನ್ನಡ ಚಳುವಳಿ ಮತ್ತು ಚಿಂತನೆ' ಡಾ.ಕಾ.ವೆಂ ಶ್ರೀನಿವಾಸಮೂರ್ತಿ ಬರೆದಿದ್ದಾರೆ. ಈ ಪುಸ್ತಕದ ಲೇಖನಗಳಲ್ಲಿ ಕನ್ನಡ ಭಾಷೆಯಲ್ಲಿ ದುಮುಕಿದ, ನಡೆದ ಚಳುವಳಿಗಳ ವಿವರವನ್ನು ನೀಡುತ್ತದೆ. ಅದರಲ್ಲಿನ ಒಂದು ಲೇಖನವಾದ 'ಪ್ರಾಥಮಿಕ ಶಿಕ್ಷಣ ಭಾಷೆ ಮತ್ತು ಮಾಧ್ಯಮದ ಪ್ರಶ್ನೆಗಳು' ಎಂಬ ಲೇಖನದಲ್ಲಿ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಭಾಷೆಯನ್ನು ಬೋಧಿಸಲು ಹೊರಟಾಗ ಅದರಿಂದ ಆಗುವ ಸಮಸ್ಯೆಗಳೇನು? ಎಂಬುದನ್ನು ಭಾಷಾ ನೀತಿಗಳ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ. ಅಲ್ಲದೇ ಇವರು ಶಿಕ್ಷಣದ ಹಂತಗಳಲ್ಲಿ ಬೋಧನೆಗೆ ಪೂರಕವಾದ ಪಠ್ಯಗಳನ್ನು ಬರೆಸಬೇಕು. ಇಂತಹ ಕೊರತೆಯಿದೆಯೆಂದು ಹೇಳುವ ಆಯಾ ಕ್ಷೇತ್ರಗಳ ವೃತ್ತಿ ನಿರತರು ಸ್ವತಃ ತಾವೇ ಕುಳಿತು ಯೋಜನೆಗಳನ್ನು ಹಾಕಿಕೊಂಡು ಈ ಪಠ್ಯಗಳನ್ನು ಬರೆಯಬೇಕು. ಇಂತಹ ಕಾರ್ಯಕ್ಕೆ ಇನ್ನಾವುದೋ ಕ್ಷೇತ್ರದ ಜನರಿಗೆ ಕಾಯ ಬಾರದೆಂಬುದು ಕನಿಷ್ಟ ವಿದೆಯಕವಾಗಿದೆ. ಇದನ್ನು ವ್ಯಕ್ತಿಗತ ಮತ್ತು

ಸಾಂಸ್ಥಿಕ ಎಂಬ ಎರಡು ಸ್ತರಗಳಲ್ಲಿ ಪೂರೈಸಲು ಸಾಧ್ಯವಿದೆ. ಇದರಿಂದ ಕನ್ನಡವು ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸಿದಂತಾಗುತ್ತದೆ. ಇಲ್ಲವಾದಲ್ಲಿ ಕನ್ನಡವು ಸಾಹಿತ್ಯಕ್ಕಷ್ಟೇ ಸೀಮಿತವಾಗಿ ಬರಡಾಗುವ ಸಾಧ್ಯವಿದೆ ಎಂದು ಕನ್ನಡದ ಆತಂಕದ ಪರಿಸ್ಥಿತಿಯನ್ನು ವಿಶ್ಲೇಷಿಸುತ್ತಾರೆ.

ಡಾ. ಆರ್ಕೆ ಮಣಿಪಾಲರವರು 'ಶಿಕ್ಷಣ ಮತ್ತು ವೈಚಾರಿಕತೆ' ಪುಸ್ತಕದಲ್ಲಿ ಶಿಕ್ಷಣ ಮತ್ತು ವೈಚಾರಿಕತೆಯ ಹಿನ್ನೆಲೆಯಲ್ಲಿ ಚರ್ಚೆ ಮಾಡುತ್ತಾರೆ. ಜೊತೆಗೆ 'ನಮ್ಮ ಪಠ್ಯಪುಸ್ತಕಗಳು ಹೇಗಿರಬೇಕು ಎಂಬುದನ್ನು ವಿವರಿಸುತ್ತಾರೆ. ಉದಾ: ೬ ನೇತರಗತಿಯ ಸಮಾಜ ಪರಿಚಯ ಪಾಠಗಳು ಪುಟ ೨೦-೨೧ರಿಂದ ಆಯ್ದ ಭಾಗದ ವಿಶ್ಲೇಷಣೆಯೊಂದಿಗೆ ಪಠ್ಯಪುಸ್ತಕದ ಕುರಿತಾದ ತಮ್ಮ ಜಿಜ್ಞಾಸೆಯನ್ನು ಆರಂಭಿಸಿದ್ದಾರೆ. (ಪಠ್ಯಪುಸ್ತಕ ಇಲಾಖೆ, ಕರ್ನಾಟಕ ಸರ್ಕಾರ, ಪ್ರಕಟಣೆ) ಕನ್ನಡ ಭಾಷೆಯ ಕಲಿಸುವ ಪ್ರಾಥಮಿಕ ಪಠ್ಯಗಳು ನಮ್ಮ ಶಿಕ್ಷಣದ ಅವೈಜ್ಞಾನಿಕವೆಂಬುದನ್ನು ತೋರಿಸುವುದರ ಜೊತೆಗೆ ಅಗ್ರ ಪ್ರಾಶಸ್ತ್ಯ ಸಂದಾಯವಾಗಿಲ್ಲ ಎಂಬುದನ್ನು ಚೆನ್ನಾಗಿ ವಿವರಿಸಬಲ್ಲದು ಎಂದಿದ್ದಾರೆ.

**ಬರಗೂರು ವರದಿ (ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ)**

ಬರಗೂರರವರು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ (ಪ್ರೊ. ಬರಗೂರು ರಾಮಚಂದ್ರಪ್ಪ) ಅವರು ಶಿಕ್ಷಣ ಮಾಧ್ಯಮಕ್ಕೆ ಸಂಬಂಧಿಸಿದಂತೆ ಮೌಲಿಕ ಅಂಶಗಳನ್ನು ಶಿಫಾರಸ್ಸು ಮಾಡಿದ್ದಾರೆ. ಶಿಕ್ಷಣ ಮತ್ತು ಮಾಧ್ಯಮ ಎಂಬ ವ್ಯಾಪಕ ನೀತಿ ನಿರೂಪಣಾ ವರದಿಯನ್ನು ಮೂವತ್ತಮೂರು ಶಿಫಾರಸ್ಸುಗಳನ್ನು ನೀಡಿದ್ದಾರೆ. ಇದರಲ್ಲಿ ಶಾಲಾ ಶಿಕ್ಷಣಕ್ಕೆ ಸಂಬಂಧಿಸಿದಂತೆ ಡಾ. ಎಚ್. ನರಸಿಂಹಯ್ಯ ಮತ್ತು ಪ್ರೊ. ಚಂದ್ರಶೇಖರ ಪಾಟೀಲರು ಅಧ್ಯಕ್ಷರಾಗಿದ್ದ ಸಮಿತಿಯ ಮೂರ್‍ನಾಲ್ಕು ಶಿಫಾರಸ್ಸುಗಳ ಸಾರವು ಸೇರಿದೆ. ಪ್ರಾಥಮಿಕ ಪೂರ್ವ ಶಿಕ್ಷಣವನ್ನು ಸರ್ಕಾರವೇ ನಿಯಂತ್ರಣಕ್ಕೆ ತೆಗೆದುಕೊಂಡು ಅಲ್ಲಿಂದಲೇ ಕನ್ನಡ ಮಾಧ್ಯಮವನ್ನು ಪ್ರಾರಂಭಿಸಬೇಕೆಂದು ಹಿಂದಿನ ಪ್ರಾಧಿಕಾರದ ತಜ್ಞರ ಸಮಿತಿ ಹೇಳಿತ್ತು. ಆದರೆ ಬರಗೂರು ವರದಿಯು ಪ್ರಾಥಮಿಕ ಶಿಕ್ಷಣವನ್ನು ೧೯೯೫ರ ನಿಯಮಾವಳಿಗಳ ಮೂಲಕ ಸರ್ಕಾರವೇ ನಿಯಂತ್ರಣಕ್ಕೆ ತೆಗೆದುಕೊಳ್ಳುವ ಪ್ರಯತ್ನ ಮಾಡಿರುವುದನ್ನು ದಾಖಲೆಗಳ ಮೂಲಕ ತೋರಿಸಿದ್ದಾರೆ. ಅದರಲ್ಲೂ ವಿಶೇಷವಾಗಿ ಅಂಗನವಾಡಿಗಳ ಪ್ರಸ್ತಾಪ ಮಾಡಿದ್ದಾರೆ. ಅಂಗನವಾಡಿ ಮತ್ತು ಕಿಂಡರ್‌ಗಾರ್ಟನ್‌ಗಳನ್ನು ಒಗ್ಗೂಡಿಸಿ ಏಕರೂಪದ ನೀತಿಯನ್ನು ರೂಪಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದಾರೆ. ಇದೊಂದು ಉತ್ತಮ ಹೆಜ್ಜೆಯಾಗಿದೆ ಎಂದು ಹೇಳಬಹುದು. ಇದರ ಜೊತೆಗೆ ಈ ವರದಿಯು ಮುಖ್ಯವಾಗಿ ಕನ್ನಡ ಪಠ್ಯಪುಸ್ತಕಗಳು ರಚನೆಯಾಗುವುದರ ಕ್ರಮ ಹೇಗಿರಬೇಕು ಎಂಬುದರ ಬಗ್ಗೆ ವಿವರವಾದ ಚರ್ಚೆಯನ್ನು ಬರಗೂರು ವರದಿ ಮಾಡಿದೆ. ಪಠ್ಯಪುಸ್ತಕವನ್ನು ಒಂದು ಉದಾಹರಣೆಯಾಗಿಟ್ಟುಕೊಂಡು

ವಿಶ್ಲೇಷಣೆ ಮಾಡಬೇಕು. ನಂತರದಲ್ಲಿ ಐದನೇ ತರಗತಿಯಿಂದ ಪಿ.ಯು.ಸಿ.ವರೆಗಾದರೂ ಕನ್ನಡ ಪಠ್ಯಗಳು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರಚನೆಯಾಗಬೇಕು ಎಂದಿದ್ದಾರೆ. ಹಾಗಾದಾಗ ಮಾತ್ರ ಕನ್ನಡ ಉಳಿಸಿ ಬೆಳೆಸಲು ಸಹಾಯಕ. ಇದರಿಂದ ಕನ್ನಡ ಅಭಿಮಾನ ವಿದ್ಯಾರ್ಥಿಗಳಲ್ಲಿ ಮೂಡಲು ಸಾಧ್ಯ ಎಂಬ ಕಾರಣಕ್ಕಾಗಿ ಶಿಫಾರಸ್ಸು ಮಾಡಲಾಯಿತು ಎಂದು ವಿವರಿಸುತ್ತಾರೆ.

ಅರವಿಂದ ಚೊಕ್ಕಾಡಿ ಬರೆದಿರುವ 'ಬದುಕಿಗಾಗಿ ಶಿಕ್ಷಣ' ಎಂಬ ಪುಸ್ತಕದಲ್ಲಿ ಆಧುನಿಕ ಕಾಲಘಟ್ಟದಲ್ಲಿ ನಡೆಯುತ್ತಿರುವ ಪ್ರಾಥಮಿಕ ಶಿಕ್ಷಣದ ಸುಧಾರಣೆ ಅಂಶಗಳನ್ನು ವಿವರಿಸಿದ್ದಾರೆ. ಈ ಶಿಕ್ಷಣವು ಮುಖ್ಯವಾಗಿ ಬದುಕನ್ನು ರೂಪಿಸಲು ಕೈಗೊಳ್ಳಬೇಕಾದ ಬುನಾದಿ ಇದಾಗಿದೆ. ಶಿಕ್ಷಣ ಬದುಕನ್ನು ರೂಪಿಸುವಂತಾಗಬೇಕು ಎಂಬುದು ಇವರ ಲೇಖನಗಳಿಂದ ತಿಳಿದು ಬರುತ್ತದೆ. ಅಲ್ಲದೇ ಪಠ್ಯರಚನೆ ಕೆಲವು ಸೂಕ್ಷ್ಮಗಳು ಎಂಬ ಲೇಖನದಲ್ಲಿ ಶಿಕ್ಷಕರು, ಪೋಷಕರು, ವಿದ್ಯಾರ್ಥಿಗಳು, ಸರ್ಕಾರ, ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಸಮರ್ಥ ಸೌಲಭ್ಯಗಳನ್ನು ಇತ್ತೀಚಿಗೆ ಒದಗಿಸುತ್ತದೆ. ಆದರೆ ಸರಿಯಾದ ರೀತಿಯಲ್ಲಿ ಬಳಕೆಯಾಗುವ ಪರಿಸರದ ಕೊರತೆ ನಮ್ಮಲ್ಲಿದೆ ಎಂದು ವಿವರಿಸುತ್ತಾರೆ. ಪಠ್ಯಕ್ರಮ ಶಿಕ್ಷಣ ವ್ಯವಸ್ಥೆಯಲ್ಲಿ ಮಿಕ್ಕೆಲ್ಲ ಪರಿಕರಗಳಿಗಿಂತ ಪ್ರಧಾನ ಪಾತ್ರವಹಿಸುತ್ತದೆ. ಆದ್ದರಿಂದ ಪಠ್ಯವು ಮಗುವಿಗೆ ಬದುಕುವ ಶಕ್ತಿಯನ್ನು ಕೇಂದ್ರಿಕೃತವಾಗಿಲ್ಲ ಹಾಗಂತ ಈ ಪಠ್ಯಗಳನ್ನೇ ಬದುಕುವ ಶಕ್ತಿಯುತ ಕೇಂದ್ರೀಕರಿಸಿ ಬೋಧಿಸಲು ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಆಗುತ್ತಿಲ್ಲವೆಂದರ್ಥವಲ್ಲ. ಆದರೆ ಅದಕ್ಕೆ ಅಂತಹ ಪರಿಣಿತ ಶಿಕ್ಷಕರು ಇರಬೇಕಾಗುತ್ತದೆ. ನಮ್ಮ ಶಿಕ್ಷಕರಲ್ಲಿ ಈ ಕೊರತೆಯನ್ನು ಕಾಣುತ್ತೇವೆ. ಈ ಪರಿಣಿತಿ ಇದ್ದರೂ ವೃತ್ತಿಯಲ್ಲಿ ಆಸಕ್ತಿ ಇಲ್ಲದವರ ಸಂಖ್ಯೆ ಇಂದು ಹೆಚ್ಚಾಗುತ್ತಿದೆ. ಆದ್ದರಿಂದ ಪಠ್ಯಗಳ ಸ್ವರೂಪವನ್ನು ಬದಲಾಯಿಸಬೇಕಾದ ಅಗತ್ಯವಿದೆ. ಜೊತೆಗೆ ವೃತ್ತಿನಿರತ ಶಿಕ್ಷಕರನ್ನು ಪ್ರೇರೆಪಿಸುವುದು ಮುಖ್ಯ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಡಾ. ಕೆ.ವಿ. ನಾರಾಯಣರವರು 'ಮತ್ತೆ ಭಾಷೆಯ ಸುತ್ತಮುತ್ತ' ಎಂಬ ಪುಸ್ತಕದಲ್ಲಿ ಮಕ್ಕಳ ಭಾಷೆಯ ಕಲಿಕೆಯ ವಿವಿಧ ಹಂತಗಳನ್ನು (ಔಪಚಾರಿಕ ಮತ್ತು ಅನೌಪಚಾರಿಕ) ವಿಶ್ಲೇಷಿಸಿದ್ದಾರೆ. ಅದರ ಜೊತೆಗೆ 'ಶಾಲೆಯಲ್ಲಿ ಭಾಷೆ' ಎಂಬ ಲೇಖನದಲ್ಲಿ ಭಾಷೆಯನ್ನು ಕಲಿಸಲು ಹಾಕಿಕೊಂಡಿರುವ ಯೋಜನೆಗಳು, ನಿಯಮಗಳು, ಅವುಗಳ ಉದ್ದೇಶ, ಪಠ್ಯಕ್ರಮದ ಹಿನ್ನೆಲೆಯಲ್ಲಿ ಇರುವ ಗೊಂದಲಗಳನ್ನು ವಿವರಿಸುತ್ತಾರೆ. ಇದರಿಂದ ಆಗುವ ಪರಿಣಾಮವೇನು? ಎಂಬುದನ್ನು ಪ್ರಶ್ನಿಸಿದ್ದಾರೆ. ಜೊತೆಗೆ ಕಲಿಸುವ ಭಾಷೆ ಪಠ್ಯ ಬದಲಾವಣೆ ಹೊಂದುತ್ತಿದೆ. ಆದರೆ ಇನ್ನೂ ಬದಲಾಗಬೇಕಿದೆ ಎಂದು ಅಭಿಪ್ರಾಯಪಡುತ್ತಾರೆ.

ಡಾ. ಮಹಾಬಲೇಶ್ವರರಾವ್ ಅವರ 'ಸ್ಥಿತ್ಯಂತರ' ಪುಸ್ತಕವು ಪ್ರಚಲಿತ ಶಿಕ್ಷಣ ವ್ಯವಸ್ಥೆಯ ಕೈಗನ್ನಡಿಯಂತಿದೆ. ೨೧ನೇ ಶತಮಾನದ ಜಾಗತೀಕರಣದ ಸಂದರ್ಭದ ಶಿಕ್ಷಣದ ವಿವಿಧ

ಆಯಾಮಗಳನ್ನು ಬಿಚ್ಚಿಡುವಂತಿದೆ. ಪ್ರಾಥಮಿಕ ಶಿಕ್ಷಣದ ವ್ಯವಸ್ಥೆಯನ್ನು ವಿವರಿಸುವುದರ ಜೊತೆಗೆ ಶಿಕ್ಷಣದ ಪರಿಕಲ್ಪನೆ ಹೇಗಿದೆ, ಇಂದು ಏನಾಗಿದೆ ಎಂಬುದನ್ನು ವಿವರಿಸುತ್ತಾರೆ. 'ಕನ್ನಡ ಪಠ್ಯಪುಸ್ತಕಗಳ ಪ್ರಗತಿ' ಎಂಬ ಲೇಖನವು ಪ್ರೌಢಶಾಲೆಗಳ ಕನ್ನಡ ಭಾಷಾ ಪಠ್ಯ ಗಳಲ್ಲಿರುವ ಅಂಶಗಳ ಬಗ್ಗೆ ವಿವರಿಸುತ್ತದೆ. ಅಡಿಗರು, ಜಿ.ಪಿ.ರಾಜರತ್ನಂ, ಕಾರಂತ, ಡಿ.ವಿ.ಜಿ, ಬೇಂದ್ರೆ, ಕುವೆಂಪು, ವಿಸೀ ಇತ್ಯಾದಿ ಕವಿಗಳ, ಲೇಖಕರ ಕೃತಿಯ ತುಣುಕುಗಳನ್ನು ಇಡುವುದು ಹೆಚ್ಚು ಸೂಕ್ತವಾದಿತು. ಆದರೆ ನಮ್ಮ ಕನ್ನಡ ಪಠ್ಯಪುಸ್ತಕ ರಚನಾ ಸಮಿತಿಗಳಿಗೆ ರಚನಾ ಸಮಿತಿಯ ನಿರ್ಣಯವೇ ಪಠ್ಯಪುಸ್ತಕ ರಚನೆಯ ಕ್ರಮ ಸರಿಯಾದುದಲ್ಲ ಎಂಬ ಅಭಿಪ್ರಾಯ ಪಡುತ್ತಾರೆ. ಶಿಕ್ಷಕ, ವಿದ್ಯಾರ್ಥಿ, ಪೋಷಕರ ನಿರ್ಣಯಗಳು ಅಗತ್ಯವಾಗಿ ಪಠ್ಯಪುಸ್ತಕ ರಚನಾ ಸಂದರ್ಭದಲ್ಲಿ ಬೇಕು ಎಂದು ಹೇಳುತ್ತಾರೆ. ಶಿಕ್ಷಕರು ಪಠ್ಯಪುಸ್ತಕದಲ್ಲಿದ್ದ ತಪ್ಪುಗಳನ್ನು ಗುರುತಿಸಿ ಸರಿಯಾದ ರೀತಿಯ ಕ್ರಮದಲ್ಲಿ ಬೋಧಿಸಲು ಮುಂದಾಗಬೇಕು ಎಂದು ಸಲಹೆ ಸೂಚನೆಗಳನ್ನು ನೀಡುತ್ತಾರೆ.

'ಶಿಕ್ಷಣದಲ್ಲಿ ವ್ಯಕ್ತಿತ್ವ ವಿಕಾಸ' ಎಂಬ ಪುಸ್ತಕವನ್ನು ಅರವಿಂದ ಚೊಕ್ಕಾಡಿಯವರು ಬರೆದಿದ್ದಾರೆ. ಲೇಖನಗಳಲ್ಲಿ ಮಾನವನ ವ್ಯಕ್ತಿತ್ವವನ್ನು ಮೌಲ್ಯಗಳ ಅಡಿಯಲ್ಲಿ ಬೆಳೆಸಿ ಮಗುವಿನ ಸರ್ವತೋಮುಖ ಬದುಕಿನ ಅಭಿವೃದ್ಧಿ ಪಥದಲ್ಲಿ ಸಾಗುವಂತಿರಬೇಕು ಎಂಬುದನ್ನು ವಿವರಿಸಿದ್ದಾರೆ.

ಬಸವರಾಜ ಕೋಡಗುಂಟಿಯವರು 'ಮಕ್ಕಳ ಭಾಷಾವಿಜ್ಞಾನ ಮತ್ತು ಇತರ ಲೇಖನಗಳು ಎಂಬ ಪುಸ್ತಕದಲ್ಲಿ ಮಕ್ಕಳ ಭಾಷೆಯ ಸ್ಥಿತ್ಯಂತರವನ್ನು ಬಿಚ್ಚಿಟ್ಟಿದ್ದಾರೆ. ಭಾಷಾ ಕೌಶಲಗಳಾದ ಗ್ರಹಿಸುವ, ಮಾತನಾಡುವ, ಬರೆಯುವ, ಓದುವ ವಿವಿಧ ಆಯಾಮಗಳನ್ನು ಚರ್ಚಿಸಿದ್ದಾರೆ. ಪಠ್ಯಗಳ, ಭಾಷೆಯ ಬಗೆಗೆ ಮಾತನಾಡುತ್ತ ಬಹುತೇಕ ಮಕ್ಕಳಿಗೆ ಅಲ್ಪಪ್ರಾಣ, ಮಹಾಪ್ರಾಣದ ವ್ಯತ್ಯಾಸ ಗೊತ್ತಿಲ್ಲ ಎಂದು ಉದಾಹರಣೆಗಳ ಮೂಲಕ ವಿವರಿಸಿದ್ದಾರೆ. ಅದನ್ನು ಈ ಕೆಳಗಿನಂತೆ ಗಮನಿಸಬಹುದು.

| ಮಹಾಪ್ರಾಣವಾಗಿ ಪುಸ್ತಕದಲ್ಲಿ ಬಂದಿರುವ ಪದಗಳು | ಮಕ್ಕಳ ಪ್ರತಿಕ್ರಿಯೆ |
|---|---|
| ಭಾವ | ಬಾವ |
| ಠಕ್ಕ | ಟಕ್ಕ |
| ರಾಜನ ಖಡ್ಗ | ರಾಜನ ಕಡಗ ಇತ್ಯಾದಿ |

ಈ ರೀತಿಯಲ್ಲಿನ ತಪ್ಪುಗಳ ಪ್ರತಿ ಕ್ರಿಯೆಯು ಭಾಷೆಯ ವಿವಿಧ ಚಟುವಟಿಕೆಗಳಲ್ಲೆಲ್ಲಾ ನಡೆಯುತ್ತದೆ ಎಂಬುದನ್ನು ವಿಶ್ಲೇಷಿಸಿದ್ದಾರೆ.

ಸಿ.ಎಚ್. ಕೃಷ್ಣಶಾಸ್ತ್ರಿ ಬಾಳಿಲರವರು 'ಶಿಕ್ಷಕ-ವಿದ್ಯಾರ್ಥಿ' ಎಂಬ ಪುಸ್ತಕವನ್ನು ಬರೆದಿದ್ದಾರೆ. ಇದರಲ್ಲಿ ಇವರು ಶಿಕ್ಷಕ, ವಿದ್ಯಾರ್ಥಿ ಇವರಿಬ್ಬರ ಕಾಯಕ ಮತ್ತು ಕಲಿಸಬೇಕಾದ, ಕಲಿಕೆಯ

ವಿಚಾರಗಳ ಬಗ್ಗೆ ಪ್ರತಿಕ್ರಿಯೆ ನೀಡಿದ್ದಾರೆ. ವಿದ್ಯಾರ್ಥಿಗಳಿಗೆ ನೀಡುವ ಕಾಯಕ, ಶಿಕ್ಷಕ ಮಾಡಬೇಕಾದ ಕರ್ತವ್ಯದ ಬಗ್ಗೆ ಚರ್ಚೆ ನಡೆಸಿದ್ದಾರೆ. ಮಕ್ಕಳಿಗೆ ವಿಷಯ ಬೋಧನೆ ಮಾತ್ರ ಸಾಲದು ಸೃಜನಶೀಲತೆ, ಶಿಸ್ತು, ಸಂಯಮ ಹಾಗೂ ಸಾಂಸ್ಕೃತಿಕ ತಿಳುವಳಿಕೆಗಳು ಅಗತ್ಯವಾಗಿ ಬೇಕು ಎಂಬುದನ್ನು ವಿವರಿಸಿದ್ದಾರೆ.

'ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಬೋಧನೆ' ಎಂಬ ಪುಸ್ತಕವನ್ನು ಮಹಾಬಲೇಶ್ವರ ರಾವ್‌ರವರು ಬರೆದಿದ್ದಾರೆ. ಪ್ರಾಥಮಿಕ ಹಂತದಲ್ಲಿ ನಡೆಯುವ ಕನ್ನಡ ಬೊಧನೆಯು ವಿವಿಧ ಕ್ರಮಣಿಕೆಯನ್ನು ವಿವರಿಸಿದ್ದಾರೆ. ಅಲ್ಲದೇ ಕನ್ನಡ ಬೋಧನೆ ನಡೆಯುವ ಪ್ರಕ್ರಿಯೆಯನ್ನು ವಿವರಿಸಿದ್ದಾರೆ. ಪಠ್ಯಪುಸ್ತಕಗಳು ಹೇಗಿರಬೇಕು ಎಂಬುದನ್ನು ಈ ಹಿನ್ನೆಲೆಯಲ್ಲಿ ವಿವರಿಸಿದ್ದಾರೆ. 'ಪಠ್ಯಪುಸ್ತಕದ ಮೂಲಕ ಭಾಷೆ ಕಲಿಯುವುದು ಅತ್ಯಂತ ಅವೈಜ್ಞಾನಿಕ' ಎಂಬ ಮಾತಿದೆ ಯಾದರೂ ಶಿಕ್ಷಕರಿಗೆ ಮಾರ್ಗದರ್ಶಿಯಾಗಿ ಭಾಷಾ ಪಠ್ಯಪುಸ್ತಕಗಳು ತೀರಾ ಅನಿವಾರ್ಯ ಎಂದಿದ್ದಾರೆ. ಭಾಷಾ ಬೋಧನೆಯಲ್ಲಿ ಪಠ್ಯಪುಸ್ತಕವು ಶಿಕ್ಷಕರಿಗೆ ದಾರಿ ತೋರಿಸುತ್ತದೆ. ಮಕ್ಕಳಿಗೆ ಅದು ಕಲಿಕೆಯ ಸಾಧನ. ಅವರ ಭಾಷಾ ಸಾಮರ್ಥ್ಯಗಳನ್ನು ಬೆಳೆಸಲು ಶಿಕ್ಷಕರಿಗೆ ಒಂದು ಸಲಕರಣೆ. ಓದುಗಾರಿಕೆಯನ್ನು ನಿರ್ದೇಶಿಸುವ ದಿಕ್ಸೂಚಿ. ಪ್ರಾಥಮಿಕ ಶಾಲೆಗಳ ಪಠ್ಯಪುಸ್ತಕಗಳು ಮಕ್ಕಳಿಗೆ ಆಕರ್ಷಕವಾಗಿರಬೇಕು. ಮಕ್ಕಳ ಮನಸ್ಸನ್ನು ಸೆಳೆಯುವಂತ ಚಿತ್ರಗಳು, ವಾಕ್ಯಗಳು ಪುಸ್ತಕದಲ್ಲಿರಬೇಕು. ಪ್ರತಿಯೊಂದು ತರಗತಿಯ ಬೋಧನೆಯ ಉದ್ದೇಶಕ್ಕೆ ತಕ್ಕಂತೆ ಪುಸ್ತಕ ರಚಿತವಾಗಿರಬೇಕು ಎಂದು ವಿಶ್ಲೇಷಿಸುತ್ತಾರೆ.

ಅಶೋಕಕುಮಾರ ರಂಜೇರೆ ಬರೆದಿರುವ 'ಭಾಷೆ ಮತ್ತು ಶಿಕ್ಷಣ' ಎಂಬ ಪುಸ್ತಕವು ಮುಖ್ಯವಾಗಿ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯನ್ನು ಪ್ರತಿ ಬಿಂಬಿಸುತ್ತದೆ. ಭಾಷೆ ಮತ್ತು ಶಿಕ್ಷಣಕ್ಕಿರುವ ಸಂಬಂಧವನ್ನು ಗುರುತಿಸಿದ್ದಾರೆ. ಅಲ್ಲದೆ ಪ್ರಾಥಮಿಕ ಶಿಕ್ಷಣದ ಸಮಸ್ಯೆಗಳು, ಪ್ರಾಥಮಿಕ ಶಿಕ್ಷಣದ ಭಾಷಾ ಬೋಧನೆ ಮತ್ತು ಕಲಿಕೆ ಸಂದರ್ಭದಲ್ಲಿ ಓದು, ಭಾಷಾ ಬೋಧನೆ ಮತ್ತು ತಂತ್ರಜ್ಞಾನ ಇತ್ಯಾದಿ ಲೇಖನಗಳ ಮೂಲಕ ಪ್ರಾಥಮಿಕ ಶಿಕ್ಷಣದ ಸ್ವರೂಪವನ್ನು ವಿವರಿಸಿದ್ದಾರೆ. ಪ್ರಾಥಮಿಕ ಕನ್ನಡ ಭಾಷಾ ಪಠ್ಯಗಳಲ್ಲಿ ಕೆಲವೊಂದು ತಪ್ಪುಗಳಿವೆ ಎಂಬುದನ್ನು ಉದಾಹರಣೆಯ ಮುಖಾಂತರ ಚರ್ಚಿಸಿದ್ದಾರೆ. 'ಅರ' ಎನ್ನುವ ಶಬ್ಧವನ್ನು ಬಳಸಿ 'ಅ' ಅಕ್ಷರ ಕಲಿಕೆಗೆ ಅವಕಾಶ ಮಾಡಿ ಕೊಟ್ಟಿದೆ. ಆದರೆ 'ಅರದ' ಚಿತ್ರ ಮಾತ್ರ ಬ್ಯಾಟ್‌ನಂತೆ ಇದೆ ಎಂದು ವಿವರಿಸಿದ್ದಾರೆ. ಚಿತ್ರಗಳು ಪಠ್ಯಪುಸ್ತಕ ರಚನೆಯಲ್ಲಿ ಅಂದವಾಗಿರುವುದು ಮುಖ್ಯ. ೧೯೧೦ರಿಂದ ೧೯೫೦ರ ವರೆಗಿನ ಅವಧಿಯಲ್ಲಿ ಪ್ರಾಥಮಿಕ ಪಠ್ಯಗಳು ಅಂದವಾಗಿದ್ದು ಇಂದಿನ ವಿಜ್ಞಾನ ಯುಗದಲ್ಲಿ ಹಿಂದಿನಷ್ಟು ಅಂದವಾಗಿ ಮುದ್ರಿತ ವಾಗಿಲ್ಲವೆಂಬುದನ್ನು ವಿವರಿಸಿದ್ದಾರೆ. ಬೋಧನೆಯ ಕಲೆಯ ಸಮಸ್ಯೆ ಇಂದು ಶಿಕ್ಷಕರಲ್ಲಿದೆ. ವೃತ್ತಿಯು ಸಂಬಳ ದೊರೆಯುವ ಹುದ್ದೆಯಾಗಬಾರದು ಎಂದಿದ್ದಾರೆ. ಆಸಕ್ತಿ ಇದ್ದವರನ್ನು ಮಾತ್ರ ವೃತ್ತಿಗೆ ತೆಗೆದುಕೊಳ್ಳಬೇಕು ಎನ್ನುತ್ತಾರೆ. ಹೀಗೆ ಪ್ರಾಥಮಿಕ ಶಿಕ್ಷಣದ ಸಮಸ್ಯೆಗಳನ್ನು

ಗುರುತಿಸಿದ್ದಾರೆ. ಕರ್ನಾಟಕದಲ್ಲಿನ ಸರಕಾರಿ ಪ್ರಾಥಮಿಕ ಶಾಲೆಗಳನ್ನು ಗಮನಿಸಿದರೆ ಚಿಂತಾಜನಕ ಸ್ಥಿತಿಯಲ್ಲಿರುವುದು ಕಂಡು ಬರುತ್ತದೆ. ಈ ಹಿನ್ನೆಲೆಯಲ್ಲಿ ಸಂಶೋಧನೆಯಗಳು ನಡೆಯಬೇಕು. ಸರಕಾರ ಮಕ್ಕಳಿಗೆ ಮಧ್ಯಾಹ್ನದ ಊಟ, ಹಾಲು ಕೊಡುವುದನ್ನು ಬಿಟ್ಟು ಮೂಲಭೂತ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಕಂಕಣಬದ್ಧವಾಗಿ ನಿಲ್ಲಬೇಕು. ಪ್ರಜ್ಞಾವಂತ ಶಿಕ್ಷಣ ತಜ್ಞರೊಂದಿಗೆ ಸಮಾಲೋಚಿಸಿ ಇಂದು ಮಕ್ಕಳಿಗೆ ಯಾವ ಶಿಕ್ಷಣ ಕೊಡಬೇಕೆಂದು ಸೂಕ್ಷ್ಮವಾಗಿ ಪರಿಶೀಲಿಸಿ, ಆ ನಿಟ್ಟಿನಲ್ಲಿ ಶಿಕ್ಷಣ ಪದ್ಧತಿ ರೂಪಿಸಬೇಕು ಎಂದು ಅಭಿಪ್ರಾಯಪಡುತ್ತಾರೆ.

ಡಾ. ಎಚ್.ಕೆ. ರಾಮನಾಥ್ 'ಕನ್ನಡ ಭಾಷೆಯ ಬಳಕೆ' ಪುಸ್ತಕದಲ್ಲಿ 'ಶಾಲೆಗಳಲ್ಲಿ ಭಾಷೆಯ ಕಲಿಕೆ' ಎಂಬ ಲೇಖನವನ್ನು ಬರೆದಿದ್ದಾರೆ. ಶಿಕ್ಷಕನಾದವನು ಮಾತಿನಲ್ಲಿ ನಿಕರತೆ, ಖಚಿತತೆ, ಸ್ಪಷ್ಟತೆ, ಅನಿವಾರ್ಯ ಇಲ್ಲವಾದಲ್ಲಿ ಕನ್ನಡ ಭಾಷಾ ಕಲಿಕೆ ಸ್ಪಷ್ಟವಾಗದು ಎಂದಿದ್ದಾರೆ. ಶಿಕ್ಷಕನಾದವನು ಸ್ವರಭಾರ ಧ್ವನಿಯಲ್ಲಿ ಏರಿಳಿತ, ತಡೆ/ವಿರಾಮ, ಸೂಕ್ತ ವೇಗದ ಮೂಲಕ ವಿದ್ಯಾರ್ಥಿಗಳಿಗೆ ಕಲಿಸಿ ಕೊಡಬೇಕು ಎಂದು ಹೇಳುತ್ತಾರೆ. ಈ ಪ್ರಕ್ರಿಯೆ ನಡೆದಾಗ ಮಾತ್ರ ಭಾಷಾ ಕೌಶಲಗಳನ್ನು ಕಲಿಸಿಕೊಡುವಲ್ಲಿ ಯಶಸ್ವಿಯನ್ನು ಕಾಣಬಹುದು ಎಂದಿದ್ದಾರೆ.

'ಶಿಕ್ಷಣ ಚಿಂತನ' ಎಂಬ ಪುಸ್ತಕವನ್ನು ಡಾ. ಮಹಾಬಲೇಶ್ವರರಾವ್ ಬರೆದಿದ್ದಾರೆ. ಪ್ರಚಲಿತ ಶಿಕ್ಷಣ ವ್ಯವಸ್ತೆ ಮತ್ತು ಮಾಧ್ಯಮದ ಬಗ್ಗೆ ಲೇಖನಗಳನ್ನು ಬರೆದಿದ್ದಾರೆ. ಪಠ್ಯಗಳು ಸಂಸ್ಕೃತಿಯನ್ನು ಪ್ರತಿಬಿಂಬಿಸಿ ಮಕ್ಕಳ ಕಲಿಕೆಯಲ್ಲಿ ಸಂಸ್ಕೃತಿಯ ತಿಳುವಳಿಕೆ ಒಡಮೂಡಬೇಕು. ಆದರೆ ಬೋಧಕರು ಸಂಸ್ಕೃತಿಯ ಬಗೆಗೆ ವೈಭವೀಕರಿಸಿ ಕಲಿಸಲು ಮುಂದಾಗಬಾರದು ಎಂದಿದ್ದಾರೆ. ಪಠ್ಯಪುಸ್ತಕಗಳಿಲ್ಲದೇ ಪಾಠ ಮಾಡಲು ಬರುವುದೇ ಇಲ್ಲ ಎಂಬ ಹಾಗೆ ನಮ್ಮ ಶಿಕ್ಷಣ ವ್ಯವಸ್ಥೆ ರೂಪಗೊಂಡಿದೆ. ಆದುದರಿಂದಲೇ ನಮ್ಮ ಶಿಕ್ಷಣ ವ್ಯವಸ್ಥೆಯನ್ನು ಕೆಲವರು 'ಪಠ್ಯಪುಸ್ತಕ ಕೇಂದ್ರಿತ' 'ಪರೀಕ್ಷಾ ಆಧಾರಿತ' ವ್ಯವಸ್ಥೆ ಎಂದು ಟೀಕಿಸುವುದು ಎಂದು ಹೇಳಿದ್ದಾರೆ. ಶಿಕ್ಷಣ ನೈತಿಕತೆಯನ್ನು ಮಕ್ಕಳಲ್ಲಿ ಬೆಳೆಸುವಂತಾಗಿ, ಶಾಲಾ ಹಂತದಲ್ಲಿ ಭಾಷಾ ತಾರತಮ್ಯ, ಶಿಕ್ಷಕರಿಗೆ ಸ್ವಾತಂತ್ರ್ಯ ಸಿಗುವಂತಹ ವ್ಯವಸ್ಥೆ ನಮ್ಮ ಶಿಕ್ಷಣರಂಗದಲ್ಲಿ ಆಗಬೇಕಿದೆ ಎಂದು ಹೇಳುತ್ತಾರೆ.

ಡಾ. ಪಿ. ಮಹಾದೇವಯ್ಯನವರು 'ಕನ್ನಡ ಬಳಕೆ ಸಾಮಾಜಿಕ ವಿನ್ಯಾಸ' ಎಂಬ ಪುಸ್ತಕ ಬರೆದಿದ್ದಾರೆ. 'ಕನ್ನಡಭಾಷೆ ಕಲಿಕೆ ಮತ್ತು ಬೋಧನೆ' (ಅನ್ಯಭಾಷಿಕ ಮಕ್ಕಳನ್ನು ಅನುಲಕ್ಷಿಸಿ) ಪಠ್ಯಪುಸ್ತಕ ರಚನೆಯಲ್ಲಿ ಭಾಷಾ ಶಾಸ್ತ್ರಜ್ಞರ ಪಾತ್ರ ಕನ್ನಡ ಪಠ್ಯಪುಸ್ತಕ ರಚನೆಯಲ್ಲಿನ ಸಮಸ್ಯೆಗಳು ಎಂಬ ಲೇಖಗಳನ್ನು ಬರೆದಿದ್ದಾರೆ. ಕನ್ನಡ ಪಠ್ಯ ಪುಸ್ತಕ ರಚನೆಯಲ್ಲಿ ಭಾಷಾ ಶಾಸ್ತ್ರಜ್ಞರು ಸಶಕ್ತರಾಗಿ ಭಾಷಾಶಾಸ್ತ್ರದ ತತ್ವಗಳನ್ನು ಅನ್ವಯಿಸಿ ಪಠ್ಯ ರಚನೆ ಮಾಡಬಲ್ಲರು. ಆದರೆ ಸಾಹಿತಿಗಳಿಗೆ ಇದು ಕಷ್ಟವಾಗಬಲ್ಲದು ಎಂದು ಹೇಳುತ್ತಾರೆ. ಪಠ್ಯದಲ್ಲಿ ಭಾಷಾಶಾಸ್ತ್ರದ ವಿವಿಧ ಹಂತಗಳಾದ ಧ್ವನಿ, ಪದ, ವಾಕ್ಯ ಮತ್ತು ಪದಕೋಶಗಳನ್ನು

ಕುರಿತು ವಿಶ್ಲೇಷಿಷಿಸಿದ್ದಾರೆ. ಈ ಭಾಷಾ ಕೌಶಲಗಳನ್ನು ಆಧುನಿಕ ಭಾಷಾ ವೈಜ್ಞಾನಿಕ ನೆಲೆಯಲ್ಲಿ ಅಳವಡಿಸಲಾಗಿದೆ ಎಂಬುದನ್ನು ಉದಾಹರಣೆಗಳ ಮೂಲಕ ಚರ್ಚಿಸಿದ್ದಾರೆ. ಜೊತೆಯಾಗಿ ಕನ್ನಡಭಾಷಾ ಪಠ್ಯಗಳಲ್ಲಿನ ಸಮಸ್ಯೆಗಳನ್ನು ಗುರುತಿಸಿದ್ದಾರೆ. ಪಠ್ಯದಿಂದ ಮಕ್ಕಳಿಗೆ ಲಾಭವಾದರೂ ಏನು? ಇದರಲ್ಲಿ ಕಲಿಸುವ ಅಂಶಗಳು ಎಷ್ಟು ಸರಿಯಾದುದು ಎಂಬ ಪ್ರಶ್ನೆಗಳನ್ನು ಚರ್ಚಿಸುವ ಪ್ರಯತ್ನ ಮಾಡಿದ್ದಾರೆ. ಉದಾ : **ಜ್ಯೋತಿರ್ವರ್ಷ** ಪದ ಬಿಡಿಸಿ ಸಂಧಿ ಹೆಸರು ಹೇಳುವುದರಿಂದ ಆಗುವ ಪ್ರಯೋಜನವಾದರೂ ಏನು ಎಂಬ ಡಿ.ಎನ್. ಶಂಕರಭಟ್‌ರವರ ವಾಕ್ಯದ ಹಿನ್ನೆಲೆಯಲ್ಲಿ ಚರ್ಚೆ ಮಾಡಿರುವುದನ್ನು ಕಾಣುತ್ತೇವೆ. ನಿಷೇದಾರ್ಥಕ, ವಿರುದ್ಧಾರ್ಥಕ ಪದಗಳನ್ನು ಹೇಳಿಕೊಡುವಲ್ಲಿ ಸ್ಪಷ್ಟತೆ ಇಲ್ಲವೆಂದು ಹೇಳುತ್ತಾರೆ. ಶಾಲೆಯಲ್ಲಿ ಬಳಕೆಯಾಗುತ್ತಿರುವ ಭಾಷೆಗೂ, ದಲಿತ ಮಕ್ಕಳ ಮನೆ ವಲಯದ ಭಾಷೆಗೂ ಅಜ ಗಜಾಂತರ ವ್ಯತ್ಯಾಸವಿದೆ. ಈ ಹಿನ್ನೆಲೆಯಿಂದ ದಲಿತ ಮಕ್ಕಳು ಶಾಲೆಯ ಭಾಷೆಯನ್ನು ಕಲಿಯುವ ಸಂದರ್ಭದಲ್ಲಿ ಸುಲಭವಾಗಿ ಕನ್ನಡ ಭಾಷೆಗೆ ತೆರೆದುಕೊಳ್ಳುವುದಕ್ಕೆ ಆಗುತ್ತಿಲ್ಲ ಎಂಬ ಅಭಿಪ್ರಾಯವನ್ನು ವಿವರಿಸುತ್ತಾರೆ. ಉದಾ : ನಮ್ಮ ಶಾಲೆಯ ಕನ್ನಡ ಭಾಷಾ ಪಠ್ಯಪುಸ್ತಕಗಳಲ್ಲಿ ಸಂಧಿಕಾರ್ಯ ವಿವರಿಸುವುದಕ್ಕೆ ಗಂಗೋರ್ವಿ, ಮೇಘೌಘ ಮಹೌಜ, ನದದ್ಡಮುರುಕ, ಲಸತ್ತೋಡಕ, ಆಯಷ್ವಕಂ, ಥಗ, ಖಗ, ಅಜ, ಮೊದಲಾದ ಕನ್ನಡ ದಿನನಿತ್ಯ ಬಳಕೆಯಲ್ಲಿ ಇಲ್ಲದ ಪದಗಳನ್ನು ಕಲಿಯ ಬೇಕೆಂದರೆ ತುಂಬಾ ಕಷ್ಟದ ಕೆಲಸ. ಒಂದು ವೇಳೆ ಕಂಠಪಾಠ ಮಾಡುವುದರ ಮೂಲಕ ಕಲಿತರೂ ಅವು ನೆನಪಿನಲ್ಲಿ ಉಳಿಯ ಲಾರವು ಎಂದು ಅಭಿಪ್ರಾಯ ಪಡುತ್ತಾರೆ.

'ಪ್ರಶ್ನೆ ಪತ್ರಿಕೆ ರಚನೆಯ ವಿಧಿ ವಿಧಾನಗಳು' ಎಂಬ ಪುಸ್ತಕವನ್ನು ಡಾ. ಮಹಾಬಲೇಶ್ವರರಾವ್ ಬರೆದಿದ್ದಾರೆ. ಪ್ರಶ್ನೆ ಪತ್ರಿಕೆಯ ವಿವಿಧ ಅಂಶಗಳನ್ನು ಚರ್ಚಿಸಿದ್ದಾರೆ. ಪ್ರಶ್ನೆಪತ್ರಿಕೆಯನ್ನು ತಯಾರಿಸುವಾಗ ನೀಲ ನಕ್ಷೆಯಿಂದ ಆಗುವ ಉಪಯೋಗವೇನು? ಇದನ್ನು ಗಮನಿಸುವುದರಿಂದ ಆಗುವ ಪ್ರಯೋಜನವಾದರೂ ಏನು ಎಂಬುದನ್ನು ಸಂಕ್ಷಿಪ್ತವಾಗಿ ಚರ್ಚಿಸಿದ್ದಾರೆ.

ಭ. ಮಲ್ಲಿಕಾರ್ಜುನ ಎಸ್.ಎಸ್. ಯದುರಾಜನ್‌ರವರು 'ನಿರಂತರ' ಎಂಬ ಪುಸ್ತಕ ಬರೆದಿದ್ದಾರೆ. ಪಠ್ಯಕ್ರಮ ಮತ್ತು ಪಠ್ಯಪುಸ್ತಕ, ಕನ್ನಡ ಭಾಷಾ ಬೋಧನೆಯ ಪ್ರಾಥಮಿಕ ಹಂತ ಮುಗಿಯುವುದರೊಳಗಾಗಿ ಧ್ವನಿ, ಪದ ವಾಕ್ಯಗಳು ಸಂಯಮವನ್ನು ತೋರಿಸಿ ಕೊಡುವಂತಿರಬೇಕು. ವಿದ್ಯಾರ್ಥಿಗೆ ಪರಿಚಿತವಾದ ಅಂಶಗಳನ್ನೇ ತಿಳಿಸುತ್ತಾ ವಿಮರ್ಶಾತ್ಮಕವಾಗಿ ಆಲೋಚಿಸುವಂತೆ ಮಾಡುವ ಸಾಮರ್ಥ್ಯವನ್ನು ಬೆಳೆಸುವಂತೆ ಪಠ್ಯಪುಸ್ತಕಗಳು ರಚನೆಯಾಗಬೇಕು ಎನ್ನುತ್ತಾರೆ.

ಎ.ಎಸ್. ನಂಜುಂಡಸ್ವಾಮಿಯವರು ಭಾಷಾಬೋಧನೆ ಪುಸ್ತಕವನ್ನು ಬರೆದಿದ್ದಾರೆ. ಇದರಲ್ಲಿ ಮುಖ್ಯವಾಗಿ ಪ್ರಾಥಮಿಕ ಪಠ್ಯಪುಸ್ತಕಗಳ ಆಂತರಿಕ ಮತ್ತು ಬಾಹ್ಯ ರಚನೆಗಳ

ಬಗ್ಗೆ ಚರ್ಚೆ ಮಾಡಿದ್ದಾರೆ. ಮಗು ಕಲಿಯಲು ಪುಸ್ತಕ ಸರಳವಾಗಿ ರಚನೆಯಾಗಿರಬೇಕು. ಪಠ್ಯಪುಸ್ತಕದ ಮುಖಪುಟ ಆಕರ್ಷಣೀಯತೆಯಿಂದ ಕೂಡಿರಬೇಕು. ಮುದ್ರಣ ದೋಷಗಳಾಗ ಬಾರದು ಎಂದು ಹೇಳುತ್ತಾರೆ. ಕನ್ನಡಭಾಷಾ ಬೋಧಕ, ವಿದ್ಯಾರ್ಥಿಯಾದವರಿಗೆ ಕಲಿಸುವ, ಬೋಧಿಸುವ ವಿಧಾನಗಳ ಬಗ್ಗೆ ಉದಾಹರಣೆಗಳ ಮೂಲಕ ಚರ್ಚೆ ನಡೆಸಿದ್ದಾರೆ.

ಡಾ. ಮಹಾಬಲೇಶ್ವರರಾವ್, ಪ್ರೊ.ಕೆ.ಜಿ. ಕುಲಕರ್ಣಿ 'ಪಠ್ಯಕ್ರಮ ಕಾರ್ಯಚರಣೆಯ ತತ್ವಗಳು' ಎಂಬ ಪುಸ್ತಕವನ್ನು ಬರೆದಿದ್ದಾರೆ. ಪ್ರಾಥಮಿಕ ಪಠ್ಯ ರಚನೆಗೆ ಶೈಕ್ಷಣಿಕ ದೃಷ್ಟಿಯಿಂದ ನೋಡಲೆ ಬೇಕಾದ ಪುಸ್ತಕವಾಗಿದೆ. ಪಠ್ಯ ಪುಸ್ತಕ ಮತ್ತು ಪಠ್ಯಕ್ರಮ ರಚನೆಯ ಕ್ರಮಣಿಕೆ ಅತ್ಯಂತ ಕೂಲಂಕುಶವಾಗಿ ಇಲ್ಲಿ ಚರ್ಚಿತವಾಗಿದೆ. ಮಗುವಿನ ಮೇಲೆ ಅದು ಪರಿಣಾಮ ಬೀರಬೇಕಾದರೆ ಉದ್ದೇಶ ಅದರ ಸಂಯೋಜನೆ, ಬೋಧನೆ, ಪಾಠೋಪಕರಣಗಳು, ಪಾಠಯೋಜನೆ, ಬೋಧನಾ ತಂತ್ರಜ್ಞಾನ ಬೋಧನಾ ಕೌಶಲ್ಯಗಳು, ಮೌಲ್ಯಮಾಪನ ಅಂಶಗಳು ಸ್ಪಷ್ಟವಾಗಿರಬೇಕೆಂದು ವಿಶ್ಲೇಷಿಸಿದ್ದಾರೆ.

'ವಿದ್ಯಾಮಾನ' 'ಆಧುನಿಕ ಶಿಕ್ಷಣದ ಒಲವು'ಗಳನ್ನು ಸಹ ಮಹಾಬಲೇಶ್ವರರಾವ್ ಬರೆದಿದ್ದಾರೆ. ಈ ಎರಡು ಪುಸ್ತಕಗಳಗಳಲ್ಲಿ ಪ್ರಾಥಮಿಕ ಶಿಕ್ಷಣಕ್ಕಾಗಿ ಹಾಕಿಕೊಂಡ ಯೋಜನೆಗಳನ್ನು ಚರ್ಚಿಸಿದ್ದಾರೆ. ಜೊತೆಗೆ ಅವುಗಳಿಂದಾದ ಗುಣಾತ್ಮಕವಾದ ಪರಿಣಾಮವೇನು ಎಂಬುದನ್ನು ವಿಶ್ಲೇಷಿಸಿದ್ದಾರೆ. ಸರಕಾರ ಮತ್ತು ಸಂಘ ಸಂಸ್ಥೆಗಳು ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯನ್ನು ಬದಲಾಯಿಸಿ, ಹೊಸ ಸೇರ್ಪಡೆಯಾದ ಅಂಶಗಳನ್ನು ಹೇಳಿದ್ದಾರೆ. ಜೊತೆಗೆ ಶಿಕ್ಷಣದ ದುರಂತದ ವಾಸ್ತವ, ಶಿಕ್ಷಣ ವಾಣಿಜ್ಯ ಬಾಗಿಲನ್ನು ತಟ್ಟುತ್ತಿರುವುದು, ಇಂತಹ ಹತ್ತಾರು ಗಂಭೀರ ನಿರ್ಧಾರದ ಅಂಶಗಳ ಬಗ್ಗೆ ಚರ್ಚೆ ನಡೆಸಿದ್ದಾರೆ. ಪ್ರಾಥಮಿಕ ಶಿಕ್ಷಣದ ಸಾರ್ವತ್ರಿಕರಣ ನಡೆದು ಬಂದ ಅಂಶಗಳ ಬಗ್ಗೆಯೂ ಸಹ ಚರ್ಚಿಸಿದ್ದಾರೆ. ಅಲ್ಲದೆ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ ನಡೆದು ಬಂದ ದಾರಿಯ ಬಗೆಗೂ ಸಹ ವಿಶ್ಲೇಷಿಸಿದ್ದಾರೆ. ಒಟ್ಟಾರೆಯಾಗಿ ಸಂಶೋಧನೆಯ ದೃಷ್ಟಿಯಿಂದ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಲ್ಲಿ ಮಹಾಬಲೇಶ್ವರ ರಾವ್‌ರವರ ಕೊಡುಗೆ ಅಪಾರ ಎಂಬುದು ಇವರ ಪುಸ್ತಕಗಳ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

'ಪಠ್ಯಕ್ರಮ ತತ್ವಗಳು ಮತ್ತು ಯೋಜನೆ' ಜಿ.ಐ. ಭಟ್ಟ ಬೆತ್ತಗೇರಿ ಬರೆದಿದ್ದಾರೆ. ಇವರು ಮುಖ್ಯವಾಗಿ ಪಠ್ಯಕ್ರಮ ತಾತ್ವಿಕ ಹಿನ್ನೆಲೆಯಲ್ಲಿ ರಚನೆಯಾಗಬೇಕು. ಪಠ್ಯಕ್ರಮ ಕಾಲಕ್ಕೆ ತಕ್ಕಂತೆ ಬದಲಾವಣೆಗೆ ಒಳಪಡಬೇಕು. ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿ ರಚನೆಯಾಗಿರಬೇಕು. ಕಲಿಸುವ ಮತ್ತು ಕಲಿಯುವವರ ಮದ್ಯ ನಿಕಟ ಸಂಬಂಧವರ್ತಿಯಾಗಿ ಪಠ್ಯಕ್ರಮ ರಚನೆಯಾದರೆ ಒಳ್ಳೆಯದು ಎಂಬ ಅಭಿಪ್ರಾಯಗಳನ್ನು ಹೇಳುತ್ತಾರೆ.

ಅನುಸೂಯ ಪರಗಿಯವರು 'ಮಾತೃಭಾಷೆ ಕನ್ನಡ ತತ್ವ ಮತ್ತು ಬೋಧನಾ ಮಾರ್ಗ' ಪುಸ್ತಕ ಬರೆದಿದ್ದಾರೆ. ಇದರಲ್ಲಿ ಪ್ರೌಢ ಶಾಲೆಗೆ ಸಂಬಂಧಿಸಿದ ಕನ್ನಡ ಭಾಷೆಯ

ಪಠ್ಯಗಳು ಹೇಗಿರಬೇಕು ಎಂದು ವಿಶ್ಲೇಷಿಸಿದ್ದಾರೆ. ಬೋಧನೆ, ಬೋಧಕ, ಶಾಲೆ, ಕುಟುಂಬದ ವ್ಯವಸ್ಥೆಯಲ್ಲಿ ಭಾಷೆಯು ಹೇಗೆ ಬಳಕೆಯಾಗುತ್ತದೆ ಎಂಬುದನ್ನು ವಿವರಿಸಿದ್ದಾರೆ.

ರಾಜ್ಯಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ೨೦೦೫ರ ಸೆಪ್ಟಂಬರ್ ತಿಂಗಳ ಒಂದು ದಿನದ ತರಬೇತಿ ಸಂಚಿಕೆಯಾದ 'ನೀಲಿನಕ್ಷೆ ಮತ್ತು ಪ್ರಶ್ನೆಪತ್ರಿಕೆ' ಎಂಬ ಪುಸ್ತಕವನ್ನು ಬಿಡುಗಡೆ ಮಾಡಿದೆ. ನೀಲಿ ನಕ್ಷೆಯನ್ನು ಬಳಸುವಲ್ಲಿ ಬೇಕಾದ ಸಾಮರ್ಥ್ಯವನ್ನು ಹಾಗೂ ಅದರ ಬಳಕೆ ವಿಧಾನ ಪ್ರಶ್ನೆಪತ್ರಿಕೆಯಲ್ಲಿ ಹೇಗೆ ನಡೆಯಬೇಕು ಎಂಬ ವಿಧಾನವನ್ನು ಚರ್ಚಿಸಿದ್ದಾರೆ. ಮೌಲ್ಯಮಾಪನ ನಡೆಯುವಾಗ ಗಮನಿಸಬೇಕಾದ ಅಂಶಗಳನ್ನು ಸಹ ಚರ್ಚಿಸಲಾಗಿದೆ.

'ಪಠ್ಯಕ್ರಮ ಕಾರ್ಯಚರಣೆಯ ತತ್ವಗಳು' ಎಂದು ನಂಜೇಗೌಡ, ಸಿ.ಜಿ. ಪ್ರಸಾದ, ಶೇಖರ್ ಬರೆದಿದ್ದಾರೆ. ಪಠ್ಯಕ್ರಮ ರಚಿಸುವಾಗ ಮಗು ಕೇಂದ್ರಿತ, ಶಿಸ್ತಿನ, ಸಮುದಾಯ, ಸಂಸ್ಕೃತಿ ರಕ್ಷಿಸುವ, ಸೃಜನಾತ್ಮಕ, ಚಟುವಟಿಕೆಯಾಧಾರಿತ ನಮ್ಯತೆಯಲ್ಲಿ, ವಿವಿಧ ಉಪಯುಕ್ತ ವಾದ ರೀತಿಯಲ್ಲಿ ನಿಯಮ ವಿವೇಚನಾ ದೃಷ್ಟಿಕೋನದ ಹಿನ್ನೆಲೆಯನ್ನು ಆಧರಿಸಿಕೊಂಡು ಪಠ್ಯಕ್ರಮಗಳು ರಚನೆಯಾಗಬೇಕು ಎಂದಿದ್ದಾರೆ.

ರಾಜ್ಯಶಿಕ್ಷಣ ಸಂಶೋಧನೆ ಮತ್ತು ತರಬೇತಿ ನಿರ್ದೇಶನಾಲಯವು ಕನ್ನಡ ಸಂಪದ ೨೦೦೫ರಲ್ಲಿ ಡಿ.ಎಡ್. ವಿದ್ಯಾರ್ಥಿಗಳಿಗಾಗಿ ಪ್ರಕಟಿಸಿದೆ. ೧ರಿಂದ ೭ನೇ ತರಗತಿಯವರೆಗೆ ಕನ್ನಡ ಭಾಷಾ ಪಠ್ಯಗಳು ಹೇಗೆ ರಚನೆಯಾಗಬೇಕು. ಅವುಗಳ ಬೋಧನೆ, ಮೌಲ್ಯಮಾಪನ ಹೇಗಿರಬೇಕು ಎಂಬುದರ ವಿವರಣೆಯನ್ನು ಸ್ಪಷ್ಟವಾಗಿ ನೀಡಿದ್ದಾರೆ. ಧ್ವನಿ, ಪದ, ವಾಕ್ಯ, ವ್ಯಾಕರಣವನ್ನು ಹೇಗೆ ಕಲಿಸುವ ಪರಿಪಾಠ ಶಿಕ್ಷಕರಲ್ಲಿರಬೇಕು ಎಂಬುದನ್ನು ವಿವರಿಸಿದ್ದಾರೆ. ಪಾಠಗಳು ರಾಷ್ಟ್ರ, ಸಮಾಜ, ವ್ಯಕ್ತಿಗಳನ್ನು ಕುರಿತು ಅಪೇಕ್ಷಿತ ನಿರೀಕ್ಷಿತ ಮೌಲ್ಯಗಳನ್ನು ಬೆಳೆಸಲು ಎಲ್ಲಾ ಪಠ್ಯಪುಸ್ತಕಗಳಲ್ಲಿಯೂ ಗದ್ಯ ಹಾಗೂ ಪದ್ಯ ಪಾಠಗಳನ್ನು ಸೇರಿಸಿವೆ ಎಂದು ಹೇಳಲಾಗಿದೆ. ಪ್ರಾಣಿ ಪಕ್ಷಿ, ಹೂ, ಹಣ್ಣುಗಳು, ಕತೆಗಳು ಮಕ್ಕಳ ಕತೆಗಳು ಶಿಶುಗೀತೆಗಳು, ಚುಟುಕುಗಳು, ಕುಟುಂಬ ಸಂಬಂಧಿ ಪಾಠಗಳು, ನಿಸರ್ಗ ಸೌಂದರ್ಯ, ಪ್ರಾಸಬದ್ಧ ಕವಿತೆಗಳು, ದಾಸರಪದ, ವಚನಗಳು, ದೇಶ ಭಕ್ತಿಗೀತೆಗಳು, ನೀತಿಪ್ರಧಾನ ವಚನಗಳು, ವಿನೋದ, ಪ್ರಾಮಾಣಿಕತೆ, ಸಾಹಸ ಕತೆಗಳು, ಸ್ಥಳೀಯ ವಿಶೇಷಗಳನ್ನು ಕುರಿತು ಪಾಠಗಳನ್ನು ಕೊಟ್ಟಿದೆ. ಪರಿಸರ ಸಂಬಂಧಿತ ವಿಚಾರಗಳು, ವಿಶೇಷ ಆಚರಣೆಗಳು, ಕ್ರೀಡೆಗಳನ್ನು ಕುರಿತು ವಿಚಾರಣೆಗಳನ್ನು ಸಹ ಪಠ್ಯದಲ್ಲಿ ಸೇರಿಸಲಾಗಿದೆ. ಶಾಲಾ ಸಮಾರಂಭಗಳು ಪಠ್ಯೇತರ ಕಾರ್ಯಕ್ರಮಗಳು, ಪತ್ರ, ದಿನಚರಿ, ಸಂಚಾರ, ಸಾಧನಗಳ ಬಗೆಗೂ ಸಹ ಪಾಠಗಳನ್ನು ಅಳವಡಿಸಲಾಗಿದೆ. ರಾಷ್ಟ್ರೀಯ ಭಾವೈಕ್ಯತೆ, ರಾಷ್ಟ್ರ ನಾಯಕರ ಜೀವನ ಚರಿತ್ರೆ, ನಾಟಕ, ಪ್ರವಾಸ ಕಥನ, ಆತ್ಮ ಕಥನಗಳನ್ನು ವಿವಿಧ ತರಗತಿಗಳಿಗೆ ಸೇರಿಸಿದೆ. ವ್ಯಾಕರಣಾಂಶಗಳು

ಲೇಖನ ಚಿಹ್ನೆಗಳ ಬಗ್ಗೆ ವೈಜ್ಞಾನಿಕ ಸಂಶೋಧನೆಗಳ ಬಗ್ಗೆ ದೈಹಿಕ ಶಿಕ್ಷಣಕ್ಕೆ ನೆರವಾಗುವಂತಹ ವಿವರಗಳು ಪಾಠಗಳನ್ನು ಕೊಟ್ಟಿದೆ ಎಂದು ವಿವರಿಸಿದೆ.

ಕನ್ನಡ ಭಾಷೆಯ ಬಳಕೆಯು ಆಧುನಿಕತೆ ಜಾಗತೀಕರಣದಿಂದ ಹಾಗೂ ಕನ್ನಡದಲ್ಲಿ ಸೇರಿದ ಅನ್ಯಭಾಷಾ ಧ್ವನಿ, ಪದ, ವಾಕ್ಯ, ವ್ಯಾಕರಣದಲ್ಲಿ ಸೇರಿದ್ದರ ಬಗ್ಗೆ ಆತಂಕ ವ್ಯಕ್ತಪಡಿಸಿ ಸಂಶೋಧನೆಯ ಬರಹಗಳನ್ನು ಬರೆದಿರುವ ಡಿ.ಎನ್. ಶಂಕರಭಟ್‌ರ ಕೊಡುಗೆ ಅಪಾರವೆಂದು ಹೇಳಬಹುದು. ಇವರು 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ,' 'ಕನ್ನಡ ಬರಹವನ್ನು ಸರಿಪಡಿಸೋಣ !' 'ಭಾಷೆಯ ಬಗೆಗೆ ನೀವೇನು ಬಲ್ಲಿರಿ?' 'ನಿಜಕ್ಕೂ ಹಳೆಗನ್ನಡ, ವ್ಯಾಕರಣ ಎಂತಹುದು?' 'ಕನ್ನಡ ಪದಗಳ ಒಳರಚನೆ', 'ಕನ್ನಡ ವಾಕ್ಯಗಳ ಒಳರಚನೆ' ಕನ್ನಡ ನುಡಿ ನಡೆದು ಬಂದ ದಾರಿ ಎಂಬ ಹಲವಾರು ಸಂಶೋಧನ ಬರಹದ ಪುಸ್ತಕಗಳನ್ನು ಬರೆದು ಕನ್ನಡ ಭಾಷೆಗೆ ಕ್ರಾಂತಿಕಾರಿ ಅಂಶಗಳನ್ನು ಬಿತ್ತರಿಸಿದ್ದಾರೆ. ಇವರು ಹೇಳುವ ಹಾಗೆ ಪ್ರಾಚೀನ ಕನ್ನಡ ಭಾಷೆಯ ಬೆಳವಣಿಗೆ ಸಂಸ್ಕೃತ ಭಾಷೆಯ ಸೇರ್ಪಡೆಯಲ್ಲಿ ರಚಿತವಾಗಿದೆ. ಅದು ಇಂದಿಗೂ ಬೆಳೆಯುತ್ತಾ ಮುಂದುವರೆದಿದೆ. ಆ ಭಾಷೆಯ ನಿಯಮದಡಿಯಲ್ಲಿ ಕನ್ನಡ ಭಾಷೆ ರಚನೆಯಾಗುತ್ತಿದೆ. ಅದನ್ನು ಬದಲಾಯಿಸುವ ಅಗತ್ಯವಿದೆ ಎಂದು ಅಭಿಪ್ರಾಯ ಪಡುತ್ತಾರೆ. ನಾವು ಕಲಿಸುವ ಕನ್ನಡ ಭಾಷಾ ಪಠ್ಯಗಳು ಸಹ ಸಂಸ್ಕೃತದ ಹಿನ್ನೆಲೆಯಲ್ಲಿ ರಚನೆಯಾಗಿದೆ. ಅವುಗಳ ಬಳಕೆಗಳು ಇಂದಿನ ಸಮಾಜ ವ್ಯವಸ್ಥೆಯಲ್ಲಿ ಕಾಣುತ್ತಿಲ್ಲ. ಆದರೆ ಕಲಿಸುವುದು ಮಾತ್ರ ಬೇರೆ ಎಂಬ ಚಿಂತನೆಯ ಅಂಶಗಳನ್ನು ಬಿತ್ತರಿಸಲು ಸಂಶೋಧನಾ ಮಾದರಿಯ ಪುಸ್ತಕಗಳನ್ನು ಬರೆದಿದ್ದಾರೆ. ಕನ್ನಡ ಬರಹ ಎಲ್ಲರ ಸೊತ್ತಾಗಬೇಕು. ಓದಲು ಬರೆಯಲು ಕಲಿತರೆ ಪರಿಪೂರ್ಣವಾದಂತಲ್ಲ. ತಮ್ಮ ಜೀವನದಲ್ಲಿ ಕಲಿತ ಕಲಿಕೆಯ ಮೂಲಕ ಎಂತಹ ಪ್ರಯೋಜನಗಳನ್ನೆಲ್ಲ ಪಡೆಯಲು ಸಾಧ್ಯ ಎಂಬುದನ್ನು ಎಲ್ಲಾ ಕನ್ನಡಿಗರೂ ಸರಿಯಾಗಿ ತಿಳಿದು ಕೊಳ್ಳಬೇಕು. ಅಂತಹ ಪ್ರಯೋಜನಗಳನ್ನು ಅವರು ದಿನ ನಿತ್ಯವೂ ಪಡೆಯುವಂತಾಗಬೇಕು ಎಂದು ಅಭಿಪ್ರಾಯ ಪಡುತ್ತಾರೆ. ಈ ತಿಳುವಳಿಕೆ ಬರಬೇಕಾದರೆ ಪಠ್ಯಪುಸ್ತಕ ರಚನೆಯ ನಿಯಮಗಳಲ್ಲಿ ಬದಲಾಗಬೇಕು ಎಂದು ಹೇಳುತ್ತಾರೆ. ಕನ್ನಡ ಬರಹಕ್ಕೂ ಸಾಮಾನ್ಯ ಕನ್ನಡಿಗರ ಮಾತಿಗೂ ನಡುವಿರುವ ಅಂತರ ಜಾಸ್ತಿಯಾಗುತ್ತಿರುವುದಕ್ಕೆ ಎರಡು ಮುಖ್ಯ ಕಾರಣಗಳಿವೆ. ಅದರಲ್ಲಿ ಮೊದಲನೆಯದು ಕನ್ನಡದವೇ ಆದ ಪದಗಳನ್ನು ಬರೆಯಲು ಒಟ್ಟು ಮೂವತ್ತಮೂರು ಅಕ್ಷರಗಳಿದ್ದರೆ ಸಾಕು ಎಂದಿದ್ದಾರೆ. ಅವಶ್ಯವಿಲ್ಲದ ಸಂಸ್ಕೃತ ಪದಗಳನ್ನು ಹೇಳಿಕೊಡುವುದರಿಂದ ಕನ್ನಡ ಕಲಿಸುವುದು ಕ್ಲಿಷ್ಟವಾಗುತ್ತದೆ. ಆದ್ದರಿಂದ ಸಂಸ್ಕೃತ ಪದಗಳ ಸಡಿಲಿಕೆ ಅಗತ್ಯ ಎಂದು ಹೇಳುತ್ತಾರೆ. ಇದು ಲಿಪಿಕ್ರಾಂತಿಯಿಂದ ಮಾತ್ರ ಸಾಧ್ಯ ಎಂದಿದ್ದಾರೆ ಪಠ್ಯಪುಸ್ತಕಗಳಲ್ಲಿ ಸಂಸ್ಕೃತ ಪದಗಳು ಬಳಸುವುದನ್ನು ಬಿಟ್ಟು ಕನ್ನಡದಲ್ಲಿ ತದ್ಭವ ಬಳಕೆಯಾಗಬೇಕು. ಕನ್ನಡ ಪದಗಳು ಇಲ್ಲದ ಸಂದರ್ಭದಲ್ಲಿ ಸಂಸ್ಕೃತ ಪದಗಳನ್ನೇ ನೇರವಾಗಿ ಬಳಸಿಕೊಳ್ಳದೆ ಉಚ್ಚಾರಣೆ ಸಡಿಲಿಕೆಯ

ಹಿನ್ನೆಲೆಯಲ್ಲಿ ಬಳಕೆ ಆಗಬೇಕು ಎಂದಿದ್ದಾರೆ. ಸಂಸ್ಕೃತದ ನಿಯಮಗಳನ್ನು ನೇರವಾಗಿ ಕನ್ನಡ ಪಠ್ಯಗಳಲ್ಲಿ ಅಳವಡಿಸಿಕೊಳ್ಳಬಾರದು ಎಂದಿದ್ದಾರೆ. ಅವುಗಳು ಕನ್ನಡ ಕಲಿಯುವ ಮಕ್ಕಳಿಗೆ ಅರ್ಥವಾಗುವ ಹಾಗೆ, ಸಹಾಯಕವಾಗುವ ಹಾಗೆ, ತಿಳಿಸಿ ಹೇಳ ಬೇಕಿದ್ದಲ್ಲಿ, ಮೊದಲಿಗೆ ಸಂಸ್ಕೃತದಿಂದ ಹೊಸಗನ್ನಡಕ್ಕೆ ಎಂತಹ ಪದಗಳೆಲ್ಲಾ ಎರವಲಾಗಿ ಬಂದಿವೆ ಎಂಬುದನ್ನು ಪರಿಶೀಲಿಸಬೇಕು. ಹಾಗಾದಾಗ ಕಲಿಕೆ ಸರಳವಾಗಬಲ್ಲದು. ಈ ರೀತಿಯಾಗಿಯೂ ಪಠ್ಯ ರಚನೆ ಸಾಧ್ಯ ಎಂದಿದ್ದಾರೆ. ಕನ್ನಡ ವ್ಯಾಕರಣ ಎಂದು ಹೇಳಿಕೊಡುವ ನಾವು ಸಂಸ್ಕೃತದ ನಿಯಮದಡಿಯಲ್ಲಿ ಹೇಳುತ್ತಿದ್ದೇವೆ. ಕನ್ನಡ ಪದಗಳ ಬಳಕೆಯನ್ನು ಪರಿಶೀಲಿಸಿದಾಗ ಕನ್ನಡದ ಸಂದಿಗಳನ್ನು ಹೇಳುವುದು ಮಾತ್ರ ಸೂಕ್ತವೆಂದು ಅಭಿಪ್ರಾಯಪಡುತ್ತಾರೆ. ಇವರ ಸಂಶೋಧನ ಬರಹಗಳನ್ನು ಪಠ್ಯಪುಸ್ತಕ ರಚನೆ ಮಾಡುವವರು ಅಗತ್ಯವಾಗಿ ಪರಿಶೀಲಿಸುವುದು ಮುಖ್ಯವೆಂಬುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಡಾ. ಕೆ.ಎಲ್. ಗೋಪಾಲಕೃಷ್ಣಯ್ಯ ನವಕರ್ನಾಟಕ ಪ್ರಕಾಶನದಿಂದ ಪ್ರೌಢಶಾಲಾ ಕನ್ನಡ ಕೈಪಿಡಿ ಎಂಬ ಪುಸ್ತಕವನ್ನು ಬರೆದಿದ್ದಾರೆ. ಪ್ರೌಢಶಾಲಾ ಹಂತದಲ್ಲಿ ವ್ಯಾಕರಣ, ಛಂಧಸ್ಸು, ವಾಕ್ಯ ರಚನೆ, ಅಲಂಕಾರ, ಲೇಖನ, ಕಲೆ, ಪ್ರಬಂಧಗಳು, ಬೋಧಿಸುವ ವಿಧಾನ ಮತ್ತು ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ.

ಆಟದ ಮೂಲಕ ಕನ್ನಡ ಬೋಧನೆ ನಡೆಯಬೇಕೆಂದು ಆಡಿಕಲಿಯೋಣ, ಕನ್ನಡ ಎಂಬ ಪುಸ್ತಕವನ್ನು ಬೇದ್ರೆ ಎನ್ ಮಂಜುನಾಥ ಬರೆದಿದ್ದಾರೆ. ಪ್ರತಿಯೊಂದು ಭಾಷಾ ಚಟುವಟಿಕೆಗಳು ಆಟದ ಮೂಲಕ ನಡೆಯುವುದರಿಂದ ಕಲಿಕೆ ಅರ್ಥಪೂರ್ಣವಾಗಿ ಸ್ಮೃತಿಯಲ್ಲಿ ಉಳಿಯಲು ಸಹಾಯಕವೆಂಬ ಅಂಶವನ್ನು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸುತ್ತಾರೆ. ಆದರೆ ಇಲ್ಲಿ ಬಳಕೆ ಮಾಡಿದ ಪದಗಳನ್ನು ಪರಿಶೀಲಿಸುವುದು ಅಗತ್ಯವಿದೆ ಎಂದು ಹೇಳಬಹುದು. ಉದಾ : 'ಪದಗಳ ರಮ್ಮಿ ಆಟ,' ಆಡಿಸಲು ಪ್ರೇರೆಪಿಸುವ ನಾವು ರಮ್ಮಿ ಎಂಬ ಪದ ಸಮಾಜದಲ್ಲಿ ಯಾವ ಆಟದ ಸಂದರ್ಭದಲ್ಲಿ ಬಳಕೆಯಾಗುತ್ತಿದೆ ಎಂಬುದನ್ನು ಪರಿಶೀಲಿಸಬೇಕಿದೆ. ಮನೋವಿಜ್ಞಾನಿಗಳ ಅಗತ್ಯ ಇಂತಹ ಸಂದರ್ಭದಲ್ಲಿ ಮುಖ್ಯವಾಗುತ್ತದೆ. ಇದನ್ನು ಗ್ರಹಿಸುವ ಮಗು ಸಮಾಜದಲ್ಲಿ ಈ ರೀತಿಯ ಆಡುವ ಆಟಕ್ಕೆ ಪ್ರೇರಣೆಯಾಗಬಹುದು. ಆದ್ದರಿಂದ ಕಲಿಸುವ ವಿಷಯ, ಚಟುವಟಿಕೆ, ಪದಗಳ ಬಳಕೆಯ ವಿಧಾನವನ್ನು ಮೊದಲು ಅರಿತು ಅದಕ್ಕೆ ತಕ್ಕ ಹಾಗೆ ಪದ ಬಳಸಿ ಹಾಡುತ್ತ ಕಲಿಸುವುದಾದರೆ ಇದೊಂದು ಉತ್ತಮ ಮಾದರಿಯಾಗಬಹುದು ಎಂಬುದು ಸ್ಪಪಷ್ಟವಾಗುತ್ತದೆ.

ಕರ್ನಾಟಕ ಸರ್ಕಾರ ಸಾರ್ವಜನಿಕ ಶಿಕ್ಷಣ ಇಲಾಖೆ, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಅಡಿಯಲ್ಲಿ ಪ್ರಾಥಮಿಕ ಶಿಕ್ಷಣಕ್ಕಾಗಿ, ಬೋಧನೆಗಾಗಿ ಹೊಸ ಹೊಸ ನಿಯಮಗಳನ್ನು ರೂಪಿಸಿದೆ. ವೈಜ್ಞಾನಿಕ ಮತ್ತು ವೈಚಾರಿಕತೆಯ ಹಿನ್ನೆಲೆಯಲ್ಲಿ

ಸೈದ್ಧಾಂತಿಕತೆಗೆ ಒಳಪಟ್ಟು ಶಿಕ್ಷಕರು ಬೋಧಿಸುವ ಮಾದರಿಗಳು ಬಂದಿವೆ. ಅದರಲ್ಲಿ ಬಹುಮುಖಿ-೨ ಮಾದರಿಯು ಒಂದಾಗಿದೆ.(ಡಿ.ಎಸ್.ಇ.ಆರ್.ಟಿ. ಪ್ರಕಟಿಸಿದೆ) ಈ ಮಾದರಿಗಳು ಎಲ್ಲಾ ವಿಷಯ ಅಂದರೆ ಬಹುವರ್ಗ ಬೋಧನೆಯ ವಿಧಾನದ ವಿವರಣೆಯನ್ನು ವಿಷಯವಾರು ಉದಾಹರಣೆಗಳ ಮೂಲಕ ಕೊಡಲಾಗಿದೆ. ಈ ಬಹುಮುಖಿ-೨ ಪುಸ್ತಕಗಳನ್ನು ೨ ತರಗತಿಗಳಿಗೆ ಒಂದರಂತೆ ರಚನೆ ಮಾಡಿ ಬೋಧಿಸುವ ಕ್ರಮಣಿಕೆಯನ್ನು ಕೊಟ್ಟಿದೆ. ಉದಾ: ಕನ್ನಡಭಾಷಾ ಬೋಧನೆಯನ್ನು ಪ್ರಾಥಮಿಕ ತರಗತಿಗಳಲ್ಲಿ ಹೇಗೆ ಬೋಧಿಸಬೇಕು ಅವಧಿಗನು ಸಾರವಾಗಿ ತ್ರೈಮಾಸಿಕದ ಹಂತಗಳಲ್ಲಿ ಎಷ್ಟನ್ನು ಕಲಿಸಬೇಕು. ಕಲಿಸುವ ಉದ್ದೇಶವೇನು? ಎಂಬುದನ್ನು ಹೇಳಲಾಗಿದೆ. ವರ್ಷಕ್ಕೆ ನಡೆಯುವ ತರಗತಿಗಳೆಷ್ಟು, ಶಿಕ್ಷಕರು ತರಗತಿಯನ್ನು ಹೇಗೆ ತೆಗೆದುಕೊಳ್ಳಬೇಕು ಎಂಬುದನ್ನು ಶಿಕ್ಷಕರ ಸಂಖ್ಯೆಯನುಸಾರ ಕೊಟ್ಟಿರುವುದನ್ನು ಈ ಪಠ್ಯಗಳಲ್ಲಿ ಕಾಣುತ್ತೇವೆ. ಆದರೆ ಈ ನಿಯಮದ ಅಡಿಯಲ್ಲಿ ನಡೆಯುತ್ತದೆ ಎಂಬುದನ್ನು ಪರಿಶೀಲಿಸುವುದು ಅಗತ್ಯವಿದೆ. ಇದರಲ್ಲಿ ಸಫಲತೆಯನ್ನು ಕಾಣುವುದು ತುಂಬಾ ಕಷ್ಟವೆಂದೇ ಹೇಳಬಹುದು. ಏಕೆಂದರೆ ಈ ನಿಯಮ ಪರಿಪಾಲನೆ ಗೊತ್ತಿರುವ ಶಿಕ್ಷಕರ ಸಂಖ್ಯೆ, ವಿಷಯದ ಹಿನ್ನೆಲೆ ಏನು ಎಂಬುದನ್ನು ತಿಳಿದವರ ಪ್ರಮಾಣ ಮತ್ತು ಪ್ರಾಮಾಣಿಕತೆ ಎಷ್ಟಿದೆ ಎಂಬುದನ್ನು ಪರಿಶೀಲಿಸಿದಾಗ ಇದು ಸ್ಪಷ್ಟವಾಗಬಹುದು. ಅಂಕೆ ಸಂಖ್ಯೆಗಳಲ್ಲಿ ಬೋಧನೆ ಪ್ರಮಾಣ ಅಳತೆ ಮಾಡಿ ಅದರ ಸುಧಾರಣೆ ಕೈಗೊಳ್ಳುತ್ತಿರುವ ನಮ್ಮ ಪರಿಸ್ಥಿತಿ ಇಂದು ಇದೆ. ಆದರೆ ಅದರ ನಿಜಾಂಶ ತಿಳಿದು ನಿಯಮಗಳನ್ನು ರೂಪಿಸುವುದು ಅಗತ್ಯವಿದೆ ಎಂಬುದನ್ನು ಕಲಿಕೆಯ ಸಾಮರ್ಥ್ಯವನ್ನು ಪ್ರಾಯೋಗಿಕವಾಗಿ ಅಧ್ಯಯನ ಮಾಡಿದಾಗ ಸ್ಪಷ್ಟವಾಗುತ್ತದೆ.

ಶಿಕ್ಷಕರಿಗಾಗಿ ಸಂಪನ್ಮೂಲ ಪುಸ್ತಕವಾಗಿ 'ಕಲಿಕೆಯಲ್ಲಿ ಕಲೆ' ಎಂಬ ಪುಸ್ತಕವನ್ನು ಜೇನ್‌ಸಾಹಿ ಮತ್ತು ರೋಷನ್‌ಸಾಹಿ ಬರೆದಿದ್ದಾರೆ. ಇದನ್ನು ರಾಷ್ಟ್ರೀಯ ಉನ್ನತ ಅಧ್ಯಯನ ಸಂಸ್ಥೆ ಇಂಡಿಯಾ ಪೌಂಡೇಷನ್ ಫಾರ್ ದಿ ಆರ್ಟ್ಸ್ ಪ್ರಕಾಶನಕ್ಕೆ ನೆರವಾಗಿದೆ. ಕನ್ನಡಕ್ಕೆ ದಿವ್ಯಜ್ಯೋತಿ ಅನುವಾದ ಮಾಡಿದ್ದಾರೆ. ನವಕರ್ನಾಟಕದಲ್ಲಿ ಪ್ರಕಾಶನಗೊಂಡಿದೆ. ಶಿಕ್ಷಕರು ಪಾಠೋಪಕರಣಗಳನ್ನು ಬಳಸುವ ವಿಧಾನ, ಜ್ಞಾನೇಂದ್ರಿಯಗಳ ಅರಿವು, ಪಠ್ಯಪುಸ್ತಕ ಯೋಜನೆ ಮಕ್ಕಳ ಚಟುವಟಿಕೆಗಳಿಗೆ ಪ್ರತಿಕ್ರಿಯೆ, ಮೌಲ್ಯಮಾಪನ ಮಾಡುವ ವಿಧಾನವನ್ನು ಹೇಳಿದೆ. ಶಿಕ್ಷಕರು ಬೋಧನೆ ಮಾಡುವಾಗ ಏಕಾಗ್ರತೆಯಾಗಿ ಪಾಠವನ್ನು ಅಚ್ಚುಕಟ್ಟಾಗಿ ನಿಭಾಯಿಸಬೇಕು ಎಂದು ಹೇಳಿದೆ. ಪಾಠೋಪಕರಣಗಳ ಬಳಕೆ ಸಂದರ್ಭನುಸಾರ ಬೋಧನೆಯಲ್ಲಿ ನಡೆಯಬೇಕು. ಹಾಗಾದಾಗ ಕಲಿಕೆ ಶಾಶ್ವತವಾಗಿ ಉಳಿಯುತ್ತದೆ. ಎಂದು ಹೇಳಲಾಗಿದೆ.

ಇಂದಿನ ಶಿಕ್ಷಣ ಪದ್ಧತಿ 'ಅಸಂಗತ', 'ಅವೈಜ್ಞಾನಿಕ' ಎಂಬ ಕೃತಿಯನ್ನು ಬಿ.ಭಾಸ್ಕರರಾವ್ ಬರೆದಿದ್ದಾರೆ. ಈ ಪಠ್ಯಪುಸ್ತಕಗಳಲ್ಲಿ ೧೯೮೭ರ ಇತಿಹಾಸ ಮತ್ತು ಕನ್ನಡ ಪಠ್ಯಗಳಲ್ಲಿನ ಪಾಠವನ್ನು ವಿಶ್ಲೇಷಿಸಿದ್ದಾರೆ. ಅಂದರೆ ಪಠ್ಯಗಳು ತಪ್ಪಾಗಿದ್ದು, ಅದರಿಂದ ವಿದ್ಯಾರ್ಥಿಗಳಿಗೆ

ಏನು ಪ್ರಯೋಜನವಾಗುತ್ತಿಲ್ಲ ಎಂಬುದನ್ನು ವಿಶ್ಲೇಷಿಸಿದ್ದಾರೆ. ಅಲ್ಲದೇ ಶಿವರಾಮಕಾರಂತರು ಹೇಳುವ ಪ್ರಾಥಮಿಕ ಮತ್ತು ಮಾಧ್ಯಮಿಕ ಸ್ಥಿತಿಯಲ್ಲಿ ನಾವು ಮಕ್ಕಳಿಗೆ ಒದಗಿಸುತ್ತಿರುವ ಪಠ್ಯಪುಸ್ತಕಗಳಷ್ಟು ಬರಡಾದ, ನಿರಾಷದಾಯಕವಾದ, ತಪ್ಪುಗಳಿಂದ ತುಂಬಿದ ಬರಹಗಳು ಇನ್ನು ಯಾವ ದೇಶದ ಪಠ್ಯಗಳಲ್ಲಿ ಸಿಗಲಾರದು. ಅವರ ಕುತೂಹಲ ಬೆಳೆಸುವುದಕ್ಕಾಗಿ ನಮ್ಮಲ್ಲಿದ್ದಷ್ಟು ಗ್ರಂಥಗಳ ಅಭಾವ ಇನ್ನೆಲ್ಲೂ ಇಲ್ಲ. ಉತ್ತಮ ಗ್ರಂಥಗಳ ಪ್ರಚಾರಕ್ಕೆ ಹೆಚ್ಚಳಕ್ಕೆ ಅಡ್ಡ ಬಂದಿರುವ ಪಠ್ಯಪುಸ್ತಕಗಳ ರಾಷ್ಟ್ರೀಕರಣ ಮಾಡುತ್ತಿರುವುದು ಪರಮಾವಧಿಯ ಮೂರ್ಖತನವೇ ಸರಿ ಎಂದು ಹೇಳಿದ್ದಾರೆ. ಪಠ್ಯಗಳಲ್ಲಿನ ಪಾಠಗಳ ದೋಷಗಳನ್ನು ಉದಾಹರಣೆಗಳ ಮೂಲಕ ವಿಶ್ಲೇಷಿಸಿ ಅಸಂಗತ-ಅವೈಜ್ಞಾನಿಕ ಪಾಠಗಳು ಇವೆ ಎಂಬುದನ್ನು ಸ್ಪಷ್ಟ ಪಡಿಸಿದ್ದಾರೆ. ಶಿಕ್ಷಣ ವ್ಯವಸ್ಥೆಯ ಮಾದರಿಯಲ್ಲಿ ಕೆಲವು ಅಂಶಗಳನ್ನು ಯಥಾಸ್ಥಿತಿಯಲ್ಲಿ ಮುಂದುವರೆಸಿಕೊಂಡು ಹೋಗುವುದು ಅಸಂಗತಗಳ, ವಿರೋಧ ಭಾಸಗಳ ಅವೈಜ್ಞಾನಿಕ ವಿಷಯಗಳ ಕಂತೆಯಾಗಿದೆ ಎಂದಿದ್ದಾರೆ. ನಮ್ಮ ಪಠ್ಯ ಪುಸ್ತಕಗಳ ರೀತಿ ಆ ಮನಸ್ಸಿನ ಯೋಚನೆಗಳ ಮಟ್ಟ ವಿದ್ಯಾರ್ಥಿಗಳಿಗೆ ಪಾಠ ಹೇಳುವವರ ಹಾಗೂ ಆ ಪಾಠಗಳನ್ನು ಬರೆಯುವವರ ಮನಸ್ಸಿಗಿಂತ ಭಿನ್ನವಾಗಿರುತ್ತವೆ ಎನ್ನುವುದನ್ನು ಮರೆತು ಬಿಡಲಾಗಿದೆಯೋ ಏನೋ ಅನಿಸುತ್ತದೆ ಎಂದು ಅಭಿಪ್ರಾಯ ಪಡುತ್ತಾರೆ. ಪಾಠಗಳು ಅಸಂಭದ್ದವಾಗಿರಲಿ, ಅಗ್ರಹ್ಯವಾಗಿರಲಿ ಪಠ್ಯ ಪುಸ್ತಕಗಳಲ್ಲಿ ತುರುಕಬಹುದು ಅಂತ ನಾವು ತಿಳಿಯುತ್ತೇವೆ ಎಂಬುದನ್ನು ಉದಾಹರಣೆಗಳ ಮೂಲಕ ವಿಶ್ಲೇಷಿಸಿದ್ದಾರೆ. ಕನ್ನಡ ಪಠ್ಯಪುಸ್ತಕಗಳ ತಪ್ಪುಗಳಿರುವದನ್ನು ವಿಶ್ಲೇಷಿಸಿ, ಕುಟುಂಬ ಮತ್ತು ಸಾಮಾಜಿಕ ಮೌಲ್ಯಗಳ ಕೊರತೆಗಳು ಇವೆ ಎಂಬುದನ್ನು ಸಾದರಪಡಿಸಿದ್ದಾರೆ.

ಪ್ರಾಥಮಿಕ ಶಿಕ್ಷಣ ಪುಸ್ತಕವನ್ನು ಬರೆದಿರುವ ಡಾ. ಎಸ್.ಜಿ.ದೇಸಾಯಿ, ಶ್ರೀ ಜಿ.ಎನ್. ದೇಸಾಯಿ ಅವರು ಪ್ರಾಥಮಿಕ ಶಾಲಾ ಪಠ್ಯಕ್ರಮವು ದೇಶದ ರಾಜಕೀಯ ಧೋರಣೆ, ಸಮಾಜ ಜೀವನದ ಕಟ್ಟುಪಾಡು, ದೇಶದ ಸಾಂಸ್ಕೃತಿಕ ಪರಂಪರೆಗಳು, ಇಂದಿನ ಸಮಾಜದಲ್ಲಿನ ಅವಶ್ಯಕತೆಗಳು, ಆರ್ಥಿಕ ಸ್ಥಿತಿಗಳು, ಶಿಕ್ಷಣದ ಸದ್ಯದ ಧ್ಯೇಯ ಧೋರಣೆಗಳ ರೀತಿಯಲ್ಲಿ ರಚನೆಯಾಗಬೇಕು ಎಂದಿದ್ದಾರೆ. ಇದರಿಂದ ಉತ್ತಮ ಸಮಾಜವನ್ನು ಸೃಷ್ಟಿಸಿ ನಿರ್ಮಿಸಬಹುದು ಎಂದಿದ್ದಾರೆ.

ಟಿ.ಎಂ. ಕುಮಾರರವರು 'ಪ್ರಾಥಮಿಕ ಶಿಕ್ಷಣ ಒಂದು ಚರ್ಚೆ' ಪುಸ್ತಕವನ್ನು ಬರೆದಿದ್ದಾರೆ. ಪ್ರಾರಂಭದಲ್ಲಿ ಪ್ರಾಥಮಿಕ ಶಿಕ್ಷಣಕ್ಕಾಗಿ ಸಂವಿಧಾನದಲ್ಲಿ ಹೇಳುವ ನಿಯಮಗಳು ಹಾಗೂ ೧೯೮೬ ರಾಷ್ಟ್ರೀಯ ಶಿಕ್ಷಣ ನೀತಿ ಹೇಳುವ ನಿಯಮಗಳನ್ನು ವಿಶ್ಲೇಷಿಸಿದ್ದಾರೆ. ಸಾಮಾನ್ಯ ಶಿಕ್ಷಣದಿಂದ ದೊಡ್ಡ ಮ್ಯಾಜಿಕ್ ಜರುಗುತ್ತದೆ ಎಂಬ ಭ್ರಮೆ ಇಟ್ಟುಕೊಳ್ಳಬಾರದು. ಶಿಕ್ಷಣದಿಂದ ಸಾಮಾನ್ಯ ಅರಿವು ಮೂಡುತ್ತದೆ. ಜೀವನದ ಅನೇಕ ಅಂಶಗಳನ್ನು ಶಿಕ್ಷಣ ಕಲಿಸುತ್ತದೆ. ಜೊತೆಗೆ ಅದರ ಮಹತ್ವ ಪ್ರಭಾವ ಸಹ ಬೀರುತ್ತದೆ. ಯಾವುದೇ ಅಭಿವೃದ್ಧಿ ಚಟುವಟಿಕೆಗಳಲ್ಲಿ

ಮೂಲಭೂತ ಶಿಕ್ಷಣ ಹೊಂದಿದ ವ್ಯಕ್ತಿ, ಶಿಕ್ಷಣವೇ ಇಲ್ಲದ ವ್ಯಕ್ತಿಗಿಂತ ಹೆಚ್ಚು ಪರಿಣಾಮಕಾರಿ ಸ್ಪಂಧಿಸಬಲ್ಲದು ಎಂದಿದ್ದಾರೆ. 'ಪಠ್ಯಪುಸ್ತಕಗಳು' ಲೇಖನದಲ್ಲಿ ಎನ್.ಸಿ.ಇ.ಆರ್.ಟಿ, ಡಿ.ಎಸ್.ಇ.ಆರ್.ಟಿ. ನಿಯಮಗಳ ಅಡಿಯಲ್ಲಿ ಪಠ್ಯ ಪುಸ್ತಕ ರಚನೆಯಾಗುತ್ತಿವೆ. ಕನ್ನಡಭಾಷಾ ಪಠ್ಯಗಳು ಸುಧಾರಣೆಯನ್ನು ಕಂಡಿದ್ದು ನನ್ನ ದೃಷ್ಟಿಯಲ್ಲಿ ಅಲ್ಲಿರುವ ಪ್ರಾರಂಭದ ರ,ತ,ಈ,ಕ ಆಧಾರಿತ ಕನ್ನಡ ಭಾಷಾ ಕಲಿಕೆ ಬಹಳ ಒಳ್ಳೆಯದು ಎಂದಿದ್ದಾರೆ. ಆದರೆ ಇದರಿಂದ ಮಗುವಿಗೆ ಸರಳವಾಗದೇ ಕಠಿಣವಾಗುತ್ತದೆ. ಏಕೆಂದರೆ ಮಗು ಕುಟುಂಬದ ಪರಿಸರದಲ್ಲಿ 'ಅ'ಕಾರದಿಂದ ಪ್ರಾರಂಭವಾಗುವ ಪದಗಳನ್ನು ಕಲಿತಿರುತ್ತದೆ. ಉದಾಹರಣೆಗೆ ಅವ್ವ, ಅಣ್ಣ, ಅಕ್ಕ, ಅಜ್ಜಿ, ಅಪ್ಪ, ಅಮ್ಮ ಇತ್ಯಾದಿಗಳನ್ನು ನೋಡಬಹುದಾಗಿದೆ. ಆದ್ದರಿಂದ ಒಂದನೇ ತರಗತಿಯ ಮಕ್ಕಳಿಗೆ 'ಅ'ಕಾರದಿಂದ ಪ್ರಾರಂಭವಾಗುವ ಪದಗಳು ಪ್ರಾರಂಭದ ತರಗತಿಯಲ್ಲಿ ಕಲಿಸುವುದು ಸೂಕ್ತ. ಇದರಿಂದ ಕಲಿಕೆ ಸುಲಭವಾಗಿ ಮಕ್ಕಳು ಆಸಕ್ತಿಯಿಂದ ಶಾಲೆಗೆ ಬರುತ್ತಾರೆ. 'ಅ'ದಿಂದ ಪ್ರಾರಂಭವಾಗುವ ಪದಗಳನ್ನು ಸಮಾಜದ ಎಲ್ಲ ವರ್ಗಗಳ (ತಳ ಸಮುದಾಯದಲ್ಲಿ) ಮಕ್ಕಳ ಪರಿಸರದಲ್ಲಿ ಕಾಣುತ್ತೇವೆ. ಇದೇ ಸಂದರ್ಭದಲ್ಲಿ ಹೆಚ್ಚು ಕಡಿಮೆ ಒಂದು ಹೊಸ ಕಲಿಕೆಯ ಅಲೆ ಎಬ್ಬಿಸಿದ 'ನಲಿ-ಕಲಿ' ಆಧಾರಿತ ಭಾಷಾ ಕಲಿಕೆಯನ್ನು ಸಹ ಅಧ್ಯಯನ ಮಾಡುವ ಅವಕಾಶ ನನಗೆ ಸಿಕ್ಕಿತ್ತು. ಇದನ್ನು ಆಧರಿಸಿ ನಾಲ್ಕು ವರ್ಷಗಳ ಹಿಂದೆ ಭಾಷಾ ಕಲಿಕೆಯಲ್ಲಿ ಹೊಸತನ ತರಬೇಕೆಂಬ ದೃಷ್ಟಿಯಿಂದ 'ರ.ಗ.ಸ.ದ.ಅ' ಅಕ್ಷರಗಳನ್ನು ಕಲಿಕೆಯಲ್ಲಿ ಮೊದಲು ಅಳವಡಿಸಿ ಒಂದನೇ ತರಗತಿಯ ಪಠ್ಯ ಪುಸ್ತಕವನ್ನು ಬದಲಿಸಿದೆವು ಎಂದಿದ್ದಾರೆ. ಶ್ರೀ ಸಾಮಾನ್ಯರ ಜೀವನದ ಕಥನಕ್ಕೆ ಹೆಚ್ಚು ಅವಕಾಶಗಳು ಕಲ್ಪಿಸಲ್ಪಡಬೇಕು. ಹಾಗೆಯೆ ಮಕ್ಕಳ ಅನುಭವಗಳಿಗೂ ಸಹ ಎಂದಿದ್ದಾರೆ. ಮುಖ್ಯವಾಗಿ ಪಠ್ಯಪುಸ್ತಕಗಳು ಮಕ್ಕಳಲ್ಲಿ ಕಲಿಯುವ ಅಪೇಕ್ಷೆಯನ್ನು ಉದ್ಧೀಪನಗೊಳಿಸಬೇಕು. ಮಕ್ಕಳ ಸ್ಥಳೀಯ ಅನುಭವಗಳಿಗೆ ಪ್ರಾಶಸ್ತ್ಯ ಅಗತ್ಯ. ಮಕ್ಕಳಲ್ಲಿ ಆದಷ್ಟು ಮೂರ್ತ ಸ್ವರೂಪದ ಕಲಿಕೆ ಉಂಟು ಮಾಡುವ ಉದ್ದೇಶ ಪ್ರಾಥಮಿಕವಾಗಬೇಕು. ಸಂತಸ, ಕಲಿಕೆ ಎನ್ನುವ ನೆಪದಲ್ಲಿ ಅಸಂಬದ್ಧ ಚಟುವಟಿಕೆಗಳ ಸೇರ್ಪಡೆ ಆಗಬಾರದು. ಪಠ್ಯಪುಸ್ತಕಗಳ ಬಗ್ಗೆ ಸಮಗ್ರ ಹಾಗೂ ಸ್ಪಷ್ಟ ದಿಕ್ಕು, ದಿಸೆಯನ್ನು ಸೂಚಿಸುವ ನೀತಿ ನಿರೂಪಣೆಯ ಕೊರತೆ ಒಂದು ಪ್ರಮುಖ ಕಾರಣವೆಂದು ಹೆಸರಿಸಬಹುದು. ಹೆಚ್ಚು ಸಂಖ್ಯೆಯಲ್ಲಿ ತರಗತಿಯ ಬೋಧನೆ ಮಾಡುತ್ತಿರುವ ಶಿಕ್ಷಕರು ಪಠ್ಯವಸ್ತು ಹಾಗೂ ಪಠ್ಯಮಸ್ತಕ ರಚನೆಯಲ್ಲಿ ಭಾಗವಹಿಸುವಂತಿರಬೇಕು. ಇವರಿಗೆ ತರಬೇತಿ ನೀಡುವ ವ್ಯವಸ್ಥೆಯಾಗಬೇಕು. ಮದ್ಯಹಂತದ ಅಧಿಕಾರಿಗಳಿಗೆ ಪರಿಣಿತರಿಗೆ ತರಬೇತಿಯನ್ನು ನೀಡುವುದು ಅವಶ್ಯವೆಂಬ ಅಭಿಪ್ರಾಯವನ್ನು ಮಂಡಿಸುತ್ತಾರೆ. ಒಟ್ಟಾರೆಯಾಗಿ ಕಾಲಕ್ಕೆ ತಕ್ಕಂತೆ ಪ್ರಾದೇಶಿಕತೆ ಅನುಸಾರ ಬೋಧನೆ, ಪಠ್ಯಕ್ರಮ, ಪಾಠೋಪಕರಣಗಳ ಬಳಕೆ, ಶಿಕ್ಷಕರ ತರಬೇತಿ ಬದಲಾವಣೆ ಕಾಣುತ್ತಾ ಪ್ರಾಥಮಿಕ ಶಿಕ್ಷಣ ಸಾಗಬೇಕು ಎಂದಿದ್ದಾರೆ.

ಲೇಖನಗಳು

ಡಾ. ಆರ್. ಗಣೇಶ್‌ರವರು ಭಾಷಾಭೃಂಗದ ಬೆನ್ನೇರಿ......ಎಂಬ ಪುಸ್ತಕದಲ್ಲಿ 'ಧ್ವನಿಪೂರ್ಣ ಪ್ರಾಥಮಿಕ ಪಠ್ಯ ಕ್ರಮ' ಎಂಬ ಲೇಖನವನ್ನು ಬರೆದಿದ್ದಾರೆ. ಮಕ್ಕಳಿಗೆ ಕಂಠಪಾಠ ಮಾಡಿಸಬೇಕು. ಹಾಗಾದಾಗ ಮಾತ್ರ ಧ್ವನಿಪೂರ್ಣ ಕಲಿಕೆಗೆ ಅವಕಾಶ ಸಿಗುತ್ತದೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಕಂಠಪಾಠ ಪದ್ಧತಿಯನ್ನು ತುಂಬ ತಿರಸ್ಕಾರದಿಂದ ಕಂಡಿರುವುದನ್ನು ವಿವರಿಸಿದ್ದಾರೆ. ತಿಳುವಳಿಕೆ ಮುಖ್ಯವಲ್ಲದೆ ಕುರುಡಾದ ಬಾಯಿಪಾಠ ಮುಖ್ಯವಲ್ಲ. ಇಂದು ಮಾಹಿತಿಯು ಮಹಾಪೂರವಾಗಿ ಹರಿದಿರುವ ಕಾರಣ ಕಂಠಪಾಠದ ಪದ್ಧತಿ ಕಾಲ ಬಾಹ್ಯವಾಗಿದೆ ಎಂದು ಆಪಾದಿಸುತ್ತಾರೆ. ಕಂಠಪಾಠ ಮಾಡಿಸಲೇಬೇಕು ಎಂದು ಹಠವೇನಿಲ್ಲ. ಈ ಹಠವು ವಿವೇಕಯುತವೂ ಅಲ್ಲ ಇದನ್ನೊಂದು ಮೌಲ್ಯವಾಗಿ ಪ್ರಜ್ಞಾ ಪಾಠೋಪಕರಣದ ಸಾಧನವಾಗಿ ಖಂಡಿತ ಬಳಸಬಹುದು. ಆದರೆ ಯಾವುದನ್ನು ಕಂಠಪಾಠ ಮಾಡಿಸುತ್ತೇವೆಂಬುದರ ಮೇಲೆಯೇ ಇದರ ಮಹತ್ವ ನಿಂತಿದೆ ಎನ್ನುತ್ತಾರೆ. ಮುಖ್ಯವಾಗಿ ಈ ಒಳ್ಳೆಯ ಪದ್ಧತಿಯು ನಷ್ಟವಾಗಿರುವುದಕ್ಕೆ ಕಾರಣ ನಮ್ಮ ಪ್ರಾಥಮಿಕ ಶಿಕ್ಷಣ ವಿಧಾನಕ್ಕಿಂತಲೂ ಅದರ ಪಠ್ಯಕ್ರಮವೇ ಆಗಿದೆಯೆಂದರೆ ತಪ್ಪಲ್ಲ. ಇದು ವಿಶೇಷತಃ ಭಾಷಾ ಬೋಧನೆಗೆ ಸಂಬಂಧಿಸಿದ ಪಠ್ಯಕ್ರಮಕ್ಕೆ ಹೆಚ್ಚು ಅನ್ವಯಿಸುತ್ತದೆ. ಏಕೆಂದರೆ ಭಾಷೆಯನ್ನಿಂದು ಒಂದು ಸ್ವಯಂಪೂರ್ಣ ಮೌಲ್ಯವಾಗಿ ಬೋಧಿಸದೆ ಬರಿ ಸಂವಹನಕ್ಕೊಂದು ಸಾಧನವೆಂಬಂತೆ ಅದು ತೀರ ಒರಟಾದ ಸ್ಥೂಲ ರೀತಿಯಲ್ಲಿ ಬೋಧಿಸುವ ಚಾಳಿ ಇಂದಿನ ಪ್ರಾಥಮಿಕ ಕನ್ನಡ ಬೋಧನೆಯ ವ್ಯವಸ್ಥೆ ಬಂದಿದೆ ಎಂದು ಅಪಾದಿಸುತ್ತಾರೆ. ಕಂಠಪಾಠವು ಧ್ವನಿಪೂರ್ಣ ಸಾಹಿತ್ಯವಿರುವ ಪಠ್ಯಕ್ರಮಕ್ಕೆ ಅತ್ಯವಶ್ಯಕ. ಇಂದಿನ ಪಠ್ಯಕ್ರಮವೆಲ್ಲ ಅಸಹ್ಯವಾದ ವಾಚ್ಯವೃತ್ತಿಯಾಗಿದೆಯಲ್ಲ ಇದೇ ನಮ್ಮ ದುರಂತ ಎಂದು ವಿಶ್ಲೇಷಿಸುತ್ತಾರೆ.

ಡಾ. ಕೆ.ವಿ. ನಾರಾಯಣರವರು 'ಕನ್ನಡ ಜಗತ್ತು ಅರ್ಧಶತಮಾನ'ದಲ್ಲಿ 'ಶಿಕ್ಷಣದಲ್ಲಿ ಕನ್ನಡ' ಎಂಬ ಲೇಖನವನ್ನು ಬರೆದಿದ್ದಾರೆ. ಈ ಲೇಖನವು ಕನ್ನಡ ಪಠ್ಯ ಮತ್ತು ಮಾಧ್ಯಮದ ಹಿನ್ನೆಲೆಯಲ್ಲಿ ಕಳೆದ ೫೦ ವರ್ಷಗಳಲ್ಲಿ ಬಂದ ಕಾನೂನಿನ ಚೌಕಟ್ಟನ್ನು ಸಂಕ್ಷಿಪ್ತವಾಗಿ ಚರ್ಚಿಸಿದ್ದಾರೆ. ಶಾಲೆಯಲ್ಲಿ ಭಾಷೆಯ ಕಲಿಕೆ ಹಾಗೂ ಪಠ್ಯಕ್ರಮದ ವಿನ್ಯಾಸವನ್ನು ಚರ್ಚೆ ಮಾಡಿದ್ದಾರೆ. ಅದರಲ್ಲಿನ ಗುಣದೋಷಗಳನ್ನು ಸರಳ ಉದಾಹರಣೆಗಳ ಮೂಲಕ ವಿಶ್ಲೇಷಿಸಿದ್ದಾರೆ. ಶಾಲೆಯಲ್ಲಿನ ಕನ್ನಡ ಸ್ಥಿತಿಗತಿಯ ಬಗ್ಗೆ ಚರ್ಚೆ ಮಾಡಿರುವುದನ್ನು ಸಹ ಕಾಣುತ್ತೇವೆ. ಇದರ ಹಿನ್ನೆಲೆಯಲ್ಲಿಯೇ ಶೈಕ್ಷಣಿಕ ಭಾಷಿಕ ಅಧ್ಯಯನವನ್ನು ಮಾಡಲು ಈ ಸಂದರ್ಭದಲ್ಲಿ ಪ್ರಯತ್ನಿಸಲಾಗಿದೆ.

'ಭಾರತದಲ್ಲಿ ಶಿಕ್ಷಣ ಸವಾಲು ಸಾಧ್ಯತೆ' ರಾಷ್ಟ್ರವ್ಯಾಪ್ತಿ ಅಡಿಯಲ್ಲಿ ಪ್ರಕಟಗೊಂಡಿದೆ. ಕನ್ನಡಕ್ಕೆ ಆರ್.ಡಿ.ಹೆಗಡೆ ಅನುವಾದ ಮಾಡಿದ್ದಾರೆ. ಇದರಲ್ಲಿ ಪ್ರಚಲಿತ ಶಿಕ್ಷಣ ವ್ಯವಸ್ಥೆಯ

ಸವಾಲುಗಳನ್ನು ಮತ್ತು ಕೈಗೊಂಡಿರುವ ಸಾಧ್ಯತೆಗಳನ್ನು ಚರ್ಚೆ ಮಾಡಲಾಗಿದೆ. ೧೯೮೬ ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಮೊದಲು ವಿವರಿಸುತ್ತದೆ. ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಗೆ ದೇಶದ ಎಲ್ಲಾ ಭಾಗಗಳಲ್ಲಿ ಒಪ್ಪಿಗೆ ದೊರೆತಿದೆ. ಇದು ಒಂದು ರಾಷ್ಟ್ರೀಯ ಪಠ್ಯಕ್ರಮದ ಚೌಕಟ್ಟಿನಲ್ಲಿ ಹೇಗೆ ನಡೆದು ಬಂದಿದೆ ಎಂಬುದನ್ನು ವಿವರಿಸಿದೆ.

'ಆಧುನಿಕ ಭಾರತೀಯ ಶಿಕ್ಷಣದ ತಿರುವುಗಳು ಮತ್ತು ಸಮಸ್ಯೆಗಳು': ಎಂಬ ಪುಸ್ತಕದಲ್ಲಿ ಎಂ.ಎಸ್. ರಾಮಚಂದ್ರ ಜೋಯಿಸ್‌ರವರು 'ಭಾರತ ಶಿಕ್ಷಣ ಆಯೋಗ' (ಕೊಠಾರಿ ಆಯೋಗ ೧೯೬೪-೬೬) 'ಭಾಷಾ ಸಮಸ್ಯೆ', 'ನೈತಿಕಶಿಕ್ಷಣ', 'ಕನ್ಯಾವಿದ್ಯಾಭ್ಯಾಸ', ಶಿಕ್ಷಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನ ಎಂಬ ಲೇಖನಗಳನ್ನು ಬರೆದಿದ್ದಾರೆ. ಪ್ರಾಥಮಿಕ ಶಿಕ್ಷಣಕ್ಕೆ ಕೊಠಾರಿ ಆಯೋಗದ ಶಿಫಾರಸ್ಸುಗಳನ್ನು ವಿವರಿಸಿದ್ದಾರೆ. ಆರ್ಥಿಕ ಸ್ಥಾನಮಾನ ಸಂಸ್ಕೃತಿಯಲ್ಲಿ ಹೇಗೆ ಬೆಳೆಯುತ್ತ ಬಂದಿದೆ. ಇವುಗಳು ಇಂದು ಎದುರಿಸುತ್ತಿರುವ ಸಮಸ್ಯೆಗಳಿಗೆ ಕಾರಣವೇನು? ಮಾನವನ ಸಂಕುಚಿತ ಭಾವನೆ ಹಾಗೂ ಸಮಾಜಮುಖಿ ಚಿಂತನೆಗಳು ಶಿಕ್ಷಣದ ವ್ಯವಸ್ಥೆಯಲ್ಲಿನ ಸಮಸ್ಯೆಗಳನ್ನು ಬಿಡಿ ಬಿಡಿಯಾಗಿ ಬಿತ್ತರಿಸಲು ಈ ಮೇಲಿನ ಲೇಖನಗಳಲ್ಲಿ ಪ್ರಯತ್ನ ನಡೆಸಿದ್ದಾರೆ.

'ಒರೆಗಲ್ಲು' ಪುಸ್ತಕವನ್ನು ರೇಣುಕ ಪ್ರಸನ್ನ ಸಂಪಾದನೆ ಮಾಡಿದ್ದಾರೆ. ೧೯೭೫ರಲ್ಲಿ ಪ್ರಕಟಗೊಂಡ ಈ ಪುಸ್ತಕ ಪದವಿ ಪಠ್ಯಗಳ ಚರ್ಚೆಯ ವಿಶ್ಲೇಷಣೆಯನ್ನು ಮಾಡಿದೆ. ಕನ್ನಡ ಪಠ್ಯ ನಾಟಕಗಳು ಕನ್ನಡ ಅವಿಸ್ತರ ಪಠ್ಯಗಳು, ಪಠ್ಯಪುಸ್ತಕಗಳ ಬಗ್ಗೆ ವಿದ್ಯಾರ್ಥಿ ಪ್ರತಿಕ್ರಿಯೆ, ಕನ್ನಡ ಪಠ್ಯ ಪುಸ್ತಕ, ಪಠ್ಯಕ್ರಮ ಸಮಿತಿಗಳು ಮತ್ತು ವಿಕೇಂದ್ರೀಕರಣ, ಕನ್ನಡ ಪಠ್ಯ ಪುಸ್ತಕಗಳು ಮತ್ತು ವೈಚಾರಿಕತೆ, ಕನ್ನಡ ಐಚ್ಛಿಕ ಪಠ್ಯಕ್ರಮ, ವ್ಯವಹಾರಿಕ ಕನ್ನಡ ಮತ್ತು ಕನ್ನಡ ಪಠ್ಯಕ್ರಮ, ಕನ್ನಡ ಪ್ರಶ್ನೆ ಪತ್ರಿಕೆಗಳು, ಕನ್ನಡ ಪಠ್ಯಕ್ರಮ ಮತ್ತು ನವ್ಯ ಸಾಹಿತ್ಯಗಳ ಬಗ್ಗೆ ವಿವರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಪಠ್ಯಪುಸ್ತಕವನ್ನು ನಿರ್ಮಾಣ ಮಾಡುವವರು ಪಠ್ಯಪುಸ್ತಕವನ್ನು ವಿಶ್ಲೇಷಿಸಿ ಇದನ್ನು ಓದುವುದು ವಿದ್ಯಾರ್ಥಿ ಎಂಬ ಅಂಶವನ್ನು ಗಮನದಲ್ಲಿಟ್ಟುಕೊಂಡು ಆಯ್ಕೆ ಮಾಡುವುದು ಒಳ್ಳೆಯದು ಎಂದು ಹೇಳುತ್ತಾರೆ. ಕನ್ನಡ ಬೋಧನೆಯಲ್ಲಿ ಸಾಮಾನ್ಯವಾಗಿ ನಾವು ಎರಡು ಮುಖ್ಯ ಅಪೇಕ್ಷೆಗಳನ್ನು ಹೊಂದಿದ್ದೇವೆ. ಪ್ರಾಥಮಿಕವಾಗಿ ಕನ್ನಡಭಾಷೆಯ ಅಭ್ಯಾಸ, ಇನ್ನೊಂದು ಕನ್ನಡ ಭಾಷೆಯಲ್ಲಿ ಸಂಭವಿಸಿದ ಸಾಹಿತ್ಯದ ಅಭ್ಯಾಸ ಇವೆರಡನ್ನು ಒಳಗೊಂಡ ಕನ್ನಡ ಬೋಧನೆಯನ್ನು ಪ್ರಾಥಮಿಕ ತರಗತಿಯಿಂದ ಸ್ನಾತಕೋತ್ತರ ತರಗತಿಯವರೆಗೆ ಯಾವ-ಯಾವ ಹಂತಗಳಲ್ಲಿ ಯಾವ ರೂಪ ಮತ್ತು ಮಾರ್ಗದರ್ಶನದಲ್ಲಿ ಬೋಧಿಸ ಬೇಕೆಂದಾಗಲಿ, ಅಭ್ಯಾಸ ಮಾಡ ಬೇಕೆಂದಾಗಲಿ ನಾವು ಖಚಿತವಾದ ಚೌಕಟ್ಟನ್ನು ಇಟ್ಟುಕೊಂಡಿಲ್ಲ. ರೂಢಿಯಿಂದ ಬಂದ ಅಂದಾಜಿನ ಮೇಲೆ 'ಕನ್ನಡ ಬೋಧನೆ' ನಡೆಯುತ್ತಲೇ ಬಂದಿದೆ. ವೈಚಾರಿಕತೆಯ ಬಗ್ಗೆ ಯೋಚಿಸ ಬೇಕಿದೆ ಎಂದಿದ್ದಾರೆ. ಶೈಕ್ಷಣಿಕ ಮಟ್ಟ ದಿನೇ ದಿನೇ ಬಿದ್ದು ಹೋಗುತ್ತಿರುತ್ತದೆ. ವಾಸ್ತವಿಕತೆಯ

ನೆಲೆ ಗುರಿ ಗಮನಗಳಿಲ್ಲದ ಶಿಕ್ಷಣ ವಿಧಾನ ಎಲ್ಲಾ ಬಗೆಯ ದೋಷಗಳನ್ನುಳ್ಳ ಅಯೋಗ್ಯ ಪಠ್ಯಗಳು, ಅವುಗಳನ್ನು ನಿಗದಿ ಮಾಡುವ ಸಮಿತಿಗಳು, ಎಷ್ಟರ ಮಟ್ಟಿಗೆ ಕಾರಣವೋ ಅಷ್ಟರ ಮಟ್ಟಿಗೆ ಕೊರಕಲು ಬಿದ್ದ ಜಾಡಿನಲ್ಲೇ ನಡೆಯುತ್ತಾ ಬಂದಿದೆ. ಕಲ್ಪನೆ ಕನಸುಗಳನ್ನು ಕಳೆದುಕೊಂಡು ಯಾಂತ್ರಿಕವೂ, ಜಡವೂ ಆದ ನಮ್ಮ ಪರೀಕ್ಷಾ ವಿಧಾನವೂ ಕಾರಣ ಎಂದು ಪರೀಕ್ಷೆಯಲ್ಲಿನ ದೋಷಗಳನ್ನು ಚರ್ಚೆ ಮಾಡಿದ್ದಾರೆ. ಶಿಕ್ಷಣ ಮತ್ತು ಸಂವಿಧಾನ ಕೆಲವು ಮೂಲಭೂತ ಪ್ರಶ್ನೆಗಳು ಪ್ರಚಲಿತ ಶಿಕ್ಷಣ ಒಂದು ಚಿಂತನೆ, ಮತ್ತಷ್ಟು ಶೈಕ್ಷಣಿಕ ಚಿಂತನೆಗಳು ಎಂಬ ಪುಸ್ತಕಗಳಲ್ಲಿ ಪಿ.ಯು.ಸಿ. ಪದವಿ ಶಿಕ್ಷಣದ ಬಗ್ಗೆ ವಿಶ್ಲೇಷಿಸಿದ್ದಾರೆ.

**'ಕನ್ನಡ ಭಾಷಾ ಪಠ್ಯ ಪುಸ್ತಕಗಳು'**

ಈ ಪುಸ್ತಕವನ್ನು ದಕ್ಷಿಣ ಕನ್ನಡ ಜಿಲ್ಲಾ ಬಂಡಾಯ ಸಾಹಿತ್ಯ ಸಂಘಟನೆ ಮಂಗಳೂರು ಪ್ರಕಟಣೆ ಮಾಡಿದೆ. ಇದರಲ್ಲಿ ಆರ್. ವಿ. ಭಂಡಾರಿ ಮತ್ತು ಅರೆ ಅಂಗಡಿ, 'ಪ್ರಾಥಮಿಕ ಶಾಲೆಯ ಕನ್ನಡಭಾಷಾ ಪಠ್ಯಗಳು' ಎಂಬ ಲೇಖನವನ್ನು ಬರೆದಿದ್ದಾರೆ. ಇದರಲ್ಲಿ ಭಾಷಾ ಪಠ್ಯ ಪುಸ್ತಕಗಳು ಒಂದು ರಾಷ್ಟ್ರದ ಅಧಿಕೃತ ಆಶೋತ್ತರದ ಬೀಜ ಗರ್ಭವುಳ್ಳ ಸಾಧನಗಳಾಗಿವೆ. ಜೊತೆಗೆ ನಮ್ಮ ದೇಶ ಪ್ರಸ್ತುತ ಸಂದರ್ಭದಲ್ಲಿ ಯಾವ ಆಶೋತ್ತರಗಳನ್ನು ಹೊಂದಿದೆ. ನಮ್ಮ ದೇಶ ಸ್ವತಂತ್ರವಾಗಿದೆ. ಪ್ರಜಾ ಪ್ರಭುತ್ವವಾದ ದೇಶ, ಅನೇಕ ಧರ್ಮ, ಪಂಥ ಹಾಗೂ ವರ್ಗ ವೈಷಮ್ಯವುಳ್ಳ ದೇಶ. ಸ್ವಾತಂತ್ರ, ಸಮಾನತೆ, ಮತ್ತು ಸೋದರತೆಯುಳ್ಳ ಸಾಮಾಜಿಕ ಸ್ಥಿತಿಯನ್ನು ಹೊಂದುವ, ವೈಜ್ಞಾನಿಕವಾದ ದಾರಿಯಲ್ಲಿ ಬದುಕಿದ ಸಮೃದ್ಧಿಯನ್ನು ಕಂಡುಕೊಳ್ಳಲು ಹೊರಟ ದೇಶ. ಇವೆಲ್ಲಾ ನಮ್ಮ ರಾಜ್ಯ ಘಟನೆಯ ನಿರ್ದೇಶಕ ತತ್ವಗಳು ಹಾಗಿರುವಾಗ ನಮ್ಮ ಪಠ್ಯ ಪುಸ್ತಕಗಳು ಈ ಎಲ್ಲದರ ಮೂಲ ಮಾತ್ರಿಕೆಯನ್ನು ಹೊಂದಿರಬೇಕೆಂದು ನಾವು ಆಶಿಸಿದರೆ ತಪ್ಪೇನೂ ಇಲ್ಲ ಎಂದಿದ್ದಾರೆ. ಈ ಹಿನ್ನೆಲೆಯಲ್ಲಿ ನಮ್ಮ ಕನ್ನಡ ಭಾರತಿ ೧ರಿಂದ ೭ನೇ ತರಗತಿ  ಪುಸ್ತಕಗಳನ್ನು ವಿವೇಚನೆ ಮಾಡಿದ್ದಾರೆ. ಉದಾ: ೬ನೇ ಪಾಠ ಹೀಗಿದೆ. 'ಈತ ಅಗಸ' 'ಕಮಲಳ ಅಗಸ' 'ಬಡವ'. ಹೀಗೆಯೆ ಕನ್ನಡ ಭಾರತಿ ೨ರ ೮ನೇ ಪಾಠದಲ್ಲಿ 'ಅನ್ನದಾತ' ಎಂಬ ಕವಿತೆಯಿದೆ. ಗಟ್ಟಿದೇಹ, ದೊಡ್ಡ ಮನಸ್ಸು, ದೇವನಿಂದ ಪಡೆದನು. ಹಿಗ್ಗು ಕುಗ್ಗು, ಏನೇ ಇರಲಿ ಹೊಂದಿಕೊಂಡು ನಡೆವನು. ಅದರಂತೆ ಕನ್ನಡ ಭಾರತಿ ೭ರಲ್ಲಿ 'ಏಕಲವ್ಯ' ನಾಟಕ ಇದೆ. ಏಕಲವ್ಯ ಗುರುವಿಗೆ ಕಾಣಿಕೆಯಾಗಿ ತನಗೆ ಎಂದೂ ವಿದ್ಯ ಕಲಿಸದ ಗುರುಗಳಿಗೆ ಬೆರಳನ್ನು ಕತ್ತರಿಸಿ ಕೊಟ್ಟ ನಂತರ ಅರ್ಜುನನೇ ಪಶ್ಚಾತಾಪದಿಂದ ಮಾತನಾಡಿದ ಮೇಲೆ ಏಕಲವ್ಯ ಹೇಳುತ್ತಾನೆ. ಹೀಗಾಗ ಬೇಕೆಂಬುದು ದೈವೇಚ್ಛೆ. ರಾಜಕುಮಾರ ಇದಕ್ಕೆ ದುಃಖಿಸಿ ಫಲವಿಲ್ಲ. ದೈವಿ ಸಂಕಲ್ಪವವನ್ನು ಮೀರುವವರು ಯಾರು? ನೋಡಿ ಹೇಗಿದೆ ದೈವಿಚ್ಛೆ? ಈ ದೈವಿಚ್ಛೆಯೆ ಬಡವರನ್ನು, ಶೋಷಿತರನ್ನು ಬಂಡೇಳದಂತೆ ನಿಯಂತ್ರಿಸಲಾಗಿದೆ. ಈ ದೇಶದಲ್ಲಿ ಯಾರು ಗೆಯ್ಮ ಮಾಡುತ್ತಾರೋ ಅವರು ಬಡವರಾಗೆ ಇರಬೇಕಾದುದು ದೈವ ನಿಯಮ. ಅದಕ್ಕೆ

ಹೊಂದಿಕೊಂಡು ನಡೆಯುವುದೆ ಅವರ ಗತಿ. ಗೆಯ್ಮೆ ಅಂದರೆ ದೈಹಿಕ ಶ್ರಮ, ಸಂಪತ್ತು ಮತ್ತು ಗೌರವ. ಒಂದನ್ನೊಂದು ಹೆಗಲೆಣೆಯಾಗಿ ಸಾಗುವುದು ಯಾವಾಗ? ಎಂದು ವಿಶ್ಲೇಷಿಸುತ್ತಾರೆ. ಏಕೆಂದರೆ ೭ನೇ ವರ್ಗದ ರನ್ನ ಪಾಠದಲ್ಲಿ ಕಲಿಸುವುದು ವಿದ್ಯೆ ಗೌರವವನ್ನು ತಂದು ಕೊಡುತ್ತದಲ್ಲವೆ? ಆದ್ದರಿಂದಲೇ ರನ್ನನಿಗೆ ಒಳ್ಳೆಯ ಮಲಾರ ಹೊತ್ತು ಮಾರುವುದೆಂದರೆ ಸೇರದ್ದು ಎಂದು ಹೀಗೆ ಪಠ್ಯಗಳಲ್ಲಿ ಉದಾಹರಣೆಗಳನ್ನು ಕೊಟ್ಟು ಚರ್ಚೆ ನಡೆಸಿದ್ದಾರೆ.

ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಮಂಡಳಿ ರಾಷ್ಟ್ರೀಯ ಪಠ್ಯಕ್ರಮ ನೆಲೆಗಟ್ಟು ೨೦೦೫ ಪಠ್ಯಕ್ರಮ ವ್ಯವಸ್ಥೆಯ ಬಗ್ಗೆ ಪ್ರಕಟಿಸಿದೆ. ಕನ್ನಡಕ್ಕೆ ಎಸ್.ಎಸ್. ಯದುರಾಜನ್ ಅನುವಾದ ಮಾಡಿದ್ದಾರೆ. ಶಿಕ್ಷಣದಲ್ಲಿ ವಿಷಯಾನುಸಾರ ಪಠ್ಯಕ್ರಮ ರಚನೆಯ ಉದ್ದೇಶ, ಶಿಕ್ಷಕರ ಪಾತ್ರ ಪಾಠೋಪಕರಣಗಳ ಬಳಕೆ, ವಿಧಾನ, ಶಾಲೆ ಮತ್ತು ತರಗತಿಯ ವಾತಾವರಣ, ನಿರ್ಧಾರಣೆ ಮತ್ತು ಮೌಲ್ಯಮಾಪನ ಅಧ್ಯಾಪಕರ ಸ್ವಾಯತ್ತತೆ ಮತ್ತು ಸ್ವಾತಂತ್ರ್ಯ, ಪಠ್ಯಪುಸ್ತಕಗಳ ಮಹತ್ವ ಹೀಗೆ ಹಲವಾರು ಶಿಕ್ಷಣದ ವಿಚಾರಗಳ ನೆಲೆಗಟ್ಟನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಪ್ರಾಥಮಿಕ ಶಿಕ್ಷಣದಲ್ಲಿ ಉಚ್ಚಾರಣೆ, ಅಕ್ಷರ ಜ್ಞಾನ, ಭಾಷೆಯನ್ನು ಬಳಸುವುದು ಅತಿಮುಖ್ಯ. ಮಾತೃ ಭಾಷೆಯನ್ನು ಕಲಿಯುವವರಿಗೆ ಸಾಧ್ಯವಾದಷ್ಟು ಹೆಚ್ಚು ಅವಕಾಶಗಳನ್ನು ಒದಗಿಸಿ ಪ್ರೋತ್ಸಾಹಿಸುವ ಉದ್ದೇಶವನ್ನು ಹೊಂದಿದೆ. ಭಾಷಾ ಶಿಕ್ಷಣವು ಭಾಷಾ ತರಗತಿಗೆ ಮಾತ್ರ ಸೀಮಿತವಾಗಿಲ್ಲ. ನಿಜ ಹೇಳಬೇಕೆಂದರೆ ವಿಜ್ಞಾನ, ಸಮಾಜವಿಜ್ಞಾನ ಅಥವಾ ಗಣಿತ ತರಗತಿಗಳೂ ಸಹ ಭಾಷಾ ತರಗತಿಗಳೇ ಎನ್ನುತ್ತಾರೆ. ಕಲಿಕೆ ಎಂಬುದು ಮಕ್ಕಳ ಮೇಲೆ ಒಂದು ಹೊರೆಯಾಗಿರಬಾರದು. ಒತ್ತಡವನ್ನುಂಟು ಮಾಡಬಾರದು. ಶೈಕ್ಷಣಿಕ ಉದ್ದೇಶಗಳು ಮತ್ತು ಗುಣಮಟ್ಟ ಇವುಗಳ ಕುರಿತು ಗಾಢವಾದ ತಪ್ಪು ಅಭಿಪ್ರಾಯ ಉಂಟಾಗಿದೆ ಎಂದು ಹೇಳಲಾಗಿದೆ. ಈ ತಪ್ಪು ಕಲ್ಪನೆಯನ್ನು ಸರಿಪಡಿಸಲು ಪಠ್ಯಕ್ರಮದ ವಿಕಾಸಕ್ಕೆ ರಾಷ್ಟ್ರೀಯ ಶಿಕ್ಷಣ ಪಠ್ಯಕ್ರಮದ ನೆಲೆಗಟ್ಟು, ಮಾರ್ಗದರ್ಶನ ತತ್ವಗಳನ್ನು, ಪ್ರಸ್ತುತ ಪಡಿಸಿದೆ. ಅವುಗಳು ಇಂತಿವೆ. ಒಂದು ಜ್ಞಾನಕ್ಕೂ ಶಾಲೆಯ ಹೊರ ವಾತಾವರಣಕ್ಕೂ ಸಂಬಂಧ ಕಲ್ಪಿಸುವುದು. ಎರಡು ಕಂಠಪಾಠದ ವಿಧಾನ ಕೈಬಿಟ್ಟು ಕಲಿಕೆಯ ವಿಧಾನ ಬದಲಾಗುವಂತೆ ಮಾಡುವುದು. ಮೂರು ಪಠ್ಯಕ್ರಮವನ್ನು ಪಠ್ಯಪುಸ್ತಕಗಳನ್ನು ಮೀರುವಂತೆ ಮಾಡಿ ಅವನ್ನು ಸಮೃದ್ಧಗೊಳಿಸುವುದು. ನಾಲ್ಕನೆಯದಾಗಿ ಪರೀಕ್ಷಾ ಪದ್ಧತಿಯನ್ನು ಸಂದರ್ಭಕ್ಕೆ ಹೊಂದುವಂತೆ ಮಾಡಿ ಅದನ್ನು ತರಗತಿಯ ಕಲಿಕೆಯಲ್ಲೇ ಅಳವಡಿಸುವುದು ಎಂಬ ತಾತ್ವಿಕ ಹಿನ್ನೆಲೆಯಲ್ಲಿ ಪಠ್ಯಕ್ರಮ ರಚನೆಯಾಗಬೇಕು ಎಂದು ವಿವರಿಸಿದೆ.

ಸರ್ವಶಿಕ್ಷಣ ಅಭಿಯಾನ ಶಿರಾ ಬ್ಲಾಕಂ ಸ್ವಸ್ಥ್‌ಪ್ಲಸ್ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ ಹಾಕಿಕೊಂಡು ಸುಧಾರಣೆಗೆ ಯೂನಿಸೆಪ್ ಮುಂದಾಗಿದೆ. 'ಗುಣಾತ್ಮಕ ಸಂಚಿತ ಯೋಜನೆಯ ಉಸ್ತುವಾರಿ ಮಾರ್ಗಸೂಚಿ' ಎಂಬ ಅಂಶವನ್ನು, ದತ್ತಾಂಶ ಸಂಗ್ರಹಣೆ ಮಾಡಿ ವಿಶ್ಲೇಷಿಸುವ

ಪ್ರಯತ್ನ ಮಾಡಲಾಗಿದೆ. ಪ್ರಶ್ನಾವಳಿಯ ಮೂಲಕ ಶಿಕ್ಷಕರ ಗುಣಾತ್ಮಕ ಅಂಶಗಳನ್ನು ದತ್ತಾಂಶಗಳ ಸಂಗ್ರಹಣೆ ಮಾಡಿದ್ದಾರೆ. ಬೋಧನೆ, ಪಠ್ಯಕ್ರಮ, ಶಿಕ್ಷಕರು ನಿರ್ವಹಿಸಬೇಕಾದ, ಗಮನಿಸಬೇಕಾದ ಅಂಶಗಳನ್ನು ಚರ್ಚೆ ಮಾಡಿದೆ.

ಕರ್ನಾಟಕ ಸರ್ಕಾರ 'ಸೌರಭ' ಎಂಬ ತ್ರೈಮಾಸಿಕ ಪದ್ಧತಿ ತರಬೇತಿ ಸಂಚಿಕೆಯನ್ನು ಪ್ರಾಥಮಿಕ ಹಾಗೂ ಪ್ರೌಢ ಶಾಲಾ ಶಿಕ್ಷಕರಿಗಾಗಿ ರಾಜ್ಯಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯ ಅಡಿಯಲ್ಲಿ ಪ್ರಕಟಿಸಿದೆ. ಈ ಪುಸ್ತಕದಲ್ಲಿ ವಿದ್ಯಾರ್ಥಿಗಳಿಗೆ ಶಿಕ್ಷಕರು ಕೈಗೊಳ್ಳಬೇಕಾದ ಕಲಿಕೆಯ ಸನ್ನಿವೇಶವನ್ನು ಬಳಸಿಕೊಳ್ಳುವ ಪಾಠೋಪಕರಣಗಳು, ಪಾಠ ಟಿಪ್ಪಣಿ, ಪರೀಕ್ಷಾ ವಿಧಾನವನ್ನು ವಿವರಿಸಿದೆ. ಮೌಲ್ಯಮಾಪನ ಸಂದರ್ಭದಲ್ಲಿ ಶಿಕ್ಷಕರು ಕಾರ್ಯವನ್ನು ನಿಭಾಯಿಸಿಕೊಂಡು ಬೋಧನೆ ಮಾಡಬೇಕು ಎಂಬ ಮಾಹಿತಿಯ ವಿವರಣೆಯನ್ನು ಸಂಶೋಧನೆ ಮಾಹಿತಿ ಅನ್ವಯ ತಿಳಿಸಲಾಗಿದೆ. ಶಿಕ್ಷಕರಾದವರು ಕಲಿಕೆಯ ಘಟಕಕ್ಕೆ ಪೂರ್ವಭಾವಿ ಸಿದ್ಧತೆ ಮಾಡಿಕೊಳ್ಳುವುದು ಅಗತ್ಯ ಎಂಬುದನ್ನು ಉದಾಹರಣೆಗಳ ಮೂಲಕ ಕೊಡಲಾಗಿದೆ. ಭಾಷಾ ಶಿಕ್ಷಕರು ಪ್ರಾಸಗಳನ್ನು ಸಂಗ್ರಹ ಮಾಡಿ ಹೇಳುವ ಪರಿ ಪಾಠ ಬೆಳಸಿಕೊಳ್ಳಬೇಕು. ಆಲಿಸುವುದು, ಮಾತನಾಡುವುದು, ಬರೆಯುವ ಮತ್ತು ಓದುವ ಕೌಶಲವನ್ನು ವೃದ್ಧಿಸುವಂತಹ ಕಲಿಕೆ ಭಾಷಾ ಶಿಕ್ಷಣದಿಂದ ಮಾತ್ರ ಸಾಧ್ಯ ಎಂದಿದ್ದಾರೆ. ಆದ್ದರಿಂದ ಭಾಷಾ ಶಿಕ್ಷಕರು ಪ್ರಾಥಮಿಕ ಶಿಕ್ಷಣ ಹಂತದಲ್ಲಿ ಬಹಳ ಮುಖ್ಯ ಎಂಬುದನ್ನು ಸಾದರಪಡಿಸುವ ಪ್ರಯತ್ನ ಮಾಡಿದ್ದಾರೆ.

ಪ್ರಾಥಮಿಕ ಶಿಕ್ಷಣದಲ್ಲಿ ಬಹುವರ್ಗ ಬೋಧನೆ ಎಂಬ ಪುಸ್ತಕವನ್ನು ಟಿ.ಎಂ.ಕುಮಾರ, ಎಸ್.ಗಣಪತಿ ಬರೆದಿದ್ದಾರೆ. ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಲ್ಲಿ ಬಹುವರ್ಗ ಬೋಧನೆ ನಡೆಯುತ್ತಿದೆ. ಶಿಕ್ಷಕರು ಒಬ್ಬರೇ ಮೂರು ನಾಲ್ಕು ತರಗತಿಗಳಿಗೆ ಬೋಧಿಸುವ ವ್ಯವಸ್ಥೆ ಭಾರತದ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಲ್ಲಿದೆ. ಈ ಪದ್ಧತಿ ಚೀನಾದಲ್ಲಿಯೂ ಕೂಡ ಇದೆ ಎಂದಿದ್ದಾರೆ. ಭಾಷಾ ಶಿಕ್ಷಕರು ಬಹುವರ್ಗ ಬೋಧನೆ ಮಾಡುವಾಗ ತರಗತಿಯನುಸಾರ ಬೋಧಿಸಬೇಕು. ಉದಾಹರಣೆಗೆ ಭಾಷಾ ಶಿಕ್ಷಕರು ಮಾತನಾಡುವ ಕೌಶಲ ವೃದ್ಧಿಪಡಿಸಲು ಒಂದನೆ ತರಗತಿಯ ಮಕ್ಕಳಿಗೆ ಸರಳ ವಾಕ್ಯಗಳನ್ನು ಸರಿಯಾಗಿ ಪುನರುಚ್ಚಿಸುವುದು. ೨ನೇ ತರಗತಿಗೆ ಭಾಷೆಯಲ್ಲಿನ ಸ್ವರಗಳನ್ನು ಉಚ್ಚರಿಸುವುದು, ಮೂರನೇ ತರಗತಿಗೆ ಸರಿಯಾದ ಉಚ್ಚಾರಣೆಯೊಡನೆ ಮಾತನಾಡುವುದು ಆಗಬೇಕು ಎಂದಿದ್ದಾರೆ.

ನಾಲ್ಕನೇ ತರಗತಿಗೆ ಮಾತನಾಡುವುದು ಈ ತರಹದ ಪರಿ ಪಾಠದ ವ್ಯವಸ್ಥೆ ಬಹುವರ್ಗ ಬೋಧಿಸುವ ಶಿಕ್ಷಕರಿಗೆ ಇರಬೇಕು. ಅಂದರೆ ವಿದ್ಯಾರ್ಥಿಗಳ ಮಾನಸಿಕ ಸಾಮರ್ಥ್ಯನುಸಾರ ಭಾಷಾ ಕಲಿಕೆಯನ್ನು ಬೋಧಿಸಿ ಕಲಿಸುವ ಪ್ರಯತ್ನ ನಡೆಯಬೇಕು. ಈ ವಿಧಾನವೇ ಆಲಿಸುವ, ಓದುವ, ಬರೆಯುವ ಕೌಶಲಕ್ಕು ಅನ್ವಯವಾದಾಗ ಮಾತ್ರ

ಕಲಿಕೆ ಸ್ಪಷ್ಟವಾಗಬಲ್ಲದು ಎಂದಿದ್ದಾರೆ. ಬಹುವರ್ಗ ಬೋಧನೆಯಲ್ಲಿ ತರಗತಿಗಳಿಗೆಲ್ಲ ಒಬ್ಬ ಶಿಕ್ಷಕ ಬೋಧಿಸುವುದರಿಂದ ಮಕ್ಕಳ ಸಾಮರ್ಥ್ಯ ಅರಿತು ಬೋಧಿಸುವುದು ಅವಶ್ಯ ಎಂದಿದ್ದಾರೆ.

ಡಿ.ಎಸ್.ಇ.ಆರ್.ಟಿ. ಮಾರ್ಗದರ್ಶನದಲ್ಲಿ ಕರ್ನಾಟಕ ಸರ್ಕಾರ ೧ ರಿಂದ ೧೦ ನೇ ತರಗತಿಯವರೆಗಿನ ಹೊಸ ಪಠ್ಯಗಳ ಮುಖ್ಯಾಂಶಗಳನ್ನು ೨೦೦೧-೦೨ ರಲ್ಲಿರುವಂತೆ ಕೊಟ್ಟಿದೆ. ಈ ಪುಸ್ತಕವು ಪ್ರಾಥಮಿಕ ಪ್ರೌಢ ಪಠ್ಯಗಳಲ್ಲಿ ರಚನೆಯಾದ ಎಲ್ಲಾ ಪಠ್ಯಗಳ ಉದ್ದೇಶವನ್ನು ತಿಳಿಸಿದೆ. ಇದರಿಂದ ಕಲಿಯುವ ಕಲಿಕೆ ಏನೆಂಬುದುನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ. ಭಾಷಾ ದೃಷ್ಟಿಯಿಂದ ತಮ್ಮ ಸುತ್ತಮುತ್ತಲಿನ ಪರಿಸರದ ವಸ್ತುಗಳ ಮೂಲಕ ಪದ್ಯ, ಗದ್ಯ ಭಾಷಾ ಚಟುವಟಿಕೆಯ ಹಿನ್ನೆಲೆಯಲ್ಲಿ ವ್ಯವಹಾರಿಕ ಕನ್ನಡ, ಬರಹದ ಕನ್ನಡವನ್ನು ಕಲಿಸುವ ಯೋಜನೆ ಹಾಕಿಕೊಂಡಿರುವುದನ್ನು ತಿಳಿಸಿದ್ದಾರೆ. ಜೊತೆಯಾಗಿ ಪ್ರಾಥಮಿಕ ಶಿಕ್ಷಣದ ಸುಧಾರಣೆಗಾಗಿ ಈ ಇಲಾಖೆ ಚೈತನ್ಯ-ತರಣಿ, ಚೈತನ್ಯ (ಶಿಕ್ಷಕರ ಸಾಹಿತ್ಯ ಕನ್ನಡ)ಚೈತನ್ಯ-೨ (ಶಿಕ್ಷಕರ ಸಾಹಿತ್ಯ ಕನ್ನಡ) ಯೋಜನೆಗಳನ್ನು ಹಾಕಿಕೊಂಡು ಪ್ರಾಥಮಿಕ ಶಿಕ್ಷಣದ ಸುಧಾರಣೆಗೆ ಮುಂದಾಗಿರುವುದನ್ನು ಕಾಣಬಹುದಾಗಿದೆ. ಅಲ್ಲದೆ ಪ್ರಾಥಮಿಕ ಶಿಕ್ಷಣದ ಸಾರ್ವತ್ರಿಕರಣಕ್ಕಾಗಿ ಒಂದು ಕಾರ್ಯಕ್ರಮ ಅನುಷ್ಠಾನಕ್ಕಾಗಿ ಸರ್ವಶಿಕ್ಷಣ ಅಭಿಯಾನ ಕಾರ್ಯಕ್ರಮವನ್ನು ಹಾಕಿಕೊಂಡಿದೆ. ಈ ಕಾರ್ಯಕ್ರಮವು ಪಠ್ಯಕ್ರಮವನ್ನು ಸ್ಥಳೀಯ ಅವಶ್ಯಕತೆಗಳನ್ನು ಒಳಗೊಳ್ಳುವಂತೆ ಪುನಃ ರಚಿಸುವುದು. ಹಾಗೂ ೨೦೦೦ ದ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನ ವಿಷಯಗಳನ್ನು ಪಠ್ಯಕ್ರಮದಲ್ಲಿ ಅಳವಡಿಸುವುದು ಎಂಬ ನಿರ್ಣಯವನ್ನು ಈ ಸರ್ವಶಿಕ್ಷಣ ಅಭಿಯಾನ ಹೇಳುತ್ತದೆ. ಸರ್ವಶಿಕ್ಷಣ ಅಭಿಯಾನವು ಹಿರಿಯ ಪ್ರಾಥಮಿಕ ಹಂತವನ್ನು ಒಳಗೊಂಡಿರುವುದರಿಂದ ಈ ಹಂತದ ಜಟಿಲ ಅಗತ್ಯಗಳನ್ನು ಪೂರೈಸುವ ಸಲುವಾಗಿ ಗುಣಾತ್ಮಕ ಮಧ್ಯ ವರ್ತನೆಗೆ ಗಮನವನ್ನು ಕೇಂದ್ರೀಕರಿಸಬೇಕು. ಶಾಲೆಗಳಲ್ಲಿ ನಿರ್ದಿಷ್ಟ ವಿಷಯ ವಿಸ್ತರತೆ, ಶಿಕ್ಷಕರ ವಿದ್ಯಾರ್ಹತೆ ಹಾಗೂ ದಕ್ಷತೆ ಮೂಲಕ ಶಿಕ್ಷಕರ ತರಬೇತಿ ಅವಶ್ಯಕತೆ, ತರಗತಿ ಆಧಾರಿತ ನೆರವು ಹಾಗೂ ಮೇಲ್ವಿಚಾರಣೆ ಸಮಸ್ಯೆಗಳು ಇತ್ಯಾದಿಗಳಿಗೆ ಗಮನ ಹರಿಸಿದೆ ಎಂದು ಡಿ.ಎಸ್.ಇ.ಆರ್.ಟಿ. ಹೇಳುತ್ತಿದೆ. ಆದರೆ ಇದು ಪ್ರಾಯೋಗಿಕವಾಗಿ ಇದರ ಸಾಧಕ ಬಾದಕಗಳನ್ನು ಅಧ್ಯಯನ ಮಾಡಿದಾಗ ಯಾವ ಹಂತಗಳಲ್ಲಿಯೂ ಸ್ಪಷ್ಟತೆ ಮೂಡಿಸುವಲ್ಲಿ ವಿಫಲವಾಗಿರುವುದನ್ನು ಕಾಣಬಹುದಾಗಿದೆ.

ನಾಡು ನುಡಿ ೨೦೦೩ ರಲ್ಲಿ ಪಠ್ಯಪುಸ್ತಕ ಪರಿಚಯ ಮತ್ತು ಬೋಧನ ವಿಧಾನ ಕೈಪಿಡಿಯನ್ನು ರಾಜ್ಯ ಸಂಪನ್ಮೂಲ ಕೇಂದ್ರ ಹಾಗೂ ಲೋಕ ಶಿಕ್ಷಣ ನಿರ್ದೇಶನಾಲಯ ಪ್ರಕಟಿಸಿದೆ. ಸಾಕ್ಷರತಾ ಆಂದೋಲನಕ್ಕಾಗಿ ಪಠ್ಯಕ್ರಮ ಬೋಧಿಸುವ ವಿಧಾನ ಹಾಗೂ ಪಠ್ಯಕ್ರಮ ಸರಳತೆ, ಮೌಲ್ಯ ಮಾಪನದ ಬಗ್ಗೆ ಶಿಕ್ಷಕರ ಕೈಪಿಡಿಯಾಗಿ ಹೊರ ಬಂದಿದೆ. ಇದರಲ್ಲಿ ನಾಡು ನುಡಿ ಪಠ್ಯ ಪುಸ್ತಕದ ಬಗ್ಗೆ ಪರಿಚಯ ಮಾಡಲಾಗಿದೆ. ಇದಕ್ಕೂ ಮೊದಲೂ ಇದ್ದ ಪಠ್ಯ ಪುಸ್ತಕಗಳು ಹೇಗಿದ್ದವು, ಕಲಿಸುವ ವಿಧಾನ ಹೇಗಿತ್ತು, ಯಾವ

ಬಗೆಯ ಕಾರ್ಯಕ್ರಮಗಳಿದ್ದವು ಎಂಬುದನ್ನು ವಿವರಿಸಿದೆ. ಅಲ್ಲದೆ ಶಿಕ್ಷಕರು ಭಾಷೆಯನ್ನು ಪರಿಚಯಿಸುವಾಗ ಪಾಠದ ಶಿರೋನಾಮೆಯ ಅಕ್ಷರಗಳಿಂದ ಪರಿಚಯ ಮಾಡಬೇಕು. ಬರವಣಿಗೆಯ ರೂಪ ಉಚ್ಚಾರ ಆಲಿಸುವ ವಿಧಾನ ಕಲಿಸಬೇಕು ಎಂದು ಹೇಳಲಾಗಿದೆ.

ಪ್ರಾಥಮಿಕ ಶಾಲಾ ಶಿಕ್ಷಕರಿಗಾಗಿ 'ಸೇವಾನಿರತ ಶಿಕ್ಷಕರ ಶಿಕ್ಷಣ ಸಂಚಿಕೆ'(ಸಂಪುಟ–೧)ಯನ್ನು ರಾಷ್ಟ್ರೀಯ ಶಿಕ್ಷಣ ನೀತಿಯ ಅನ್ವಯ ಹಾಕಿಕೊಂಡಿರುವ ಅಂಶವನ್ನು ಇದರಲ್ಲಿ ಕಾಣಬಹುದು. ಸೇವಾನಿರತ ಶಿಕ್ಷಕರ ಬೃಹತ್ ಪುನಶ್ಚೇತನ ತರಬೇತಿ ಕಾರ್ಯಕ್ರಮವನ್ನು ೧೯೮೦–೯೦ರಲ್ಲಿ ಡಿ.ಎಸ್.ಇ.ಆರ್.ಟಿ. ಮತ್ತು ಎನ್.ಸಿ.ಇ.ಆರ್.ಟಿ. ನವ ದೆಹಲಿಯವರು ಕಾರ್ಯಕ್ರಮ ಹಾಕಿಕೊಂಡಿದ್ದ ಅಂಶಗಳನ್ನು ಇದರಲ್ಲಿ ವಿವರಿಸಿದೆ. ಇದರಲ್ಲಿ ಮುಖ್ಯವಾಗಿ ಶಿಕ್ಷಕರಾದವರು ಶಿಕ್ಷಣ ಚಟುವಟಿಕೆಗಳನ್ನು ನಿಭಾಯಿಸುವ ಅವುಗಳನ್ನು ಬೋಧಿಸಿ ಮೌಲ್ಯಮಾಪನ ಮಾಡುವ ವಿಧಾನವನ್ನು ವಿವರಿಸಿದೆ. ಅಲ್ಲದೆ ಆ ಮೂಲಕ ಚರ್ಚೆ ಮಾಡಿದೆ. ಅದರ ಜೊತೆಗೆ ಪ್ರಾಥಮಿಕ ಹಂತದಲ್ಲಿ ಭಾಷಾ ಬೋಧನೆ ಮತ್ತು ಕಲಿಕೆಯು ಮಾತನಾಡುವ ಭಾಷೆಯನ್ನು ಗ್ರಹಿಸುವುದು, ಮಾತನಾಡುವ ಭಾಷೆಯ ಉತ್ಪತ್ತಿ, ಲಿಖಿತ ಭಾಷೆಯನ್ನು ಗ್ರಹಿಸುವುದು, ಲಿಖಿತ ಭಾಷೆಯ ಉತ್ಪತ್ತಿ ಹೇಳಿ ಕೊಡುವ ಅಂಶಗಳು ಇರಬೇಕೆಂದು ಈ ಕಾರ್ಯ ಕ್ರಮದಲ್ಲಿ ಚರ್ಚೆಯಾಯಿತು ಎಂದು ಹೇಳಲಾಗಿದೆ.

ಪ್ರೊ. ಜೆ.ಎ. ಕಡಿವಾಳ ಪ್ರಾಥಮಿಕ ಶಾಲಾ ಮಕ್ಕಳ ವರ್ತನಾ ಸಮಸ್ಯೆಗಳು ಎಂಬ ಪುಸ್ತಕವನ್ನು ೧೯೮೩ ರಲ್ಲಿ ಬರೆದಿದ್ದಾರೆ. ಮಕ್ಕಳು ತುಂಬಾ ತುಂಟರಾಗಿದ್ದಾರೆ. ಹೇಳಿದ ಮಾತು ಕೇಳುವುದಿಲ್ಲ. ಒಬ್ಬರನ್ನೊಬ್ಬರು ಪೀಡಿಸುತ್ತಾರೆ. ಗುರುಗಳ ಕಡೆಗೆ ಗಮನವನ್ನೇ ಕೊಡುವುದಿಲ್ಲ. ಹೀಗೆಂದು ವರ್ಗ ಶಿಕ್ಷಕರು ಎಷ್ಟೋ ಬಾರಿ ವರ್ಗದ ಮಕ್ಕಳ ಬಗ್ಗೆ ದೂರಿಕೊಳ್ಳುತ್ತಾರೆ. ನನ್ನ ಮಗು ಶಾಲೆಗೆ ಹೋಗುವುದಿಲ್ಲ. ಮನೆಗೆಲಸ ಮಾಡುವುದಿಲ್ಲ, ಓದುವುದಿಲ್ಲ, ಸಿಟ್ಟು ಮಾಡಿದರೆ ಮತ್ತಷ್ಟು ಒರಟುತನ ಬರುತ್ತದೆ ಎಂದು ಓರ್ವ ಪಾಲಕರು ಬೇಸರಗೊಳ್ಳುತ್ತಾರೆ. ನನ್ನ ಮಗು ಏಕೆ ಹೀಗಾಗಿದ್ದಾನೆ. ನೆರೆ ಹೊರೆಯವರೊಡನೆ ಜಗಳಾಡುತ್ತಾನೆ. ಮನೆಯಲ್ಲಿಯೂ ಜಗಳ, ಸಣ್ಣ ಪುಟ್ಟದಕ್ಕೂ ಜಗಳ, ಶಾಲೆ ಎಂದರೆ ತಲೆನೋವು, ಸರಿಯಾಗಿ ಹೋಗುವುದಿಲ್ಲ. ಈ ಪ್ರಕಾರ ಹಲವಾರು ವರ್ತನಾ ಸಮಸ್ಯೆಗಳನ್ನು ಗುರುತಿಸಬಹುದು ಎಂದಿದ್ದಾರೆ. ಇದಕ್ಕೆ ಕಾರಣ ಕಳ್ಳತನ, ಅವಾಚ್ಯಮಾತು, ಆಸಕ್ತಿಯ ಕೊರತೆ, ಹೀಗೆ ಹತ್ತಾರು ಸಮಸ್ಯೆಗಳನ್ನು ಹೇಳುವುದರ ಮೂಲಕ ಚರ್ಚೆ ಮಾಡಿರುವುದನ್ನು ಕಾಣುತ್ತೇವೆ.

೧೯೮೮ ರಲ್ಲಿ ಟಿ.ಆರ್. ನಾಗಪ್ಪ, 'ಪಠ್ಯ ಪುಸ್ತಕ ರಚನೆ' ಎಂಬ ಪುಸ್ತಕವನ್ನು ಬರೆದಿದ್ದಾರೆ. ಪಠ್ಯಪುಸ್ತಕ ವಿದ್ಯಾರ್ಥಿಗಳಲ್ಲಿ ಆಲೋಚನಾಶಕ್ತಿಯನ್ನು ಮೂಡಿಸಲು ಹಾಗೂ ಬೆಳೆಸಲು ಅನುಕೂಲವಾಗಿರಬೇಕು. ಪಠ್ಯಪುಸ್ತಕ ಕೇವಲ ವರ್ಣಮಾಲೆಯ ಅಕ್ಷರಗಳನ್ನು ಕಲಿಸುವುದಕ್ಕೆ

ಮಾತ್ರ ಸೀಮಿತವಾಗಬಾರದು. ಪಠ್ಯಪುಸ್ತಕದಲ್ಲಿ ಬಳಸುವ ಬೀಜ ಪದಗಳು ವಿದ್ಯಾರ್ಥಿಗಳಲ್ಲಿ ಚಿಂತನಾಶಕ್ತಿಯನ್ನು ಪ್ರಚೋದಿಸತಕ್ಕದ್ದು. ಕೇವಲ ಓದುಗಾರಿಕೆಯನ್ನು ಕಲಿಸುವುದೊಂದೇ ಪಠ್ಯ ಪುಸ್ತಕದ ಉದ್ದೇಶವಲ್ಲ. ಓದನ್ನು ಮುಂದುವರಿಸಲು ಬೇಕಾದ ಕುತೂಹಲ ಮತ್ತು ಉತ್ಸಾಹವನ್ನು ಉಂಟು ಮಾಡುವುದು ಪಠ್ಯ ಪುಸ್ತಕದ ಉದ್ದೇಶ. ಅಂತಹ ಕುತೂಹಲ ಮತ್ತು ಉತ್ಸಾಹ ಮೊದಲನೆಯ ದಿನದಿಂದಲೇ ಉಂಟಾಗಬೇಕು. ಅಂದರೆ ಮೊದಲನೆಯ ಪಾಠದಿಂದಲೇ ಕಲಿಯುವವರಿಗೆ ಆಕರ್ಷಣೆ ಆಗ ತಕ್ಕದ್ದು. ಓದು ಬರಹದ ಕಲಿಕೆಯನ್ನು ಜೀವನದಲ್ಲಿ ತಕ್ಷಣಕ್ಕೆ ಬಳಸುವಂತಿರಬೇಕು. ಅಂತಹ ಕ್ಷೇತ್ರ ಸೀಮಿತವಾಗಿರಬಹುದು. ಇಲ್ಲವೇ ಸಂಕುಚಿತವಾಗಿರಬಹುದು. ಅದು ಅಷ್ಟು ಪ್ರಾಮುಖ್ಯವಲ್ಲ ಎಂದು ಪ್ರಾಥಮಿಕ ಪಠ್ಯಕ್ರಮದ ಬಗ್ಗೆ ವಿಶ್ಲೆಷಿಸುತ್ತಾರೆ. ಪಠ್ಯ ಪುಸ್ತಕ ರಚನೆ ಮಾಡುವ ಮೊದಲು ಪಠ್ಯ ಪುಸ್ತಕ ಯಾರಿಗೆ/ಯಾವ ಪ್ರದೇಶಕ್ಕೆ ಎಂಬುದನ್ನು ನಿರ್ದಿಷ್ಟ ಪಡಿಸಿಕೊಂಡಿರಬೇಕು. ಕಲಿಯುವವರ ಸಾಮಾಜಿಕ ಆರ್ಥಿಕ ಮತ್ತು ಸಾಂಸ್ಕೃತಿಕ ವಾತಾವರಣದ ಪರಿಶೀಲಿಸಬೇಕು. ಕಲಿಯುವವರೊಡನೆ ವಿಚಾರ ವಿನಿಮಯ ಮತ್ತು ಪೊಷಕರುಗಳೊಂದಿಗೆ ಚರ್ಚೆ ಮಾಡಿ ಅವರ ಆಸಕ್ತಿ ಮತ್ತು ಅಭಿರುಚಿಗಳನ್ನು ತಿಳಿದಿರಬೇಕು. ತಾಂತ್ರಿಕರಣ ಸಂಬಂಧಪಟ್ಟ ಪಠ್ಯವಸ್ತುವಿನ ಬಗ್ಗೆ ಸಮಾಲೋಚನೆ ಮಾಡಿ ಪುಸ್ತಕದ ಭಾಷೆ, ವಸ್ತು, ಚಿತ್ರ ಮತ್ತು ವಿನ್ಯಾಸ ಹೇಗಿರಬೇಕೆಂಬುದನ್ನು ವಿಚಾರಣೆಗೆ ಒಳಪಟ್ಟು ಪಠ್ಯಪುಸ್ತಕ ರಚನೆಯಾಗಬೇಕು ಎಂದಿದ್ದಾರೆ.

೨೦೦೬ರಲ್ಲಿ 'ಚುಕ್ಕಿ ಚಿನ್ನಾ', 'ಚಿನ್ನರ ಚುಕ್ಕಿ' ಎಂಬ ಪುಸ್ತಕವನ್ನು ಒಂದು ಎರಡು ಮತ್ತು ಮೂರನೇ ತರಗತಿ ಕನ್ನಡ, ಗಣಿತ ಮತ್ತು ಪರಿಸರ ಅಧ್ಯಯನ ಪಠ್ಯಗಳಿಗಾಗಿ ಅಂತರ್‌ಕ್ರಿಯಾತ್ಮಕ ರೇಡಿಯೋ ಶಿಕ್ಷಣ ಕಾರ್ಯಕ್ರಮ ಶಿಕ್ಷಕರ ಮಾರ್ಗದರ್ಶಿ ನೆಪದಲ್ಲಿ ಪ್ರಕಟಗೊಂಡಿದೆ. ಇದು ಮಕ್ಕಳಿಗೆ ಗ್ರಹಿಸುವ ಶಕ್ತಿಯನ್ನು ವೃದ್ಧಿಸುವುದಲ್ಲದೆ ಸೃಜನಶೀಲ ಚಟುವಟಿಕೆಗೆ ಅವಕಾಶ ಮಾಡಿಕೊಡಬಲ್ಲದು ಎಂದು ಹೇಳಲಾಗಿದೆ.

ಡಾ. ಕೆ.ವಿ. ನಾರಾಯಣ **'ಭಾಷೆ'** ವಿಶ್ವಕೋಶವನ್ನು ಸಂಪಾದನೆ ಮಾಡಿದ್ದು. ಇದರಲ್ಲಿ ಶಾಲೆಯಲ್ಲಿ ಭಾಷೆ ಎಂಬ ಲೇಖನವನ್ನು ಬರೆದಿದ್ದಾರೆ. ಶಾಲಾ ಪಠ್ಯಪುಸ್ತಕಗಳನ್ನು ನೋಡಿದರೆ ಭಾಷೆ ಕಲಿಕೆಯಲ್ಲಿ ಭಾಷೆಯ ರಚನೆಯನ್ನು ತಿಳಿಸಿಕೊಡುವ ಉದ್ದೇಶವೇ ಮೇಲುಗೈ ಪಡೆದಿರುವುದು ಗೊತ್ತಾಗುತ್ತದೆ. ಅಭ್ಯಾಸಗಳಲ್ಲಿ ಸಂಧಿ ರಚನೆ ಸಮಾಸ ರಚನೆ ವಾಕ್ಯದ ಭಾಗಗಳನ್ನು ಪರಿಚಯಿಸಿ ವಿಶ್ಲೇಷಿಸುವ ವಿಧಾನವಿದೆ ಎಂದಿದ್ದಾರೆ. ಇದರ ಹೆಚ್ಚಿನ ಚರ್ಚೆಯನ್ನು ಮುಂದಿನ ಅಧ್ಯಯನದಲ್ಲಿ ಮಾಡಲಾಗಿದೆ.

೨೦೦೮ರಲ್ಲಿ 'ಸಂವಾದ' ಮಾಸ ಪತ್ರಿಕೆಯನ್ನು ಇಂದೂಧರ ಹೊನ್ನಾಪುರ ಸಂಪಾದನೆ ಮಾಡಿದ್ದಾರೆ. ಇದರಲ್ಲಿ ಮೇಟಿ ಮಲ್ಲಿಕಾರ್ಜುನ 'ಶಿಕ್ಷಣ ಪ್ರಕ್ರಿಯೆಯಲ್ಲಿ' ಕನ್ನಡ ಭಾಷೆ ಎಂಬ ಲೇಖನ ಬರೆದಿದ್ದಾರೆ. ನಮ್ಮ ಭಾಷಾ ಶಿಕ್ಷಣದ ಪಠ್ಯಕ್ರಮಗಳು ಯಾವುದೆ ತರಹದ

ಭಾಷಿಕ ಕೌಶಲಗಳನ್ನು ವೃದ್ಧಿಸುವ ಇರಾದೆಯನ್ನು ಹೊಂದಿರಲಾರವು. ಕೇವಲ ವ್ಯಾಕರಣಾಂಶಗಳನ್ನು ವ್ಯಾಕರಣ ಪರಿ ಭಾಷೆಯನ್ನು ಬಳಸಿ ಪರಿಚಯಿಸುವುದರ ಮೂಲಕ ಭಾಷಾ ಶಿಕ್ಷಣದ ಉದ್ದೇಶ ಮತ್ತು ಗುರಿಗಳನ್ನು ಸಾಧಿಸಲಾಗದು ಎನ್ನುವುದು ಪರಿಶೀಲನಾರ್ಹ ವಾಗಿದೆ ಎಂದು ಹೇಳುತ್ತಾರೆ. ಕನ್ನಡ ಭಾಷಾ ಪಠ್ಯಗಳಲ್ಲಿ ಬಳಸುವ ವರ್ಣಮಾಲೆ, ಪದ, ವಾಕ್ಯಗಳು ಸರಳವಾಗುವುದು ಅವಶ್ಯ ಎನ್ನುವ ನಿಟ್ಟಿನಲ್ಲಿ ಚರ್ಚೆ ನಡೆಸಿದ್ದಾರೆ. ನಂತರ ಮೇಟಿಯವರು ಹೇಳುವಂತೆ ಭಾಷೆಯನ್ನು ಹೊಸ ಹೊಸ ಸನ್ನಿವೇಶಗಳಲ್ಲಿ ಬಳಸಲು ಬೇಕಾದ ಉತ್ಪಾದಕತೆಯ ಸಾಮರ್ಥ್ಯವನ್ನು ಮಾತ್ರ ಮಕ್ಕಳಲ್ಲಿ ಬೆಳೆಸ ಬೇಕಾಗುತ್ತದೆ. ಹಾಗೆ ನೋಡಿದರೆ ನಮ್ಮ ಶಾಲೆಗಳಲ್ಲಿ ಈ ನೆಲೆಗೆ ದೊರಕುತ್ತಿರುವ ಒತ್ತು ತುಂಬಾ ಕಡಿಮೆಯಾಗಿದೆ. ಹಾಗಾಗಿ ನಮ್ಮ ಮಕ್ಕಳು ತಾವು ಬಲ್ಲ ಕನ್ನಡ ಜೀವನದ ಬೇರೆ ಬೇರೆ ಸಂದರ್ಭಗಳಲ್ಲಿ ಬಳಸಲು ಹಿಂಜರಿಯುವಂತಾಗಿದೆ. ಅವರು ಕಲಿತ ವ್ಯಾಕರಣ ಅವರಿಗೆ ನೆರವಾಗುವುದಿಲ್ಲ. ಅಂದರೆ ಭಾಷೆಯ ರಚನೆಯನ್ನು ತಿಳಿಯವುದು ಒಂದು ನೆಲೆಯಾದರೆ, ಅದರ ಬಳಕೆಯನ್ನು ಕಲಿಯುವುದು ಇನ್ನೊಂದು ನೆಲೆ. ಮೊದಲನೆಯದನ್ನು ಕಲಿಯ ಬೇಕಾಗಿಲ್ಲ. ಹಾಗೆ ಕಲಿಸಿದರೂ ಅದು ಅವರಿಗೆ ಬಳಕೆಯ ಸಾಮರ್ಥ್ಯಗಳನ್ನು ತಂದು ಕೊಡುವುದಿಲ್ಲವೆಂದು ಚರ್ಚೆ ಮಾಡಿದ್ದಾರೆ. ಭಾಷೆಯನ್ನು ಸೃಜನಶೀಲವಾಗಿ, ವ್ಯವಹಾರಿಕವಾಗಿ, ಸಾಂಸ್ಕೃತಿಕ ಸಂವೇದನೆಯನ್ನು ಪ್ರತಿನಿಧಿಸುವ ಮಾಧ್ಯಮವಾಗಿ ರೂಡಿಸಿಕೊಳ್ಳಬೇಕು. ವ್ಯಾಕರಣ ಮತ್ತು ಭಾಷಿಕ ರಚನಾ ವಿನ್ಯಾಸಗಳನ್ನು ಕರಗತ ಮಾಡಿಕೊಂಡರೆ ಸಾಲದು. ಈ ನಿಟ್ಟಿನಲ್ಲಿ ಭಾಷಿಕ ಸಾಮರ್ಥ್ಯವು ಭಾಷೆಯ ಸಾಮಾನ್ಯ ಕೌಶಲಗಳಿಂದ ಲಬಿಸತಕ್ಕದ್ದು ಎಂಬ ಅಭಿಪ್ರಾಯವನ್ನು ಮಂಡಿಸಿದ್ದಾರೆ.

ಯುನಿಸೆಫ್ ಸಂಸ್ಥೆಯು ನಲಿ–ಕಲಿ ಎರಡನೆ ತರಗತಿ ಭಾಷಾ (ಜನಶಾಲಾ ಕಾರ್ಯಕ್ರಮ) ಶಿಕ್ಷಕರ ಕೈಪಿಡಿ ಎಂದು ಪ್ರಕಟಿಸಿದೆ. ಶಿಕ್ಷಕರಾದವರು ತರಗತಿ ಅನುಸಾರ ಕಲಿಕಾ ಏಣಿಗೆ ತಮ್ಮ ಮನೋಭಾವ ಪರಿಹಾರ ಬೋಧನೆಯನ್ನು ಮಾಡಬೇಕು ಎಂದಿದ್ದಾರೆ. ಧ್ವನಿ, ಪದ, ವಾಕ್ಯಗಳನ್ನು ಉಚ್ಚರಿಸುವಾಗ, ಬರೆಯುವಾಗ ಸ್ಪಷ್ಟವಾದ, ಕ್ರಮಬದ್ಧವಾದ ಮಾದರಿ ರೂಪದಲ್ಲಿ ಇರಬೇಕು ಎಂದು ಹೇಳಿರುವುದನ್ನು ಕಾಣುತ್ತೇವೆ.

ಸಾರ್ವಜನಿಕ ಶಿಕ್ಷಣ ಇಲಾಖೆಯು **'ಪ್ರಾಥಮಿಕ ಶಿಕ್ಷಣದಲ್ಲಿ ಕನಿಷ್ಠ ಕಲಿಕಾ ಹಂತಗಳು'** ಎಂಬ ಪುಸ್ತಕವನ್ನು ರಾಜ್ಯಮಟ್ಟದ ಸಂಪನ್ಮೂಲ ಘಟಕ ಪ್ರಕಟಿಸಿದೆ. ಪ್ರಾಥಮಿಕ ಹಂತದ ಪಠ್ಯಕ್ರಮದಲ್ಲಿ ಭಾಷೆಗೆ ಪ್ರಧಾನ ಸ್ಥಾನವಿದೆ. ಭಾಷೆಯನ್ನು ಕಲಿಯುವುದರ ಮೂಲಕ ಸಿದ್ಧಿಸಿಕೊಂಡ ಮೂಲ ಕೌಶಲಗಳು ಇತರ ಕ್ಷೇತ್ರಗಳ ಕಲಿವಿನ ಪರಿಕಲ್ಪನೆಗಳನ್ನು ಅರಿಯಲು ನೆರವಾಗುತ್ತದೆ. ಅಲ್ಲದೆ ಮಗು ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಮತ್ತು ತನ್ನ ದೈನಂದಿನ ವ್ಯವಹಾರಗಳನ್ನು ಸಮರ್ಥ ರೀತಿಯಲ್ಲಿ ನಿರ್ವಹಿಸಲು ಭಾಷಾ ಕೌಶಲಗಳು ಬೇಕು. ಆದ್ದರಿಂದ ಅವುಗಳನ್ನು ಭಾಷೆಯ ಪಠ್ಯದಲ್ಲಿ ಕಲಿಸುವ ಪ್ರಯತ್ನ ನಡೆದಿದೆ ಎನ್ನುತ್ತಾರೆ.

ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು, ವಿಷಯ ಗ್ರಹಿಕೆ, ಸೃಜನಶೀಲ ಕ್ರಿಯಾತ್ಮಕ ವ್ಯಾಕರಣ, ಸ್ವ-ಕಲಿಕೆ, ಭಾಷಾ ಪ್ರಯೋಗ ಮತ್ತು ಶಬ್ದ ಭಂಡಾರದ ನಿಯಂತ್ರಣ ಕಲಿಸುವ ಕನಿಷ್ಠ ಮಟ್ಟದ ಗುರಿಯನ್ನು ಹೊಂದಿದೆ ಎಂದು ಹೇಳಲಾಗಿದೆ. ಒಟ್ಟಾರೆಯಾಗಿ ಭಾಷಾ ಕಲಿಕೆಯನ್ನು ಒಂದು ಆನಂದದಾಯಕ ವಿಷಯವನ್ನಾಗಿ ಮಾಡಲು ಈ ಕೆಳಕಂಡ ವೈವಿಧ್ಯಮಯ ಹಾಗೂ ಆಸಕ್ತಿಪೂರ್ಣ ಚಟುವಟಿಕೆಗಳನ್ನು ವ್ಯವಸ್ಥೆಗೊಳಿಸಬೇಕು. ಘಟನೆಗಳ ವಿವರಣೆ, ಸಂವಾದ, ಕಥೆ ಹೇಳುವುದು, ನಾಟಕ, ಸಂಭಾಷಣೆ, ಪ್ರಶ್ನೋತ್ತರ, ರಸಪ್ರಶ್ನೆ ಕಾರ್ಯಕ್ರಮ, ಒಗಟುಗಳು, ಪದಬಂಧ, ಶಾಲಾ ಸಮಾರಂಭಗಳಲ್ಲಿ ಚರ್ಚಾ ಸ್ಪರ್ದೆಗಳು ಮತ್ತು ಹಾಡುಗಳನ್ನು ಬಳಸುವುದರಿಂದ ಕನ್ನಡ ಭಾಷಾ ಕಲಿಕೆಯಲ್ಲಿ ಸುಧಾರಣೆ ಕೊಡಬಹುದು ಎಂದು ಹೇಳಿದೆ. ಅದರಂತೆ ೧೯೯೨, ೧೯೯೫ರಲ್ಲಿ ಭಾಷಾ ಬೋಧನೆ ಕಲಿಕೆಯ ಕನಿಷ್ಠ ಮಟ್ಟಗಳು ಈ ಮೇಲಿನ ಅಂಶಗಳ ಆಧಾರಿತವಾಗಿ ಶಿಕ್ಷಕರ ಕೈಪಿಡಿಯಾಗಿ ಪ್ರಕಟಿಸಿದೆ.



**'ನಮ್ಮ ಕನ್ನಡ ಪತ್ರಿಕೆ'** :

ಕಳೆದ ೧೦ ವರ್ಷಗಳಲ್ಲಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನ ವಿಭಾಗವು ಶಾಲೆಯಲ್ಲಿನ ಕನ್ನಡ ಅದರಲ್ಲು ಪ್ರಾಥಮಿಕ ಶಿಕ್ಷಣದ ಭಾಷಾ ಪಠ್ಯಗಳು ಹಾಗೂ ಸಮಸ್ಯೆಗಳ ಕುರಿತು ನಮ್ಮ ಕನ್ನಡ ಪತ್ರಿಕೆಯಲ್ಲಿ ಲೇಖನಗಳು ಹೊರ ಬರುತ್ತಿರುವುದನ್ನು ಕಾಣುತ್ತೇವೆ. ಅವುಗಳನ್ನು ಈ ಕೆಳಗಿನ ಸಂಚಿಕೆಯಲ್ಲಿ ಕಾಣಬಹುದು. ನಮ್ಮ ಕನ್ನಡ ಸಂಚಿಕೆ ೧೫ರಲ್ಲಿ ಶಾಲೆಯಲ್ಲಿನ ಕನ್ನಡ (ಸಂ: ಕೆ.ವಿ.ಎನ್. ಸುಜ್ಞಾನ ಮೂರ್ತಿ) ಎಂಬ ಲೇಖನವು ಕಲಿಸುವ ಭಾಷೆ, ವಿಧಾನ ಹಾಗೂ ಭಾಷಾ ನಿಯಮಗಳ ಬಗ್ಗೆ ಚರ್ಚೆ ನಡೆದಿದೆ. ಯಾವ ಯಾವ ತರಗತಿಯಿಂದ ಭಾಷೆಗಳನ್ನು ಕಲಿಸಲು ವ್ಯವಸ್ಥೆ ಮಾಡಲಾಗಿದೆ. ಅದರ ಸದುಪಯೋಗವೇನು ಎಂಬುದನ್ನು ಚರ್ಚೆ ಮಾಡಲಾಗಿದೆ. ನಮ್ಮ ಕನ್ನಡ ಸಂಚಿಕೆ ೨೦ರಲ್ಲಿ (ಸಂ: ಕೆ.ವಿ.ಎನ್. ಸುಜ್ಞಾನಮೂರ್ತಿ, ಎಸ್.ಎಸ್.ಅಂಗಡಿ) ವ್ಯಾಕರಣವನ್ನು ಹೇಳಿಕೊಡುವ ಪದ್ಧತಿ ಇಂಗ್ಲೀಶ್ ಭಾಷೆಯಿಂದ ಬೆಳೆದು ಬಂದಿದೆ. ಕನ್ನಡದ ಮಕ್ಕಳು ವಿಭಕ್ತಿ, ಆದೇಶ, ತದ್ಧಿತ, ಆಖ್ಯಾತ ಮುಂತಾದ ಪಾರಿಭಾಷಿಕ ಪದಗಳ ಕಗ್ಗಾಡಿನಲ್ಲಿ ಗಿರಕಿ ಹೊಡೆಯಬೇಕಾಗಿ ಬಂದಿದೆ. ಭಾಷೆಯನ್ನು ಅರಿಯ ಬೇಕಾದವರಿಗೆ, ಅಭ್ಯಾಸ ಮಾಡ ಬೇಕಾದವರಿಗೆ ಈ ಎಲ್ಲಾ ವ್ಯಾಕರಣ ಸುತ್ತ ಬಳಸುವುದು ಅನಿವಾರ್ಯ. ಆದರೆ ಭಾಷೆಯನ್ನು ಸ್ಪಷ್ಟವಾಗಿ ಬಳಸ ಬೇಕಾಗಿರುವವರಿಗೆ ಅನಾವಶ್ಯಕ ಎಂದು ಅಭಿಪ್ರಾಯ ಪಡುತ್ತಾರೆ. ಅಲ್ಲದೆ ನಮ್ಮ ಮಕ್ಕಳಿಗೆ ಭಾಷೆಯ ಬಳಕೆಯ ಸಾಧ್ಯತೆಗಳನ್ನು ನಾವು ತಿಳಿಸಿ ಕೊಡಬೇಕಾಗಿದೆ. ಅದಕ್ಕೆ ನೆರವಾಗುವ ಹೊಸ ವೈಚಾರಿಕ ನೆಲೆಯ ವ್ಯಾಕರಣವನ್ನು ಶಾಲೆಗಳಲ್ಲಿ ಬಳಸಬೇಕು. ಅಂತಹ ವ್ಯಾಕರಣವನ್ನು ಸಿದ್ಧಪಡಿಸಿ ಶಿಕ್ಷಕರಿಗೆ ಒದಗಿಸುವಂತಾಗಬೇಕು ಎಂದಿದ್ದಾರೆ.

ನಮ್ಮ ಕನ್ನಡ ಸಂಚಿಕೆ ೨೫ರಲ್ಲಿ (ಸಂ: ಕೆ.ವಿ.ಎನ್. ಸುಜ್ಞಾನಮೂರ್ತಿ, ಬಿ.ಜಿ.ಕನಕೇಶ ಮೂರ್ತಿ) ಡಿ.ಎನ್. ಶಂಕರಭಟ್ ಅವರು ಭಾಷೆಯಲ್ಲಿ ಹೇಗೆ ಮತ್ತು ಏಕೆ? ಎಂಬ

ಲೇಖನವನ್ನು ಬರೆದಿದ್ದಾರೆ. ಇದರಲ್ಲಿ ಶಾಲಾ ವ್ಯಾಕರಣಗಳ ಮುಖ್ಯ ದೋಷಗಳ ಬಗ್ಗೆ ವ್ಯಾಖ್ಯಾನಿಸುತ್ತಾರೆ. ವ್ಯಾಕರಣವು ಹೊಸಗನ್ನಡದ ಸ್ವರೂಪವೇನೆಂಬುದನ್ನು ಸ್ಪಷ್ಟವಾಗಿ ತಿಳಿಸಲು ಯತ್ನಿಸುವ ಬದಲು, ಕೇಶಿರಾಜ, ಪಾಣಿನಿ ಮೊದಲಾದವರು ಚರ್ಚಿಸಿದ ಅತೀ ಕ್ಲಿಷ್ಟವಾದ ಮತ್ತು ಹೊಸಗನ್ನಡಕ್ಕೆ ಸ್ವಲ್ಪವೂ ಸಂಬಂಧಿಸದಂತಹ ಗುಣ, ವೃದ್ಧಿ, ಶ್ಚುತ್ವ, ಷ್ಟುತ್ವ, ಜಶ್ತ್ವ ಮೊದಲಾದ ಸಂಧಿಗಳ ಕಾರ್ಯಗಳನ್ನು ಹೇಳಿ ಕೊಡುವ ವ್ಯಾಕರಣ ಇದೆ. ಕನ್ನಡದ ಉದಾರಹರಣೆಗಳು ಸಿಗುವುದು ಅಸಂಭವವೇ ಹಾಗಾಗಿ, ಎಂಟನೇಯ ತರಗತಿಗೆ ಸಿದ್ಧವಾದಂತಹ ವ್ಯಾಕರಣಗಳಲ್ಲಿಯೂ 'ಋ' ಕಾರವಿಲ್ಲ, **ಮಮ್ಮೆಯ, ಷಡೂರ್ಮಿ** ಮೊದಲಾದ ಕನ್ನಡದ ಮಟ್ಟಿಗೆ ತೀರ ವಿಚಿತ್ರವಾಗಿ ಕಾಣಿಸುವ ಪದಗಳ ಪ್ರಯೋಗ ಕಾಣಸಿಗುತ್ತದೆ. ಇವನ್ನೆಲ್ಲ ಪರೀಕ್ಷೆಗಾಗಿ ಬಾಯಿಪಾಠ ಮಾಡ ಬೇಕಾಗಿರುವ ವಿದ್ಯಾರ್ಥಿಗಳಿಗೆ ವ್ಯಾಕರಣ ಎಂಬುದೊಂದು ವಿಚಿತ್ರವಾದ ವಿಷಯವೆಂದು ಅನಿಸಿದರೆ ತಪ್ಪೇನು ಎಂದು ಅಭಿಪ್ರಾಯ ಪಡುತ್ತಾರೆ. ಆದ್ದರಿಂದ ಈ ತಾತ್ವಿಕ ನೆಲೆಯ ವ್ಯಾಕರಣ ರಚನೆಯನ್ನೇ ಕೊನೆಯ ಪಕ್ಷ ಶಾಲಾ ವ್ಯಾಕರಣಗಳ ಮಟ್ಟಿಗಾದರೂ ಕೈಬಿಡುವುದು ಸೂಕ್ತವೆಂದು ತೋರುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಇದೇ ಪತ್ರಿಕೆಯ ೩ನೇ ಸಂಚಿಕೆಯಲ್ಲಿ (ಸಂ:ಕೆ.ವಿ.ಎನ್. ಸುಜ್ಞಾನಮೂರ್ತಿ) 'ತದ್ಭವಗಳ ರಾಜಕಾರಣ' ಎಂಬ ಲೇಖನದಲ್ಲಿ ಶಾಲಾ ಶಿಕ್ಷಣದಲ್ಲಿ ಮಕ್ಕಳಿಗೆ ತತ್ಸಮ ತದ್ಭವಗಳೆಂಬ ಪದ ಸಮೂಹವನ್ನು ಪರಿಚಯಿಸಲಾಗುತ್ತದೆ. ಆದರೆ ಆ ಪದಗಳು ಯಾವ ಭಾಷೆಗಳಿಂದ ಬಂದಿವೆ ಎಂಬ ಮಾಹಿತಿ ಕೊಡುವುದಿಲ್ಲ. ಜೊತೆಗೆ ಸ್ಪಷ್ಟ ತಿಳುವಳಿಕೆ ಮೂಡಿಸುವ ಪಠ್ಯ ರಚನೆ ಇಲ್ಲ ಎಂಬ ಮಾತನ್ನು ವಿವರಿಸುತ್ತಾರೆ. ಈ ವಿದ್ವಾಂಸರು ೪೮ ಮತ್ತು ೫೧ನೇ ಸಂಚಿಕೆಯಲ್ಲಿ 'ಋ' ಕಾರ ಲಿಪಿ ಚಿಹ್ನೆಯ ಮತ್ತು ಕನ್ನಡ ವರ್ಣಮಾಲೆ ಎಂಬ ಲೇಖನವನ್ನು ಬರೆದಿದ್ದಾರೆ. ಅದರಲ್ಲಿ 'ಋ' ಕಾರದ ಪರ ವಿರೋದ ಚರ್ಚೆಯನ್ನು ಸ್ಪಷ್ಟಪಡಿಸಿ 'ಋ' ಕಾರದ ಅವಶ್ಯಕತೆ ಕನ್ನಡ ವರ್ಣಮಾಲೆಗೆ ಬೇಕಾಗಿಲ್ಲ ಎಂಬ ಅಭಿಪ್ರಾಯಕ್ಕೆ ಬರುತ್ತಾರೆ.

೫೦ನೇ ಸಂಚಿಕೆಯನ್ನು 'ಹೊನ್ನ ಸಂಚಿಕೆ'ಯೆಂದು (ಸಂ: ಕೆ.ವಿ.ಎನ್.) ಪ್ರಕಟಿಸಿದ್ದಾರೆ. ಇದರಲ್ಲಿ ಪ್ರಾಥಮಿಕ ಹಂತದ ಶಿಕ್ಷಣದ ಸಮಸ್ಯೆಗಳು ಎಂಬ ಲೇಖನವನ್ನು ಅಶೋಕ ಕುಮಾರ ರಂಜೇರೆ ಬರೆದಿದ್ದಾರೆ. ಇದು ಭಾಷಾ ಬೋಧನೆ ಮತ್ತು ಭಾಷಾ ಕಲಿಕೆಗೆ ಸಂಬಂಧಿಸಿದ್ದಾಗಿದೆ. ಬ್ರಿಟಿಷ್ ಶಿಕ್ಷಣ ಮಾದರಿಯಲ್ಲಿ ನಮ್ಮ ಶಿಕ್ಷಣ ಮಾದರಿಯನ್ನು ಅನುಸರಿಸಲಾಗಿದೆ. ಪ್ರಾಥಮಿಕ ಹಂತದಲ್ಲಿ ಶಿಕ್ಷಕನಿಗೆ ಒಂದು ರೀತಿಯ ಸಮಸ್ಯೆಗಳಿವೆ. ಹಾಗೆಯೆ ವಿದ್ಯಾರ್ಥಿಗೂ ಸಮಸ್ಯೆಗಳಿವೆ. ಪಠ್ಯ ಪುಸ್ತಕದ ತಪ್ಪುಗಳು ಕುರಿತು ಚರ್ಚೆ ನಡೆಸಿದ್ದಾರೆ. ಪ್ರಾಥಮಿಕ ಹಂತದ ಪಠ್ಯಪುಸ್ತಕಕ್ಕೆ ಸಂಬಂಧಿಸಿದಂತೆ ಕೆಲವು ಸಮಸ್ಯೆಗಳಿವೆ ಎಂದಿದ್ದಾರೆ. ಉದಾಹರಣೆಗೆ ಒಂದನೇ ತರಗತಿಯ ಪಠ್ಯದಲ್ಲಿ ಮೊದಲು ವರ್ಣಮಾಲೆಯ ಆಧಾರದ ಮೇಲೆ ಅನೇಕ ಚಿತ್ರಗಳನ್ನು ಕೊಟ್ಟಿದ್ದಾರೆ. ಆದರೆ ಮೇಲಾಧಿಕಾರಿಗಳ

ಬೇಜವಾಬ್ದಾರಿಯಿಂದ, ಸ್ವಾರ್ಥದಿಂದ ಪಠ್ಯಗಳನ್ನು ಕಡೆಗಣಿಸಿ ಅವುಗಳಲ್ಲಿ ಅನೇಕ ತಪ್ಪುಗಳು ಹಾಗೆ ಉಳಿಯುವಂತೆ ಆಗಿದೆ. ಮೊದಲನೆ ಚಿತ್ರ 'ಅರ' (ಅರ– ಕೊಡಲಿ, ಕುಡುಗೋಲು ಚೂಪುಗೊಳಿಸಲು ಬಳಸುವ ಒಂದು ಸಾಧನ) ಆದರೆ 'ಅರ'ದ ಚಿತ್ರವಾಗಿರದೆ ಬ್ಯಾಟನ ಚಿತ್ರದಂತಿದೆ. ಇದನ್ನು ಎಲ್ಲರೂ ಒಪ್ಪ ಬಹುದಾದ ವಿಷಯವಾಗಿದೆ. ಜೊತೆಗೆ ಮುದ್ರಣ ದೋಷಗಳು ಇರುವುದನ್ನು ಕಾಣಬಹುದು ಎಂದಿದ್ದಾರೆ.

೬೦ನೇ ಸಂಚಿಕೆಯಲ್ಲಿ (ಸಂ:ಪಾಂಡುರಂಗಬಾಬು. ಡಿ) 'ಶಾಲೆಗಳಲ್ಲಿ ಕನ್ನಡ ಬೋಧನೆ ಮತ್ತು ಕಲಿಕೆ' ವಿಶೇಷ ಸಂಚಿಕೆಯಲ್ಲಿ ಹೊರ ಹೊಮ್ಮಿದೆ. ಡಾ. ಡಿ. ಪಾಂಡುರಂಗಬಾಬು 'ಭಾಷಾ ಶಿಕ್ಷಣದ ಆಯಾಮಗಳು,' ಕೆ.ವಿ.ಎನ್. 'ಕನ್ನಡ ಕಲಿಕೆ' ಡಾ. ಅಶೋಕಕುಮಾರ 'ಭಾಷಾ ಬೋಧನೆ ಮತ್ತು ಭಾಷಾ ಕಲಿಕೆಯ ಸಂದರ್ಭದಲ್ಲಿ ಓದು' (ಪ್ರಾಥಮಿಕ ಹಂತದ ಶಿಕ್ಷಣವನ್ನು ಅನುಲಕ್ಷಿಸಿ) ಸಾಂಬಮೂರ್ತಿಯವರು 'ಪ್ರಾಥಮಿಕ ಶಾಲೆಗಳಲ್ಲಿ ಬರಹದ ಕೌಶಲ ಉತ್ತಮ ಪಡಿಸುವಿಕೆ. (ಬೋಧನೆಗೆ ಸಲಹೆಗಳು) ಕನ್ನಡಭಾಷಾ ಕಲಿಕೆ ಮತ್ತು ಬೋಧನೆ (ಅನ್ಯಭಾಷಿಕ ಮಕ್ಕಳನ್ನು ಅನುಲಕ್ಷಿಸಿ) ಮತ್ತು 'ಕನ್ನಡ ಪಠ್ಯಪುಸ್ತಕ ರಚನೆಯಲ್ಲಿನ ಸಮಸ್ಯೆಗಳ ಸಮೀಕ್ಷೆ,' ಎಂಬ ಎರಡು ಲೇಖನಗಳನ್ನು ಡಾ.ಪಿ.ಮಹಾದೇವಯ್ಯನವರು ಬರೆದಿದ್ದಾರೆ. ಭೀಮಣ್ಣ ಮೇಟಿಯವರು 'ಬೋಧನೆ ಮತ್ತು ಕಲಿಕೆ' ಎಂದು ಟಿಪ್ಪಣಿ ಬರೆದಿದ್ದಾರೆ. ಈ ಮೇಲಿನ ಸಂಚಿಕೆಯ ಲೇಖನಗಳೆಲ್ಲವು 'ಪ್ರಾಥಮಿಕ ಶಿಕ್ಷಣ'ದಲ್ಲಿ ಕನ್ನಡ ಭಾಷೆಯ ಕುರಿತು ವಿವಿಧ ಮಾದರಿಗಳ ಹಿನ್ನೆಲೆಯಲ್ಲಿ ಚರ್ಚೆ ನಡೆದವುಗಳಾಗಿವೆ. ಪಠ್ಯರಚನೆ, ಶಿಕ್ಷಕರು, ಬೋಧನೆಯ ಕ್ರಮದಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಉದಾಹರಣೆಗಳ ಮೂಲಕ ಲೇಖನದಲ್ಲಿ ಸ್ಪಷ್ಟಪಡಿಸಿದ್ದಾರೆ. ಈ ಎಲ್ಲಾ ಲೇಖನಗಳನ್ನು ಮುಂದಿನ ಅಧ್ಯಯಗಳಲ್ಲಿ ಬಳಕೆ ಮಾಡಿಕೊಂಡಿರುವುದರಿಂದ ಹೆಚ್ಚಿನ ಚರ್ಚೆಗೆ ಈ ಸಂದರ್ಭದಲ್ಲಿ ಹೋಗಿರುವುದಿಲ್ಲ.

'ರಾಷ್ಟ್ರೀಯ ಶಿಕ್ಷಣ ನೀತಿ' ೧೯೮೬ ಪ್ರಗತಿ ಪರಿಶೀಲನೆ' ಎಂದು ಡಾ. ಎಚ್.ಎಮ್. ಕಾಶೀನಾಥ ಸಂಪಾದನೆ ಮಾಡಿದ್ದಾರೆ. ಪ್ರಸ್ತಾವನೆಯಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿ ಜಾರಿಗೆ ಬರಲು ಕಾರಣವಾದ ಅಂಶಗಳನ್ನೂ ಚರ್ಚೆ ಮಾಡಿದ್ದಾರೆ. ಪ್ರಾಥಮಿಕ, ಪ್ರೌಢ, ವಿಶ್ವವಿದ್ಯಾಲಯ ದಲ್ಲಿನ ಶಿಕ್ಷಣದ ವಿವಿಧ ಆಯಾಮಗಳನ್ನು ಚರ್ಚೆ ಮಾಡಿ, ವಿಶ್ಲೇಷಿಸುವ ಪ್ರಯತ್ನ ಮಾಡಿದ್ದಾರೆ.

ಹೊನ್ನಾರು ಮಾಲೆ ಪ್ರಕಾಶನದಲ್ಲಿ ಪ್ರಕಟಣೆಗೊಂಡ 'ಕನ್ನಡ ಚಿಂತನೆ' ಎಂಬ ಪುಸ್ತಕವನ್ನು ಡಾ. ದೇ. ಜವರೇಗೌಡ ಬರೆದಿದ್ದಾರೆ. ಇದರಲ್ಲಿ ಶಿಕ್ಷಣ–ಭಾಷೆ, 'ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡದ ಸ್ಥಾನ' ಎಂಬ ಲೇಖನಗಳು ಇವೆ. ಶಿಕ್ಷಣದಲ್ಲಿ ಭಾಷಾ ಕಲಿಸುವುದು ತ್ರಿಭಾಷ ಸೂತ್ರದ ನೆಲೆಯಿಂದ ಎಂದು ಪ್ರಸ್ತಾಪಿಸಿದ್ದಾರೆ. ಅದರಿಂದ ಮಾತೃಭಾಷೆ ಕಲಿಕೆಯಲ್ಲಿ ಆಗುವ ಸಮಸ್ಯೆಗಳನ್ನು ಗುರುತಿಸಿದ್ದಾರೆ. ಜೊತೆಗೆ ಕನ್ನಡ ಮಾಧ್ಯಮ ಮಕ್ಕಳ ಸಮಸ್ಯಗಳೇನು.

ಪ್ರಾದೇಶಿಕವಾಗಿ, ಅಲ್ಪ ಸಂಖ್ಯಾತರಿಗೆ ಶಿಕ್ಷಣದಲ್ಲಿ ಕಲಿಸುವ ಭಾಷೆಯಿಂದ ಆಗುವ ತೊಂದರೆಗಳೇನು ಎಂಬುದನ್ನು ವಿವರಿಸಿದ್ದಾರೆ. ಇಂಗ್ಲೀಶ್ ಕಲಿಸುವ ನೀತಿಯನ್ನು ವಿಶ್ಲೇಷಿಸಿ ಈ ನೀತಿಯಿಂದ ಕನ್ನಡಕ್ಕೆ ಆಗುವ ತೊಂದರೆಗಳೇನು ಎಂಬುದನ್ನು ಕುವೆಂಪುರವರ 'ಬಲತ್ಕಾರದ ಭಾಷಾ ತ್ರಿಶೂಲ' ಕವಿತೆಯ ಸಾಲುಗಳನ್ನು ದಾಖಲಿಸಿ ಚರ್ಚೆ ನಡೆಸಿದ್ದಾರೆ. ಮುಂದೆ ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡದ ಸ್ಥಾನ ಕುರಿತು ಹೀಗೆ ವಿಶ್ಲೇಷಿಸುತ್ತಾರೆ. ಪ್ರಾಥಮಿಕ ಶಾಲೆಯ ಹಂತದಲ್ಲಿ ಎರಡು ಭಾಷೆಗಳಲ್ಲಿ ಮಾತ್ರ ಬೋಧನೆ ಅವಕಾಶವಿರಬೇಕು. ತ್ರಿಭಾಷಾ ಸೂತ್ರದಿಂದ ಈ ಹಂತದಲ್ಲಿ ಮಕ್ಕಳಿಗೆ ತೊಂದರೆಯಾಗುತ್ತದೆ. ಆದ್ದರಿಂದ ಈ ನೀತಿ ಸರಿಯಾದುದಲ್ಲ ಎನ್ನುತ್ತಾರೆ. ಒಂದು ಪಕ್ಷ ಈ ಸೂತ್ರದ ಜಾರೀಕರಣ ಅಗತ್ಯವೆನಿಸಿದರೆ ಐದನೆಯ ತರಗತಿಯಿಂದ ಕಾರ್ಯಗತಗೊಳಿಸಬಹುದೇ ಹೊರತು ಅದಕ್ಕಿಂತ ಮುಂಚೆ ಕೂಡದು ಎಂಬ ಅಭಿಪ್ರಾಯವನ್ನು ಮಂಡಿಸುತ್ತಾರೆ. ಹಾಗೆಯೇ ಪ್ರಾಥಮಿಕ ಹಂತದಲ್ಲಿ ಇತರ ವಿಷಯಗಳಿಗಿಂತ ಭಾಷೆಗೆ ಪ್ರಾಧಾನ್ಯ ನೀಡಬೇಕು. ಅನ್ಯ ವಿಷಯಗಳನ್ನು ಕಲಿಸುವಾಗಲೂ ಭಾಷೆಯನ್ನು ಮರೆಯಕೂಡದು ಎಂದು ಹೇಳುತ್ತಾರೆ. ಇದೊಂದು ಉತ್ತಮ ಸಲಹೆ ಎಂದು ಹೇಳಬಹುದು.

ಇಂದು ಚಾಲ್ತಿಯಲ್ಲಿರುವ ಭಾಷಾ ಬೋಧನೆಯ ವಿಧಾನ ಅತ್ಯಂತ ದೋಷ ಮುಕ್ತವಾದದ್ದೆಂದು ಹೇಳಿದರೆ ವಿದ್ಯಾತಜ್ಞರು ಕ್ಷಮಿಸುವರೆಂದು ನಂಬಿದ್ದೇನೆ. ಇದು ವಿದೇಶಗಳಲ್ಲಿ ವಿದೇಶಿಯ ಭಾಷೆಗಳ ಕಲಿಕೆಗೆ ಸೃಷ್ಟಿಯಾದದ್ದು. ನಮ್ಮ ವರ್ಣ ಮಾಲೆಯೇ ಬೇರೆ, ನಮ್ಮ ಪದ ಪದ್ಧತಿಯೆ ಬೇರೆ ನಮ್ಮ ವಾಕ್ಯ ರಚನೆಯೇ ಬೇರೆ, ಅಲ್ಲಿಯವೇ ಬೇರೆ. ನಮ್ಮ ಅಕ್ಷರಗಳ ಉಚ್ಚಾರಣೆ ವರ್ಣಮಾಲೆಯ ಜಾಯ ಮಾನವನ್ನರಿತು ಮಕ್ಕಳಿಗೆ ಅಕ್ಷರಾಭ್ಯಾಸ ಮಾಡಿಸಬೇಕು. ರೋಮನ್ ವರ್ಣಮಾಲೆಯಲ್ಲಿ ಒಂದು ಅಕ್ಷರಕ್ಕೆ ಅನೇಕ ಉಚ್ಚರಣೆಗಳಿವೆ. ಭಾರತೀಯ ವರ್ಣಮಾಲೆಯಲ್ಲಿ ಸಾಮಾನ್ಯವಾಗಿ ಒಂದು ಅಕ್ಷರಕ್ಕೆ ಒಂದೇ ಒಂದು ಉಚ್ಚಾರಣೆ. ಹಿಂದಿನ ಕಾಲದಲ್ಲಿ ಉಚ್ಚಾರಣೆ ಸಹಿತ ವರ್ಣಮಾಲೆಯನ್ನೂ ಕಾಗುಣಿತವನ್ನೂ ಕಲಿಸಿ, ಅನಂತರ ಪದ ವಾಕ್ಯಗಳನ್ನು ಕಲಿಸಲಾಗುತ್ತಿತ್ತು. ನಮ್ಮ ವರ್ಣಮಾಲೆ ಅತ್ಯಂತ ಶಾಸ್ತ್ರೀಯವಾದ್ದರಿಂದ ಉಚ್ಚಾರಣ ನಿಯಮಗಳೆಲ್ಲ ಸ್ಪಷ್ಟವಾಗಿರುವುದುರಿಂದ ಕಲಿಸುವುದು ಸುಲಭ. ರೋಮನ್ ಅಕ್ಷರಗಳನ್ನು ಕಲಿಸುವುದು ಕಷ್ಟ. ಏಕೆಂದರೆ ಒಂದೇ ಅಕ್ಷರಗಳಿಗೆ ನಾಲ್ಕಾರು ಉಚ್ಚಾರಣೆಗಳಿವೆ. ಉದಾಹರಣೆಗೆ : Could ಎಂಬ ಪದ ತೆಗೆದುಕೊಳ್ಳಿ. ಇಲ್ಲಿಯ ಅಕ್ಷರಗಳಿಗೆ ಬೆಲೆ ಕೊಡುವುದಾದರೆ ಅದು ಕೂಲ್ಡ್ ಎಂದೋ ಕೌಲ್ಡ್ ಎಂದೋ ಆಗಬೇಕು ಎಂದು ವಿಶ್ಲೇಷಣೆ ಮಾಡುತ್ತಾರೆ.

'ಕನ್ನಡ ಪ್ರಜ್ಞೆ' ಎಂಬ ಪುಸ್ತಕವನ್ನು ಪ್ರೊ. ಬರಗೂರು ರಾಮಚಂದ್ರಪ್ಪ ಬರೆದಿದ್ದಾರೆ. ಇದು ಹೊನ್ನಾರು ಮಾಲೆಯಿಂದ ಪ್ರಕಟಗೊಂಡಿದೆ. ಇದರಲ್ಲಿ 'ಪ್ರಾಥಮಿಕ ಶಿಕ್ಷಣ ಭಾಷೆ ಮತ್ತು ಮಾಧ್ಯಮ' 'ಪ್ರಾಥಮಿಕ ಶಿಕ್ಷಣದಲ್ಲಿ ಸಮಾನತೆ.' 'ಪ್ರಾಥಮಿಕ ಪೂರ್ವ ಶಿಕ್ಷಣ

ಮತ್ತು ಕನ್ನಡ' ಎಂಬ ಮೂರು ಲೇಖನಗಳು ನನ್ನ ಅಧ್ಯಯನಕ್ಕೆ ಸಂಬಂದಿಸಿದವುಗಳಾಗಿವೆ. ಮೊದಲ ಲೇಖನ ಪ್ರಾಥಮಿಕ ಶಿಕ್ಷಣದ ಒಂದನೇ ತರಗತಿಯಿಂದಲೇ ಇಂಗ್ಲೀಶನ್ನು ಒಂದು ಭಾಷೆಯಾಗಿ ಕಲಿಸಬೇಕೆಂದು ಒತ್ತಾಯ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ನಿಲುವುಗಳ ಮೂಲಕ ನಡೆದ ವಾಗ್ವಾದಗಳ ಹಿನ್ನೆಲೆಯಲ್ಲಿ ಈ ಲೇಖನ ರೂಪುಗೊಂಡಿದೆ. 'ಎರಡನೆಯದು ಪ್ರಾಥಮಿಕ ಶಿಕ್ಷಣ ಸಮಾನತೆ' ಅಂದರೆ ಭಾಷಾ ಸಮಾನತೆಯ ಅರ್ಥ ಕಲ್ಪಿಸಲಾಗಿದೆ. ಎಲ್ಲಾ ಪ್ರಾಥಮಿಕ ಶಾಲೆಗಳಿಗೂ ಮಾತೃಭಾಷೆ ಅಥವಾ ಕನ್ನಡ ಮಾಧ್ಯಮವನ್ನು ಅಳವಡಿಸಿ ಕೊಳ್ಳುವುದು ಕಡ್ಡಾಯವಾಗಬೇಕು. ಆಂಗ್ಲ ಭಾಷೆಯನ್ನು ಕೇವಲ ಒಂದು ವಿಷಯವಾಗಿ ಕಲಿಸಲು ಅವಕಾಶವಿರಬೇಕೇ ಹೊರತು ಆಂಗ್ಲ ಮಾಧ್ಯಮವು ಕರ್ನಾಟಕದ ಯಾವುದೇ ಶಾಲೆಯಲ್ಲಿ ಇರಬಾರದು ಎಂಬ ಅಭಿಪ್ರಾಯವನ್ನು ಮಂಡಿಸುತ್ತಾರೆ. ಇನ್ನು ಮೂರನೇ ಲೇಖನದಲ್ಲಿ ಪ್ರಾಥಮಿಕ ಪೂರ್ವ ಶಿಕ್ಷಣ ಮತ್ತು ಕನ್ನಡದ ಬಗ್ಗೆ ಚರ್ಚೆಯನ್ನು ಕೈಗೆತ್ತಿ ಕೊಂಡಿದ್ದಾರೆ. ೨೯.೪.೧೯೯೪ ರಲ್ಲಿ ಆದೇಶದಂತೆ ೧ ರಿಂದ ೪ನೇ ತರಗತಿಯವರೆಗೆ ಕನ್ನಡವೇ ಮಾತೃಭಾಷೆ ಎಂದು ಜಾರಿಗೆ ತಂದಿದ್ದರು. ಖಾಸಗಿ ಶಾಲೆಗಳಲ್ಲಿ ಈ ಕ್ರಮ ಸರಿಯಾಗಿ ಜರುಗುತ್ತಿಲ್ಲ ಎಂದಿದ್ದಾರೆ. ಇದು ಎಲ್ಲಾ ಶಾಲೆಯಲ್ಲೂ ಕಡ್ಡಾಯವಾಗಿ ಕಲಿಸುವಂತಾಗಬೇಕು ಎಂಬ ಅಂಶಗಳನ್ನು ಚರ್ಚೆಮಾಡಿ ಮಾಧ್ಯಮದ ಅಧಿನಿಯಗಳನ್ನು ವಿಶ್ಲೇಷಿಸಿದ್ದಾರೆ. ಅವುಗಳು ನಮ್ಮ ಪ್ರಾಥಮಿಕ ಶಿಕ್ಷಣದ ಖಾಸಗಿ ವಲಯದಲ್ಲಿ ಬರದಿರುವುದಕ್ಕೆ ಕಾರಣಗಳನ್ನು ವಿಶ್ಲೇಷಿಸುತ್ತಾರೆ.

### ೨.೬ ನಿಯತಕಾಲಿಕೆಗಳು

ಬೋಧನೆ ಗುಣ ಮಟ್ಟ ಖಾತ್ರಿ ಹೇಗೆ ಎಂಬ ಲೇಖನವನ್ನು ಸಾ. ಮಂಚಯ್ಯ ಪತ್ರಿಕೆಯಲ್ಲಿ ಬರೆದಿದ್ದಾರೆ. ಪತ್ರಿಕೆಯ ಹೆಸರು ದಿನಾಂಕ ಲಭ್ಯವಿಲ್ಲ. ಇದರಲ್ಲಿ ಮುಖ್ಯವಾಗಿ ಪ್ರಾಥಮಿಕ ಶಿಕ್ಷಕರ ವಿಚಾರವನ್ನು ಕೈಗೆತ್ತಿಕೊಳ್ಳುತ್ತಾರೆ. ನಾವು ಸದಾ ಶಿಕ್ಷಣ ಸುಧಾರಣೆ. ಪಠ್ಯ ವಸ್ತು ಹಾಗೂ ಪಠ್ಯ ಪುಸ್ತಕಗಳ ಪರಿಷ್ಕಾರ ಅದಕ್ಕೆ ಸಂಬಂಧಿಸಿದ ಹೊಸ ಕಲ್ಪನೆಗಳನ್ನು ಕುರಿತು ಅತಿಯಾದ ಆಸಕ್ತಿ ತೋರಿಸುತ್ತಿದ್ದೇವೆ. ಸ್ವಾತಂತ್ರ್ಯ ನಂತರದ ಐದು ದಶಕಗಳ ಅವಧಿಯ ಶಿಕ್ಷಣದಲ್ಲಿ ಹೊಸತನ ತರಲು, ಶಾಲೆಗೆ ಹೊರಗೆ ಉಳಿದಿರುವ ಮಕ್ಕಳನ್ನು ಆಕರ್ಷಿಸಲು ಮತ್ತು ಶಿಕ್ಷಣದ ಗುಣಮಟ್ಟ ಉತ್ತಮ ಪಡಿಸಲು ಅನೇಕ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ತಂದಿದ್ದೇವೆ. ಕೆಲವು ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತಂದು ನಂತರದ ದಿನದಲ್ಲಿ ಕೈಬಿಟ್ಟೆವು. ಇಷ್ಟೆಲ್ಲಾ ವ್ಯವಸ್ಥೆ ಇಂದಿಗೂ ನಡೆದಿದೆ. ಆದರೆ ಶಿಕ್ಷಕರ ಬೋಧನೆ ಗುಣಮಟ್ಟ ಸುಧಾರಿಸಲು ಪರಿಣಾಮಾತ್ಮಕ ತರಬೇತಿಗಳು ನಡೆಯುತ್ತಿಲ್ಲ. ಜೊತೆಗೆ ಮಾರ್ಗದರ್ಶನ, ಸಲಹೆಗಳನ್ನು ಕೊಡುವವರಿಲ್ಲದೆ ಶಿಕ್ಷಕರ ಗುಣ ಮಟ್ಟವಿಲ್ಲದ ಬೋಧನೆ ಸಂಪ್ರದಾಯಕ ರೀತಿಯಲ್ಲಿ ನಡೆಯುತ್ತಿದೆ. ಇದರಿಂದ ವಿದ್ಯಾರ್ಥಿಗಳಿಗೆ ಉಪಯೋಗವಾದುದು ಏನು ಎಂಬುದನ್ನು ಪ್ರಶ್ನಿಸಿದ ಉತ್ತರ ಪರೀಕ್ಷೆಗಾಗಿ ಎಂದು ಹೇಳಲಾಗುತ್ತಿದೆ. ಆದ್ದರಿಂದ

ಎನ್.ಸಿ.ಇ.ಆರ್.ಟಿ. ಡಿ.ಎಸ್.ಇ.ಆರ್.ಟಿ. ಮತ್ತು ಡಿ.ಐ.ಇ.ಟಿ. ಕಾಲಕಾಲಕ್ಕೆ ಶಿಕ್ಷಕರಿಗೆ ತರಬೇತಿ ಮತ್ತು ಮಾರ್ಗದರ್ಶನ ಸಲಹೆಗಳು ಕಡ್ಡಾಯವಾಗಬೇಕಿದೆ ಎಂಬ ಅಭಿಪ್ರಾಯವನ್ನು ಈ ಲೇಖನದಲ್ಲಿ ಸ್ಪಷ್ಟಪಡಿಸುತ್ತಾರೆ.

೨೧.೦೩.೦೫ ಉದಯವಾಣಿ ದಿನ ಪತ್ರಿಕೆಯಲ್ಲಿ ಸಿ.ಪಿ. ನಾಗರಾಜ ಅವರು ಕನ್ನಡಕ್ಕೆ ಬೇಡವೆ? ಕನ್ನಡದ್ದೇ ವ್ಯಾಕರಣ ಎಂಬ ಲೇಖನದಲ್ಲಿ ಶಂಕರಭಟ್ಟರು ರಚಿಸಿರುವ ಎಲ್ಲಾ ಕೃತಿಗಳ ಆಶಯವನ್ನು ಇಲ್ಲಿ ಸ್ಪಷ್ಟಪಡಿಸಿದ್ದಾರೆ. ಶಾಲೆಗಳಲ್ಲಿ ಕನ್ನಡ ಭಾಷೆಯ ರಾಚನಿಕ ಲಕ್ಷಣಗಳನ್ನು ಬೋಧಿಸುತ್ತಿರುವ ರೀತಿ ಎಷ್ಟರ ಮಟ್ಟಿಗೆ ಅವೈಜ್ಞಾನಿಕವಾಗಿದೆ ಎಂಬುದನ್ನು ಕನ್ನಡಿಗರಿಗೆ ಮನಗಾಣಿಸುವ ಪ್ರಯತ್ನ ಮಾಡಿದ್ದಾರೆ. ಆಧುನಿಕ ವಿಜ್ಞಾನದ ಅರಿವಿನಿಂದ ಹಿಂದೆ ಆಗಿರುವ ತಪ್ಪುಗಳನ್ನು ಸರಿ ಪಡಿಸಿಕೊಂಡು ಸಂಸ್ಕೃತದ ವ್ಯಾಕರಣದ ಪರಿಕಲ್ಪನೆಗಳನ್ನು ಕೈಬಿಟ್ಟು, ಹೊಸದಾದ ವ್ಯಾಕರಣ ಪಠ್ಯಗಳನ್ನು ರಚಿಸಬೇಕು, ಶಾಲಾ ಕಾಲೇಜುಗಳಲ್ಲಿ ಬೋಧಿಸುವಂತಾಗ ಬೇಕು ಎಂದು ಹೇಳಿದ್ದಾರೆ.

ಡಾ. ಮಹಾಬಲೇಶ್ವರರಾವ್ ಅವರ 'ಅಧ್ಯಾಪನ ಒಂದು ವೃತ್ತಿಯೇ' ಎಂಬ ಲೇಖನವು ದಿನ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಪತ್ರಿಕೆಯ ಹೆಸರು, ದಿನಾಂಕ ಲಭ್ಯವಿಲ್ಲ. ಈ ಲೇಖನವು ಸ್ವಾತಂತ್ರ್ಯ ಪೂರ್ವದಲ್ಲಿನ ಅಧ್ಯಾಪಕನ ವೃತ್ತಿಯು ಹೇಗೆ ಇತ್ತು. ಅವನ ಆರ್ಥಿಕ ಸ್ಥಿತಿ ಇಂದಿನ ಆರ್ಥಿಕ ಸ್ಥಿತಿಗನುಗುಣವಾಗಿ ಇರುವ ವ್ಯತ್ಯಾಸವನ್ನು ಚರ್ಚಿಸಿದ್ದಾರೆ. ಅಲ್ಲದೆ ವೃತ್ತಿಯಾವುದಾದರೇನು ಕರ್ತವ್ಯದಲ್ಲಿ ಆಸಕ್ತಿ ಮುಖ್ಯ ಎಂಬುದನ್ನು ವಿವಿಧ ವೃತ್ತಿಗಳ ಉದಾಹರಣೆಗಳನ್ನು ಕೊಡುತ್ತಾ, ಸಮಾಜದಲ್ಲಿ ಶಿಕ್ಷಕನಿಗೆ ಯಾವ ಸ್ಥಾನವಿದೆ ಎಂಬುದನ್ನು ವಿವರಿಸಿದ್ದಾರೆ. ಜೊತೆಗೆ ವಿದ್ಯಾರ್ಥಿಯ ಬಾಳು ಬೆಳಗಿಸುವ ಹಾಗೂ ರಾಷ್ಟ್ರದ ಭವಿಷ್ಯ ರೂಪಿಸುವ ವೃತ್ತಿ ಇದಾಗಿದೆ ಎಂದು ಹೇಳಿದ್ದಾರೆ.

೦೧.೦೮.೨೦೦೨ರ ಸುಧಾ ಪತ್ರಿಕೆಯಲ್ಲಿ **'ಕನ್ನಡವ ಕೊಲ್ಲುತಿಹರಲ್ಲಿ'** ಎಂಬ ಲೇಖನವನ್ನು ಕೆ.ಟಿ. ಗಟ್ಟಿಯವರು ಬರೆದಿದ್ದಾರೆ. ಖಾಸಗಿ ಶಾಲೆಗಳ ಕನ್ನಡ ಪಠ್ಯಪುಸ್ತಕಗಳಲ್ಲಿ ಬಳಸಲಾಗಿರುವ ಕನ್ನಡದ ಬಗ್ಗೆ ಯಾರು ತಲೆ ಕೆಡಿಸಿಕೊಂಡಿಲ್ಲ. ಕನ್ನಡ ಕಟ್ಟುವ ಕೆಲಸದ ಬದಲು ಅಲ್ಲಿ ನಡೆಯುತ್ತಿರುವುದು ಕನ್ನಡ ಕೊಲ್ಲುವ ಕೆಲಸ ಎಂದು ವಿಶ್ಲೇಷಿಸಿದ್ದಾರೆ. ಪಠ್ಯಗಳಲ್ಲಿ, ಮಗುವಿಗೆ ಅರ್ಥವಾಗದೆ ಇರುವ ಪದ, ವರ್ಣಗಳನ್ನು ಕಲಿಸಲಾಗುತ್ತದೆ ಎಂದು ಉದಾಹರಣೆಗಳ ಮುಖಾಂತರ ವಿವರಿಸುತ್ತಾರೆ.

ಮೊದಲನೆಯ ತರಗತಿಯ ಕಾಪಿ ಪುಸ್ತಕಗಳಲ್ಲಿರುವ ಕೆಲವು ಅಕ್ಷರಗಳು ಮತ್ತು ಶಬ್ದಗಳು ಕ ಗ ಚ ಡ ಪ ರ ಲ ವ ಈ ಅಕ್ಷರಗಳು ಬಳಕೆಯಲ್ಲಿವೆಯಾ? **ಳ** ಕನ್ನಡದಲ್ಲಿ ಹೀಗೊಂದು ಶಬ್ದವಿದೆಯೇ ಕ ಅಃ ಕಃ ಕ ಐ ಕೈ ಇದು ಯಾವ ಬಗೆಯ ಅಕ್ಷರ ಕಲಿಕೆ ಜೀವನ, ಗೀಜಗ, ಬಿರುಸು, ಶೂರ ಹೀಗೆಂದರೇನು? ಈ ಮೇಲಿನ

ಅಂಶಗಳಲ್ಲಿ ಎಷ್ಟು ತಪ್ಪುಗಳಿವೆ. ಇವು ಒಂದನೇ ತರಗತಿಯ ಮಗುವಿಗೆ ಅರ್ಥವಾಗುತ್ತದೆಯೇ ಎಂಬುದನ್ನು ಯೋಚಿಸಬೇಕಿದೆ ಎಂಬುದನ್ನು ಚರ್ಚಿಸುತ್ತಾರೆ. ನಂತರ ಎರಡನೆಯ ತರಗತಿಯ ಪುಸ್ತಕದಲ್ಲಿರುವ ಕೆಲವು ಶಬ್ದಗಳು ಮತ್ತು ವಾಕ್ಯಗಳು ಠಸ್ಸೆ, ಮುಯ್ಯಿ, ಭಲ್ಲೂಕ, ಭಕ್ತಿ, ಉತ್ಕಟ, ಸನ್ಮಾನ, ಬ್ರಹ್ಮ, ವಿಷ್ಣು, ಉದ್ಗಾರ, ಪೈಗಂಬರ, ಕ್ರಿಸ್ತ, ಕೀರ್ತಿ, ಭವಿಷ್ಯ, ಪ್ರತಿಷ್ಟೆ, ತಪಸ್ಸು, ವ್ಯಾಸ, ದಿನವೂ ದೇವರನ್ನು ಶ್ರದ್ಧಾ ಭಕ್ತಿಗಳಿಂದ ಪೂಜಿಸು, ಮಾತಾ, ಪಿತೃ, ಒಡ ಹುಟ್ಟಿದವರನ್ನು ಪ್ರೀತಿಸು, ವಾಕ್ಯ ಬೆಳಗಿನ ಜಾವ ಸೂರ್ಯೋದಯವಾಗುವುದು. ಫಲ ಪುಷ್ಪ ಪ್ರದರ್ಶನ ಜನರಿಗೆ ಆಕರ್ಷಣ. ಮೂರನೇ ತರಗತಿ ಪುಸ್ತಕದ ವಾಕ್ಯಗಳು ಕೀರ್ತಿವಂತ ಮಕ್ಕಳು ಮಾತಾಪಿತರಿಗೆ ಹಿತ. ಮನುಷ್ಯ ಜನ್ಮವೇ ಜೀವಿಗಳಲ್ಲಿ ಅತ್ಯಂತ ಶ್ರೇಷ್ಠ ಎಂಬ ವಾಕ್ಯಗಳನ್ನು ದಾಖಲಿಸಿ ಚರ್ಚೆ ನಡೆಸಿದ್ದಾರೆ.

೨೪.೦೭.೨೦೦೧ರ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಎಂ.ವಿ. ಬಾಬು ಗಿರೆಣ್ಣಯವರು ಪ್ರಾಥಮಿಕ ಪಠ್ಯ ಪುಸ್ತಕದಲ್ಲಿಯ ಗೊಂದಲಗಳು ಎಂಬ ಲೇಖನವನ್ನು ಬರೆದಿದ್ದಾರೆ. ೨೦೦೦-೨೦೦೧ ನೇ ಸಾಲಿನ ಕನ್ನಡಭಾಷಾ ಪಠ್ಯಪುಸ್ತಕದಲ್ಲಿನ ದೋಷಗಳನ್ನು ವಿಶ್ಲೇಷಿಸುತ್ತಾರೆ. ಐದನೇ ತರಗತಿ ಕನ್ನಡ ಪುಸ್ತಕದಲ್ಲಿ ೧೧೦ನೇ ಪುಟದಲ್ಲಿ ದೊಡ್ಡಿ ಎಂಬ ಪದದ ಅರ್ಥವನ್ನು ತುಡುಗ ಧನಗಳ ತುರಂಗ, ಎಂದು ಕೊಟ್ಟಿದೆ. ಆದರೆ ಪುಣ್ಯಕೋಟಿ ಪದ್ಯ ಇದಾಗಿರುವುದರಿಂದ ಇಲ್ಲಿ ದೊಡ್ಡಿ ಎಂಬ ಪದಕ್ಕೆ ಕೊಟ್ಟಿಗೆ, ಹಿತ್ತಲು, ಹಟ್ಟಿ ಎಂದಾಗಬೇಕು ಎನ್ನುತ್ತಾರೆ. ೮೯ನೇ ಪುಟದಲ್ಲಿ ವಿಭಕ್ತಿ ಮತ್ತು ವಿಭಕ್ತಿ ಪ್ರತ್ಯಯಗಳ ಕೋಷ್ಟಕ ಕೊಟ್ಟಿರುವಲ್ಲಿ ಪ್ರಥಮ ವಿಭಕ್ತಿಯ 'ಉ' ಎನ್ನುವ ಬದಲಾಗಿ ಎಂದಿದೆ. ಪುಟ ಸಂಖ್ಯೆ ೨೯ರಲ್ಲಿ ಬಂದಾಗ ಜಲಪಾತ ಪಾಠದಲ್ಲಿ ಹೊನ್ನೂರಿನಲ್ಲಿ ಗೋಕಾಕ ಜಲಪಾತಕ್ಕೆ ನಿರ್ಮಿಸಿದ ವಿದ್ಯುತ್ ಉತ್ಪಾದನಾ ಕೇಂದ್ರ ಇದೆ ಎಂದು ಹೇಳಲಾಗಿದೆ. ಇದು ನಿಜಾಂಶದಲ್ಲಿ ಈ ಕೇಂದ್ರ ಜಲಪಾತದ ಸಮೀಪ ಇರುವುದರಿಂದ ಗೋಕಾಕದಲ್ಲಿ ಎನ್ನಬಹುದಾಗಿತ್ತು. ಇಲ್ಲವೇ ದೂಪದಾಳ ಸೀಮೆಯಲ್ಲಿರುವುದರಿಂದ ದೂಪದಾಳದಲ್ಲಿ ಎಂದು ಹೇಳಬಹುದು. ಅಲ್ಲದೇ ಸುತ್ತ ಮುತ್ತಲಿನ ಹಳ್ಳಿಗಳಿಗೆ ಈ ವಿದ್ಯುತ್ ಕೇಂದ್ರ ಬೆಳಕನ್ನು ನೀಡುತ್ತದೆ ಎಂದಿದೆ. ಆದರೆ ಇದು ವಾಸ್ತವ ಅಲ್ಲ, ಇದು ಕೇವಲ ಮೂಲಿನ ಗಿರಣಿಗೆ ವಿದ್ಯುತ್ ಬೆಳಕನ್ನು ಒದಗಿಸುತ್ತದೆ. ಪುಟ ೩೦ರಲ್ಲಿ ಗಮನಿಸಿ ವಿಭಾಗದಲ್ಲಿ 'ಹೂಗಳಂತೆ' ಎಂಬುದನ್ನು ಅರ್ಥೈಸುವಾಗ ಗಟ್ಟಿಯಾಗಿ ಕೂಗಿದರೆ ಕೇಳುವಷ್ಟು ದೂರ ಎಂದಾಗಿದೆ. ಆದರೆ ಇದು ಸರಿಯಲ್ಲ. ಕೂಗು ಎಂದರೆ ಬಾರಿ ಶಬ್ದವಲ್ಲ ಕೂಗಳತೆ ಎಂದರೆ ಕೂಗು ಕೇಳಿಸುವಷ್ಟು ಸಮೀಪ ಅಥವಾ ಕೂಗು ಕೇಳುವಷ್ಟು ಅಂತರ ಎನ್ನಬಹುದಾಗಿತ್ತು. ಆರನೇ ತರಗತಿಯ ಕನ್ನಡಭಾಷಾ ಪಠ್ಯದಲ್ಲಿ ಪುಟ ಸಂಖ್ಯೆ ಗಮನಿಸಿ ಎಂಬಲ್ಲಿ ಬೋರ್ಗರ ಎಂದು ನೀರು ಹರಿಯುವಾಗ ಉಂಟಾಗುವ ಸಪ್ಪಳ ಎಂದಾಗಿದೆ. ಆದರೆ ರಬಸವಾಗಿ ವೇಗವಾಗಿ ಹರಿಯುವ ನೀರಿಗೆ ಬೋರ್ಗರೆ ಎನ್ನುತ್ತಾರೆ ಹೊರತು ಸಪ್ಪಳ ಎಂದು ಬಳಸುವುದಿಲ್ಲವೆಂದು ದೋಷಗಳನ್ನು ಪಟ್ಟಿ ಮಾಡುತ್ತಾ ಚರ್ಚಿಸಿದ್ದಾರೆ.

ಡಾ. ಆರ್. ನಾಗರಾಜಯ್ಯ ಕನ್ನಡ ಪ್ರಭ ಆಗಸ್ಟ್ ೨.೮.೦೨ ಪತ್ರಿಕೆಯಲ್ಲಿ ಪಠ್ಯ ಪುಸ್ತಕಗಳ ತಯಾರಿ ವ್ಯವಸ್ಥೆಗೆ ಕಾಯಕಲ್ಪ ಎಂಬ ಲೇಖನವನ್ನು ಬರೆದಿದ್ದಾರೆ. ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯರನ್ನು ಆಯ್ಕೆ ಮಾಡಿಕೊಳ್ಳುವಾಗ ಅವರ ಸಮಸ್ಯೆ, ಅರ್ಹತೆ, ಅವರ ಅನುಭವ ಇವೆಲ್ಲಕ್ಕಿಂತ ಮಿಗಿಲಾಗಿ ಅವರ ಶ್ರದ್ಧೆ, ಶೈಕ್ಷಣಿಕ ಕಾಳಜಿ ಇರುವ ವ್ಯಕ್ತಿಗಳನ್ನು ಆಯ್ಕೆ ಮಾಡಿ ಕೊಳ್ಳಬೇಕು. ಹತ್ತಿರದಲ್ಲಿ ಸಿಕ್ಕುತ್ತಾರೆ ಎಂಬ ಭಾವನೆಯಿಂದ ಅವರ ನೇಮಕಾತಿ ಆಗಬಾರದು. ಜೊತೆಗೆ ಎಲ್ಲಾ ತರಗತಿಯ ಪಠ್ಯ ಪುಸ್ತಕಗಳ ರಚನೆ ಕೆಲವು ಜನರ ಗುತ್ತಿಗೆ ಕೆಲಸವಾಗಬಾರದು. ಇದರಿಂದ ಅವರಲ್ಲಿ ಶೈಕ್ಷಣಿಕ ಅಸಡ್ಡೆ ಬೆಳೆಯುವುದು ಸಾಧ್ಯವಾಗುತ್ತದೆ. ಜೊತೆಗೆ ಪಠ್ಯಪುಸ್ತಕ ರಚನೆ ಮಾಡುವಾಗ ಕೈಗೊಳ್ಳಬೇಕಾದ ಸೂತ್ರಗಳನ್ನು ವಿವರಿಸಿ ಶಿಕ್ಷಣದಲ್ಲಿ ಪಠ್ಯಕ್ರಮದ ಸ್ಥಾನವನ್ನು ಚರ್ಚಿಸಿದ್ದಾರೆ.

೧೪.೬.೦೩ರ ಕನ್ನಡ ಪ್ರಭದಲ್ಲಿ ಡಾ. ಎಂ. ಚಿದಾನಂದ ಮೂರ್ತಿಯವರು **'ಕಲುಷಿತ ಪ್ರೈಮರಿ ಪಠ್ಯಗಳು'** ಎಂಬ ಲೇಖನವನ್ನು ಬರೆದಿದ್ದಾರೆ. ಇದರಲ್ಲಿ ಪಠ್ಯದಲ್ಲಿ ದೋಷಗಳನ್ನು ಚರ್ಚಿಸಿದ್ದಾರೆ. ಕನ್ನಡ ಪಠ್ಯ ಪುಸ್ತಕಗಳಲ್ಲಿ ರಾಷ್ಟ್ರಗೀತೆಯ ಉಚ್ಛಲವೆಂದು ಬಳಕೆ ಮಾಡಲಾಗಿದೆ. ರಾಷ್ಟ್ರಗೀತೆ ಸಂದರ್ಭದಲ್ಲಿ ಅರ್ಥದ ದೃಷ್ಟಿಯ ಅಲ್ಪ ಪ್ರಾಣ ಬಳಕೆ ಸೂಕ್ತವಾದದ್ದು. ಮಹಾಪ್ರಾಣ ಬಳಕೆ ಸೂಕ್ತವಾಕದುದಲ್ಲ. ಇಲ್ಲಿ ಉಚ್ಛಲ ಗುಣವಾಚಕವಾಗಿ ಬಳಕೆಯಲ್ಲಿದೆ. ಇದಕ್ಕೆ ಮೇಲಕ್ಕೆ ಚಿಮ್ಮುವ ಎನ್ನುವ ಅರ್ಥ ಇದೆ. ಈ ತಿದ್ದುಪಡಿ ಕನ್ನಡದ ಎಲ್ಲಾ ಹಂತದ ಪಠ್ಯ ಪುಸ್ತಕಗಳಲ್ಲಿ ಆಗಬೇಕಿದೆ ಎಂದು ಹೇಳಿದ್ದಾರೆ.

ಇಷ್ಟೇ ಅಲ್ಲದೆ ದಿನಪತ್ರಿಕೆಗಳಲ್ಲಿ ಪ್ರಾಥಮಿಕ ಶಿಕ್ಷಣದ ಬಗ್ಗೆ ಚರ್ಚೆಗಳು ನಡೆಯುತ್ತಿರುವುದನ್ನು ಕಾಣಬಹುದು. ಅವುಗಳಲ್ಲಿ ಕಾರ್ಡ್ ಬಳಸಿ ಓದಿಸುವ ಆಟ (ಲೇಖಕ ಬೇದ್ರೆ ಮಂಜುನಾಥ. ಪ್ರಜಾವಾಣಿ ೨೬.೮.೦೮) ತರಗತಿಯ ಏಕಾಂತ, ಸೆಮಿನಾರಿನ ಲೋಕಾಂತ (ಪ್ರಜಾವಾಣಿ ೨೦.೨.೦೬ ಲೇಖಕ ಕೆ. ನರಸಿಂಹಮೂರ್ತಿ) ಶಿಕ್ಷಣ ಮೌಲ್ಯಾಂಕನ: ಪ್ರಾದೇಶಿಕತೆಯ ನಿರ್ಲಕ್ಷ್ಯ (ಲೇಖಕ –ಡಾ. ಟಿ.ಆರ್. ಚಂದ್ರಶೇಖರ ಪ್ರಜಾವಾಣಿ ೨೦.೦೨.೨೦೦೬)ಗುಣಮಟ್ಟ ಮೌಲ್ಯಾಂಕನ: ಶಿಕ್ಷಣ ಕ್ರಾಂತಿಗೆ ಮುನ್ನುಡಿ (ಲೇಖಕರು ಉದಯಶಂಕರ ಭಟ್ ಪ್ರಜಾವಾಣಿ ೧೬.೧.೨೦೦೬) ತ್ರೈಮಾಸಿಕ ಪದ್ಧತಿ, ಶಿಕ್ಷಕರಿಗೆ ಪರೀಕ್ಷೆ (ಲೇಖಕರು ಬಿ.ಎಸ್. ನಾಗರತ್ನ ಪ್ರಜಾವಾಣಿ ೧೯.೬.೦೬) ಪಠ್ಯಪುಸ್ತಕಗಳ ದಾಸರಾಗಬಾರದು (ಲೇಖಕರು ಸುಮ ಪ್ರಜಾವಾಣಿ ೨೦.೧೧.೦೬) ಶಾಲಾ ಶಿಕ್ಷಣ ಪರಿಣಾಮಕಾರಿ ಬೋಧನಾ ಸಮಯ (ಲೇಖಕರು ಡಾ.ಎಚ್.ಡಿ. ಪ್ರಶಾಂತ್ ಪ್ರಜಾವಾಣಿ ೧೩.೩.೦೬) ಕನ್ನಡಕ್ಕೆ ಬೇಕು ಹೊಸ ವ್ಯಾಕರಣ (ಲೇಖಕರು ಕೆ.ವಿ. ತಿರುಮಲೇಶ್ ಪ್ರಜಾವಾಣಿ ೪.೧೨.೦೬) ಹೇಗಿದೆ ಆಂತರಿಕ ಮೌಲ್ಯಮಾಪನ (ಡಾ. ಶೋಭಾ ಸಾವಕಾರ ಪ್ರಜಾವಾಣಿ ೧೩.೧.೦೯) ಶಿಕ್ಷಣವೆಂಬ ವ್ಯಾಪಾರ ಸರಕು (ಲೇಖಕರು ಡಾ. ಮಹಾಬಲೇಶ್ವರರಾವ್ ಪ್ರಜಾವಾಣಿ ೨೪.೪.೦೭) ಮನೆ ಪಾಠ ಪಿಡುಗು (ಡಾ. ಕೆ.ಸಿ. ಮುರಿಗೆಪ್ಪ ಪ್ರಜಾವಾಣಿ

೨೩.೧೦.೦೭) ಶಾಲೆಗಳಿಗೆ ನಾಟಕ ಶಿಕ್ಷಕರು ಬರುತ್ತಿದ್ದಾರೆ (ಡಾ. ಮಹಾಬಲೇಶ್ವರರಾವ್ ಪ್ರಜಾವಾಣಿ ೧೬.೧೦.೦೭) ಶಾಲೆಗೊಂದು ಇಕೋ ಕ್ಲಬ್ ಇರಲಿ (ಉದಯ ಗಾಂವಕರ್ ೨೫.೯.೦೭) ಪರೀಕ್ಷೆಯ ತಲ್ಲಣ (ಕೆ.ಜಿ. ವಿರೂಪಾಕ್ಷಪ್ಪ. ಪ್ರಜಾವಾಣಿ. ೧೮.೧೨.೦೭) ಸಾಹಿತ್ಯಾಸಕ್ತಿಯಿಂದ ಭಾಷಾಭಿವೃದ್ಧಿ (ಎನ್. ಶೈಲಜಾ ೨೧.೧೦.೦೮) ಕನ್ನಡ ಕಲಿಕೆಗೆ ಕನ್ನಡ ಸೌರಭ (ಕೇಶವ, ಜಿ. ಝಿಂಗಾಡೆ ೨೧.೧೦.೦೮) ಪರಿಹಾರ ಬೋಧನೆ ಯಾರಿಗೆ......? ಯಾವ ಹಂತದಲ್ಲಿ (ಎಂ.ಎಸ್.ಪರಮೇಶ್ವರಯ್ಯ ೨೧.೧೦.೦೮) ಮಕ್ಕಳಿಗೆ ಓದುವ ಕಲೆ ಕಲಿಸಿ ಪೀಡಿಸ ಬೇಡಿ (ಸುಭಾಸಯವಾಡ ೧೪.೧೦.೦೮) ಕಲಿಕೆ ಹೊರಯೇ? (ಮಹಾಬಲೇಶ್ವರರಾವ್ ೧೪.೧೦.೦೮) ಶಿಕ್ಷಣ ಇಲಾಖೆಯ ಸಮನ್ವಯ ಶಿಕ್ಷಣ (ಎಂ.ಎಂ. ಸುರೇಶ. ೧೬.೦೯.೦೮) ಶಾಲಾ ಶಿಕ್ಷಣ : ಪರಿಣಾಮಕಾರಿ ಬೋಧನಾ ಸಮಯ (ಎಚ್.ಡಿ ಪ್ರಶಾಂತ್ ೬.೩.೦೬) ಶಿಕ್ಷಣದಲ್ಲಿ ಮಾನವೀಯ ಮೌಲ್ಯಗಳು (ಮಹಾಬಲೇಶ್ವರರಾವ್ ೮.೫.೦೬) ಕಲಿಕೆಯ ಅನನ್ಯ ಶೈಲಿಗಳು (ಡಾ. ಮಹಾಬಲೇಶ್ವರರಾವ್ ೫.೬.೦೬) ಉಚ್ಚಾರ ದೋಷಗಳತ್ತ ಗಮನವಿರಲಿ (ಸುಮ ೧೮.೧೨.೦೬). ಶಿಕ್ಷಕರ ಪಾಠ ಕಲಿಯಬೇಡವೇ? (ಡಾ. ಮಹಾಬಲೇಶ್ವರರಾವ್ ೧೯.೩.೦೭) ಅಕ್ಷರ: ಗಳಿಸಿದ್ದು ಕಳೆದದ್ದು (ಡಾ.ಬಿ.ಗೋವಿಂದರಾಜ್. ೧೯.೩.೦೭) ಹೆಚ್ಚು ಕಲಿತ ಶಿಕ್ಷಕನೇ ಕಲಿಸಬಲ್ಲ (ಡಾ. ಎಚ್.ಎಸ್. ರಾಘವೇಂದ್ರರಾವ್ ೧೯.೩.೦೭) ಪಠ್ಯಪುಸ್ತಕ ಪಾತ್ರ, ತೇರ್ಗಡೆಯೇ ಮುಖ್ಯ. (ಎಂ.ಡಿ. ಶ್ರೀನಿವಾಸ್, ೧೯.೩.೦೭) ನೀತಿ ಶಿಕ್ಷಣವೋ? ಮೌಲ್ಯ ಶಿಕ್ಷಣವೋ? (ಡಾ. ಮಹಾಬಲೇಶ್ವರರಾವ್. ೨.೧೦.೦೭) ಉಚಿತ ವಿದ್ಯುನ್ಮಾನ ಪದಕೋಶ (ಬೇದ್ರೆ ಮಂಜುನಾಥ ೨.೧೦.೦೭) ಸೃಜನಶೀಲ, ಮಿನುಗುವ ಶಿಕ್ಷಕರು (ಡಾ. ಮಹಾಬಲೇಶ್ವರರಾವ್ ೯.೧೦.೦೭) ಜಾರುವ ದಾರಿಯಲ್ಲಿ ಶಿಕ್ಷಕರ ಶಿಕ್ಷಣ (ಡಾ. ಮಹಾಬಲೇಶ್ವರರಾವ್) ಕಲಿಸಿದ್ದೇನು? ಕಲಿತಿದ್ದೇನು? (ಎಲ್.ಆರ್.ಪ್ರೇಮಾ ೩೦.೧೦.೦೭) ಗುರು ಶಿಷ್ಯರ ಸಂಬಂಧ ಅಂದು ಇಂದು (ಡಾ. ಶೋಭಾ ಸಾವಕಾರ ೨೮.೮.೦೭) ಅಪ್ರಾಯೋಗಿಕ ಗುರುಗಳ ನಿರ್ಮಾಣವೇ? (ಡಾ. ಮಹಾಬಲೇಶ್ವರರಾವ್ ೬.೪.೦೭) ಬದಲಾಗಬೇಕಿದೆ ಕನ್ನಡ ವರ್ಣಮಾಲೆ ಚಿತ್ರಪಟ (ಎಂ. ರಾಧಮ್ಮ ೨೦.೧೧.೦೭) ಪಂಚೇಂದ್ರಿಯ ಶಿಕ್ಷಣ ಏನಿದರ ಲಕ್ಷಣ, (ರಾಮಕೃಷ್ಣ ಶಾಸ್ತ್ರಿ.ಪ. ೧೩.೧೧.೦೭) ಪರೀಕ್ಷಾ ಕೊಠಡಿ ಮೇಲ್ವಿಚಾರಣೆ (ಡಾ. ಮಹಾಬಲೇಶ್ವರರಾವ್. ೧೩.೦೧.೦೭) ಎಂಬ ಲೇಖನಗಳು ಪ್ರಜಾವಾಣಿಯಲ್ಲಿ ಬಂದಿರುವುದನ್ನು ಕಾಣಬಹುದು.

ಈ ಮೇಲಿನ ಲೇಖನಗಳೆಲ್ಲವು ನಿಯತಕಾಲಿಕೆಯಲ್ಲಿ ಪ್ರಕಟಗೊಂಡಿವೆ. ಇವುಗಳು ಪ್ರಾಥಮಿಕ ಹಂತದಲ್ಲಿನ ಶಿಕ್ಷಣದ ವ್ಯವಸ್ಥೆ ಮತ್ತು ಪ್ರಾಥಮಿಕ ಹಂತದ ಕನ್ನಡಭಾಷಾ ಪುಸ್ತಕಗಳ ಸಾದಕ, ಬಾದಕಗಳನ್ನು, ದೋಷಗಳನ್ನು ವಾಸ್ತವಿಕತೆಯ ಹಿನ್ನೆಲೆಯಲ್ಲಿ ಗುರುತಿಸಿ ವಿಶ್ಲೇಷಿಸುವಲ್ಲಿ ನೆರವಾದವುಗಳಾಗಿವೆ.

• • •

## ಅಧ್ಯಾಯ : ಮೂರು

# ಶಿಕ್ಷಣದ ಚಾರಿತ್ರಿಕ ಹಿನ್ನೆಲೆ

೧. **ಭಾರತೀಯ ಶಿಕ್ಷಣದ ಇತಿಹಾಸ**

೧.೧. ವೇದಗಳ ಕಾಲದ ಶಿಕ್ಷಣ

೧.೨. ಬೌದ್ಧರ ಕಾಲದ ಶಿಕ್ಷಣ

೧.೩. ಮುಸಲ್ಮಾನರ ಶಿಕ್ಷಣ ಪದ್ಧತಿ

೧.೪. ಆಂಗ್ಲರ ಶಿಕ್ಷಣ ಪದ್ಧತಿ

೨. **ಭಾರತದಲ್ಲಿ ಪಠ್ಯಕ್ರಮದ ಇತಿಹಾಸ**

೩. **ಕರ್ನಾಟಕದಲ್ಲಿ ಶಿಕ್ಷಣದ ಚಾರಿತ್ರಿಕ ಹಿನ್ನೆಲೆ**

೩.೧. ಕನ್ನಡ ಭಾಷಾ ಶಿಕ್ಷಣ ಪರಂಪರೆ

೩.೨. ಕನ್ನಡ ಪಠ್ಯಪುಸ್ತಕಗಳ ಚಾರಿತ್ರಿಕ ಹಿನ್ನೆಲೆ

೩.೩. ಕನ್ನಡ ಪಠ್ಯಕ್ರಮದ ಇತಿಹಾಸ

೩.೪. ಪಠ್ಯಕ್ರಮದಲ್ಲಿ ಕನ್ನಡ ಸಾಹಿತ್ಯದ ಸೇರ್ಪಡೆ

೩.೫. ಬ್ರಿಟೀಷರ ಕಾಲದ ಪಠ್ಯಕ್ರಮದ ವಿಶ್ಲೇಷಣೆ

೩.೬. ಕರ್ನಾಟಕ ಏಕೀಕರಣದ ನಂತರ ಕನ್ನಡ ಭಾಷಾ ಪಠ್ಯಕ್ರಮ

## ಅಧ್ಯಾಯ : ಮೂರು

# ಶಿಕ್ಷಣದ ಚಾರಿತ್ರಿಕ ಹಿನ್ನೆಲೆ

### ೧. ಭಾರತೀಯ ಶಿಕ್ಷಣದ ಇತಿಹಾಸ

ಭಾರತೀಯ ಶಿಕ್ಷಣ ವ್ಯವಸ್ಥೆಗೆ ತನ್ನದೇ ಆದ ಪರಂಪರೆ ಇದೆ. ಈ ಪರಂಪರೆಯನ್ನು ವೇದಗಳ ಕಾಲ, ಬೌದ್ಧರ ಕಾಲ, ಮುಸ್ಲಿಂ ಕಾಲ, ಬ್ರಿಟೀಶರ ಕಾಲದ ಶಿಕ್ಷಣ ಪದ್ಧತಿಗಳಲ್ಲಿ ಕಾಣಬಹುದು. ಈ ಎಲ್ಲಾ ಕಾಲಘಟ್ಟದಲ್ಲೂ ತನ್ನದೇ ಆದ ಪಠ್ಯಕ್ರಮ ಮತ್ತು ಗುರು--ಶಿಷ್ಯರ ಸಂಬಂಧವನ್ನು ಕಾಣುತ್ತೇವೆ. ಇಲ್ಲಿ ಮುಖ್ಯವಾಗಿ ಮೌಖಿಕವಾದ ಪಠ್ಯಕ್ರಮಕ್ಕೆ ಹೆಚ್ಚಿನ ಆಧ್ಯತೆ ನೀಡಲಾಗಿತ್ತು. ಅಲ್ಲದೆ ಇಲ್ಲಿ ಶಿಕ್ಷಣ ಪದ್ಧತಿಯು ಎಲ್ಲಾ ಜನಾಂಗದವರಿಗೆ ದೊರಕುವ ಸ್ಥಿತಿ ಇರಲಿಲ್ಲ.

ಈ ಶಿಕ್ಷಣಕ್ರಮವು ಕ್ರಿ.ಪೂ.೪೦೦೦ ಅಥವಾ ಅದಕ್ಕೆ ಹಿಂದಿನ ಕಾಲದಲ್ಲಿ ಗುರುಕುಲಗಳಲ್ಲಿ ಪ್ರಾರಂಭವಾಗಿ ವಿವಿಧ ಆಯಾಮಗಳಲ್ಲಿ ವಿವಿಧ ಹಂತಗಳಲ್ಲಿ ರೂಪುಗೊಂಡಿದೆ. ವೇದಗಳು, ಸಂಹಿತೆಗಳು, ಉಪನಿಷತ್ತುಗಳು, ಬ್ರಾಹ್ಮಣಗಳು, ವೇದಾಂಗಗಳು, ಶಿಕ್ಷಣ ವ್ಯವಸ್ಥೆಯಲ್ಲಿ ಬಹಳ ಮುಖ್ಯವೆನಿಸಿವೆ. ಭಗವತ್ಪ್ರಾರ್ಥನೆ, ಯಜ್ಞಯಾಗದಿ ಕರ್ಮಗಳ ರೂಪದಲ್ಲಿ ಪ್ರಾರಂಭವಾಗುವ ಈ ಶಿಕ್ಷಣ ಕ್ರಮದ ಪಠ್ಯಗಳು ಅಂದಿನ ಕಾಲಮಾನ, ಜಾಯಮಾನಕ್ಕೆ ಅನುಗುಣವಾಗಿ ಪರ್ವತಾಗ್ರದಿಂದ ಮೆರೆಯುತ್ತಾ ಪ್ರವಹಿಸುವ ಪ್ರವಾಹದಂತೆ ಆಶ್ರುತಿ ಶಿಖರಗಳಾಗಿ ಮಾನವನ ಜೀವನದ ಗೊತ್ತುಗುರಿಗಳನ್ನು ಪ್ರತಿಪಾದಿಸುವ ಜ್ಞಾನದೀವಿಗೆಗಳಾಗಿವೆ. ಮುಂದಿನ ಭಾರತೀಯ ಶಿಕ್ಷಣ ಪದ್ಧತಿ ಜೈನ, ಬೌದ್ಧ, ಇತ್ಯಾದಿ ಪಂಥಗಳ ಅಸ್ತಿತ್ವಕ್ಕೆ ಕಾರಣವಾಗಿ ಜೊತೆ ಜೊತೆಯಲ್ಲೇ ವಿಹಾರ ಬಸದಿಗಳಲ್ಲಿ ಶಿಕ್ಷಣ ಪ್ರಸಾರ ಕಾರ್ಯವನ್ನು ಕೈಕೊಂಡು ಪೈಪೋಟಿಗಳಿಗೆ ಒಳಗಾಗಿ ೬–೧೦ನೇ ಶತಮಾನಗಳ ನಂತರ ದೇವಾಲಯವನ್ನು, ಅಗ್ರಹಾರಗಳನ್ನು ತಮ್ಮ ಶಿಕ್ಷಣ ಕೇಂದ್ರವನ್ನಾಗಿಸಿಕೊಂಡವು ಎಂಬುದು ನಮ್ಮ ಇತಿಹಾಸ ಪುಟಗಳಿಂದ ಸ್ಪಷ್ಟವಾಗಬಲ್ಲದು. ಮುಸಲ್ಮಾನರ ಕಾಲದಲ್ಲಿ ಶಿಕ್ಷಣದಲ್ಲಿ ಬದಲಾವಣೆಗಳನ್ನು ಕಾಣಬಹುದು. ಆದರೆ ಇದರಿಂದಾಗಿ ಶಿಕ್ಷಣ ಪದ್ಧತಿ ತನ್ನ ಮಹತ್ವವನ್ನು ಮತ್ತಷ್ಟು ಕುಗ್ಗಿಸಿ ಕೊಂಡಿತು.

ಮುಂದೆ ನಾವು ಆಂಗ್ಲರ ಅಧೀನಕ್ಕೆ ಒಳಪಟ್ಟು ಎರಡು ಶತಮಾನಕ್ಕಿಂತ ಹೆಚ್ಚಾಗಿ ಆಂಗ್ಲರ ಆಡಳಿತದಡಿಯಲ್ಲಿ ಶಿಕ್ಷಣ ಪದ್ಧತಿಯ ಆಯಾಮಗಳು ಬದಲಾದವು. ಸಂಪೂರ್ಣವಾಗಿ ಹಿಂದಿನ ಶಿಕ್ಷಣಪದ್ಧತಿಯ ಅಸ್ತಿತ್ವವನ್ನು ಅಳಿಸಿಕೊಂಡು ಅವರ ಅಸ್ತಿತ್ವದ ಅಡಿಯಲ್ಲಿ ಶಿಕ್ಷಣ ಕ್ರಮ, ಪದ್ಧತಿಗಳು ದಿನದಿಂದ ದಿನಕ್ಕೆ ಹೆಚ್ಚಾದವು. ಅಂದಿನ ಕ್ರಮವನ್ನೆ ನಾವು ಇಂದಿಗೂ ಶಿಕ್ಷಣ ರಂಗದಲ್ಲಿ ಕೈ ಬಿಡದೆ ಅನುಸರಿಸುತ್ತಿರುವುದು ವಿಪರ್ಯಾಸ. ಇಂದಿನ ವೈಜ್ಞಾನಿಕ ವಿಶ್ವದಲ್ಲಿ ಯಾಂತ್ರಿಕವಾಗಿ ಕೃತಕ ಸುಖ ಜೀವನಕ್ಕೆ ಪ್ರಯತ್ನಿಸುವಲ್ಲಿ ಮುಂದಿದ್ದೇವೆ. ಒಂದು ರೀತಿಯ ಸುಗಮ ಜೀವನ ನಡೆಸಿಕೊಂಡು ಬರುತ್ತಿದ್ದೇವೆ ಎಂದು ಹೇಳಿಕೊಳ್ಳುತ್ತಾ ಬರುತ್ತಿರುವ ನಾವು, ಪ್ರಾಚೀನರ ಆದರ್ಶ ಜೀವನ ಕ್ರಮ, ಶಿಕ್ಷಣ ಕ್ರಮಗಳು ಅವರ ಬದಲಾದ ರೀತಿ-ನೀತಿಗಳು ಕಾರಣವಾಗಿದ್ದು ಉನ್ನತ ಮೌಲ್ಯಗಳ ಆಗರವಾಗಿದ್ದ ನಮ್ಮ ದೇಶವು ಹೇಗೆ ಬದಲಾಗಿದೆ ಎಂಬುದು ಅಂದಿನಿಂದ ಇಂದಿನವರೆಗಿನ ಶಿಕ್ಷಣ ಪದ್ಧತಿಗಳಲ್ಲಿ ಬದಲಾವಣೆ ಆದಂತಹ ಕಂಡ ಅಂಶಗಳನ್ನು ಗುರುತಿಸುವುದು ಈ ಅಧ್ಯಯನದ ಮೊದಲನೆ ಭಾಗದಲ್ಲಿ ಸ್ಪಷ್ಟಪಡಿಸಲಾಗಿದೆ.

ವಿದ್ಯೆಯ ವಿಷಯದಲ್ಲಿ ಪ್ರಾಚೀನ ಭಾರತವು ಇಟ್ಟುಕೊಂಡಿದ್ದ ಅಭಿಪ್ರಾಯಗಳನ್ನು ಹೀಗೆ ಸಂಗ್ರಹಿಸಬಹುದು. ವಿದ್ಯೆಗಿಂತ ಶ್ರೇಷ್ಠವಾದುದು ಮತ್ತೊಂದಿಲ್ಲ. ಸ್ವರದ್ರವ್ಯಗಳಲ್ಲಿ ವಿದ್ಯೆಯೇ ನಿಜವಾದ ಧನ. ಏಕೆಂದರೆ ಅದನ್ನು ಯಾರೂ ಅಪಹರಿಸಲಾರರು.ಅದು ನಿರಂತರ ಮತ್ತು ಅಕ್ಷಯವಾದುದು. ವಿದ್ಯೆಯಿಂದ ಬರುವ ಸುಖವೇ ನಿಜವಾದ ಸುಖ ಎಂದು ತಿಳಿದಿದ್ದರು. ವಿದ್ಯೆಯಿಂದ ವಿನಯ, ವಿನಯದಿಂದ ಪಾತ್ರತೆ, ಪಾತ್ರತೆಯಿಂದ ಧನ, ಧನದಿಂದ ಧರ್ಮ ಧರ್ಮದಿಂದ ರಚನೆಯ ಚರ್ಯಗಳನ್ನು ಅಭ್ಯಾಸಿಸಿದಾಗ ವ್ಯಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಅವನ ವಿಕಾಸವನ್ನು ಅನುಲಕ್ಷಿಸಿ ಶಿಕ್ಷಣ ರೂಪಿತವಾಗಿದೆ.

ಪ್ರಾಚೀನ ಶಿಕ್ಷಣಕ್ಕೂ ಧಾರ್ಮಿಕ ಕೆಲಸ ಕಾರ್ಯಕ್ಕೂ ನಿಕಟ ಸಂಬಂಧವಿದೆ. ಆದರೆ ಶಿಕ್ಷಣಕ್ಕೂ, ಪ್ರಾಪಂಚಿಕ ಸುಖ ಭೋಗಗಳ ಸಾಮರಸ್ಯಕ್ಕೂ ಸಂಪರ್ಕ ಕಲ್ಪಿಸುವ ಪ್ರಯತ್ನಗಳು ನಡೆದವು. ಧಾರ್ಮಿಕ ಕೆಲಸವನ್ನು ನಡೆಸಿಕೊಂಡು ಬಂದವರು ಬ್ರಾಹ್ಮಣರೆನಿಸಿಕೊಂಡರು. ಇವರು ವೇದಗಳಲ್ಲಿ ಇರುವಂತೆ ದೈನಂದಿನ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬಂದರು. ಆಧ್ಯಾತ್ಮಿಕ ತತ್ವಪಾಲನೆಗೆ ಆಸಕ್ತರಾದ ಜನಗಳಿಗೆ ಪ್ರಕೃತಿ, ಸಂಪ್ರದಾಯ, ಸಿದ್ಧಾಂತ ಮಂಡನೆ ಅಗತ್ಯವಾಯಿತು. 'ಚಿತ್ತವೃತ್ತಿ' ನಿರೋಧ ಶಿಕ್ಷಣದ ಪ್ರಧಾನ ಧ್ಯೇಯವಾಯಿತು. ಉತ್ತಮ ಧಾರ್ಮಿಕ ಕೆಲಸಗಳ ಬಗ್ಗೆ ಜ್ಞಾನಾರ್ಜನೆ ಅನಿವಾರ್ಯವಾಯಿತು. ಆದ್ದರಿಂದಲೇ ಈ ಧಾರ್ಮಿಕ ಪ್ರವೃತ್ತಿ ಶಿಕ್ಷಣದೊಂದಿಗೆ ಸಂಬಂಧವನ್ನು ಹೆಚ್ಚಿಸಿಕೊಂಡು ಧಾರ್ಮಿಕತೆಯಲ್ಲಿ ಶಿಕ್ಷಣ ಸೇರಿ ಹೋಯಿತು. ಶಿಕ್ಷಣ ಪಡೆಯುವವರು ಕಡ್ಡಾಯವಾಗಿ ಧಾರ್ಮಿಕ ಸಂಪ್ರದಾಯದಡಿಯಲ್ಲಿ ಪಡೆಯುವ ವ್ಯವಸ್ಥೆ ಹುಟ್ಟಿಕೊಂಡಿತು.

## ೧.೧. ವೇದಗಳ ಕಾಲದ ಶಿಕ್ಷಣ

ವೈದಿಕ ಕಾಲದ ಶಿಕ್ಷಣ ವ್ಯವಸ್ಥೆಯಲ್ಲಿ ಮನೆಯೇ ಮೊದಲ ಪಾಠಶಾಲೆಯಾಗಿತ್ತು. ತಂದೆಯೆ ಮೊದಲ ಗುರುವಾಗಿದ್ದನು. ನಂತರ ಗುರುಕುಲಗಳಲ್ಲಿ ಗುರುಗಳ ಬಳಿ ಶಿಷ್ಯನಾದವನು ಶಿಕ್ಷಣವನ್ನು ಪಡೆಯುತ್ತಿದ್ದನು. ಈ ಗುರುಕುಲಗಳಿಗೆ ಸೇರಲು ಉಪನಯನ ಎಂಬ **'ಸಂಸ್ಕಾರ'** ಕಡ್ಡಾಯವಾಗಿತ್ತು. ಇದು ಎಂಟನೇ ವಯಸ್ಸಿನಲ್ಲಿ ನಡೆದು, ನಂತರ ಗುರುಕುಲಗಳಿಗೆ ಸೇರಿಸಲಾಗುತ್ತಿತ್ತು. ಇವರನ್ನು **'ಅಂತೇವಾಸಿ'** ಅಥವಾ ಗುರುಕುಲ ವಾಸಿಗಳೆಂದು ಶಿಷ್ಯನನ್ನು ಕರೆಯುತ್ತಿದ್ದರು. ಈ ಗುರುಕುಲಗಳು ಶಿಷ್ಯರ ಸರ್ವತೋಮುಖ ಅಭಿವೃದ್ಧಿಗೆ ಹಾಗೂ ಶಿಕ್ಷಣ ಪ್ರಚಾರಕ್ಕೆ ಮುಂದಾಗಿದ್ದವು. ಮುಖ್ಯವಾಗಿ ಆಧ್ಯಾತ್ಮಿಕ ಜೀವನಕ್ರಮ, ವಿಧಾನ, ಜ್ಞಾನಗಳನ್ನು ಗುರುವಿನಿಂದ ಪಡೆಯುತ್ತಿದ್ದರು. ಆಧ್ಯಾತ್ಮಿಕ ಅಂದಿನ ಶಿಕ್ಷಣದ ಪರಮ ಗುರಿಯಾಗಿದ್ದು. ಆತ್ಮ ಸಾಕ್ಷಾತ್ಕಾರ ಪಡೆಯಲು ಸಾಧ್ಯವಾಗುತ್ತಿತ್ತು.

ಈ ಕಾಲಘಟ್ಟದಲ್ಲಿ ಗುರುಶಿಷ್ಯರ ಸಂಬಂಧ ನಿಕಟವಾದ ಸಂಬಂಧವಾಗಿತ್ತು. ಗುರುವಾದವರು ಜ್ಞಾನದ ಪರಾಕಾಷ್ಠತೆ, ಪಾಂಡಿತ್ಯವನ್ನು ಪಡೆದವರಾಗಿರುತ್ತಿದ್ದರು. ಆಧ್ಯಾತ್ಮಿಕವಾಗಿ ಉನ್ನತ ಆಲೋಚನೆ, ಇಂದ್ರಾಗ್ನಿಗಳಿಂದ ಪ್ರಭಾವ ಹೊಂದಿದ ಉಜ್ವಲ ತೇಜಸ್ಸು, ನಿಷ್ಠೆ, ಕರ್ತವ್ಯ, ವಾತ್ಸಲ್ಯ, ಪ್ರಜ್ಞೆ, ಶಿಸ್ತು, ಸಂಯಮದಲ್ಲಿ ಮಾದರಿಯಾಗಿದ್ದರು. ವಜ್ರಕ್ಕಿಂತಲೂ ಕಠೋರವಾದ, ಕೋಮಲವಾದ ಗುಣ ಸ್ವಭಾವವನ್ನು ಹೊಂದಿದವರಾಗಿದ್ದರು. ವಿದ್ಯಾರ್ಥಿಗಳ ಅಧ್ಯಯನಕ್ಕೆ ಪ್ರೋತ್ಸಾಹದಾಯಕವಾದ ಅಂಶಗಳನ್ನು ಹೇಳುತ್ತಿದ್ದರು. ಗುರುಗಳು ವಿದ್ಯಾರ್ಥಿಯನ್ನು ವಿದ್ಯಾಭ್ಯಾಸ ಸಂದರ್ಭದಲ್ಲಿ ಮಗುವಿನಂತೆ ಪೋಷಿಸುತ್ತಿದ್ದರು. ಆಕಸ್ಮಿಕವಾಗಿ ಆಲಸ್ಯ ತೋರಿದರೆ ಗುರುಗಳು ಎಚ್ಚರಿಕೆಯಿಂದ ನೀತಿಪಾಠವನ್ನು ಹೇಳಿ ಕೊಡುತ್ತಿದ್ದರು. ದಂಡನೆ ಕಠೋರವಾಗಿದ್ದು, ಅಪರೂಪವಾಗಿ ಮಾಡಿದ ತಪ್ಪಿಗೆ ದಂಡ ನೀಡ ಬೇಕಾಗಿತ್ತು. ಕೆಲವೊಂದು ಸಲ ವಿದ್ಯಾರ್ಥಿಯನ್ನು ಗುರುಕುಲದಿಂದ ಉಚ್ಚಾಟಿಸಲಾಗುತ್ತಿತ್ತು.

ವಿದ್ಯಾರ್ಥಿಗಳು ಪ್ರಾತಃ ಕಾಲದಲ್ಲಿಯೇ ಎದ್ದು ಗುರುವಿನ ಸೇವೆಯನ್ನು ಮಾಡುತ್ತಿದ್ದರು. ಗುರುವಿಗೆ ಬೇಕಾದ ಪೂಜಾವಿಧಿಗೆ ಅಗತ್ಯ ವಸ್ತುಗಳನ್ನು ಸಿದ್ಧಪಡಿಸಬೇಕಿತ್ತು. ಆಶ್ರಮದ ದೈನಂದಿನ ಕೆಲಸಕ್ಕೆ ಬೇಕಾದ ಕಟ್ಟಿಗೆ, ನೀರನ್ನು ಒದಗಿಸಿ ವಿದ್ಯಾರ್ಜನೆಯ ಸಂದರ್ಭದಲ್ಲಿ ಪಶುಪಾಲನೆ, ವ್ಯವಸಾಯ, ಘನತೆ ಮೂಡಿಸುವ ಭಿಕ್ಷಾಟನೆ ಕಾರ್ಯಗಳನ್ನು ಮಾಡಬೇಕಿದ್ದಿತು. ಗುರುವು ವಿಶ್ರಾಂತಿಗೆ ತೆರಳಿದ ಮೇಲೆ ವಿದ್ಯಾರ್ಥಿಗಳು ಮಲಗಬೇಕಿತ್ತು. ಗುರುವಿಗಿಂತ ಮೊದಲು ಎದ್ದು ದಿನನಿತ್ಯದ ಕರ್ಮಗಳನ್ನು ಮುಗಿಸಿ ಕೆಲಸಗಳಲ್ಲಿ ತೊಡಗಬೇಕಿತ್ತು. ಸಂಸ್ಕೃತಿ, ನೈತಿಕಮೌಲ್ಯಗಳ ಚಟುವಟಿಕೆಗೆ ಹೆಚ್ಚಿನ ಆದ್ಯತೆ ನೀಡಲಾಗಿತ್ತು. ಬ್ರಹ್ಮಚರ್ಯ ಪಾಲನೆಯನ್ನು ಕಟ್ಟುನಿಟ್ಟಾಗಿ ಮಾಡಬೇಕಿತ್ತು. ಆಹಾರ ವಿಹಾರಗಳಲ್ಲಿ ನಿಯಂತ್ರತೆ ಇತ್ತು. ವಿದ್ಯಾರ್ಥಿಗಳಲ್ಲಿ ಕಲಿಕೆಯನುಸಾರ ಮಹಾಪ್ರಜ್ಞ, ಮಧ್ಯಮಪ್ರಜ್ಞ, ಅಲ್ಪಪ್ರಜ್ಞ ಎಂಬ ದರ್ಜೆಗಳಿದ್ದವು.

ವೈದಿಕ ಕಾಲದ ಬೋಧನೆಯು ಮನೋವೈಜ್ಞಾನಿಕವಾಗಿದ್ದಿತು. ಗುರುಮುಖೇನ ಶಾಬ್ದಿಕವಾಗಿ ನಡೆಯುತ್ತಿದ್ದವು. ವಿದ್ಯಾರ್ಥಿಗಳು ತಮ್ಮ ಸಮಸ್ಯೆಗಳನ್ನು ಗುರುವಿನ ಬಳಿ ಹೋಗಿ ಪರಿಹಾರ ಪಡೆದುಕೊಳ್ಳಲು ಅವಕಾಶವಿತ್ತು. ಇಲ್ಲಿ ಹೆಚ್ಚಾಗಿ ಮೌಖಿಕ ವಿಧಾನಕ್ಕೆ ಹೆಚ್ಚು ಪ್ರಾಧಾನ್ಯತೆ ಕೊಡಲಾಗಿತ್ತು. ಪ್ರತಿಯೊಂದು ಶಿಕ್ಷಣದ ಕಲಿಕೆಯ ಅಂಶಗಳು ಚರ್ಚಾ ವಿಧಾನದಲ್ಲಿ ನಡೆಯುತ್ತಿದ್ದವು. ಶಿಕ್ಷಣದ ಬೋಧನೆ(ಗುರುಕುಲಗಳಲ್ಲಿ) ೧೨ವರ್ಷಗಳ ಕಾಲ ನಡೆಯುತ್ತಿತ್ತು. ಬೋಧನೆಯು ಶ್ರವಣ, ಮನನ, ಧ್ಯಾನದ ಮೂಲಕ ಸಾಗುತ್ತಿತ್ತು. ವಿದ್ಯಾರ್ಥಿ ಶ್ರವಣ ಹಂತದಲ್ಲಿ ಅಧ್ಯಾಪಕನು ಹೇಳುವ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದ. ಈ ಆಲಿಸಿದ ಮಾತುಗಳನ್ನು ಅರ್ಥ ಮಾಡಿಕೊಳ್ಳಲು ಮತ್ತು ಬೌದ್ಧಿಕತೆಯನ್ನು ಅಭಿವೃದ್ಧಿಪಡಿಸಿಕೊಳ್ಳಲು ಮನನ ಮಾಡಿಕೊಳ್ಳುತ್ತಿದ್ದನು. ನಂತರ ಮನನದಿಂದ ಪಡೆದುಕೊಂಡ ಜ್ಞಾನವನ್ನು ಆತ್ಮ ಸಾಕ್ಷಾತ್ಕಾರಕ್ಕೆ ಅಳವಡಿಸಿಕೊಳ್ಳುತ್ತಿದ್ದನು. ಇದು ೧೦-೧೨ ವರ್ಷಗಳ ಕಾಲ ನಡೆಯುತ್ತಿತ್ತು. ನಂತರ ಗುರುವಾದವನು ಅಂತಿಮ ಉಪದೇಶವನ್ನು ನೀಡುತ್ತಿದ್ದನು. ಸತ್ಯವನ್ನು ಹೇಳು, ಧರ್ಮಮಾರ್ಗದಲ್ಲಿ ನಡೆ, ಸ್ವ ಅಧ್ಯಯನವನ್ನು ನಿಲ್ಲಿಸಬೇಡ, ವೇದ ಮನನ ಮರೆಯಬೇಡ, ತಂದೆ, ತಾಯಿ, ಆಚಾರ್ಯ, ಅತಿಥಿಗಳು, ದೇವರ ಸಮಾನ ಎಂದು ಅಂತಿಮವಾಗಿ ಬೋಧಿಸುವ ವೇದಗಳ ಕಾಲದಲ್ಲಿ ಆರ್ಯ ಸಮುದಾಯವೆಲ್ಲ ಶಿಕ್ಷಣ ಪಡೆಯಬಹುದಾಗಿತ್ತು ಎಂದು ಋಗ್ವೇದದಲ್ಲಿ ಹೇಳಲಾಗಿದೆ. ಈ ವೇದದ ಅನ್ವಯದಂತೆ ವೈದ್ಯನು ಸೋದರ ಮಾವ ಕಲ್ಲುಕುಟಿಗನೂ, ಬಾಯಿಕೊಟ್ಟು ಕುಟ್ಟುವವಳೂ ಊಳಿಗದವಳೂ ಆಗಿರುತ್ತಿದ್ದಳು ಎಂದು ಹೇಳಿದೆ. ಅನೇಕ ಮಹರ್ಷಿಗಳು ಶೂದ್ರ ತಂದೆ ತಾಯಿಯಲ್ಲಿ ಜನಿಸಿದರು ಎಂಬುದಕ್ಕೆ ಋಗ್ವೇದದಲ್ಲಿ ದೃಷ್ಟಾಂತಗಳಿವೆ. ವೈದ್ಯ ವೃತ್ತಿಯನ್ನು ಯಾರು ಬೇಕಾದರೂ ಅಭಿರುಚಿಗೆ ಅನುಗುಣವಾಗಿ ಜ್ಞಾನವನ್ನು ಪಡೆಯಬಹುದಾಗಿತ್ತು ಎಂಬ ಅಂಶ 'ಚರಕ ಶುಶ್ರೂತ'ಗಳು ಉಲ್ಲೇಖಿಸಿವೆ. ಈ ಮೇಲಿನ ಅಂಶಗಳಿಂದ ತಿಳಿದು ಬರುವುದೇನೆಂದರೆ ವೇದಗಳ ಕಾಲದಲ್ಲಿ ಜಾತಿಮತ ಬೇಧವಿಲ್ಲದೇ ಎಲ್ಲರಿಗೂ ಶಿಕ್ಷಣ ಪಡೆಯುವ ಅವಕಾಶವಿತ್ತು ಎಂಬುದು ಸ್ಪಷ್ಟವಾಗುತ್ತದೆ.

### ೧.೨. ಬೌದ್ಧರ ಕಾಲದ ಶಿಕ್ಷಣ

ಕ್ರಿ.ಪೂ. ೬೦೦ರ ಸುಮಾರಿಗೆ (ಆರನೇಶತಮಾನ) ಬೌದ್ಧಧರ್ಮ ಹಿಂದೂಧರ್ಮದ ಪ್ರಧಾನ ತತ್ವಗಳನ್ನು ಅಳವಡಿಸಿಕೊಂಡು ಅಸ್ತಿತ್ವಕ್ಕೆ ಬಂದಿತು. ಇದು ಹಲವಾರು ರಾಜರುಗಳ ಪೋಷಣೆಯಿಂದ ಈ ಧರ್ಮ ವ್ಯಾಪಕವಾಗಿ ಹರಡಿತು ಎಂದು ಹೇಳಬಹುದು. ಇದರ ಪ್ರಭಾವದಿಂದ ವೈದಿಕದ ಧರ್ಮತತ್ವಗಳು ಕುಸಿದು ಬೌದ್ಧಧರ್ಮಕ್ಕೆ ಮನ್ನಣೆ ದೊರಕಿತು. ಪ್ರಾರಂಭ ಘಟ್ಟದಲ್ಲಿ ವೈದಿಕ ಅಂಶಗಳನ್ನು ಅಳವಡಿಸಿಕೊಂಡು ಅಸ್ತಿತ್ವಕ್ಕೆ ಬಂದಿದ್ದರು. ನಂತರ ಇದು ವೈದಿಕತೆಯ ಧರ್ಮವನ್ನು ವಿರೋಧಿಸುವ ಒಂದು ಕ್ರಾಂತಿಯಾಗಿ ಹುಟ್ಟಿ ಕೊಂಡಿತು.

ಈ ಕಾಲಘಟ್ಟದಲ್ಲಿ ವೈದಿಕ ಧರ್ಮದ ವೇದಗಳು ಯಜ್ಞಾದಿಗಳಲ್ಲಿ ಜಿಗುಪ್ಸೆ ಉಂಟಾಯಿತು. ಅವರು ಪಠಿಸುತ್ತಿದ್ದ ಮಂತ್ರಗಳ ಅರ್ಥವಾಗಲೀ ಅವುಗಳ ಉದ್ದೇಶವಾಗಲೀ ಜನಸಾಮಾನ್ಯರಿಗೆ ತಿಳಿಯುತ್ತಿರಲಿಲ್ಲ ಜೊತೆಗೆ ಜನಸಾಮಾನ್ಯರಿಗೆ ಯಾವುದೇ ಸ್ಥಾನಮಾನ ಗಳಿರಲಿಲ್ಲ. ಕಠಿಣವಾದ ಸಂಸ್ಕೃತ ಭಾಷೆಯು ಅನೇಕ ಹೊಸ ಭಾಷೆಗಳಿಗೆ ಅವಕಾಶ ಮಾಡಿಕೊಟ್ಟಿತು. ಇದರ ಪರಿಣಾಮವಾಗಿಯೇ ಹೊಸ ಶಿಕ್ಷಣ ಪದ್ಧತಿಗಳು ಅಸ್ತಿತ್ವಕ್ಕೆ ಬಂದವು.

ಭಾರತವು ಕೆಲವು ಭಾಗಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ಲಿಪಿ ಶಾಲೆಗಳೆ ಅಲ್ಲಿನ ಅಧ್ಯಾಪಕರನ್ನು ದಾರಕಾಚಾರ್ಯರೆಂದೂ ಕರೆಯಲಾಗುತ್ತಿತ್ತು. ಅಲ್ಲಿನ ಮಕ್ಕಳು ಬರೆಯಲು ಮರದ ಹಲಗೆಗಳನ್ನು ಬಳಸುತ್ತಿದ್ದರೆಂದೂ ಜಾತಕವೂ ಲಲಿತ ವಿಸ್ತಾರವೂ ತಿಳಿಸುತ್ತದೆ. "ಬುದ್ಧನು ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಣ ಪಡೆಯುತ್ತಿದ್ದಾಗ ಆಯತಾಕಾರದ ಹಲಗೆಯನ್ನು ಹಿಡಿದು ಅದರ ಮೇಲೆ ಸುಣ್ಣದಿಂದ ಅಕ್ಷರಗಳನ್ನು ಬರೆಯುತಿರುವಂತೆ ಕೆತ್ತಿರುವ ಗಾಂಧಾರ ಶಿಲ್ಪವೊಂದು ಬೌದ್ಧರ ಕಾಲದ ಶಿಕ್ಷಣದ ವ್ಯವಸ್ಥೆಯಲ್ಲಿ ಬರವಣಿಗೆಯನ್ನು ರೂಢಿಸಿ ಕೊಂಡಿದ್ದರು ಎಂಬ ಅಂಶಕ್ಕೆ ಪುಷ್ಟೀಕರಣ ಕೊಡುತ್ತದೆ" ಎಂದು ಎನ್.ಎಸ್.ವೀರಪ್ಪನವರು 'ಭಾರತೀಯ ಶಿಕ್ಷಣದ ಇತಿಹಾಸ' ಎಂಬ ಪುಸ್ತಕದಲ್ಲಿ ಅಭಿಪ್ರಾಯ ಪಡುತ್ತಾರೆ.

ಬೌದ್ಧರ ಕಾಲದ ಶಿಕ್ಷಣ ಮತ್ತು ವೇದಗಳ ಕಾಲದ ಶಿಕ್ಷಣ ಪದ್ಧತಿಯ ಬಹುಮುಖ್ಯ ವ್ಯತ್ಯಾಸವೇನೆಂದರೆ, ಬೌದ್ಧ ಕಾಲದ ಶಿಕ್ಷಣ ವ್ಯವಸ್ಥೆಯು ವೇದಗಳಿಗೆ ಪ್ರಾಶಸ್ತ್ಯವನ್ನು ನೀಡಲಿಲ್ಲ. ಜಾತಿ ಭೇದವಿಲ್ಲದೆ ಶಿಕ್ಷಣಕ್ಕೆ ಅವಕಾಶ ನೀಡಿದ್ದು ಈ ಪದ್ಧತಿಯ ಮತ್ತೊಂದು ಮುಖ್ಯಾಂಶ. ಈ ಕಾಲದ ಶಿಕ್ಷಣ ಪದ್ಧತಿಯ ಮತ್ತೊಂದು ವಿಶೇಷತೆ ಎಂದರೆ ಜನಸಾಮಾನ್ಯರಿಗೆ ಅರ್ಥವಾಗುವ ಭಾಷೆಯಲ್ಲಿ ಬೋಧನಾ ಕ್ರಮಗಳು ನಡೆಯುತ್ತಿದ್ದವು. ವೇದಗಳ ಕಾಲದಲ್ಲಿ ಶಿಕ್ಷಣಕ್ಕೆ ಗುರುಕುಲಗಳಲ್ಲಿ ಯಜ್ಞ ಪ್ರಧಾನವಾಗಿತ್ತು. ಆದರೆ ಬೌದ್ಧರ ಶಿಕ್ಷಣ ಕ್ರಮದಲ್ಲಿ ಬೌದ್ಧಮಠ, ವಿಹಾರಗಳು, ಶಿಕ್ಷಣ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಿದ್ದವು. ಇವುಗಳು ಹೊಸದಾಗಿ ಬಂದು ಸೇರುವ ಬೌದ್ಧಬಿಕ್ಷುಗಳಿಗೆ ಅಥವಾ ಸನ್ಯಾಸಿಗಳಿಗೆ ಶಿಕ್ಷಣವನ್ನು ಕೊಡುವ ಪರಿಪಾಠ ಬೆಳೆಸಿಕೊಂಡಿದ್ದವು. ಹಿಂದಿನ ಶಿಕ್ಷಣ ಪದ್ಧತಿಯಲ್ಲಿ ಇದ್ದಂತೆ ಬೌದ್ಧ ಕಾಲದಲ್ಲಿಯೂ ವಿದ್ಯಾರ್ಥಿಯು ಗುರುವನ್ನು ಹುಡುಕಿಕೊಂಡು ಹೋಗಬೇಕಾಗಿತ್ತು. ಅವರ ಬಳಿ ಇದ್ದು ಶಿಕ್ಷಣ ಪಡೆಯಬೇಕಾಗಿತ್ತು. ವಿದ್ಯಾರ್ಥಿಯು ಹತ್ತು ವರ್ಷಗಳಿಗಿಂತ ಹೆಚ್ಚಾಗಿ ಗುರುವಿನಲ್ಲಿ ಶಿಕ್ಷಣ ಪಡೆಯಬೇಕಾಗಿತ್ತು. ಬೌದ್ಧಸಂಘದ ಬಿಕ್ಷುಗಳು ಮಾತ್ರ ಗುರುವಾಗಲು ಸಾಧ್ಯವಾಗಿತ್ತು.

ವಿದ್ಯಾರ್ಥಿಯನ್ನು ೮ನೇ ವಯಸ್ಸಿನಲ್ಲಿ 'ಪಬ್ಬಜ್ಜ' ಎಂಬ ಸಂಸ್ಕಾರದ ಮೂಲಕ ಬೌದ್ಧ ವಿಹಾರಕ್ಕೆ ಪ್ರವೇಶವಿತ್ತು. ಪಬ್ಬಜ ಎಂದರೆ ಪೂರ್ವ ಸಿದ್ಧತೆಯ ಮೂಲಕ ಹೊರಬರುವುದು ಎಂದರ್ಥ. ವೈದಿಕ ಶಿಕ್ಷಣ ಪದ್ಧತಿಯ ಉಪನಯನ ಸಂಸ್ಕಾರಕ್ಕೆ ಇದು

ತತ್ಸಮವಾಗಿತ್ತು. ವಿದ್ಯಾರ್ಥಿಯನ್ನು ಶ್ರವಣ ಎಂದು ಕರೆಯುತ್ತಿದ್ದರು. ಶ್ರವಣನು ಗುರುಗಳ ಸಾನಿಧ್ಯ ಹೊಂದಿದ ಮೇಲೆ ನೈತಿಕ ಜೀವನವನ್ನು ನಡೆಸಬೇಕಾಗಿತ್ತು. ಬ್ರಹ್ಮಚಾರಿ(ಬೌದ್ಧಬಿಕ್ಷು) ಪದವಿ ಸ್ವೀಕಾರಕ್ಕೆ ಕಡೆಯ ಪಕ್ಷ ಎರಡು ವರ್ಷಗಳು ಬೇಕಾಗಿದ್ದವು.

ವಿದ್ಯಾರ್ಥಿಯು ದೀಕ್ಷೆ ಸ್ವೀಕರಿಸುವ ಮೊದಲು ಬುದ್ಧನಲ್ಲಿ, ಧರ್ಮದಲ್ಲಿ ಮತ್ತು ಸಂಘದಲ್ಲಿ ತನ್ನ ಶರಣಾಗತಿಯನ್ನು ವ್ಯಕ್ತಪಡಿಸಬೇಕು. ಅಂದರೆ 'ಬುದ್ಧಂ ಶರಣಂ ಗಚ್ಛಾಮಿ' ಧರ್ಮಂ ಶರಣಂ ಗಚ್ಛಾಮಿ ಎಂಬ ಪ್ರಮಾಣ ವಚನದ ಮೂಲಕ ಕೈಗೊಳ್ಳಬೇಕಾಗಿತ್ತು. ಸಂಘಕ್ಕೆ ಪ್ರವೇಶ ಪಡೆಯುವಾಗ ಸಾಮಾನ್ಯವಾಗಿ ಜಾತಿಮತಗಳ ಭೇದಕ್ಕೆ ಅವಕಾಶಗಳೇನು ಇರಲಿಲ್ಲ. ಆದರೆ ಕೆಲವು ವಿಶೇಷ ಸಂದರ್ಭಗಳಲ್ಲಿ ಪ್ರವೇಶದ ನಿಯಮಗಳಲ್ಲಿ ನಿರ್ಬಂಧವಿತ್ತು. ಗುಲಾಮರು, ಚಂಡಾಲರು, ಅಂಟುಜಾಡ್ಯವಿರುವವರು, ಅಪರಾಧ ಮಾಡಿದವರಿಗೆ ಶಿಕ್ಷಣಕ್ಕೆ ಪ್ರವೇಶವಿರಲಿಲ್ಲ. ವಿದ್ಯಾರ್ಥಿಯು ಸುಮಾರು ೧೦-೧೨ ವರ್ಷಗಳ ಕಾಲ ಶಿಕ್ಷಣ ಪಡೆದವನಿಗೆ ಪೂರ್ಣ ಕಾಲದ ಸನ್ಯಾಸಿ ಎಂದು ಕರೆದು 'ಉಪಸಂಪದ' ಎಂಬ ಸಮಾರಂಭದ ಮೂಲಕ ಭಿಕ್ಷುವಾಗಿ ಹೊರಗಡೆ ಕಳುಸುತ್ತಿದ್ದರು. ನಂತರ ಇವರು ಭಿಕ್ಷುಕವಾಗಿ ಮುಂದುವರೆಯಲು ಸಾಧ್ಯವಿಲ್ಲದಾಗ, ಅಂದರೆ ಮಾನಸಿಕವಾಗಿ ದೌರ್ಬಲ್ಯಗಳನ್ನು ಗೆಲ್ಲಲು ಸಾಧ್ಯವಾಗದೇ ಹೋದಾಗ ಸಂಘದಿಂದ ಹೊರಬರುವುದಕ್ಕೆ ಅವಕಾಶಗಳಿದ್ದವು.

ಬೌದ್ಧರ ಕಾಲದಲ್ಲಿ ಬೋಧನೆಯು ಮೌಖಿಕ ಪ್ರಧಾನವಾಗಿದ್ದು, ಉಪನ್ಯಾಸ ಚರ್ಚೆಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗಿತ್ತು. ಹಿಂದಿನ ಪಾಠ ಒಪ್ಪಿಸಿದ ಮೇಲೆ ಮುಂದಿನ ಪಾಠಗಳನ್ನು ಹೇಳಿಕೊಡುವ ಪದ್ಧತಿ ರೂಢಿಯಲ್ಲಿತ್ತು. ಆಗಿನ ಸಂದರ್ಭದಲ್ಲಿ ಪಾಲಿಭಾಷೆ ಪ್ರಚಲಿತದಲ್ಲಿದ್ದರಿಂದ ಈ ಭಾಷೆಯನ್ನೇ ಬೋಧನ ಮಾಧ್ಯಮಕ್ಕೆ ಅಳವಡಿಸಿಕೊಳ್ಳಲಾಗಿತ್ತು. ಬೌದ್ಧ ಭಿಕ್ಷುಗಳು ವಿಹಾರಗಳಲ್ಲಿ ಸಾಂಘಿಕ ಜೀವನವನ್ನು ನಡೆಸುತಿದ್ದರಿಂದ ವಿದ್ಯಾರ್ಥಿಗಳು ಒಂದೊಂದು ವಿಷಯದಲ್ಲಿ ಪಾಂಡಿತ್ಯ ಪಡೆದು ಭಿಕ್ಷು ಶಿಕ್ಷಕನಾಗಿ ಬೋಧಿಸಲು ಅವಕಾಶ ಮಾಡಿಕೊಡಲಾಗಿತ್ತು.

ಈ ಕಾಲದಲ್ಲಿ ಬೌದ್ಧಮಠಗಳು, ವಿಹಾರಗಳು, ಧಾರ್ಮಿಕ ಶಿಕ್ಷಣ ಕೊಡುವುದಲ್ಲದೇ ವೃತ್ತಿಗೆ ಸಂಬಂಧಿಸಿದ ಶಿಕ್ಷಣ ಕೊಡುವ ಪದ್ಧತಿ ರೂಢಿಯಲ್ಲಿತ್ತು. ತರ್ಕಶಿಲೆಯಲ್ಲಿ ವೈದ್ಯ ವಿದ್ಯೆಗೆ ಪ್ರಾಧಾನ್ಯತೆ ನೀಡಲಾಗಿತ್ತು. ವಿಕ್ರಮ ಶಿಲೆಯಲ್ಲಿ ಶಿಲ್ಪವಿದ್ಯೆ, ಚಿತ್ರಕಲೆಗೆ, ಮೂರ್ತಿ ಶಿಲ್ಪಗಳಿಗೆ ಆದ್ಯತೆ ನೀಡಿರುವುದು ತಿಳಿದು ಬರುತ್ತದೆ. ಪಶುವೈದ್ಯ, ವ್ಯವಸಾಯ, ವಾಣಿಜ್ಯ, ಕೈಗಾರಿಕೆಗಳಿಗೆ ಸಂಬಂಧಿಸಿದಂತೆ ಶಿಕ್ಷಣವಿರುತ್ತಿತ್ತು. ಜೊತೆಗೆ ಆಯುರ್ವೇದಕ್ಕೂ ಆದ್ಯತೆ ನೀಡಲಾಗಿತ್ತು.

ವೈದಿಕ ಕಾಲದಲ್ಲಿದ್ದಂತೆ ಬೌದ್ಧ ಕಾಲದಲ್ಲಿಯೂ ಸಹ ಗುರುಶಿಷ್ಯರ ಸಂಬಂಧ ಅನ್ಯೋನ್ಯವಾಗಿದ್ದಿತು. ಶಿಷ್ಯನು ಮುಂಜಾನೆಯಲ್ಲಿ ಎದ್ದು ಗುರುವಿನ ಪಾದರಕ್ಷೆ ಶುಚಿ ಮಾಡಿ, ದಂತಧಾವನ ಕಡ್ಡಿ, ನೀರು, ಮುಂತಾದ ದಿನನಿತ್ಯದ ಬಳಕೆಯ ವಸ್ತುಗಳನ್ನು

ಸಿದ್ಧಪಡಿಸಬೇಕಾಗಿತ್ತು. ನಂತರ ತಮ್ಮ ಕೆಲಸದಲ್ಲಿ ತೊಡಗಿ ಭಿಕ್ಷಾಟನೆಯನ್ನು ಕೈಗೊಳ್ಳುತ್ತಿದ್ದರು. ಗುರುಗಳು ಸಹ ಭಿಕ್ಷಾಶಿಷ್ಯನಿಗೆ ಬಟ್ಟೆ ಬರೆ ಭಿಕ್ಷಾ ಪಾತ್ರೆಗಳನ್ನು ಒದಗಿಸುತ್ತಿದ್ದರು. ಆರೋಗ್ಯ ತಪ್ಪಿದರೆ ಉಪಚರಿಸುತ್ತಿದ್ದರು. ಜ್ಞಾನ ದಾನ ಮಾಡುವುದು ತಮ್ಮ ಧರ್ಮದ ಪವಿತ್ರ ಕರ್ತವ್ಯವೆಂದು ತಿಳಿದು ಗಾಂಭೀರ್ಯವಾಗಿ ವೃತ್ತಿಯ ಕರ್ತವ್ಯವನ್ನು ನಿರ್ವಹಿಸುತ್ತಿದ್ದರು. ಶಿಷ್ಯರು ಗುರುಕುಲಗಳಲ್ಲಿ ವಾಸಿಸದೇ ಮಠ ಮತ್ತು ವಿಹಾರಗಳಲ್ಲಿ ವಾಸಿಸುತ್ತಿದ್ದರು. ಪ್ರಾರಂಭದಲ್ಲಿ ಸ್ತ್ರೀಯರಿಗೆ ಶಿಕ್ಷಣದಲ್ಲಿ ಸ್ಥಾನವಿರಲಿಲ್ಲ. ಆದರೆ ಭಿಕ್ಷೆ ನೀಡುವ ಅರ್ಹತೆ ಮಾತ್ರ ಇತ್ತು. ಕಾಲಕ್ರಮೇಣ ಬದಲಾಗಿ ಶಿಕ್ಷಣಕ್ಕೆ ಭಿಕ್ಷುಣಿ ಸನ್ಯಾಸಿಯಾಗಲು ಅನುಮತಿ ನೀಡಲಾಗಿತ್ತು. ಈ ಸ್ತ್ರೀ ಶಿಕ್ಷಣದ ಫಲವಾಗಿಯೇ ಅಶೋಕನ ತಂಗಿ ಸಂಗಮಿತ್ರೆ ಸಿಂಹಳ ಮುಂತಾದ ದೇಶಗಳಿಗೆ ಹೋಗಿ ಬೌದ್ಧಧರ್ಮ ಪ್ರಚಾರ ಮಾಡಿದ್ದು ಎಲ್ಲರಿಗೂ ತಿಳಿದ ವಿಷಯ.

### ೧.೩. ಮುಸಲ್ಮಾನರ ಶಿಕ್ಷಣ ಪದ್ಧತಿ

ಕ್ರಿ.ಶ.೮ನೇ ಶತಮಾನದಲ್ಲಿ ಮಹಮ್ಮದೀಯರಿಗೆ ಭಾರತದಲ್ಲಿನ ಐಶ್ವರ್ಯವನ್ನು ದೋಚಿಕೊಂಡು ಹೋಗುವುದಾಗಿತ್ತು. ಆದರೆ ಅರೇಬಿಯಾ ದೇಶದಲ್ಲಿ ಇಸ್ಲಾಂ ಧರ್ಮವನ್ನು ಪ್ರಚಾರ ಮಾಡುವ, ಬೋಧಿಸುವ ಕ್ರಮವಿದ್ದಿತು. ಮುಂದುವರೆಸಿದಂತೆ ದಾಳಿ ಮಾಡಿದ ರಾಜ್ಯಗಳಲ್ಲಿಯೇ ಧರ್ಮ ಪ್ರಚಾರ ಮಾಡಲು ಪ್ರಾರಂಭಿಸಿದರು. ಘಜನಿಮಹಮ್ಮದನು ಅನೇಕ ಬಾರಿ ದಾಳಿ ಮಾಡಿ ತನ್ನ ದೇಶದ ಶೈಕ್ಷಣಿಕ ವ್ಯವಸ್ಥೆಯನ್ನು ಸರಿಪಡಿಸಿಕೊಂಡನು. ನಂತರ ಘೋರಿಮಹಮ್ಮದನು ದಾಳಿ ಮಾಡಿದ, ಆದರೆ ಇವನು ಸ್ವದೇಶಕ್ಕೆ ಹೋಗದೆ ಭಾರತದಲ್ಲಿ ಆಡಳಿತ ಮಾಡಲು ಪ್ರಾರಂಭಿಸಿದ. ನಂತರ ಪ್ರಾಚೀನ ಶಿಕ್ಷಣ ಪದ್ಧತಿಯ ಜೊತೆಯಲ್ಲಿ ಅನ್ಯ ದೇಶಿಯ ಶಿಕ್ಷಣಪದ್ಧತಿಯು ಅಸ್ತಿತ್ವಕ್ಕೆ ಬಂದಿತು.

ಘೋರಿಮಹಮ್ಮದನ ದಳವಾಯಿಗಳಲ್ಲಿ ಒಬ್ಬನಾದ 'ಭಕ್ತಿಯಾರ್' ಬೌದ್ಧ ವಿಹಾರಗಳನ್ನು ನಾಶಮಾಡಿ ಆ ಜಾಗದಲ್ಲಿ ಮಸೀದಿಗಳನ್ನು ಅವುಗಳಿಗೆ ಸೇರಿದಂತೆ 'ಮಕ್ತಬ್' ಎಂಬ ಪ್ರಾಥಮಿಕ ಶಾಲೆಗಳನ್ನು ಪ್ರಾರಂಭಿಸಿದ. ಮಹಮ್ಮದೀಯರ ಪ್ರಾಬಲ್ಯದಿಂದ ಹಿಂದು, ಬೌದ್ಧ ಶಿಕ್ಷಣ ಸಂಸ್ಥೆಗಳು ನಶಿಸುತ್ತಾ ಬಂದವು. ಗುಲಾಮಿ, ಖಿಲ್ಜಿ, ತೊಘಲಕ್, ಸೈಯ್ಯದ್, ಮುಂತಾದ ಸಂತತಿಗಳ ವಂಶದವರು ದೆಹಲಿಯನ್ನು ರಾಜಧಾನಿ ಮಾಡಿಕೊಂಡು ಉತ್ತರಭಾರತವನ್ನು ಆಳಲು ಪ್ರಾರಂಭಿಸಿದರು. ನಂತರದ ಕಾಲಕ್ರಮದಲ್ಲಿ ದಕ್ಷಿಣಕ್ಕೂ ಆಗಮಿಸಿ ಆಡಳಿತ ಪ್ರಾರಂಭಿಸಿದರು. ಈ ಪ್ರಭಾವದಿಂದಲೇ ಬಿಜಾಪುರ, ಬಹುಮನಿ ರಾಜ್ಯಗಳು ಸ್ಥಾಪಿಸಲ್ಪಟ್ಟವು. ಇವರ ಪವಿತ್ರ ಗ್ರಂಥ ಖುರಾನ್. ಈ ಗ್ರಂಥದಲ್ಲಿ ಶಿಕ್ಷಣ ಒಂದು ಪ್ರಮುಖ ಕರ್ತವ್ಯವಾಗಿ ನಿರ್ವಹಿಸಬೇಕು ಎಂದು ಹೇಳಿದೆ. ಸುವರ್ಣ ದಾನಕ್ಕಿಂತ ವಿದ್ಯಾದಾನ ಉತ್ಕೃಷ್ಟವಾದುದು ಎಂದು ಹೇಳಿದೆ. ಧರ್ಮ, ಶಿಕ್ಷಣಗಳೆರಡರ ಸಂಬಂಧ ಬಯಸಿದ್ದರು.

ಈ ಕಾಲಘಟ್ಟದ ಶಿಕ್ಷಣ ಪದ್ಧತಿಯು ಇಸ್ಲಾಂ ಧರ್ಮದ ಅನುಯಾಯಿಗಳಲ್ಲಿ ಜ್ಞಾನದ ಬೆಳಕನ್ನು ಬೆಳಗಿಸುವುದಾಗಿತ್ತು. ಗುರು ಮಹಮ್ಮದನ ಮಾತುಗಳನ್ನು ಪಾಲಿಸಿ

ಮೋಕ್ಷ ಸಾಧನೆಗೆ ಯತ್ನಿಸುವುದು ಶಿಕ್ಷಣ ಪದ್ಧತಿಯ ಉದ್ದೇಶವಾಗಿತ್ತು. ಇಸ್ಲಾಂ ಧರ್ಮವನ್ನು ಪ್ರಚಾರ ಮಾಡಿ ಇಸ್ಲಾಂ ಧರ್ಮ ಎಲ್ಲಾ ಧರ್ಮಗಳಿಗಿಂತ ಶ್ರೇಷ್ಠವಾದುದು ಎಂದು ತಿಳಿಸಿ ಹೇಳುವ ಇನ್ನೊಂದು ಉದ್ದೇಶವನ್ನು ಹೊಂದಿತ್ತು. ಈ ಧರ್ಮದನುಸಾರವಾಗಿ ಸಾಮಾಜಿಕ ನೀತಿ ಸೂತ್ರ ರೂಪಿಸುವುದು, ಸಾಮಾಜಿಕ, ರಾಜಕೀಯ, ಸಂಪ್ರದಾಯಿಕ ತತ್ವಗಳನ್ನು ರೂಪಿಸಿ, ಪ್ರಾಚೀನ ಇಸ್ಲಾಂ ಶಾಸನಗಳನ್ನು ಸ್ಥಾಪಿಸುವಂತೆ ಮಾಡುವುದು ಶಿಕ್ಷಣದ ಮತ್ತೊಂದು ಉದ್ದೇಶವನ್ನು ಹೊಂದಿತ್ತು.

ಶಿಕ್ಷಣಕ್ಕೆ ಪ್ರವೇಶ ಪಡೆಯಲು ಮಗುವಿಗೆ ನಾಲ್ಕುವರ್ಷ, ನಾಲ್ಕುತಿಂಗಳು, ನಾಲ್ಕುದಿನಗಳು, ಕಳೆದ ಮೇಲೆ 'ಬಿಸ್ಮಿಲ್ಲಾ' ಎಂಬ ಧಾರ್ಮಿಕ ಕಾರ್ಯಕ್ರಮದಿಂದ ಶಾಲಾ ಶಿಕ್ಷಣಕ್ಕೆ ಪ್ರವೇಶ ನೀಡಲಾಗುತ್ತಿತ್ತು. ಅಂದಿನ ದಿನ ಉತ್ತಮ ಉಡುಪು ತೊಡಿಸಿ ಮೇಲಾಸಿಗೆಯ ಮೇಲೆ ಕೂಡಿಸಿ ಅಕ್ಷರಗಳ್ನು 'ಖುರಾನ್' ಅನ್ನೂ ಮಗುವಿನ ಮುಂದಿಟ್ಟು ಖುರಾನಿನ ಭಾಗವನ್ನು ಹೇಳಿಸಿ, ಅಕ್ಷರಾಭ್ಯಾಸವನ್ನು ಮಾಡಿಸಲು ಪ್ರಾರಂಭಿಸುತ್ತಿದ್ದರು. ಪ್ರಾಥಮಿಕ ಶಿಕ್ಷಣಕ್ಕೆ 'ಮಕ್ತಬ್' ಶಾಲೆಗಳೆಂದು ತೆರೆದಿದ್ದರು. ಉನ್ನತ ಶಿಕ್ಷಣಕ್ಕಾಗಿ ಮದರಾಸಗಳನ್ನು ಪ್ರಾರಂಭಿಸಿದ್ದರು. ಶಿಕ್ಷಣದ ಅರ್ಥಿಕ ನೆರವಿಗಾಗಿ ರಾಜರು, ಧನಿಕರು ಹಾಗೂ ಸರ್ಕಾರ ಸಹಾಯ ಮಾಡುತ್ತಿತ್ತು. ಮಕ್ತಬ್-ಮಸೀದಿಗಳಿಗೆ ಸೇರಿದ 'ಮಕ್ತಬ್' ಶಾಲೆಗಳಲ್ಲಿ ಪ್ರಾಥಮಿಕ ಶಿಕ್ಷಣ ಕೊಡುತ್ತಿದ್ದರು. 'ಬಿಸ್ಮಿಲ್ಲಾ' ಎಂಬ ಧಾರ್ಮಿಕ ಕ್ರಿಯೆಯ ನಂತರ ಅಕ್ಷರಭ್ಯಾಸ ಮಾಡಿಸಿ ನಂತರ ಖುರಾನಿನ ಪವಿತ್ರ ಗ್ರಂಥಗಳ ಭಾಗಗಳಿಂದ ಶಿಕ್ಷಣವನ್ನು ಆರಂಭಿಸಿ ಧಾರ್ಮಿಕ ಪ್ರಾರ್ಥನೆಯ ಮೂಲಕ ಕಂಠಪಾಠ ನಡೆಯುತ್ತಿತ್ತು. 'ಮೌಲ್ವಿ' ಎಂಬ ಗುರುಗಳು ಪಾಠ ಹೇಳಿಕೊಡುತ್ತಿದ್ದರು.

ಮುಸಲ್ಮಾನರ ಘೋಷಾ ಅಥವಾ ಪರದಾ ಪದ್ಧತಿಯಿಂದಾಗಿ ಹೆಣ್ಣುಮಕ್ಕಳು ಶಿಕ್ಷಣದಿಂದ ವಂಚಿತರಾಗಿದ್ದರು. ಮಸೀದಿಗಳಿಗೆ ಸೇರಿದ ಮಕ್ತಬ್‌ಗಳಲ್ಲಿ ಮಾತ್ರ ಒಟ್ಟಾಗಿ ಸೇರಿಸಿ ಓದು, ಬರಹ, ಲೆಕ್ಕಗಳನ್ನು ಕಲಿಯುತ್ತಿದ್ದರು. ಶ್ರೀಮಂತರಾದವರು ಮತ್ತು ರಾಜವಂಶಸ್ಥರು ಓ-ಬ-ಲ-ಗಳನ್ನು, ಧಾರ್ಮಿಕ ಗ್ರಂಥವನ್ನು, ಗೃಹವಿಜ್ಞಾನ, ಸಾಹಿತ್ಯದ ಅಧ್ಯಯನವನ್ನು ಮನೆಯಲ್ಲಿಯೇ ಪಡೆಯುತ್ತಿದ್ದರು. ಮಹಿಳೆಯರ ಸ್ಥಾನ ಮನೆಗೆ ಮಾತ್ರ, ಸ್ತ್ರೀಯರು ಪುರುಷರಿಗಿಂತ ಕಡಿಮೆಯೆಂಬ ತಪ್ಪು ಕಲ್ಪನೆಯಿಂದಾಗಿ ಶಿಕ್ಷಣದಲ್ಲಿ ಮಹಿಳೆಯರಿಗೆ ಅವಕಾಶ ಕಲ್ಪಿಸಿಕೊಟ್ಟಿರಲಿಲ್ಲ. ಆದರೂ ಕೂಡ ಮನೆಯಲ್ಲಿ ಶಿಕ್ಷಣವನ್ನು ಪಡೆದ ಮಹಿಳೆಯರಿದ್ದರು. ಅದರಲ್ಲಿ ಬಾಬರನ ಮಗಳು ಗುಲ್ಬದನ್‌ಬೇಗಂ, ಸುಲ್ತಾನ್ ರಜಿಯಾ, ನೂರ್ಜಹಾನ್, ಮಮ್ತಾಜ್, ಷಹಜಹಾನ್ ಮಗಳು ಜಹಾನರ, ಔರಂಗಜೇಬನ ಮಗಳು ಜೇಬುನ್ನೀಸಾ ಮುಖ್ಯರಾಗಿದ್ದಾರೆ.

### ೧.೪. ಆಂಗ್ಲರ ಶಿಕ್ಷಣ ಪದ್ಧತಿ

ಭಾರತದ ಸಂಪತ್ತಿನಿಂದ ಮತ್ತು ವ್ಯಾಪಾರದಿಂದ ಪೋರ್ಚುಗೀಸರು, ಡಚ್ಚರು, ಫ್ರೆಂಚರು, ಆಂಗ್ಲರು, ಆಕರ್ಷಿತರಾಗಿದ್ದರು. ವ್ಯಾಪಾರದ ದೃಷ್ಟಿಯಿಂದ ಸಮುದ್ರ ಮಾರ್ಗವನ್ನು

ಕಂಡು ಹಿಡಿದ ಇವರು ಪೈಪೋಟಿಯ ಮೂಲಕ ವಸಾಹತುಗಳನ್ನು ಸ್ಥಾಪಿಸಿಕೊಂಡು, ನಂತರ ದೇಶವನ್ನೇ ಆಕ್ರಮಿಸಿಕೊಂಡರು. ಆದರೆ ಆಂಗ್ಲರು ತಮ್ಮ ಕ್ರೈಸ್ತಧರ್ಮ ಪ್ರಚಾರ ಮಾಡುವ ಸಲುವಾಗಿ ಕೆಲವು ಕೇಂದ್ರಗಳನ್ನು ಸ್ಥಾಪಿಸಿದರು. ಚರ್ಚುಗಳ ಜೊತೆ ಜೊತೆಗೆ ಶಾಲೆಗಳನ್ನು ಸ್ಥಾಪಿಸಿದರು. ಆಂಗ್ಲರಿಗೆ ಧಾರ್ಮಿಕ ಶಿಕ್ಷಣ ಬೋಧಿಸುವುದು ಮುಖ್ಯ ಗುರಿಯಾಗಿತ್ತು. ಆಂಗ್ಲಭಾಷೆಯನ್ನು ಇತರ ವಿಷಯಗಳ ಜೊತೆ ಬೋಧಿಸಲು ಪ್ರಾರಂಭಿಸಿದರು. ಹತ್ತೊಂಬತ್ತನೆಯ ಶತಮಾನದ ವೇಳೆಗೆ ಆಂಗ್ಲರ ಭಾಷೆಯ ಪ್ರಭಾವದ ಶಾಲೆಗಳು ಹುಟ್ಟಿಕೊಂಡವು.

ಭಾರತದಲ್ಲಿ ಪಾಶ್ಚಿಮಾತ್ಯ ಶಿಕ್ಷಣ ಪದ್ಧತಿಯನ್ನು ಪ್ರಾರಂಭಿಸಿದ ಮೊದಲ ಕೀರ್ತಿ ಪೋರ್ಚುಗೀಸರಿಗೆ ಸಲ್ಲುತ್ತದೆ. ಕ್ರಿ.ಶ.೧೬೭೫ರಲ್ಲಿ ಸಂತ ಕ್ಸೇವಿಯರನ್ನು ಫ್ರೆಂಚರು, ಆಂಗ್ಲರ, ಮತ ಪ್ರಚಾರದ ಹಿನ್ನೆಲೆಯನ್ನು ಇಟ್ಟುಕೊಂಡ ಇವನು ಶಾಲೆಗಳನ್ನು ಸ್ಥಾಪಿಸಿದನು. ೧೭೯೨ರಲ್ಲಿ ಚಾರ್ಲ್ಸ್‌ಗ್ರಾಂಟ್ ಎಂಬುವನು ಶಿಕ್ಷಣ ಪ್ರಸಾರದ ನೆಪದಲ್ಲಿ ಪ್ರಾಕೃತ, ವಿಜ್ಞಾನ, ಬೋಧನೆಗಳು ಆಂಗ್ಲ ಮಾಧ್ಯಮದಲ್ಲಿ ನಡೆಸಲು ಸೂಚನೆ ನೀಡಿದನು. ಇದರಿಂದ ಪ್ರಾಚೀನ ಕಾಲದ ಶಿಕ್ಷಣ ಪದ್ಧತಿಗಳು ಅವನತಿಯ ದಾರಿಯನ್ನು ಹಿಡಿದವು.

ಹದಿನೆಂಟನೆಯ ಶತಮಾನದ ಕೊನೆಯ ವೇಳೆಗೆ ಭಾರತೀಯ ಶಿಕ್ಷಣದ ಸುಧಾರಿತ ವ್ಯವಸ್ಥೆಗೆ ಆಂಗ್ಲರು ಸಹ ಒತ್ತಾಯಿಸಿದ್ದರು. ಈ ವಿಚಾರದ ಬಗ್ಗೆ ಚರ್ಚೆ ನಡೆಯುವ ಸಂದರ್ಭದಲ್ಲಿ ಭಾರತದ ಗೌರ್ನರ್ ಜನರಲ್ ಆಗಿದ್ದ ಲಾರ್ಡ ಮಿಂಟೆ ಭಾರತೀಯ ಸಾಹಿತ್ಯ ಹಾಗೂ ಸಂಸ್ಕೃತಿಗಳ ಅಧ್ಯಯನ, ಅಭಿವೃದ್ಧಿ ರಕ್ಷಣೆಗೆ ಅವಕಾಶ ಮಾಡಿ ಕೊಡಬೇಕೆಂದು ಮನವಿ ಮಾಡಿಕೊಂಡನು. ಇವನ ಅಪೇಕ್ಷೆಯಂತೆ ೧೮೧೩ರಲ್ಲಿ ಚಾರ್ಟರ್ ಶಾಸನ ಜಾರಿಗೆ ಬಂದು. ಐರೋಪ್ಯ ಪಾದ್ರಿಗಳಿಗೆ ಭಾರತದಲ್ಲಿ ವಿದ್ಯಾ ಪ್ರಚಾರ ಮಾಡಲು ಅನುಮತಿ ದೊರಕಿತು. ಜೊತೆಗೆ ಪ್ರತಿ ವರ್ಷ ಒಂದು ಲಕ್ಷ ರೂಪಾಯಿ ಕಡಿಮೆ ಇಲ್ಲದೆ ಸಾಹಿತ್ಯದ ಪುನರುಜ್ಜೀವನಕ್ಕೆ, ದೇಶಿಯ ವಿದ್ವಾಂಸರ ಉತ್ತೇಜನಕ್ಕೆ, ಮೀಸಲಿಡಬೇಕೆಂದು ಆದೇಶಿಸಲಾಯಿತು. ಇದರಿಂದ ಸುಮಾರು ಕಾಲಾವದಿಯವರೆಗೂ ಪ್ರತಿಯೊಂದು ಪ್ರಾಂತ್ಯಗಳಲ್ಲಿಯೂ ಸರಕಾರ ಹಾಗೂ ಖಾಸಗಿ ಸಂಸ್ಥೆಗಳಿಂದ ಉತ್ತಮ ಕೆಲಸಗಳು ನಡೆದವು. ಈ ರೀತಿಯ ಶಿಕ್ಷಣ ಚಟುವಟಿಕೆಗಳಲ್ಲಿಯೂ ಭಾಷಾಮಾಧ್ಯಮ , ಬೋಧನೆ, ಪಠ್ಯಕ್ರಮಗಳ ಬಗ್ಗೆ ವಾದ-ವಿವಾದಗಳು ನಡೆಯುತ್ತಲೇ ಬಂದವು. ಇದರಿಂದ ಭಾರತದಲ್ಲಿದ್ದ ಬ್ರಿಟೀಷ್ ಸರ್ಕಾರ ಶಿಕ್ಷಣಕ್ಕೆ ಸಂಬಂಧಿಸಿದಂತೆ ನಿರ್ದಿಷ್ಟ ಕಾರ್ಯಕ್ರಮ ಯೋಜನೆ ರೂಪಿಸಲು ಪ್ರಾರಂಭಿಸಿತು. ಇದರ ಫಲವಾಗಿಯೇ ವುಡ್ಸನ ವರದಿ, ಮೆಕಾಲೆ ವರದಿಗಳು ಅಸ್ತಿತ್ವಕ್ಕೆ ಅನುಸರಿಸಲು ಅನುಮೋದನೆ ನೀಡಿತು. ಪ್ರಾಥಮಿಕ ಶಾಲಾ ಅಧ್ಯಾಪಕರ ವಿದ್ಯಾರ್ಹತೆಯ ಹೆಚ್ಚಳ, ತರಬೇತಿ, ಸಂಬಳ ಹೆಚ್ಚು ಮಾಡುವುದರ ಜೊತೆಗೆ ವೃತ್ತಿ ಶಿಕ್ಷಣ ಸೌಲಭ್ಯ, ಜ್ಞಾನಾಭಿವೃದ್ಧಿಗೆ ಅವಕಾಶ ಒದಗುವಂತಹ ಸೌಲಭ್ಯಗಳನ್ನು ಶಿಫಾರಸ್ಸು ಮಾಡಿತು. ಪ್ರಾಥಮಿಕ

ಶಾಲಾ ಶಿಕ್ಷಣದಲ್ಲಿ ಹಾಜರಾತಿಗೆ ಪ್ರೋತ್ಸಾಹಿಸಿತು. ಇದರಿಂದ ಶಾಲೆಗಳಲ್ಲಿ ಅಪವ್ಯಯ ತಡೆಗಟ್ಟಲು ಪ್ರಯತ್ನಿಸಿತು. ಶಾಲಾಕಾಲಾವಧಿಯನ್ನು ಋತುಮಾನಗಳಿಗೆ ಅನುಗುಣವಾಗಿ ರಚನೆಗೆ ಶಿಫಾರಸ್ಸು ಮಾಡಿತು. ಈ ಪ್ರಾಥಮಿಕ ಶಿಕ್ಷಣವನ್ನು ಸರ್ಕಾರವೆ ವಹಿಸಿಕೊಳ್ಳಬೇಕು ಎಂದು ಹೇಳಿತು. ಈ ಶಿಕ್ಷಣದ ಸುಧಾರಣೆಗೆ ಹೆಚ್ಚಿನ ಸಂಖ್ಯೆಯಲ್ಲಿ ತನಿಖಾಧಿಕಾರಿಗಳನ್ನು ನೇಮಿಸಿಕೊಳ್ಳಬೇಕು ಎಂದು ಅಧಿಸೂಚನೆಯನ್ನು ಹೊರಡಿಸಿತು. ದ್ವಿತೀಯ ಮಹಾಯುದ್ಧದ ನಂತರ ಭಾರತ ಸರ್ಕಾರದ ಗಮನ ವಿವಿಧ ಸಾಮಾಜಿಕ ಸುಧಾರಣೆಯ ಕಡೆಗೆ ನಡೆಯಿತು. ಇದರಲ್ಲಿ ಶಿಕ್ಷಣದ ಅಭಿವೃದ್ಧಿಯು ಒಂದಾಗಿತ್ತು. ಈ ಕಾಲದಲ್ಲಿ ಶಿಕ್ಷಣದ ಸುಧಾರಣೆಗಾಗಿ ಆಗಿನ ಭಾರತ ಸರ್ಕಾರದ ಶಿಕ್ಷಣ ಸಲಹೆಗಾರನಾಗಿದ್ದ. ಸರ್ ಜಾನ್ ಸಾರ್ಜಂಟ್ ಅವರನ್ನು ಭಾರತದಲ್ಲಿ ಶಿಕ್ಷಣದ ಅಭಿವೃದ್ಧಿಗೆ ಸಂಬಂಧಿಸಿದಂತೆ ಯೋಜನೆಯನ್ನು ಸಿದ್ದಪಡಿಸಲು ಕೇಂದ್ರ ಸಲಹಾ ಮಂಡಳಿ ಸೂಚನೆ ನೀಡಿತು. ಈ ಸಮಿತಿಯ ಶಿಫಾರಸ್ಸಿನ ಅನ್ವಯ ಸರ್ ಜಾನ್ ಸಾರ್ಜಂಟ್ ಅಧ್ಯಕ್ಷತೆಯಲ್ಲಿ ವರದಿ ಸಿದ್ದಪಡಿಸಲಾಯಿತು. ಆದ್ದರಿಂದ ಇದಕ್ಕೆ 'ಸಾರ್ಜಂಟ್ ಯೋಜನೆ' ಎಂದು ಹೆಸರಾಯಿತು.

ಈ ಸಮಿತಿಯು ಹನ್ನೆರಡು ಅಧ್ಯಯನಗಳಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ವಿವರಿಸಿದೆ. ಮೂರರಿಂದ ಆರು ವರ್ಷ ಪೂರ್ವಪ್ರಾಥಮಿಕ, ಐದು ಅಥವಾ ಆರರಿಂದ ಹದಿನಾಲ್ಕು ವರ್ಷದ ಎಲ್ಲಾ ಮಕ್ಕಳಿಗೂ ಸಾರ್ವತ್ರಿಕ ಹಾಗೂ ಕಡ್ಡಾಯ ಉಚಿತ ಶಿಕ್ಷಣ ನೀಡಬೇಕೆಂದು ಹೇಳಿತು. ೧೧ ರಿಂದ ೧೭ ವರ್ಷದವರೆಗೆ ಪ್ರೌಢಶಾಲಾ ಶಿಕ್ಷಣ ಕೊಡಬೇಕು. ಇದಕ್ಕು ಹೆಚ್ಚಾಗಿ ಶಿಕ್ಷಣದಲ್ಲಿ ಆಸಕ್ತಿ ಹೊಂದಿದವರಿಗೆ ಮೂರುವರ್ಷದ ವಿಶ್ವವಿದ್ಯಾಲಯ ಶಿಕ್ಷಣ ಅಗತ್ಯ ಎಂದು ಹೇಳಿದೆ. ಸಾರ್ವಜನಿಕ ಗ್ರಂಥಾಲಯ ಸ್ಥಾಪನೆಯಾಗುವುದರ ಜೊತೆಗೆ ಮಕ್ಕಳಿಗೆ ಕಡ್ಡಾಯ ದೈಹಿಕ ಶಿಕ್ಷಣ, ವೈದ್ಯಕೀಯ ಪರೀಕ್ಷೆಯಾಗಬೇಕು ಎಂದು ಶಿಫಾರಸ್ಸು ಮಾಡಿತು. ಪೋಷಣೆ ಇಲ್ಲದೆ ಬಡತನದಲ್ಲಿರುವ ಕುಟುಂಬದ ಮಕ್ಕಳಿಗೆ ಹಾಲು ಮತ್ತು ಊಟದ ವ್ಯವಸ್ಥೆ ಮಾಡಿಕೊಡಬೇಕು. ಉದ್ಯೋಗ ವಿನಿಮಯ ಕೇಂದ್ರವನ್ನು ಸ್ಥಾಪಿಸಬೇಕೆಂದು ಹೇಳಿತು. ಮಾನಸಿಕವಾಗಿ, ದೈಹಿಕವಾಗಿ ದೋಷ ಹೊಂದಿರುವ ಕುರುಡ, ಕಿವುಡ, ಮೂಗ, ಮಕ್ಕಳಿಗೆ ಪ್ರತ್ಯೇಕ ಶಾಲೆಗಳನ್ನು ತೆರೆಯಬೇಕು ಎಂದು ಹೇಳಿತು. ಶಿಕ್ಷಣ ಸಂಸ್ಥೆಗಳಲ್ಲಿ ಸಾಮಾಜಿಕ ಮನರಂಜನೆಯ ಚಟುವಟಿಕೆಗಳನ್ನು ರೂಡಿಸಿಕೊಳ್ಳುವಂತೆ ಮಾಡಬೇಕಿದೆ ಎಂದು ವರದಿಯನ್ನು ಸಲ್ಲಿಸಿತು. ಇಷ್ಟೇ ಅಲ್ಲದೇ ಬ್ರಿಟೀಷರ ಆಳ್ವಿಕೆಯ ಸಂದರ್ಭದಲ್ಲಿ ಹಲವಾರು ಶಿಕ್ಷಣದ ಯೋಜನೆಗಳು ಜಾರಿಗೆ ಬಂದು ಸುಧಾರಣೆಗೆ ಪ್ರಯತ್ನಿಸಿದವು. ಈ ಕಾಲ ಘಟ್ಟದಲ್ಲಿ ಭಾರತ ದೇಶದಲ್ಲಿ ಶಿಕ್ಷಣದ ಪ್ರಗತಿ ಉತ್ತಮವಾದ ದಾರಿಯನ್ನು ಕಂಡುಕೊಂಡಿತು.

ಒಟ್ಟಾರೆಯಾಗಿ ಪ್ರಾಚೀನ ಕಾಲದ ಶಿಕ್ಷಣ ಪದ್ಧತಿಯ ನಾಲ್ಕು ಘಟ್ಟಗಳನ್ನು ಕ್ರೂಢೀಕರಿಸಿ ಶಿಕ್ಷಣದ ಸ್ವರೂಪವನ್ನು ಹೇಳುವುದಾದರೆ ಕಾಲದಿಂದ ಕಾಲಕ್ಕೆ ಶಿಕ್ಷಣದ ಪದ್ಧತಿಗಳು

ಬದಲಾಗಿ ಪ್ರಗತಿ ಶೀಲತೆಯನ್ನು ಕಂಡುಕೊಂಡವು. ಅಲ್ಲದೇ ದಿನದಿಂದ ದಿನಕ್ಕೆ ಶಿಕ್ಷಣದಲ್ಲಿ ಸಮಾನತೆಯ ಮನೋಭಾವ ಬೆಳೆಸಲು ಪ್ರಯತ್ನಗಳು ನಡೆದವು. ಸ್ತ್ರೀ ಶಿಕ್ಷಣಕ್ಕೆ ಆದ್ಯತೆ ನೀಡಲಾಯಿತು. ಬೋಧನೆ, ವಿದ್ಯಾರ್ಥಿ, ಶಿಕ್ಷಕ ಮತ್ತು ಶಿಕ್ಷಣ ಸಂಸ್ಥೆಗಳಲ್ಲಿ ಗಣನೀಯ ಬದಲಾವಣೆಯನ್ನು ಕಾಣಬಹುದು. ಜೊತೆಗೆ ಪಠ್ಯಕ್ರಮದ ಕಠಿಣತೆ ಸರಳಗೊಂಡು ಶಿಕ್ಷಣ ಸಾರ್ವತ್ರಿಕತೆಯ ಕಡೆಗೆ ನಡೆದುದನ್ನು ಗುರುತಿಸಬಹುದು. ಶಿಕ್ಷಣ ಎಂದರೆ ಕೇವಲ ವೇದಗಳು, ಸಂಹಿತೆಗಳು, ಉಪನಿಷತ್ತುಗಳು, ವಿಹಾರಗಳು, ಬುದ್ಧನ ತತ್ವಗಳು, ಜೊತೆಗೆ ಖುರಾನ್ ಪಠನೆ, ಪ್ರಾರ್ಥನೆ, ಮಾಡುವುದು. ಅಲ್ಲದೇ ಮಾನವೀಯ ಉಪಯುಕ್ತವಾದ ಮೌಲ್ಯಗಳು ಅಳವಡಿಸಿಕೊಳ್ಳುವುದು, ವ್ಯಕ್ತಿಗಳೆಲ್ಲರು ಸಮಾನರು ಎಂಬುದನ್ನು ಬ್ರಿಟೀಷ್ ಕಾಲದ ಶಿಕ್ಷಣ ಕ್ರಮ ಹೇಳಿಕೊಡುವುದರಲ್ಲಿ ಮುಂದಾಯಿತು.

## ೨. ಭಾರತದಲ್ಲಿ ಪಠ್ಯಕ್ರಮದ ಇತಿಹಾಸ

ಭಾರತದಲ್ಲಿನ ಪಠ್ಯಕ್ರಮದ ಇತಿಹಾಸವನ್ನು ಗಮನಿಸಿದಾಗ ಪ್ರಾರಂಭದ ಕಾಲ ಘಟ್ಟಗಳಲ್ಲಿ ಮೌಖಿಕ ಆಧಾರಿತವಾದ ಪಠ್ಯಕ್ರಮವಿತ್ತು ಎಂಬುದು ನಮಗೆಲ್ಲಾ ತಿಳಿದ ಸಂಗತಿಯಾಗಿದೆ. ಗುರುಗಳು ಹೇಳಿದ ಧಾರ್ಮಿಕ ಹಾಗೂ ವೇದ ಉಪನಿಷತ್ತುಗಳನ್ನು ಶಿಷ್ಯರಾದವರು ಕಂಠಪಾಠ ಮಾಡಿ ಅಭ್ಯಾಸದಲ್ಲಿ ತೊಡಗಿಸಿಕೊಳ್ಳುತ್ತಿದ್ದರು. ವೇದಗಳ ಶ್ಲೋಕಗಳನ್ನು ಮತ್ತು ಅಧ್ಯಾತ್ಮಿಕ ಮೌಲ್ಯಗಳನ್ನು ಗುರುಗಳು ಹೇಳುತ್ತಿದ್ದರು. ವಿದ್ಯಾರ್ಥಿಗಳು ಇದನ್ನು ಆಲಿಸಿಕೊಂಡು ಕಲಿಯುತ್ತಿದ್ದರು. ನಿರ್ದಿಷ್ಟಪಡಿಸಿದ ಪಠ್ಯಗಳೇನು ಇರಲಿಲ್ಲ. ಧಾರ್ಮಿಕ ಚಟುವಟಿಕೆಗಳಲ್ಲಿ ಭಾಗವಹಿಸಿ ವೇದಗಳನ್ನು ಕರಗತ ಮಾಡಿಕೊಳ್ಳುವುದು ಅಂದಿನ ಶಿಕ್ಷಣದ ಪಠ್ಯಕ್ರಮವಾಗಿತ್ತು. ವೇದವನ್ನು ನಾಲ್ಕು ವೇದಗಳಾಗಿ ವಿಂಗಡಿಸಿ ಅದನ್ನು ವಿದ್ಯಾರ್ಥಿಗಳಿಗೆ ಬೋಧಿಸುವ ಪಠ್ಯಕ್ರಮವಿದ್ದಿತು. ಈ ಕಾಲದಲ್ಲಿ ಶಿಕ್ಷಣ ವ್ಯವಸ್ಥೆಯಲ್ಲಿ 'ಶಿಸ್ತು' ಕಲಿಸಿ ಕೊಡುವುದು ಒಂದು ಪಠ್ಯಕ್ರಮದಂತೆ ಕಾರ್ಯನಿರ್ವಹಿಸುತ್ತಿತ್ತು.

ವೇದಗಳ ಕಾಲದ ಶಿಕ್ಷಣದ ಪ್ರಾರಂಭದಲ್ಲಿ ವೇದವನ್ನು ಕಲಿಯುವ ಪದ್ಧತಿ ಜಾರಿಯಲ್ಲಿತ್ತು. ಮುಂದೆ ಪಠ್ಯಕ್ರಮದ ವಿಷಯ ಬದಲಾವಣೆಯಾಯಿತು. ಜನರ ದೃಷ್ಟಿಕೋನ ಬದಲಾಗಿ ಮತ್ತು ಸಮಸ್ಯೆ ಜಿಜ್ಞಾಸೆಗಳ ಫಲವಾಗಿ ವೇದಗಳ ಕಾಲಾಂತರ ಸಂಹಿತೆ, ಬ್ರಾಹ್ಮಣಕಗಳು, ಅರಣ್ಯಕಗಳು, ಉಪನಿಷತ್ತುಗಳು ರಚಿತವಾದವು. ಇವುಗಳನ್ನು ಕಂಠಪಾಠ ಮಾಡುವುದರ ಜೊತೆಗೆ ಸಂರಕ್ಷಣೆ ಹಾಗೂ ಬರವಣಿಗೆಯಲ್ಲಿ ದಾಖಲಾತಿ ಪ್ರಾರಂಭವಾಯಿತು. ಇವುಗಳಿಗೆ ಬ್ರಾಹ್ಮಣಕಗಳೆಂದು ಹೆಸರು. ಅನಂತರ ಋಷಿಗಳಿಂದ ಅರಣ್ಯಕಗಳು ರಚಿತವಾದವು. ಆ ಕಾಲಮಾನದಲ್ಲಿ ಉಪನಿಷತ್ತುಗಳು ರಚನೆಯಾದುದನ್ನು ಕಾಣಬಹುದು. ಈ ಉಪನಿಷತ್ತುಗಳಲ್ಲಿ ತತ್ವಜ್ಞಾನದ ಉತ್ಪತ್ತಿ, ಆದರ್ಶ ಮಟ್ಟವನ್ನು ಕಾಣಬಹುದಾಗಿದೆ. ಮುಂದೆ ಇಂತಹ ಒಂದು ಬೃಹತ್ ಮಟ್ಟದ ಸಾಹಿತ್ಯವನ್ನು ಸಂಕ್ಷಿಪ್ತಗೊಳಿಸಲು ಧರ್ಮಸೂತ್ರಗಳು ರಚನೆಯಾಗಲ್ಪಟ್ಟಿತು. ನಂತರ ಖಗೋಳಶಾಸ್ತ್ರ, ರೇಖಾಗಣಿತ, ಅಂಕಗಣಿತ, ರಾಜ್ಯಶಾಸ್ತ್ರ,

ತತ್ವಶಾಸ್ತ್ರ, ಪೌರಾಣಿಕತೆ, ಅರ್ಥಶಾಸ್ತ್ರ, ವೈದ್ಯಶಾಸ್ತ್ರ, ಯುದ್ಧಶಾಸ್ತ್ರ, ಕೃಷಿವಿಜ್ಞಾನ, ಶಿಲ್ಪ, ಮುಂತಾದವುಗಳು ಪಠ್ಯಗಳಲ್ಲಿ ಕಾಣಿಸಿಕೊಂಡವು.

ಬೌದ್ಧರ ಕಾಲದ ಶಿಕ್ಷಣದ ಪಠ್ಯಕ್ರಮವು ವೈದಿಕ ಕಾಲದಲ್ಲಿನ ಶಿಕ್ಷಣದ ಪಠ್ಯಕ್ರಮದಂತೆ ಅಧ್ಯಾತ್ಮಿಕ ದೃಷ್ಟಿಯನ್ನು ಅನುಲಕ್ಷಿಸಿಕೊಂಡು ರಚಿತವಾಗಿತ್ತು. ಪ್ರಾರಂಭದ ಪಠ್ಯಕ್ರಮವು ಓದು, ಬರಹ, ಲೆಕ್ಕಕ್ಕೆ, ಮೀಸಲಾಗಿತ್ತು. ಉನ್ನತ ಹಂತದಲ್ಲಿ ಬೌದ್ಧಧರ್ಮದ ಗ್ರಂಥಗಳನ್ನು ಅಧ್ಯಯನದ ಪಠ್ಯಕ್ರಮವಾಗಿ ರಚನೆಯಾಗಿತ್ತು. ಜೊತೆಗೆ ಬೌದ್ಧಸಾಹಿತ್ಯ, ಧಾರ್ಮಿಕಶಿಕ್ಷಣ, ವೈದ್ಯಶಾಸ್ತ್ರ, ತರ್ಕಶಾಸ್ತ್ರ, ತತ್ವಶಾಸ್ತ್ರ, ಅರ್ಥಶಾಸ್ತ್ರ, ಗಣಿತ, ನೇಯ್ಗೆ, ಹೊಲಿಗೆ, ಸಮರಶಾಸ್ತ್ರವು ಪಠ್ಯಕ್ರಮವಾಗಿ ರಚನೆಯಾಗಿದ್ದಿತು. ಬೌದ್ಧ ವಿಹಾರಗಳಲ್ಲಿನ ಪಠ್ಯಕ್ರಮ ಬೌದ್ಧಧಾರ್ಮಿಕ ಸಾಹಿತ್ಯ ಅಧ್ಯಯನ ಕಡ್ಡಾಯವಾಗಿತ್ತು. ತಕ್ಷಶಿಲೆಯಲ್ಲಿ ಜ್ಯೋತಿಷ್ಯ ಬಿಲ್ವಿದ್ಯೆ, ಶಕುನವಿದ್ಯೆ, ಮಂತ್ರಗಾರಿಕೆ, ಸರ್ಪವಿದ್ಯೆ, ಮುಂತಾದವುಗಳನ್ನು ಪಠ್ಯಕ್ರಮವಾಗಿ ಬೋಧನೆಯನ್ನು ಮಾಡಲಾಗಿತ್ತು.

ವೇದಗಳ ಕಾಲದಲ್ಲಿ ವೈದಿಕ ಶಿಕ್ಷಣ ಸಂಸ್ಥೆಗಳು ಅಸ್ತಿತ್ವದಲ್ಲಿದ್ದವು. ಇವುಗಳು ವೇದ, ಇತಿಹಾಸ, ಪುರಾಣ, ಕಾವ್ಯ, ವ್ಯಾಕರಣ, ಜ್ಯೋತಿಷ್ಯ, ವೇದಾಂಗ, ಶಕುನ, ನ್ಯಾಯ, ಸಂಗೀತ, ವೈದ್ಯ, ಸಾಂಖ್ಯ ಮುಂತಾದವುಗಳು ಬೌದ್ಧ ಕಾಲದಲ್ಲಿ ಶಿಕ್ಷಣದ ಪಠ್ಯಕ್ರಮವಾಗಿ ಸೇರಿರುವುದು ವಿಶೇಷವಾಗಿತ್ತು. ಇದನ್ನು ಫಾಹಿಯಾನ್ ಮತ್ತು ಹುಯ್ಯನ್‌ತ್ಸಾಂಗ್ ಇಬ್ಬರು ವಿಶ್ಲೇಷಿಸುತ್ತಾರೆ. ಈ ಮೇಲಿನ ವಿದೇಶಿಯರ ಹೇಳಿಕೆಯಿಂದ ವೇದಗಳ ಕಾಲದ ಪಠ್ಯಕ್ರಮ ಬೋಧನೆ, ಗುರುಕುಲ, ಗುರುಶಿಷ್ಯರ ಸಂಬಂಧಗಳು ಬೌದ್ಧರ ಕಾಲಘಟ್ಟದಲ್ಲಿಯೂ ಪ್ರಚಲಿತದಲ್ಲಿದ್ದವು. ಎಂದು ಎ.ಎಸ್. ನಂಜುಂಡಸ್ವಾಮಿ 'ಭಾರತೀಯ ಶಿಕ್ಷಣದ ಇತಿಹಾಸ' (೧೯೬೪ ಸಮಾಜ ಪುಸ್ತಕಾಲಯ ಧಾರವಾಡ) ಪುಸ್ತಕದಲ್ಲಿ ವಿಶ್ಲೇಷಿಸುತ್ತಾರೆ.

ಮಹಮ್ಮದೀಯರ ಕಾಲದಲ್ಲಿನ ಶಿಕ್ಷಣ ಪದ್ಧತಿಯ ಪಠ್ಯಕ್ರಮವು ಮುಖ್ಯವಾಗಿ ಇಸ್ಲಾಂಧರ್ಮದ ಜ್ಞಾನವನ್ನು ಹರಡುವ ಉದ್ದೇಶದ ಹಿನ್ನೆಲೆಯಲ್ಲಿ ರಚನೆಯಾಗಿತ್ತು. ಅರಬ್ಬಿ ಮತ್ತು ಪಾರ್ಸಿ ಭಾಷೆಯಲ್ಲಿ ಭಾಷಾ ಕೌಶಲಗಳಾದ ಓದುವುದು, ಬರೆಯುವುದನ್ನು ಕಲಿಯುತ್ತಿದ್ದರು. ಮೊದಲು ಅಕ್ಷರವನ್ನು ತೋರಿಸಿ ಉಚ್ಚಾರಣೆಯ ಮುಖಾಂತರ ಅಕ್ಷರಾಭ್ಯಾಸ ನಡೆಯುತ್ತಿತ್ತು. ನಂತರದಲ್ಲಿ ಖುರಾನಿನ ೩೦ನೆಯ ಅಧ್ಯಾಯವನ್ನು ದಿನಚರಿ ಪ್ರಾರ್ಥನಾ ಪದ್ಯಗಳನ್ನು ಜೊತೆಗೆ ಅಂತ್ಯಕ್ರಿಯೆಯಲ್ಲಿ ಪಠಿಸಬೇಕಾಗಿದ್ದ 'ಫಾತಿಹಾ' ಗೀತೆಗಳನ್ನು ಸ್ಪಷ್ಟ ಉಚ್ಚಾರಣೆಯ ಮೂಲಕ ಪಠಿಸಬೇಕಾಗಿತ್ತು. ಆದರೆ ಇವುಗಳ ಅರ್ಥ ತಿಳಿಯಬೇಕಾದ ಅಗತ್ಯತೆ ಇರಲಿಲ್ಲ. ಮಕ್ಕಳಿಗೆ ನೀತಿಪಾಠಗಳನ್ನು ಹೇಳಿ ಕೊಡಲು ಗುಲಿಸ್ಥಾನ್ ಮತ್ತು 'ಬೇಸ್ಥಾನ್' ಕಥೆಗಳು ಪಠ್ಯಕ್ರಮವಾಗಿದ್ದವು. ಮಕ್ಕಳಿಗೆ ಪರ್ಷಿಯನ್ ವ್ಯಾಕರಣವನ್ನು ಕಂಠಪಾಠ ಮಾಡಿಸಲಾಗುತ್ತಿತ್ತು. ಈ ಪಠ್ಯಕ್ರಮವನ್ನು ಕಲಿತ ಮಕ್ಕಳು ಮುಂದೆ 'ಯೂಸಫ್' ಮತ್ತು

'ಜುಲೇಖ', 'ಲೈಲಾಮಜ್ನು' ಸಿಕಂದರ್‌ನಾಮ ಮುಂತಾದವುಗಳನ್ನು ಪರಿಚಯ ಮಾಡಿಕೊಡುವಂತಹ ಪಠ್ಯಕ್ರಮ ರಚನೆಯಾಗಿತ್ತು. ಸರಳ ಅಂಕಗಣಿತ, ಪರಿವರ್ತನ ವಿಧಾನ, ಅರ್ಜಿ ಬರೆಯುವುದು, ಪತ್ರವ್ಯವಹಾರದ ಪಠ್ಯಕ್ರಮಗಳು ಸೇರಿದ್ದವು. 'ಖುರಾನ್' ಜೊತೆ 'ಕಾಲಕಬ್ರಿ' 'ಕರಿಯ' 'ಮಮ್ಕಿಮಾ'ಗಳನ್ನು ಹೇಳಿಕೊಡುತ್ತಿದ್ದರು. ಒಟ್ಟಾರೆಯಾಗಿ ಪ್ರಾಥಮಿಕ ಶಿಕ್ಷಣ ಮುಗಿಯುವುದರೊಳಗಾಗಿ ಜೀವನಕ್ಕೆ ಬೇಕಾದ ಅಗತ್ಯ ಅಂಶಗಳನ್ನು ಮೌಖಿಕ ಪಠ್ಯಕ್ರಮ ರಚನೆ ಮಾಡುವುದರ ಮೂಲಕ ಮಕ್ಕಳಿಗೆ ಕಲಿಸಲಾಗುತ್ತಿತ್ತು.

ಮುಸ್ಲಿಮರ ಕಾಲದ ಶಿಕ್ಷಣ ಪದ್ಧತಿಯಲ್ಲಿ ಉನ್ನತ ಶಿಕ್ಷಣ ಮದರಾಸಗಳಲ್ಲಿ ನಡೆಯುತ್ತಿತ್ತು. ಮುಖ್ಯವಾಗಿ ಇಲ್ಲಿ ಧಾರ್ಮಿಕ ಶಿಕ್ಷಣದ ಪಠ್ಯಕ್ರಮ 'ಖುರಾನ್' ಗ್ರಂಥವನ್ನು ಆಳವಾಗಿ ಅಧ್ಯಯನ ಮಾಡುವುದು. ಮಹಮ್ಮದ್ ಪೈಗಂಬರ್ ಜೀವನ ಚರಿತ್ರೆ, ಸೂಫಿತತ್ವ ತಿಳಿಸುವಂತಹ ಪಠ್ಯಕ್ರಮಗಳು ರಚನೆಯಾಗಿದ್ದವು. ಜೊತೆಗೆ ಅರೇಬಿಕ್ ವ್ಯಾಕರಣ ಮತ್ತು ಸಾಹಿತ್ಯ, ಪರ್ಶಿಯನ್ ಸಾಹಿತ್ಯ, ತರ್ಕಶಾಸ್ತ್ರ, ತತ್ವಶಾಸ್ತ್ರ, ಕಾನೂನು, ಇತಿಹಾಸ, ಭೂಗೋಳ, ವ್ಯವಸಾಯ, ವಿಜ್ಞಾನ, ವೈದ್ಯಕೀಯಶಾಸ್ತ್ರ, ಇತ್ಯಾದಿ ವಿಷಯಗಳು ಉನ್ನತ ಶಿಕ್ಷಣದ ಪಠ್ಯಕ್ರಮಗಳಾಗಿದ್ದವು.

ಮುಸ್ಲಿಮರ ಆಳ್ವಿಕೆಯ ಅವನತಿಯ ನಂತರ ಭಾರತದ ರಾಜ ಮನೆತನದ ಆಳ್ವಿಕೆಯು ಪ್ರಾರಂಭವಾಯಿತಾದರೂ ಬಹಳ ದಿನಗಳ ಕಾಲ ಉಳಿಯಲಿಲ್ಲ. ನಂತರದ ದಿನಮಾನಗಳಲ್ಲಿ ಭಾರತವನ್ನು ಪೋರ್ಚುಗೀಸರು, ಡಚ್ಚರು, ಫ್ರೆಂಚರು, ಆಳ್ವಿಕೆಯನ್ನು ನಡೆಸಿದರು. ಇವರ ಕಾಲಘಟ್ಟದಲ್ಲಿ ಪ್ರಾಥಮಿಕ, ಪ್ರೌಢ, ಉನ್ನತ ಶಿಕ್ಷಣದ ಪಠ್ಯಕ್ರಮಗಳು ಹೇಗಿದ್ದವು ಎಂಬ ಮಾಹಿತಿ ಖಚಿತವಾಗಿ ದೊರೆಯುವುದಿಲ್ಲ.

ಇವರ ನಂತರ ಭಾರತ ದೇಶ ಆಂಗ್ಲರ ಆಡಳಿತಕ್ಕೆ ಒಳಪಟ್ಟಿತು. ಈ ವೇಳೆಗೆ ಭಾರತದ ಶಿಕ್ಷಣ ಪಠ್ಯಕ್ರಮದ ಸ್ವರೂಪ ಗಣನೀಯವಾಗಿ ಬದಲಾವಣೆಯನ್ನು ಹೊಂದಿತು. ಪ್ರಾರಂಭದಲ್ಲಿ ಭಾರತೀಯರ ಅಪೇಕ್ಷಣೆಯಂತೆ ಪ್ರಾಚೀನ ಕಾಲದ ಶಿಕ್ಷಣದ ಪಠ್ಯಕ್ರಮವನ್ನೇ ಹೇಳಿಕೊಡಲಾಗುತ್ತಿತ್ತು. ನಂತರ ಆಂಗ್ಲರ ಆಡಳಿತ ಭಾರತದಲ್ಲಿ ಸುಧಾರಿಸಿದಂತೆಲ್ಲ ಪಠ್ಯಕ್ರಮದ ವ್ಯವಸ್ಥೆ ಸುಧಾರಿಸ ತೊಡಗಿತು. ಇಂಗ್ಲೇಂಡಿನ ಶಾಲಾ ಕಾಲೇಜುಗಳ ಪಠ್ಯಕ್ರಮವನ್ನು ಭಾಷಾಂತರಿಸಿ ಬೋಧಿಸುವ ಪರಿಪಾಠ ಪ್ರಾರಂಭವಾಯಿತು. ನಂತರ ಚರಿತ್ರೆ, ಭೂವಿವರಣೆ, ಆರೋಗ್ಯ, ಸಂಗೀತ, ವ್ಯವಸಾಯ, ವಿಜ್ಞಾನ, ಭಾಷೆ, ಕೈಕೆಲಸ, ದೈಹಿಕ ಶಿಕ್ಷಣದ ಪಠ್ಯಕ್ರಮಗಳು ರಚಿತವಾದವು. ಶಿಕ್ಷಣದ ಪಠ್ಯಕ್ರಮಕ್ಕೆ ಸಂಬಂಧಿಸಿದಂತೆ ಇವರ ಆಳ್ವಿಕೆಯ ಅವಧಿಯಲ್ಲಿ ಗಣಿತ, ಪರಿಸರ ಅಧ್ಯಯನ ಸಾಹಿತ್ಯ, ಭಾಷಾಧ್ಯಯನ ಕಲಿಸುವ ನಿಟ್ಟಿನಲ್ಲಿ ರಚಿತವಾದವು. ಸಮಾಜ ಸುಧಾರಕರ ಶಿಕ್ಷಣ ಚಿಂತಕರ ಹೋರಾಟದ ಫಲವಾಗಿ ಪಠ್ಯಕ್ರಮಗಳು ಪ್ರಾದೇಶಿಕತೆಯ ಭಾಷೆಯನುಸಾರ ರಚನೆಯಾಯಿತು. ಪಠ್ಯಕ್ರಮದ ಸುಧಾರಣೆಗಾಗಿ ಬ್ರಿಟೀಶ್ ಸರ್ಕಾರ ವುಡ್ಸ್‌ವರದಿ, ಸಾರ್ಜಂಟ್ ವರದಿ, ಮೆಕಾಲೆ ವರದಿಗಳು ಪಠ್ಯಕ್ರಮ ರಚನೆಯ ಬಗ್ಗೆ ಸೂಕ್ತ

ಸಲಹೆಗಳನ್ನು ನೀಡಿದವು. ಇವುಗಳ ಫಲವಾಗಿ ಪಠ್ಯದ ಪಠ್ಯಕ್ರಮ ಮಾತ್ರ ಭಾಷೆಯಲ್ಲಿ ಸರಳ ರೀತಿಯಲ್ಲಿ ಚಟುವಟಿಕೆ ಆಧಾರಿತ ಪಠ್ಯಕ್ರಮ ರಚನೆಯಾದವು. ಹೆಚ್ಚಿನ ವಿವರಣೆಯನ್ನು ಪಠ್ಯವಸ್ತುವಿನ ಚರ್ಚೆಯ ಭಾಗದಲ್ಲಿ ವಿವರಿಸಲಾಗಿದೆ.

## ೩. ಕರ್ನಾಟಕದಲ್ಲಿ ಶಿಕ್ಷಣದ ಚಾರಿತ್ರಿಕ ಹಿನ್ನೆಲೆ

ಪ್ರಾಚೀನ ಭಾರತದ ಶಿಕ್ಷಣ ಪರಂಪರೆಯನ್ನು ಅಭ್ಯಾಸ ಮಾಡಲು ಸಿಗುವ ಆಕರಗಳಷ್ಟೇ ಕರ್ನಾಟಕ ಶಿಕ್ಷಣ ಪರಂಪರೆಯನ್ನು ಅಭ್ಯಾಸ ಮಾಡಲು ಆಕರಗಳು ಸಿಗುತ್ತವೆ. ಈ ರಾಜ್ಯದ ಶಿಕ್ಷಣ ವ್ಯವಸ್ಥೆ, ಬೋಧನೆ, ಪಠ್ಯಕ್ರಮ, ಗುರುಶಿಷ್ಯರ ಸಂಬಂಧ, ಭಾರತದ ಶಿಕ್ಷಣ ಪರಂಪರೆಯನ್ನು ಹೋಲುತ್ತದೆ. ಈ ಹೋಲಿಕೆಗೆ ಧಾರ್ಮಿಕ ಆಚರಣೆ, ಸಂಸ್ಕೃತಿ, ವಾಸ್ತುಶಿಲ್ಪಗಳೇ ಸಾಕ್ಷಿಯಾಗಿವೆ. ಇವುಗಳ ಜೊತೆಗೆ ಲಿಖಿತ ದಾಖಲೆಗಳಾದ ಶಾಸನ, ಕನ್ನಡ ಸಾಹಿತ್ಯ, ಕನ್ನಡದಲ್ಲಿ ಬಂದ ಕೃತಿಗಳು, ವಚನಗಳು, ಕೀರ್ತನೆಗಳು, ತ್ರಿಪದಿಗಳು, ತತ್ವಪದಗಳು, ಕರ್ನಾಟಕ ಶಿಕ್ಷಣ ಪರಂಪರೆಯನ್ನು ತಿಳಿಸುವಲ್ಲಿ ಸಹಾಯಕವಾದವುಗಳಾಗಿವೆ.

ವೈದಿಕ ಕಾಲದಲ್ಲಿ ಕರ್ನಾಟಕದ ಶಿಕ್ಷಣವು ಧಾರ್ಮಿಕವಾದುದೇ ಆಗಿತ್ತು. ಈ ಕಾಲದಲ್ಲಿ ಕರ್ನಾಟಕದ ಜನತೆ ಶಿಕ್ಷಣ ಎಂದರೆ ಆತ್ಮಜ್ಞಾನ ಅಥವಾ ಮೋಕ್ಷ, ಇಂಥ ಮೋಕ್ಷ ಸಿದ್ಧಿಯನ್ನು ಪಡೆಯಲು 'ವಿದ್ಯೆ' ಒಂದು ಸಾಧನವೆಂದು ಪ್ರಾಚೀನ ಕರ್ನಾಟಕದ ಜನತೆ ನಂಬಿದ್ದರು. ವ್ಯಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಆತನ ಬಹುಮುಖ ವಿಕಾಸಕ್ಕೆ ಪ್ರಯತ್ನಿಸುವುದು ಪ್ರಾಚೀನ ಕರ್ನಾಟಕದ ಶಿಕ್ಷಣ ಉದ್ದೇಶವಾಗಿತ್ತು.

ವಿದ್ಯಾರ್ಥಿಯು ಗುರುವಿನ ಸೇವೆ ಮಾಡಿ ಆತನಿಂದ ವಿದ್ಯಾಲಾಭ ಮಾಡಿಕೊಳ್ಳುತ್ತಿದ್ದ ನಾದುದರಿಂದ ವಿದ್ಯಾರ್ಥಿಯನ್ನು 'ಅಂತೇವಾಸಿ' ಎಂದು ಕರೆಯುತ್ತಿದ್ದುದು ಕಂಡು ಬರುತ್ತದೆ. ಗುರುವಾದವನು ಯಾವ ಸಂಭಾವನೆಯನ್ನು ನಿರೀಕ್ಷಿಸದೆ ವಿದ್ಯಾ ಪ್ರಧಾನ ಮಾಡುತ್ತಿದ್ದನು. ಇದು ಆಚಾರ್ಯರಾದವರು ಮಾಡುವ ಕರ್ತವ್ಯಗಳಲ್ಲಿ ಒಂದೆಂದು ಪರಿಗಣಿಸಲಾಗಿತ್ತು. ಗುರುಶಿಷ್ಯರ ಸಂಬಂಧ ನೇರವಾಗಿತ್ತಲ್ಲದೆ, ಉಳಿದ ಯಾವ ಮಧ್ಯಸ್ಥಿಕೆಯಲ್ಲೂ ಇರಲಿಲ್ಲ. ವಿದ್ಯಾರ್ಥಿಯು ನೇರವಾಗಿ ಗುರುವಿಗೆ ಸಂಬಂಧಿಸಿದವನು ಮಾತ್ರ ಎಂದು ಎಸ್.ವಿ. ಜೇವೂರವರು 'ಕರ್ನಾಟಕದ ಶೈಕ್ಷಣಿಕ ಇತಿಹಾಸ' ಎಂಬ ಪುಸ್ತಕದಲ್ಲಿ ವಿಶ್ಲೇಷಿಸುತ್ತಾರೆ.

ಕರ್ನಾಟಕ ಮತ್ತು ಭಾರತದ ಶಿಕ್ಷಣದಲ್ಲಿ ಯಾವ ಬಗೆಯ ವ್ಯತ್ಯಾಸವಿತ್ತು ಎಂಬ ಮಾಹಿತಿಗಳು ಲಭ್ಯವಾಗುವುದಿಲ್ಲ. ಆ ಕಾಲಘಟ್ಟದ ಕೃತಿಗಳು ಶಿಕ್ಷಣದ ಪರಂಪರೆಯನ್ನು ವಿಶ್ಲೇಷಿಸುವುದಿಲ್ಲ. "ಪ್ರಾಚೀನ ಕರ್ನಾಟಕದ ಶಿಕ್ಷಣ ಪದ್ಧತಿಯ ವಿಚಾರದಲ್ಲಿ ಕರ್ನಾಟಕದ ಶಾಸನಗಳಲ್ಲಿ ವೈದಿಕ ಯುಗದ ಗುರುಕುಲ, ಪಠ್ಯಕ್ರಮ, ಬೋಧನೆಯ ಬಗ್ಗೆ, ಯಾವ ಕುರುಹು ಕಾಣಿಸುವುದಿಲ್ಲ." "ಕರ್ನಾಟಕ ಶಾಸನಗಳಲ್ಲಿ ವೈದಿಕ ಯುಗದ ಗುರುಕುಲ ಪದ್ಧತಿಯ ವಿಷಯಗಳು ಕಾಣಿಸುವುದಿಲ್ಲ." ಎಂದು ಚಿದಾನಂದ ಮೂರ್ತಿಯವರು ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನದಲ್ಲಿ (ಪು.೨೦೮) ಅಭಿಪ್ರಾಯಪಡುತ್ತಾರೆ.

ಅಶೋಕನ ಆಡಳಿತದ ಅವಧಿಯ ಕಾಲಮಾನದಿಂದ ಕರ್ನಾಟಕ ಶಿಕ್ಷಣ ಪರಂಪರೆಯ ದಾಖಲೆಗಳು ನಮಗೆ ದೊರಕುತ್ತವೆ. ಕ್ರಿ.ಪೂ.೩೨೪ –೨೯೮ ರಲ್ಲಿ ಕನ್ನಡನಾಡಿನ ಶ್ರವಣ ಬೆಳಗೊಳದಲ್ಲಿ ಜೈನ ಗುರುವಿನೊಂದಿಗೆ ಬಂದು (ಭದ್ರಬಾಹು) ನೆಲೆಸಿ, ಬೌದ್ಧ ಧರ್ಮದ ಬೋಧನೆಗಾಗಿ ಕೆಲವು ಶೈಕ್ಷಣಿಕ ಕೇಂದ್ರಗಳನ್ನು ಸ್ಥಾಪಿಸಿದನು. ಇದರಿಂದ ಕರ್ನಾಟಕದಲ್ಲಿ ಬೌದ್ಧರ ಕಾಲದ ಶಿಕ್ಷಣ ಪ್ರಾರಂಭವಾಯಿತು ಎಂದು ಆರ್.ಡಿ.ಕರಜಗಿಯವರು 'ಭಾರತದ ಶಿಕ್ಷಣ ಚರಿತ್ರೆ' ಎಂಬ ಮಸ್ತಕದಲ್ಲಿ ವಿವರಿಸುತ್ತಾರೆ. (ಶ್ರೀ ಪ್ರಕಾಶನ ಧಾರವಾಡ-೧೯೯೩)

ಕ್ರಿ.ಪೂ. ಕೊನೆಯ ಕ್ರಿ.ಶ. ಪ್ರಾರಂಭದ ಕಾಲಘಟ್ಟದಲ್ಲಿ ಸಂಸ್ಕೃತವು ಕನ್ನಡದಷ್ಟೇ ಮುಖ್ಯವಾದುದಾಗಿ ಕರ್ನಾಟಕದ ಶಿಕ್ಷಣ ಪದ್ಧತಿಯಲ್ಲಿ ಸೇರಿ ಹೋಗಿತ್ತು. ಕನ್ನಡವಲ್ಲದೆ ಸಂಸ್ಕೃತವನ್ನು ಉಪಭಾಷೆ ಎಂದು ಕರ್ನಾಟಕದ ಶಾಲೆಗಳಲ್ಲಿ ಕಲಿಸುತ್ತಿದ್ದರು. ತಮ್ಮ ಜ್ಞಾನವನ್ನು ವಿಕಾಸಗೊಳಿಸಿಕೊಳ್ಳಲು ಮತ್ತು ತಮ್ಮ ವಿಚಾರಗಳನ್ನು ಭಾರತದಲ್ಲೆಲ್ಲ ತಿಳಿಯ ಪಡಿಸಲು ಸಂಸ್ಕೃತವನ್ನು ಅವಶ್ಯವಾಗಿ ಅಭ್ಯಾಸ ಮಾಡಿಸುತ್ತಿದ್ದರು. ಈ ಕಾಲಘಟ್ಟದಲ್ಲಿ ಸಂಸ್ಕೃತ ಭಾಷೆಗೆ ಶಿಕ್ಷಣದಲ್ಲಿ ಅಗ್ರಗಣ್ಯ ಸ್ಥಾನವಿತ್ತು. ಇದನ್ನು ಕಲಿತ ಪಂಡಿತರಿಗೆ ಸಮಾಜದಲ್ಲಿ ಗೌರವವಿತ್ತು.

ಕರ್ನಾಟಕದ ಉದ್ದಗಲಕ್ಕೂ ಬೌದ್ಧಧರ್ಮದ ಅವಶೇಷಗಳು ಹರಡಿಕೊಂಡಿವೆ. ಉತ್ತರಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನಲ್ಲಿ ಇರುವ ಹೈಗುಂದ ಕ್ರಿ.ಶ.೭ನೇ ಶತಮಾನದಲ್ಲಿ ಬೌದ್ಧ ಕೇಂದ್ರವಾಗಿತ್ತು ಎಂದು ಅಲ್ಲಿರುವ ಯಕ್ಷ ಮತ್ತು ಕುಬ್ಜರ ಅವಶೇಷಗಳು ಸಾರುತ್ತವೆ. ಭೀಮಾನದಿಯ ದಂಡೆಯ ಮೇಲೆ ಇರುವ ಸನ್ನತಿಯು ಕ್ರಿ.ಶ.೨ನೇ ಶತಮಾನದಿಂದ ೪ನೇ ಶತಮಾನದವರೆಗೆ ದೊಡ್ಡ ಬೌದ್ಧಶಿಕ್ಷಣ ಕೇಂದ್ರವಾಗಿತ್ತೆಂದು ಅಲ್ಲಿಯ ಶಾಸನಗಳು ಸಾರುತ್ತವೆ.

ಅಶೋಕನು ಬೌದ್ಧಧರ್ಮದ ಜನರಿಗೆ ಸುಲಭವಾಗಿ ಅರ್ಥವಾಗುವಂತೆ ಮಾಡಲು ಬೇರೆ ಬೇರೆ ಪ್ರದೇಶಗಳಲ್ಲಿ ಶಾಸನಗಳನ್ನು ಬರೆಯಿಸಿದನು. ಇವುಗಳು ಬ್ರಾಹ್ಮಿಲಿಪಿ, ಪ್ರಾಕೃತ ಭಾಷೆಯಲ್ಲಿ ರಚನೆಯಾಗಿವೆ. ಇವನು ಸ್ಥಳೀಯ ಪ್ರಾದೇಶಿಕರ ಭಾಷೆಗನುಸಾರ ಶಾಸನಗಳು ರಚನೆಯಾಗಿದ್ದವು. ಕರ್ನಾಟಕದಲ್ಲಿ ರಚನೆಯಾದ ಶಾಸನಗಳು ಪ್ರಾಕೃತ ಭಾಷೆಯಲ್ಲಿವೆ. ಅಂದರೆ ಕರ್ನಾಟಕದ ಜನತೆಗೆ ಪಾಲಿ, ಪ್ರಾಕೃತ ಭಾಷೆಗಳ ಪರಿಚಯವಿತ್ತು. ಬೌದ್ಧ ವಿಹಾರಗಳೇ ವಿದ್ಯಾ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಈ ಕಾಲ ಘಟ್ಟದಲ್ಲಿ ಎಲ್ಲಾ ಆರ್ಯರು ಉಪನಯನದ ಸಂಸ್ಕಾರ ಪಡೆಯುತ್ತಿದ್ದರು. ಅಂದಿಗಾಗಲೇ ಅವರೆಲ್ಲ ಮೂರು-ನಾಲ್ಕು ವರ್ಷವಾದರೂ ಪ್ರಾಥಮಿಕ ಶಿಕ್ಷಣ ಪಡೆದಿರುತ್ತಿದ್ದರು. ಅಂದರೆ ಅಂದು ದ್ವಿಜ ಆರ್ಯರಲ್ಲಿ ಶೇ ೭೫ ರಷ್ಟು ಅಕ್ಷರಸ್ಥರಿದ್ದರೆಂದು ಹೇಳುವರು. ಛಾಂದೋಗ್ಯ ಉಪನಿಷತ್ತಿನ ಅಶ್ವಪತಿರಾಜ ತನ್ನ ರಾಜ್ಯದಲ್ಲಿ ಅನಕ್ಷರಸ್ಥರೇ ಇಲ್ಲವೆಂದು ಹೇಳುವನು. ಆ ಕಾಲದ ಕೊನೆ ಕೊನೆಗೆ ಆಂತರಿಕ ಮತ್ತು ಪರ ರಾಷ್ಟ್ರಗಳೊಡನೆ ವಾಣಿಜ್ಯ ವೃದ್ಧಿಯಾಗಿದ್ದುದರಿಂದ

ಆರ್ಯರಲ್ಲದವರಲ್ಲೂ ಅಕ್ಷರ ವಿದ್ಯೆ ಅಗತ್ಯವೆನಿಸಿದ್ದು, ಪ್ರಾಥಮಿಕ ಶಿಕ್ಷಣವನ್ನು ಪಡೆಯುವುದು ಹೆಚ್ಚಿರಬೇಕು. ಈ ಮೇಲಿನ ಅಂಶ ಅಶೋಕನು ಬರೆಸಿದ ಶಾಸನಗಳು ಬೇರೆ ಬೇರೆ ಪ್ರಾಂತ್ಯಗಳ ಪ್ರಾಂತೀಯ ಭಾಷೆಯಲ್ಲೂ ಬೇರೆ ಬೇರೆ ಲಿಪಿಯಲ್ಲೂ ಬರೆಸಿದ್ದುದು ಅಂದರೆ ಎಲ್ಲರಿಗೂ ಶಿಕ್ಷಣ ಕೊಡಿಸಬೇಕು ಎಂಬ ಉದ್ದೇಶವಿರಬೇಕು. ಎಂಬುದು ದೃಢಪಡಿಸುತ್ತದೆ. ಎಂದು ಜ್ಯೋತ್ಸ್ನಾ ಕಾಮತ : 'ಕರ್ನಾಟಕದ ಶಿಕ್ಷಣ ಪರಂಪರೆ' ಪುಸ್ತಕದಲ್ಲಿ ಅಭಿಪ್ರಾಯ ಪಡುತ್ತಾರೆ. ನಂತರ ಕರ್ನಾಟಕದ ಶಿಕ್ಷಣ ಪರಂಪರೆಗೆ ಜೈನಧರ್ಮದ ಪ್ರಭಾವ ಬೀರಿತು. ಇವರು ಸಹ ಜೈನಧರ್ಮದ ಪ್ರಚಾರಕ್ಕೆ ಶಿಕ್ಷಣದಲ್ಲಿ ಆದ್ಯತೆ ನೀಡಲಾಗುತ್ತಿತ್ತು. ಜಿನಾಲಯಗಳಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದರು. ಇದರ ಪ್ರತಿಫಲವಾಗಿಯೇ ಕರ್ನಾಟಕದ ಸಾಹಿತ್ಯ ಚರಿತ್ರೆಯಲ್ಲಿ ಪಂಪ, ರನ್ನ, ಪೊನ್ನ, ಜನ್ನರು ಹುಟ್ಟಿಕೊಂಡು ಕನ್ನಡ ಸಾಹಿತ್ಯ ಚರಿತ್ರೆಯನ್ನು ಸಂವೃದ್ಧ ಗೊಳಿಸಿದರು.

ಜೈನರ ಶಿಕ್ಷಣವು ಎಲ್ಲರ ಸೊತ್ತಾಗಬೇಕೆಂದು ಮೊದಲಿನಿಂದ ಪ್ರಯತ್ನಿಸಿ ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ಕಲಿಸಲು ಪ್ರಯತ್ನಿಸಿದರು. ಕನ್ನಡ ನಾಡಿನಲ್ಲಿ ಸಂಸ್ಕೃತದ ಬದಲಾಗಿ ಕನ್ನಡಕ್ಕೆ ಮಹತ್ವ ಬಂದಿತು. ಮೋಕ್ಷಕ್ಕೆ ಮಾರ್ಗ ತೋರಿಸುವ ಗ್ರಂಥಗಳು ಎಲ್ಲರಿಗೂ ಅರ್ಥವಾಗಬೇಕೆಂದು ದಿವಾಕರಣ ಮುನಿಗಳು ತತ್ವಾರ್ಥ ಸೂತ್ರವನ್ನು ಕನ್ನಡಕ್ಕಿಳಿಸಿದರು. ಉಚ್ಚ ವಿದ್ಯಾಭ್ಯಾಸದ ಕ್ರಮ ಎಲ್ಲ ಪಂಥದವರಿಗೂ ಸಾಮಾನ್ಯವಾಗಿದ್ದರಿಂದ ವೇದೋಪನಿಷತ್ತು, ಶಾಸ್ತ್ರಗಳ ಅಧ್ಯಯನಕ್ಕಾಗಿ ಸಂಸ್ಕೃತವನ್ನು ಬಳಸಿಕೊಂಡರು. ಉನ್ನತ ಅಭ್ಯಾಸಕ್ಕೆ ಅನುಕೂಲ ವಾಗುವ ದೃಷ್ಟಿಯಿಂದ ಈ ವ್ಯವಸ್ಥೆ ಎಲ್ಲಾ ಕಾಲದಲ್ಲಿಯೂ ನಡೆಯುತ್ತಾ ಬಂದಿರುವುದನ್ನು ಕಾಣುತ್ತೇವೆ ಎಂದು ಜೋತ್ಸ್ನಾ ಕಾಮತ ಅವರು ಕರ್ನಾಟಕದ ಶಿಕ್ಷಣ ಪರಂಪರೆ ಪುಸ್ತಕದಲ್ಲಿ ಅಭಿಪ್ರಾಯ ಪಡುತ್ತಾರೆ.

ಭಾಷಾಪಾಠ, ವ್ಯಾಕರಣ, ಗಣಿತ, ಸಂಗೀತ ಕಲೆಗಳನ್ನು ಪ್ರಾಥಮಿಕ ಹಂತದಲ್ಲಿ ಕಲಿಸುತ್ತಿದ್ದರು. ಸಮಸ್ತ ವ್ಯಾಕರಣಶಾಸ್ತ್ರ, ನಿಘಂಟು, ವಾತ್ಸಾಯನ, ಜ್ಯೋತಿಷ್ಯ, ಶಕುನ, ಛಂದಸ್ಸು, ಅಲಂಕಾರ, ಮಹಾಕಾವ್ಯ, ನಾಟಕ, ಆಧ್ಯಾತ್ಮ, ಅರ್ಥಶಾಸ್ತ್ರ, ತರ್ಕಶಾಸ್ತ್ರಗಳು, ಉಚ್ಚ ಶಿಕ್ಷಣದಲ್ಲಿ ಸಮಾಹಿತಗೊಂಡಿದ್ದವು. ಮುನಿಗಳು ಕಾಮಶಾಸ್ತ್ರದಂತಹ ವಿಷಯಗಳನ್ನು ಗಂಭೀರವಾಗಿ ಅಭ್ಯಾಸಿಸಿ ಇತರರಿಗೆ ಅದರ ಬಗ್ಗೆ ವಿಶ್ಲೇಷಿಸುತ್ತಿದ್ದರು. ಜೀವನದ ಆಕರ್ಷಣೆಗಳು ತ್ಯಾಜ್ಯವಿದ್ದರೂ ವಿದ್ಯಾಭ್ಯಾಸಕ್ಕೆ ಯಾವುದೂ ನಿಷೇಧವಿರಲಿಲ್ಲ.

ಪಂಪನ ಕೆಲವೊಂದು ಮಾತುಗಳು ಪ್ರಾಚೀನ ಕರ್ನಾಟಕದ ಶಿಕ್ಷಣದ ಹೃದಯವನ್ನು ಬಿಚ್ಚಿಡುತ್ತವೆ. ಉದಾ.ಗೆ. 'ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯ ಲಂಪಿನಿಂಪುಗಳಾಗರ ವಾದ ಮಾನಸರೆ ಮಾನಸರ್' ಅಂದರೆ ತ್ಯಾಗಿಯೂ, ಭೋಗಿಯೂ, ಆಗಿರುವುದರ ಜೊತೆಯಲ್ಲಿ ಮನುಷ್ಯನು ವಿದ್ಯಾವಂತನು, ಕಲಾಪ್ರೇಮಿಯೂ, ಆಗಿರಬೇಕು. ವಿದ್ಯಾವಂತರಿಗಿದ್ದ ಗೌರವವು ಶಾಸನಗಳಲ್ಲಿ ಹೆಜ್ಜೆ ಹೆಜ್ಜೆಗೂ ಕಂಡುಬರುತ್ತದೆ.

ಎಷ್ಟೋ ಶ್ರೀಮಂತರು ಪಂಡಿತಾಶ್ರಯರಾಗಿದ್ದರು. ತಮ್ಮ ಊರು ವಿದ್ವಾಂಸರ ನೆಲೆವೀಡಾಗಬೇಕೆಂದು ಆ ಊರಿನ ಜನರು ಸೇರಿ ವಿದ್ವಾಂಸನಾದವನಿಗೆ ದತ್ತಿಗಳನ್ನು ಬಿಟ್ಟುಕೊಟ್ಟು ವಿದ್ಯೆಯನ್ನು, ವಿನಯವನ್ನು, ಗೌರವಿಸಿರುವುದು ಕನ್ನಡದ ಶಾಸನಗಳಿಂದ ತಿಳಿದು ಬರುತ್ತದೆ. 'ವಿದ್ವಾಂಸನೊಬ್ಬನನ್ನು ಹೊಗಳುವಾಗ ಅವನಲ್ಲಿ ವಿದ್ಯೋದಯೋಸ್ತಿನ ಮದೋಸ್ತಿ' (ವಿದ್ಯೋದನುವಿದೆ, ಆದರೆ ಅಹಂಕಾರವಿಲ್ಲ.) ಎಂದು ಒಂದು ಶಾಸನ ಹೇಳುತ್ತದೆ. ಎಂದು ಚಿದಾನಂದ ಮೂರ್ತಿಯವರು 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'(ಪು-೨೩೦) ಎಂಬ ಪುಸ್ತಕದಲ್ಲಿ ಸ್ಪಷ್ಟಪಡಿಸುತ್ತಾರೆ. ಈ ಮೇಲಿನ ಅಂಶವನ್ನು ಗಮನಿಸಿದಾಗ ಪಠ್ಯದ ವಿಷಯ ವ್ಯಕ್ತಿ ಆಧಾರಿತವಾಗಿದ್ದು ಅವನ ಮೌಲ್ಯಗಳ ಜವಾಬ್ದಾರಿಯನ್ನು ತಿಳಿಯುವ ರೀತಿಯಲ್ಲಿ ರಚನೆಯಾದಂತೆ ಕಂಡುಬರುತ್ತದೆ.

ಕರ್ನಾಟಕದ ಶಾಸನಗಳು ಪ್ರಾಥಮಿಕ ವಿದ್ಯಾಭ್ಯಾಸದ ಮಾಹಿತಿಯನ್ನು ಅಷ್ಟಾಗಿ ಕೊಡುವಂತಹ ದಾಖಲೆಗಳೇನು ಸಿಗುವುದಿಲ್ಲ. ಬಾಲಕರು ಬಹುಶಃ ತಮ್ಮ ಐದನೇ ವಯಸ್ಸಿನಲ್ಲಿ ವಿದ್ಯಾಭ್ಯಾಸವನ್ನು ಆರಂಭಿಸುತ್ತಿದ್ದರೆಂದು ಕಾಣುತ್ತದೆ. ವಿದ್ಯಾರಂಭ ಸಂಸ್ಕಾರ ಅಥವಾ ಅಕ್ಷರ ಸ್ವೀಕರಣ ಎಂಬ ವಿಧಿಯನ್ನು ಸ್ಮೃತಿಗಳು ಹೇಳುವಂತೆ ಆರಂಭದಲ್ಲಿ ಬಾಲಕನಿಗೆ ಅಕ್ಷರಾಭ್ಯಾಸವನ್ನು ಮಾಡಿಸುತ್ತಿದ್ದರು. ಒಳ್ಳೆಯ ಮುಹೂರ್ತದಲ್ಲಿ ಬಾಲಕನಿಂದ 'ಓಂನಮಃ ಸಿದ್ಧ' ಎಂದು ಹೇಳಿಸಿ ಅಕ್ಷರಾಭ್ಯಾಸಕ್ಕೆ ತೊಡಗಿಸುತ್ತಿದ್ದರು." ಆದರೆ ವಿದ್ಯಾರ್ಥಿಯ ನಿಜವಾದ ವಿದ್ಯಾಭ್ಯಾಸವು ಆರಂಭವಾಗುತ್ತಿದ್ದುದು ಅವನ ಉಪನಯನದ ನಂತರವೇ ಎಂದು ಚಿದಾನಂದ ಮೂರ್ತಿಯವರು ಅಭಿಪ್ರಾಯಪಡುತ್ತಾರೆ.

ಉಪನಯನ ಎಂದರೆ ಗುರುವಿನ ಹತ್ತಿರಕ್ಕೆ ಕರೆದುಕೊಂಡು ಹೋಗುವುದು ಎಂದರ್ಥ. ಶರದ್ವತನು ಕೃಪನಿಗೆ ಚೌಲೋಪನಯನಾದಿ ಕ್ರಿಯೆಗಳನ್ನು ಮಾಡಿ ಧನುರ್ವಿದ್ಯೆಯನ್ನು ಉಪದೇಶ ಮಾಡಿದಂತೆ ಪಂಪನು ವರ್ಣಿಸುತ್ತಾನೆ. ವಿಷ್ಣುವರ್ಧನನು ಬಿಟ್ಟಿಯಣ್ಣ ಎಂಬ ಮಗುವನ್ನು ತಾನೇ ಸಾಕಿ ಉಪನಯನವನ್ನು ಮಾಡಿಸಿದ ಮೇಲೆ ಬಿಟ್ಟಿಯಣ್ಣನು ಏಳೆಂಟು ವರ್ಷಗಳಲ್ಲಿ ಸಮಸ್ತ ಶಸ್ತ್ರಶಾಸ್ತ್ರ ಪರಿಣತನಾದನೆಂದು ಶಾಸನವೊಂದು ತಿಳಿಸುವುದನ್ನು ಕಾಣಬಹುದು. ಎಂದು ಚಿದಾನಂದಮೂರ್ತಿಯವರು 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' (ಪು-೨೩೨) ಎಂಬ ಪುಸ್ತಕದಲ್ಲಿ ತಿಳಿಸುತ್ತಾರೆ.

ಶಿಷ್ಯಂದಿರಿಗೆ ಪಾಠವನ್ನು ಹೇಗೆ ಆರಂಭ ಮಾಡುತ್ತಿದ್ದರು ಯಾವ ಪುಸ್ತಕಗಳಿಂದ ಆರಂಭಿಸುತ್ತಿದ್ದರು ಎಂಬುದರ ಪರಿಚಯವು ಕನ್ನಡದ ಯಾವುದೇ ಶಾಸನಗಳಿಂದಾಗಲಿ, ಕಾವ್ಯದ ಭಾಗಗಳಿಂದಾಗಲಿ ನಮಗೆ ದೊರಕುವುದಿಲ್ಲ. ಆದರೆ ದತ್ತಿಗಳನ್ನು ಕೊಟ್ಟಿರುವುದೆಲ್ಲ ಪ್ರೌಢ ವಿದ್ಯಾಭ್ಯಾಸಕ್ಕೆ ಎಂಬುದನ್ನು ಕಾಣಬಹುದು.

ಒಂದೆರಡು ಶಾಸನಗಳಲ್ಲಿ ದೊರಕುವ ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟ ವಿವರಗಳಿಂದ ನಾವು ತೃಪ್ತಿಪಟ್ಟುಕೊಳ್ಳಬೇಕಾಗಿದೆ. "ತಾಳಗುಂದದ ಶಾಸನವೊಂದರಲ್ಲಿ

ವೇದಾಧ್ಯಯನ ಮುಂತಾದವುಗಳಿಗೆ ಕೊಟ್ಟ ದತ್ತಿಗಳ ಜೊತೆಯಲ್ಲಿ 'ಕನ್ನಡ ಅಕ್ಷರ ಸಿ(ಶಿ)ಕ್ಷೆ ಗೂ ದತ್ತಿಯನ್ನು ಬಿಟ್ಟುಕೊಟ್ಟಂತೆ ಹೇಳಿದೆ. ಬಹುಶಃ ಆ ಕಾಲದಲ್ಲಿ ಬಾಲಕರಿಗೆ ಮೊದಲು ಕನ್ನಡ ಅಕ್ಷರಗಳನ್ನು ಕಲಿಸುತ್ತಿದ್ದಂತೆ ಕಂಡುಬರುತ್ತದೆ. ಇದೇ ಶಾಸನದಲ್ಲಿ ಮತ್ತೊಂದೆಡೆ 'ಕನ್ನಡದುಪಾಧ್ಯಾದಿ'ಗೆ 'ಬಾಲಶಿಕ್ಷೆ' ಶಾಸ್ತ್ರದವರಿಗೆ ದತ್ತಿಯನ್ನು ಬಿಟ್ಟುಕೊಟ್ಟು ವಿಷಯ ಬಂದಿದೆ. ಇಲ್ಲಿ ಕನ್ನಡದ ಅಕ್ಷರಗಳನ್ನು ಹೇಳಿಕೊಡುತ್ತಿದ್ದ ಉಪಾಧ್ಯಾಯನನ್ನು 'ಕನ್ನಡದುಪಾಧ್ಯನೆಂದು' ಬಾಲಕರಿಗೆ ಋಗ್ವೇದದ ಮಂತ್ರಗಳನ್ನು ಬಾಯಿಪಾಠ ಮಾಡಿಸುತ್ತಿದ್ದ ಉಪಾಧ್ಯಾಯನನ್ನು 'ಬಾಲಶಿಕ್ಷೆ ಶಾಸ್ತ್ರ'ದವನೆಂದು ಕರೆದಿದೆ. ಋಗ್ವೇದದ ಬಾಲಶಿಕ್ಷೆಯ ಖಂಡಿಕದಲ್ಲಿ ಸ್ವಾಧ್ಯಾಯಂಗೆಯ್ವ ಮಾಣಿಯ ಗ್ರಾಸಕ್ಕೆ." ಕೆಲವು ದತ್ತಿಗಳನ್ನು ಬಿಟ್ಟುಕೊಟ್ಟದ್ದಾರೆ. 'ಭಟ್ಟವೃತ್ತಿ' ಇದ್ದ ಹಾಗೆ ಚಟ್ಟ ವೃತ್ತಿಗೂ ಬಾಲಶಿಕ್ಷೆಗೂ ದತ್ತಿಗಳನ್ನು ಬಿಟ್ಟುಕೊಟ್ಟಿರುವುದು ಕಂಡುಬರುತ್ತದೆ. ಇಲ್ಲಿ ಬಾಲಶಿಕ್ಷೆ ಎಂದರೆ ಪ್ರಾಥಮಿಕ ವಿದ್ಯಾಭ್ಯಾಸ ಎಂದು ಅರ್ಥಮಾಡಿಕೊಳ್ಳಬೇಕೆಂದು ಕಾಣುತ್ತದೆ. ಬಾಲ್ಯದಲ್ಲಿಯೇ ಋಗ್ವೇದದ ಮಂತ್ರಗಳನ್ನು ಬಾಯಿಪಾಠ ಮಾಡಿಸುವುದಕ್ಕೆ ಋಗ್ವೇದದ 'ಬಾಲಶಿಕ್ಷೆ' ಎಂದು ಕರೆದಿರುವಂತಿದೆ. ಶಿಕ್ಷಾ ಎಂದರೆ ವೇದದ ಕ್ರಮಬದ್ಧ ಉಚ್ಚಾರ. ಸ್ಮೃತಿ ಚಂದ್ರಿಕೆಯು ಯಾವುದೋ ಸ್ಮೃತಿಯಿಂದ ಆರಿಸಿ ಕೊಟ್ಟಿರುವ ವಾಕ್ಯಗಳಲ್ಲಿ 'ಮಾತೃಕಾ ವ್ಯಾಸಾ' (=primer)ದ ಹೆಸರಿಸಿದೆ. ಆದರೆ ಕರ್ನಾಟಕದಲ್ಲಿ ಯಾವ 'ಮಾತೃಕಾನ್ಯಾಸ'ವನ್ನು ಬಳಸುತ್ತಿದ್ದರು ತಿಳಿಯದು. ಎಂದು ಡಾ.ಚಿದಾನಂದಮೂರ್ತಿಯವರು ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಪು.೨೫೧ ರಿಂದ ೨೫೩) ಎಂಬ ಪುಸ್ತಕದಲ್ಲಿ ವಿಶ್ಲೇಷಿಸುತ್ತಾರೆ.

ಈ ಮೇಲಿನ ವಿವರಣೆಯನ್ನು ಗಮನಿಸಿದಾಗ ಕರ್ನಾಟಕದ ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಶುದ್ದವಾದ ಸಾಂಪ್ರದಾಯಿಕವಾದ ಉಚ್ಚಾರಣೆಗೆ ಅತಿ ಪ್ರಮುಖವಾದ ಸ್ಥಾನವಿತ್ತು. ಎಂಬುದು ಸ್ಪಷ್ಟವಾಗುತ್ತದೆ. ಕರ್ನಾಟಕದಲ್ಲಿಯೂ ಸಹ ವೇದಗಳನ್ನು ಉಪನಿಷತ್ತುಗಳನ್ನು ಕಂಠಪಾಠದ ಮೂಲಕ ಮೌಖಿಕವಾಗಿ ಕಲಿಸಲಾಗುತ್ತಿತ್ತು. ಎಂಬ ಅಭಿಪ್ರಾಯಕ್ಕೆ ಬರಬಹುದು. ಆದರೂ ಕೂಡ ಪ್ರಾಥಮಿಕ ಶಿಕ್ಷಣದ ಬಗ್ಗೆ ಕನ್ನಡ ಶಾಸನಗಳಲ್ಲಿ ಮಾಹಿತಿ ಸಿಗದಿರುವುದರಿಂದ ಕನ್ನಡದ ಪ್ರಾಥಮಿಕ ಶಿಕ್ಷಣದ ಬಗ್ಗೆ ಸ್ಪಷ್ಟವಾಗಿ ನಿಖರವಾಗಿ ಹೇಳುವುದು ಕಷ್ಟಕರವಾದ ಸಂಗತಿಯಾಗಿದೆ. ಇನ್ನುಳಿದಂತಹ ಕರ್ನಾಟಕ ಶಿಕ್ಷಣ ಪರಂಪರೆಯು ಭಾರತೀಯ ಶಿಕ್ಷಣ ಪರಂಪರೆಯನ್ನೇ ಹೋಲುತ್ತದೆ. ಬೋಧನೆ, ಪಠ್ಯಕ್ರಮ, ಗುರುಶಿಷ್ಯರ ಸಂಬಂದ ಪಠ್ಯದ ವಸ್ತುವಿನಲ್ಲಿ ಬದಲಾವಣೆಯನ್ನು ಕಾಣುವುದಿಲ್ಲ. ಇದನ್ನು ನಿಖರವಾಗಿ ಸ್ಪಷ್ಟವಾಗಿ ಹೇಳುವುದು ಕಷ್ಟಕರವಾದದ್ದು ಎಂದು ಹೇಳಬಹುದು.

ಒಟ್ಟಾರೆಯಾಗಿ ಕರ್ನಾಟಕ ಶಿಕ್ಷಣ ಪರಂಪರೆಯ ಸಮಗ್ರವಾದ ದಾಖಲೆಗಳು ಸಿಗದೇ ಇರಬಹುದು. ಆದರೆ ಕರ್ನಾಟಕದ ಚಾರಿತ್ರಿಕ, ಸಾಂಸ್ಕೃತಿಕ, ಧಾರ್ಮಿಕ, ಸಾಹಿತ್ಯಕ, ಹಾಗೂ ವಾಸ್ತುಶಿಲ್ಪದ ಚಿತ್ರಗಳನ್ನು ಗಮನಿಸಿದರೆ ಪ್ರಾಚೀನ ಶಿಕ್ಷಣ ಪರಂಪರೆಯು ಸಮೃದ್ಧವಾಗಿ ಇರಲೇಬೇಕು ಎಂಬುದು ಸ್ಪಷ್ಟವಾಗುತ್ತದೆ. ನಮ್ಮ ಕನ್ನಡ ಸಾಹಿತ್ಯ ಸಂಸ್ಕೃತದ ಮಿಶ್ರ

ಫಲದಲ್ಲಿ ಹುಟ್ಟಿ ಬಂದಿರುವಂತದ್ದಾಗಿದೆ. ಆದರೆ ದಿನಗಳು ಕಳೆದಂತೆ ಸಂಸ್ಕೃತದ ವಿರುದ್ಧ ಕ್ರಾಂತಿಯಾಗಿರುವುದನ್ನು ಕಾಣುತ್ತೇವೆ. ಇದರಿಂದ ನಮಗ ತಿಳಿಯಬಹುದಾದ ಸಂಗತಿ ಏನೆಂದರೆ ಪ್ರಾಚೀನತೆಯಲ್ಲೂ ಕರ್ನಾಟಕದಲ್ಲಿ ಕನ್ನಡಭಾಷಾ ಶಿಕ್ಷಣ ವ್ಯವಸ್ಥೆ ಇರುವುದು ಸ್ಪಷ್ಟವಾಗುತ್ತದೆ.

ಎರಡನೇ ನಾಗವರ್ಮನ 'ಕರ್ನಾಟಕ ಭಾಷಾ ಭೂಷಣ' ಕೇಶಿರಾಜನ ಶಬ್ದಮಣಿದರ್ಪಣ ಕನ್ನಡ ಭಾಷೆ ವ್ಯಾಕರಣದ ಅಂಶಗಳನ್ನು ಬಿಚ್ಚಿಡುವಂತಹ ಕೃತಿಗಳಾಗಿವೆ. ಅಂದರೆ ಇವುಗಳನ್ನು ರಚನೆ ಮಾಡಿದ ಭಾಷಾಶಾಸ್ತ್ರಜ್ಞರಿಗೆ ಕರ್ನಾಟಕದಲ್ಲಿ ಕನ್ನಡದಲ್ಲಿಯೇ ಉತ್ತಮವಾದ ಶಿಕ್ಷಣ ದೊರಕಿರಬೇಕು. ಹಾಗಾದಾಗ ಮಾತ್ರ ಈ ಕೃತಿಗಳು ರಚನೆಯಾಗಲು ಸಾಧ್ಯ ಎಂದು ಹೇಳಬಹುದು.

ಆಂಡಯ್ಯ ಕಬ್ಬಿಗರ ಕಾವ್ಯವನ್ನು ಅಚ್ಚಗನ್ನಡದಲ್ಲಿ ರಚಿಸಿದ್ದಾರೆ. ವಚನಕಾರರು ಸರಳ ಪದಗಳಲ್ಲಿ ವಚನವನ್ನು ಕಟ್ಟಿ ಕೊಟ್ಟಿದ್ದಾರೆ. ಶಿಕ್ಷಣದ ಬಗೆಗೆ ಗುರುಶಿಷ್ಯರ ಸಂಬಂಧದ ಬಗೆಗೆ ವಚನಗಳಲ್ಲಿ ಹೇಳಿದ್ದಾರೆ. ಇನ್ನು ಕೀರ್ತನಕಾರರು, ತತ್ವಪದಕಾರರು, ಶಿಕ್ಷಣದ ಬಗೆಗೆ ವ್ಯಾಖ್ಯಾನಿಸಿದ್ದಾರೆ. ಇನ್ನು ತ್ರಿಪದಿಯ ಬ್ರಹ್ಮ ಸರ್ವಜ್ಞನು ವಿದ್ಯೆಯ ಬಗೆಗೆ ತ್ರಿಪದಿಗಳನ್ನೇ ರಚಿಸಿದ್ದಾನೆ. ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಪ್ರಾಚೀನ ಕರ್ನಾಟಕದ ಶಿಕ್ಷಣ ಪರಂಪರೆಯ ಕನ್ನಡ ಭಾಷೆಯಲ್ಲಿಯೇ ಅಥವಾ ಸಂಸ್ಕೃತ ಪದಗಳ ಮಿಶ್ರಣದಿಂದಲೇ ಶಿಕ್ಷಣ ನಡೆದಿರುವುದು ಸ್ಪಷ್ಟವಾಗುತ್ತದೆ. ಅಲ್ಲದೇ ಭಾಷಾ ಕೌಶಲಗಳಾದ ಓದುವುದು, ಬರೆಯುವುದು, ಇತ್ತೆಂಬುದು ದೃಢಪಡುತ್ತದೆ.

೧೯ನೆಯ ಶತಮಾನದ ಪೂರ್ವಾರ್ಧದವರೆಗೂ ಶಿಕ್ಷಣದ ಪರಿಸ್ಥಿತಿಯ ಬಗ್ಗೆ ಬೆಳಕು ಬೀರಬಲ್ಲ ಸಾಕ್ಷಿಗಳು ಅಷ್ಟಾಗಿ ಇಲ್ಲವೆಂಬ ಅಂಶಗಳು ದಟ್ಟವಾಗಿವೆ. ಪ್ರಾಥಮಿಕ ಶಿಕ್ಷಣ ಮಕ್ಕಳಿಗೆ ಅವರ ಜೀವನದಲ್ಲಿ ಉಪಯುಕ್ತವೆನಿಸಿದೆ. ಓದು ಬರಹ ಲೆಕ್ಕಗಳಲ್ಲಿ ಶಿಕ್ಷಣ ನಡೆಯುತ್ತಿತ್ತು. ಅಧ್ಯಾಪಕರು ಅಷ್ಟಾಗಿ ಶಿಕ್ಷಣ ಪಡೆದವರಾಗಿರಲಿಲ್ಲ. ಅವರು ಅನ್ಯ ವೃತ್ತಿಯನ್ನು ಉಪಕಸುಬಾಗಿ ಅವಲಂಬಿಸುತ್ತಿದ್ದರು. ಶಾಲೆಗೆ ಕೆಲವು ಬಾಲಕಿಯರು ಬರುತ್ತಿದ್ದರು. ಅಲ್ಲಿ ಅನೇಕ ಜಾತಿಗಳ ಮಕ್ಕಳು ಸೇರುತ್ತಿದ್ದರು. ಮೇಲು ಜಾತಿಯ ಮಕ್ಕಳೇ ಹೆಚ್ಚಾಗಿರುತ್ತಿದ್ದರು. ಪಠ್ಯಕ್ರಮದಲ್ಲಿ ಓದು, ಬರಹ, ಲೆಕ್ಕಗಳು ಸೇರಿದವು. ಲೆಕ್ಕಗಳನ್ನು ಮಾನಸಿಕವಾಗಿಯೂ ಬರೆಸಿಯೂ ಮಾಡಿಸುತ್ತಿದ್ದರು. ಶುಲ್ಕ ಕಡ್ಡಾಯವಾಗಿರದಿದ್ದರೂ ತನಗೆ ಸಾಧ್ಯವಾದ್ದನ್ನು ಪ್ರತಿ ವಿದ್ಯಾರ್ಥಿಯು ಅಧ್ಯಾಪಕರಿಗೆ ಕೊಡುತ್ತಿದ್ದರು. ಎಂದು ಎನ್.ಎಸ್.ವೀರಪ್ಪನವರು ಭಾರತೀಯ ಶಿಕ್ಷಣ ಇತಿಹಾಸ ಎಂಬ ಪುಸ್ತಕದಲ್ಲಿ ಅಭಿಪ್ರಾಯಪಡುತ್ತಾರೆ.

೧೯ನೇ ಶತಮಾನದ ವೇಳೆಗೆ ಬ್ರಿಟೀಷರು ಕರ್ನಾಟಕವು ಸೇರಿದಂತೆ ಭಾರತವನ್ನು ಸಂಪೂರ್ಣವಾಗಿ ಆಡಳಿತದ ತೆಕ್ಕೆಗೆ ತೆಗೆದುಕೊಂಡಿದ್ದರು. ಇಂತಹ ಸಂದರ್ಭದಲ್ಲಿ ಕರ್ನಾಟಕದ

ಪ್ರದೇಶಗಳು ಮದ್ರಾಸ್, ಮುಂಬೈ, ಮಂಗಳೂರು ಪ್ರಾಂತ್ಯಗಳ ಸರ್ಕಾರಕ್ಕೆ ಒಳಪಟ್ಟ ಪ್ರದೇಶಗಳಾಗಿದ್ದವು. ಇಂತಹ ಸನ್ನಿವೇಶ ಸಂದರ್ಭದಲ್ಲಿ ಶಿಕ್ಷಣ ವ್ಯವಸ್ಥೆ ವಿಭಿನ್ನ ರೀತಿಯಾಗಿ ಬೆಳೆಯಲು ಪ್ರಾರಂಭವಾಯಿತು. ಇದನ್ನು ಕರ್ನಾಟಕದಲ್ಲಿದ್ದ ಸಮಾಜಸುಧಾರಕರು, ಶಿಕ್ಷಣ ಚಿಂತಕರು, ವಿರೋಧಿಸಿದರು. ಪೋಷಕರು ಪ್ರಾಚೀನ ಕಾಲದ ಶಿಕ್ಷಣ ಪದ್ಧತಿ ಮುಂದುವರೆಯಲಿ ಎಂದು ಹೇಳಿದರು. ಆದರೂ ಅಂದಿನ ಭಾರತ ಸರ್ಕಾರ ಇಂಗ್ಲೆಂಡ್ ಮಾದರಿ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದಿತು. ಇಲ್ಲಿಯ ಬೋಧನೆಯ ಕ್ರಮವೆಲ್ಲ ಬ್ರಿಟೀಷರ ಶಿಕ್ಷಣ ಮಾದರಿಯಲ್ಲಿ ನಡೆಯಲು ಪ್ರಾರಂಭವಾಯಿತು. ಇಂತಹ ಸಂದರ್ಭದಲ್ಲಿ ಕನ್ನಡ ಮಾತನಾಡು ವವರು ಇಂಗ್ಲೀಷ್‌ನಲ್ಲಿ ಶಿಕ್ಷಣವನ್ನು ಕಲಿಯಲು ಆದೇಶಿಸಲಾಯಿತು. ಆದರೆ ಈ ಸಲಹೆ, ಮಾದರಿ ಬಹಳ ದಿನ ಉಳಿಯದೇ ಇವರ ಶಿಕ್ಷಣ ಕ್ರಮ ಪ್ರಾದೇಶಿಕ ಭಾಷೆಯಲ್ಲಿಯೇ ನಡೆಯಬೇಕು ಎಂದು ಇಂಗ್ಲೆಂಡ್ ಸರ್ಕಾರ ಆದೇಶಿಸಿತು. ಆದರೆ ಇವುಗಳು ಜಾರಿಗೆ ಬರಲು ಬಹಳ ದಿನಗಳು ಕಾಯಬೇಕಾಯಿತು. ನಂತರ ಬ್ರಿಟೀಷ್ ಸರ್ಕಾರ ಹೊರಡಿಸಿದ ವುಡ್ಸ್ ವರದಿ, ಸರ್ಜಾಂಟ್ ವರದಿ, ಮೆಕಾಲೆ ವರದಿಗಳ ಶಿಕ್ಷಣ ಸುಧಾರಣೆಯ ಅಂಶಗಳು ಕರ್ನಾಟಕದ ಪ್ರದೇಶಕ್ಕೂ ಅನ್ವಯವಾದುದರಿಂದ ಪ್ರಾಥಮಿಕದಿಂದ ಉನ್ನತ ಶಿಕ್ಷಣದವರೆಗೂ ಬೋಧನೆ, ಪಠ್ಯಕ್ರಮ, ಶಿಕ್ಷಕರ ವಿದ್ಯಾರ್ಹತೆ..... ಹೀಗೆ ಶಿಕ್ಷಣದ ಚಟುವಟಿಕೆಗಳೆಲ್ಲ ಕರ್ನಾಟಕದಲ್ಲಿ ಮಹತ್ತರ ಬದಲಾವಣೆಗೆ ಅವಕಾಶವಾಯಿತು.

**೩.೧. ಕನ್ನಡಭಾಷಾ ಶಿಕ್ಷಣ ಪರಂಪರೆ**

ಕನ್ನಡ ಭಾಷಾ ಶಿಕ್ಷಣ ಪರಂಪರೆಯ ಬಗ್ಗೆ ಪ್ರಾಚೀನ ಶಿಕ್ಷಣದಲ್ಲಿ ವ್ಯವಸ್ಥಿತವಾಗಿ ನಿಖರವಾಗಿ ದೊರಕುವುದಿಲ್ಲ. ಆದರೆ ಗ್ರೀಕ್ ನಾಟಕದಲ್ಲಿ ಇರುವ ಕನ್ನಡ ಪದಗಳಿಂದ ಶಾಸನಗಳಲ್ಲಿ ದೊರಕುವ ವಾಕ್ಯಗಳಿಂದಾಗಿ ಕನ್ನಡ ಭಾಷಾಶಿಕ್ಷಣ ಪರಂಪರೆ ಇರಬಹುದು. ಕನ್ನಡ ಸಾಹಿತ್ಯಕ್ಕೆ ದೊರಕಿರುವ ದಾಖಲೆಗಳಿಂದ ಕನ್ನಡಭಾಷಾ ಶಿಕ್ಷಣ ಪರಂಪರೆ ಇರಲೇಬೇಕೆಂದು ಗ್ರಹಿಸುವುದು ಸೂಕ್ತ. ಈ ಪರಂಪರೆಯಿಂದಲೇ ಎರಡನೇ ನಾಗವರ್ಮನು ಕರ್ನಾಟಕ ಭಾಷಾಭೂಷಣವನ್ನು ಕೇಶಿರಾಜನು ಶಬ್ದ ಮಣಿದರ್ಪಣವನ್ನು ಬರೆದಿರಲು ಸಾಧ್ಯ ಎಂದು ಹೇಳಬಹುದು. ಕರ್ನಾಟಕದಲ್ಲಿ ಸಂಸ್ಕೃತದ ಪ್ರಭಾವದಿಂದಾಗಿ ಕನ್ನಡ ಭಾಷಾ ಶಿಕ್ಷಣ ಪರಂಪರೆ ಮರೆಮಾಚಿ ಬೆಳಕಿಗೆ ಬರಲು ಸಾಧ್ಯವಾಗಿಲ್ಲ.

ಕಪ್ಪೆ ಆರ್ಯಭಟನ ಶಾಸನವು ತ್ರಿಪದಿಯಲ್ಲಿ ರಚನೆಯಾಗಿರುವುದು ನಮಗೆಲ್ಲ ತಿಳಿದ ಸಂಗತಿಯಾಗಿದೆ. ಇದೊಂದು ದೇಶಿ ಮಟ್ಟು ಎಂದು ವ್ಯಾಕರಣ ಚಿಂತಕರು ಸ್ಪಷ್ಟಪಡಿಸಿದ್ದಾರೆ. ಈ ಅಂಶವನ್ನು ಗಮನಿಸಿದಾಗ ನಮಗೆ ಕನ್ನಡ ಭಾಷಾ ಶಿಕ್ಷಣ ಪರಂಪರೆ ಇತ್ತೆಂಬುದು ಸ್ಪಷ್ಟವಾಗಬಲ್ಲದು. ಕನ್ನಡ ಕಾವ್ಯಗಳಲ್ಲಿ ಶಿಕ್ಷಣ ಪರಂಪರೆಯ ಬಗ್ಗೆ ವಾಕ್ಯಗಳ ದೊರಕುತ್ತವೆ. ಉದಾಹರಣೆಗೆ ಪಂಪನು ಹೇಳುವ ಹಾಗೇ 'ಚಾಗದ ಬೋಗದಕ್ಕರದ ಗೇಯದ ಗೊಟ್ಟಿಯ

ಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರ್' ಅಂದರೆ ತ್ಯಾಗಿಯೂ ಬೋಗಿಯೂ ಆಗಿರುವುದರ ಜೊತೆಯಲ್ಲಿ ವಿದ್ಯಾವಂತನಾಗಿರಬೇಕು ಎಂದು ಹೇಳಿರುವುದನ್ನು ನೋಡಿದರೆ ಕನ್ನಡದಲ್ಲಿ ಶಿಕ್ಷಣವನ್ನು ಹೇಳಿಕೊಡುವ ಪರಿಪಾಠವಿತ್ತೆಂದು ಹೇಳಬಹುದು.

ಚಿಕ್ಕದೇವರಾಯರು ರಚಿಸಿರುವ 'ಚಿಕ್ಕದೇವರಾಯ ವಂಶಾವಳಿ' ಎನ್ನುವ ಗ್ರಂಥದಲ್ಲಿ ಶಿಕ್ಷಣದ ಅಂಶಗಳು ದೊರಕುತ್ತವೆ. ಇವರ ಕಾಲ ಘಟ್ಟದಲ್ಲಿ ವಿಷಯಾನುಸಾರ ಕಲಿಸಲು ಶಿಕ್ಷಕರು ಬೇರೆ ಬೇರೆ ಇದ್ದರು. ಕಾವ್ಯ ಶಿಕ್ಷಾಚಾರ್ಯರು ಉಚ್ಚಾರಣ ಕ್ರಮವನ್ನು, ಓದುವುದನ್ನು, ಕಲಿಸಿದರೆ ಆ ಶಿಕ್ಷಣಕ್ಕೆ ಲಿಪಿ ಗ್ರಹಣವೆಂದು ಹೆಸರು. ಮತೊಬ್ಬರು 'ಪದವಾಕ್ಯ ಪ್ರವೀಣ' ಅಥವಾ ವ್ಯಾಕರಣವನ್ನು ಹೇಳುತ್ತಿದ್ದರು. ಇನ್ನೊಬ್ಬರು ಚರಿತ್ರೆ, ಭೂಗೋಳವನ್ನು ಒಳಗೊಂಡ ಪುರಾಣಗಳನ್ನು ಕಲಿಸಿ ಕೊಡುವವರಾಗಿದ್ದರು. ಗರುಡಿಯ ಶಿಕ್ಷಣವನ್ನು ಭಾರತೀಯ ಶಾಲೆ ಶಿಕ್ಷಣ ಎಂದು ಹೆಸರಿಸಲಾಗಿತ್ತು. ಈ ಮೇಲಿನ ವಿವರಣೆಯನ್ನು ಗಮನಿಸಿದಾಗ ಮೈಸೂರು ಒಡೆಯರ ಆಳ್ವಿಕೆಯ ಸಂದರ್ಭದೊತ್ತಿಗೆ ಕನ್ನಡಭಾಷಾ ಉಚ್ಚರಣೆಯನ್ನು ಮತ್ತು ಬರೆಸುವುದನ್ನು ಕಲಿಸಲು ಪ್ರತ್ಯೇಕ ಶಿಕ್ಷಕರು ಇದ್ದರು ಎಂಬುದು ಸ್ಪಷ್ಟವಾಗುತ್ತದೆ. ಕನಕದಾಸರು ರಚಿಸಿರುವ 'ಮೋಹನತರಂಗಿಣಿ'ಯಲ್ಲಿ ಕಿಸೆ–ಅಗಿ ತೊಟ್ಟು ಕೈಯಲ್ಲಿ ಬೆತ್ತ ಹಿಡಿದು ಚೌಪದಿಗಳನ್ನು ರಚಿಸುವುದರಲ್ಲಿ ನಿಪುಣರಾದ ಪ್ರಾಥಮಿಕ ಶಾಲಾ ಉಪಾಧ್ಯಾಯರ ಚಿತ್ರ ದೊರಕುತ್ತದೆ. ಚಿಕ್ಕ ನಂಜೇಶನ 'ರಾಘವಾಂಕನ ಚರಿತೆ' ಯಲ್ಲಿ ಧೂಳಾಕ್ಷರದ ಮಾತು ಬಂದಿದೆ. ಅಲ್ಲದೇ ಬಾಯಿಪಾಠಕ್ಕೆ ಆದ್ಯತೆ ನೀಡಲಾಗಿತ್ತು ಎಂದು ಹೇಳಿದೆ.

ಲಕ್ಷ್ಮಿ ಧರ್ಮಾತ್ಮನ ತಾಯಿ 'ಕೆರೆಯನ್ನು ಕಟ್ಟಿಸು', 'ಬಾವಿಯನ್ನು ಸವೆಸು'....... ಎಂದು ಹೇಳುವ ಶಾಸನದ ಸಾಲುಗಳು ಮಕ್ಕಳಿಗೆ ತಾಯಿ ಬಾಲ ಬೋದೆಯನ್ನು ತಿಳಿಸುವ ರೀತಿಯಲ್ಲಿ ರಚನೆಯಾಗಿದೆ. ಈ ಮೇಲಿನ ಉಲ್ಲೇಖಗಳೆಲ್ಲವೂ ಕೃತಿಯಲ್ಲಿ ಬಂದಿರುವುದರಿಂದ ಕನ್ನಡ ಭಾಷೆಯ ಕಲಿಕೆ ಪ್ರಾಚೀನತೆಯಲ್ಲಿ ಇತ್ತೆಂಬುದನ್ನು ಪುಷ್ಟೀಕರಣ ಗೊಳಿಸುತ್ತದೆ. ಐಗಳ ಮಠದಲ್ಲಿ ಮಕ್ಕಳು ಸಂಜೆಯ ಹೊತ್ತು 'ಪರುವಡಿ' ಹೇಳುವ ಪದ್ಧತಿ ಇತ್ತು ಎಂದು ಪಂಜೆ ಮಂಗೇಶರಾಯರು ತಮ್ಮ ಪ್ರಬಂಧದಲ್ಲಿ ಉಲ್ಲೇಖಿಸುತ್ತಾರೆ. 'ಪರುವಡಿ' ಎಂದರೆ, ಮಕ್ಕಳು ಅಂಕೆ–ಸಂಖ್ಯೆ, ಮಗ್ಗಿಕೋಷ್ಟಕ, ತಿಥಿನಕ್ಷತ್ರ, ದೇವರನಾಮಗಳನ್ನು, ಒರೆಸೆಯಾಗಿ ಹೇಳಿ ಕಂಠಪಾಠ ಮಾಡಿ ಅಭ್ಯಾಸ ಮಾಡಿಸುವುದು ಎಂಬರ್ಥ ಬರುತ್ತದೆ. ಇದು ಕೊಂಕಣಿ ಭಾಷೆಯಲ್ಲಿ ಬಳಕೆ ಇದೆ. ಈ ಅರ್ಥ ತೆಲಗು ಭಾಷೆಯಲ್ಲೂ ಇದೆ. ಪರುವಡಿಯ ಅಭ್ಯಾಸಗಳಲ್ಲಿ ಒಂದು ಕ್ರಮವುಂಟು ಶಾಲೆಯ ಹಿರಿಯ ಮಣಿ ಮೊದಲು ಒಂದು ಸೊಲ್ಲನ್ನು ತಾನೊಬ್ಬನೇ ಪರುವಡಿಯ ಧ್ವನಿಯಿಂದ ಗಟ್ಟಿಯಾಗಿ ಕೂಗಿ ಹೇಳುವನು. ಅವನ ತರುವಾಯ ಮಿಕ್ಕವರೆಲ್ಲಾ ಆತನ ಹೇಳಿಕೆ ಎತ್ತಿಕೊಂಡು ಒದರುವ ಸ್ವರದಿಂದ ಒಟ್ಟಾಗಿ ಕಿರುಚುವರು. ಪರಿವಿಡಿ ಎಂಬುದೊಂದು ಕನ್ನಡ ಶಬ್ದವಿದೆ. ಅದಕ್ಕೆ ಕ್ರಮ, ಏರ್ಪಾಡು, ವ್ಯವಸ್ಥೆ, ಎಂಬ ಅರ್ಥಗಳು ಬರುತ್ತದೆ. ಕೊಂಕಣಿ ಪರುವಡಿಯ ಕನ್ನಡ

ಪರಿವಿಡಿ ಎಂಬ ಶಬ್ದವಿರಲೂಬಹುದು. ತೆಲುಗಿನಿಂದ ಬಂದಿದೆ ಎಂದು ಹೇಳಬಹುದು. ಏಕೆಂದರೆ ಕನ್ನಡ ಮಗ್ಗಿ ಹೇಳುವುದರಲ್ಲಿ ತೆಲುಗಿನ ಒಂದು ಸೊಲ್ಲು ಇನ್ನೂ ಇದೆ. 'ಎರಡ ಮೂರ್ಲ ಆರು, ನಾಲ್ಕು ಎರಡ್ಲಿ ಎಂಟು, ಎನ್ನುವಲ್ಲಿ ಎರಡ್ಲು, ಮೂರ್ಲು ಎಂಬುದು ತೆಲುಗಿನ ಒಂದೇ ಅಕ್ಷರಮಾಲೆಯನ್ನು ಇದೇ ಪರುವಡಿಯು ಮಕ್ಕಳಿಗೆ ಹೇಳಿಕೊಡುತ್ತಿತ್ತು. ಮಕ್ಕಳ ಬಾಯಿಂದ ಒಂದೊಂದು ಅವಧಿಯಲ್ಲಿ ಇಷ್ಟೇ ಅಕ್ಷರಗಳು ಬರಬೇಕೆಂಬ ನಿಯಮವಿದೆ. 'ಅ' ಕಾರದಿಂದ 'ಅಃ' ಕಾರದವರೆಗಿನ ಸ್ವರಾಕ್ಷರಗಳನ್ನು ಉರು ಹಾಕುವಾಗ ಒಂದು ಅವಧಿಯಲ್ಲಿ ಎರಡು ಇಲ್ಲವೆ ಮೂರು ಅಕ್ಷರಗಳನ್ನು ಮಾತ್ರ ಹೇಳಬೇಕು. 'ಕ'ಕಾರದಿಂದ 'ಮ'ಕಾರದವರೆಗೆ ವರ್ಗೀಕರಿಸಿದ ೨೫ವ್ಯಂಜನಗಳಲ್ಲಿ ಐದೈದು ಅಕ್ಷರಗಳ ಒಂದೊಂದು ವರ್ಗವನ್ನು ಒರಸೆಯಾಗಿ ಹೇಳಬೇಕು. ಅವರ್ಗೀಯ ವ್ಯಂಜನಗಳನ್ನು ಬಿಡಿಬಿಡಿಯಾಗಿ ಹೇಳಬೇಕು. 'ಳ' ಆದ ಮೇಲೆ 'ಕ್ಷ' ಎಂದು ಹೇಳುವ ಪದ್ಧತಿ ಬಂದಿದೆ. ಅದು ಸಂಸ್ಕೃತ ಪಾಠ ಶಾಲೆಯ ಪರಿಪಾಠವಾಗಿದೆ. 'ಅ'ಕಾರದಿಂದ 'ಳ' ಕಾರದ ತನಕ ಹೇಳಿದ ಮೇಲೆ 'ಅಕ್ಷರಿತಿ' ಎಂದು ಹೇಳುವ ಸಂಪ್ರದಾಯ. ಅಂದರೆ ಅಕ್ಷರಗಳು ಇಲ್ಲಿ ಮುಗಿಯುವುವು ಎಂದರ್ಥ. 'ಐಗಳ ಮಠ ಇದ್ದಷ್ಟು ಕಾಲ' ಸಂಸ್ಕೃತವನ್ನು ಅನುಸರಿಸುತ್ತಿದ್ದ ಐಗಳೂ ಹಾಗೇ ಹೇಳಿಸುವ ಪದ್ಧತಿ ಇತ್ತು. ಐಗಳ ಕಾಲ ಕಳೆದ ಮೇಲೆ ಪಾಠ ಕ್ರಮ ಬೇರೆಯಾಯಿತು'.... ಸ,ಹ,ಳ, ಅಕ್ಷರ ಮಾಲೆ ಬರಬರುತ್ತಾ.... ಸ,ಹ,ಳ,ಕ್ಷ,ರ ಯಿತಿ ಎಂದಾಯ್ತು' ಎಂದು ಪಂಜೆ ಮಂಗೇಶರಾಯರು ವರ್ಣಮಾಲೆಯ ಪರಿವಿಡಿ ಕ್ರಮವನ್ನು ಪಂಜೆಮಂಗೇಶ ರಾಯರು ಸಂಪಾದಿಸಿದ ಪಂಜೆಯವರ ಕೃತಿಗಳು ಸಂಪುಟ '೪'ರಲ್ಲಿ ವಿಶ್ಲೇಷಿ ಸುತ್ತಾರೆ.(ಪುಟ೧೧೨-೧೧೩)

ಈ ಮೇಲಿನ ವಿವರಣೆಯಿಂದ ಪ್ರಾಚೀನಕಾಲದಲ್ಲಿ ಕನ್ನಡ ಭಾಷೆಯ ಕಲಿಕೆಯು ಮೌಖಿಕವಾಗಿ ಕಷ್ಟವಾದ ಉಚ್ಚಾರಣೆಯ ಮೂಲಕ ನಡೆಯುತ್ತಿತ್ತು ಎಂದು ಹೇಳಬಹುದು. ಪ್ರಾರಂಭದಲ್ಲಿ ವರ್ಣಮಾಲೆಯ ಅಕ್ಷರಗಳನ್ನು ಮಗ್ಗಿ ಹೇಳಿಸುವುದರ ಮೂಲಕ(3RS-ಓದು,ಬರಹ,ಲೆಕ್ಕ) ಕನ್ನಡ ಭಾಷಾ ಕಲಿಕೆ ಸಾಗುತ್ತಿತ್ತು ಎಂದು ಹೇಳಬಹುದು. ಜೊತೆಗೆ ಅಕ್ಷರಮಾಲೆಯನ್ನು ಕ್ರಮವಾಗಿ ಬರೆಯಿಸುವ ಪದ್ಧತಿ ಇತ್ತೆಂಬುದು ಸ್ಪಷ್ಟವಾಗುತ್ತದೆ. ವಾಚನಕ್ಕೆ ಹೆಚ್ಚು ಪ್ರಾಶಸ್ತ್ಯವಿರುತ್ತಿತ್ತು. ಇದೇ ವಿದ್ಯೆಯ ಅಳತೆಗೋಲಾಗಿತ್ತು ಎಂದು ಬಹುಭಾಷಾ ವಿದ್ವಾಂಸರಾದ ಎನ್.ಅನಂತರಂಗ ಅವರು ಪ್ರಾಚೀನ ಕಾಲದ ಕನ್ನಡ ಕಲಿಕೆಯ ಕುರಿತು ಅಭಿಪ್ರಾಯಪಡುತ್ತಾರೆ. ಅರ್ಥಹೀನವಾದ ವಚನವನ್ನು ನಿಷ್ಫಲವೆಂದು ಹೇಳಿ, ತಿಳಿದುದನ್ನು ಓದುವ ಕ್ರಮದಿಂದಲೂ(ಗಮಕದಿಂದ) 'ಕನ್ನಡಜಾಣ' ಎನಿಸಿಕೊಳ್ಳುವ ವಿಚಾರವನ್ನು ತಿಳಿಸುತ್ತಾರೆ. (ಕರ್ನಾಟಕ ಸಂಪದ-ಟಿ.ವಿ.ವೆಂಕಟಾಚಲಶಾಸ್ತ್ರೀ ಕ.ಸಾ.ಪ.)

ಮಗುವನ್ನು ಶಾಲೆಗೆ ಸೇರಿಸುವ ಮೊದಲೇ ಅಕ್ಷರಾಭ್ಯಾಸ ಮಾಡಿಸುವ ಪದ್ಧತಿ ರೂಢಿಯಲ್ಲಿತ್ತು. ಓದು, ಬರಹವನ್ನು ಕಲಿಸಲಾಗುತ್ತಿತ್ತು. ಬಳಪದ ಹಲಗೆ, ಬಳಪಕಡ್ಡಿಗಳನ್ನು

ಮಗುವಿಗೆ ಪ್ರಾರಂಭದಲ್ಲೇ ಬರೆಯುವ ಸಾಧನಗಳನ್ನು ಒಂದನೇ ಮತ್ತು ಎರಡನೇ ತರಗತಿಗೆ ದೊರಕಿಸಲಾಗುತ್ತಿತ್ತು. ದಾಟುವ ವೇಳೆಗೆ ಸೀಸಕಡ್ಡಿ ಕಾಗದಗಳನ್ನು ಬಳಸಬಹುದಿತ್ತು. ಮೂರನೇ ತರಗತಿಯ ನಂತರ 'ಮಸಿ'(ಶಾಯಿ) ಲೇಖನಿಗಳನ್ನು ಉಪಯೋಗಿಸುತ್ತಿದ್ದರು. ಉಪಾಧ್ಯಾಯರು ತಾವು ಬರೆದ ದೊಡ್ಡ ಅಕ್ಷರಗಳ ಮೇಲೆ ಬಳಪದ ಕಡ್ಡಿಯಿಂದ ಮಗುವಿಗೆ ಅಕ್ಷರದ ಆಕೃತಿಯನುಸಾರ ತಿದ್ದಿಸಲಾಗುತ್ತಿತ್ತು. ಮೇಲಿನ ತರಗತಿಗಳಿಗೆ ಬಂದಂತೆ ಸ್ವಸಾಮರ್ಥ್ಯದಿಂದ ಬರೆಯಲು ಹೇಳಲಾಗುತ್ತಿತ್ತು. ಈ ರೀತಿ ಬರೆಸುವಾಗ ಉಪಾಧ್ಯಾಯರು ಅಕ್ಷರಾಕೃತಿ ಏಕ ರೂಪತೆಯಲ್ಲಿರುವಂತೆ ಬಳಪದ ಕಡ್ಡಿ, ಪಾಟಿ, ಸೀಸಕಡ್ಡಿ, ಪುಸ್ತಕ, ಲೇಖನಿಗಳನ್ನು ಸರಿಯಾದ ಕ್ರಮದಲ್ಲಿ ಹಿಡಿದು ಕೊಳ್ಳುವ ವಿಧಾನವನ್ನು ಹೇಳಿ ಕೊಡುತ್ತಿದ್ದರು. ಇದರಿಂದ ಮಕ್ಕಳು ಸುಂದರವಾಗಿ ಬರೆಯಲು ಶುದ್ಧವಾಗಿ ಹೇಳಲು ಸಹಾಯಕವಾಗುತ್ತಿತ್ತು. ಮಕ್ಕಳಿಗೆ ಇದರ ಜೊತೆಗೆ ಪ್ರತಿದಿನ ಬರೆಯಲು ಕಾಪಿ ಪುಸ್ತಕಗಳು ಇದ್ದವು. ಹೀಗೆ ಮಾಡಿದ ಮಕ್ಕಳ ಅಕ್ಷರಾಭ್ಯಾಸಕ್ಕೆ 'ಅಕ್ಕರಿಗೆರು' ಎಂದು ಹೇಳಲಾಗುತ್ತಿತ್ತು. ಒಂದಡಿ ಎರಡಡಿ ಉದ್ದದ ಓಲೆ ಗರಿಯಲ್ಲಿ ಗ್ರಂಥಗಳನ್ನು ಪ್ರತಿ ಮಾಡಿದಾಗ ಅಕ್ಷರ ಪಂಕ್ತಿಗಳು ಉರುಳುಗೋಲು ಇಟ್ಟು ಗೆರೆ ಎಳೆದು ಬರೆದುದು ಎಂದು ಅನಿಸುವಂತೆ ಇರುತ್ತಿತ್ತು. ಎಂದು ಪ್ರೊ. ಟಿ. ಕೇಶವಭಟ್ಟ 'ವಾಗ್ಭೂಷಣ' ಪುಸ್ತಕದಲ್ಲಿ ಅಭಿಪ್ರಾಯಪಡುತ್ತಾರೆ.

ಕರ್ನಾಟಕದಲ್ಲಿ ಕಳೆದ ಅರವತ್ತು ವರ್ಷಗಳ ಹಿಂದೆ ಶಾಲೆಗಳಿಲ್ಲದೆ ಹಳ್ಳಿಗಳಲ್ಲಿ ಹೆತ್ತವರು ಮನೆಯಲ್ಲಿಯೇ ಮಕ್ಕಳಿಗೆ ಪಾಠ ಹೇಳಿ ಕೊಡುತ್ತಿದ್ದರು. ಅಕ್ಷರಾಭ್ಯಾಸವನ್ನು ನೆಲದ ಮೇಲೆ, ಮರಳು ಅಥವಾ ತೌಡಿನಲ್ಲೊ ಅಕ್ಷರಭ್ಯಾಸ ಮಾಡಿಸುತ್ತಿದ್ದರು. ಬೆರಳಿನಿಂದ ಸ್ವರಾಕ್ಷರಗಳನ್ನು, ವ್ಯಂಜನಾಕ್ಷರಗಳನ್ನು, ಗುಣಿತಾಕ್ಷರಗಳನ್ನು ಕ್ರಮವಾಗಿ ಬರೆಸುತ್ತಿದ್ದರು. ವಾರ, ತಿಥಿ, ನಕ್ಷತ್ರ, ಮುಂತಾದುವುಗಳನ್ನು ಬಾಯಿ ಪಾಠದ ಮೂಲಕ ಬೋಧನೆ ನಡೆಯುತ್ತಿತ್ತು. ದೇವರ ಕೀರ್ತನೆಗಳನ್ನು ಹೇಳಿಸುವ ಕ್ರಮವಿತ್ತು. ನಂತರ ಬಳಪದ ಮೇಲೆ ಬರೆಯುವುದನ್ನು ಕಲಿಯುತ್ತಿದ್ದರು. ಈ ಕಲಿಕೆ ಸುಧಾರಿಸಿದ ಮೇಲೆ ಕಾಗದ, ಓಲೇಗರಿಯ ಮೇಲೆ ಬರೆಯುವುದನ್ನು ಹೇಳಿ ಕೊಡಲಾಗುತ್ತಿತ್ತು. ಓದು, ಬರಹ, ಬರದವರಿಗೆ ಬಾಯಿ ಪಾಠದಲ್ಲೇ ತಮಗೆ ತಿಳಿದ ಲಾವಣಿ, ಸಂಧಿ, ಪಾಡ್ದನ, ಕಥೆ, ಪದ್ಯ, ಮೂಲ ಮಂತ್ರಗಳನ್ನು ಹೇಳಿ ಕೊಡುತ್ತಿದ್ದರು. ಶಾಲೆಗಳಿಲ್ಲದ ಹಳ್ಳಿಯಲ್ಲಿ ಊರಿನ ಜನರು ಒಬ್ಬ ಶಿಕ್ಷಕನನ್ನು ಗೊತ್ತು ಮಾಡಿ ಅನುಕೂಲವಾದ ಸ್ಥಳದಲ್ಲಿ ಅಂದರೆ ದೇವಸ್ಥಾನ, ಭೂತಸ್ಥಾನ ಇತ್ಯಾದಿಗಳಲ್ಲಿ ಮಕ್ಕಳಿಗೆ ಕಲಿಸುವ ವ್ಯವಸ್ಥೆಯನ್ನು ಮಾಡಲಾಗುತ್ತಿತ್ತು. ಹೆತ್ತವರೇ ಸಂಬಳ ಮತ್ತು ಊಟವನ್ನು ಕೊಡುತ್ತಿದ್ದರು. ಸಂಬಳ ಕೊಡಲು ಆಗದ ಪೋಷಕರು ತಮ್ಮ ಮಕ್ಕಳನ್ನು ತಮ್ಮ ವೃತ್ತಿಯನ್ನೇ ಅವಲಂಬಿಸುವಂತೆ ಅಣಿ ಮಾಡುತ್ತಿದ್ದರು. ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ, ಲೆಕ್ಕ, ಭೂಗೋಳ, ಚರಿತ್ರೆ, ಪೌರನೀತಿ, ತೋಟಗಾರಿಕೆ, ಆರೋಗ್ಯ, ಇತ್ಯಾದಿ ಪಾಠಗಳನ್ನು ಕಲಿಸುತ್ತಿದ್ದರು. ಆದರೆ ಕನ್ನಡ ಮತ್ತು ಲೆಕ್ಕ ಪಾಠಗಳಿಗೆ ಬಹಳ ಮಹತ್ವವಿದ್ದಿತು. ಅಕ್ಷರ, ಪದ, ವಾಕ್ಯಗಳನ್ನು

ಹೇಳಿಕೊಡುವ ನಿಟ್ಟಿನಲ್ಲಿ ಕನ್ನಡ ಭಾಷಾಭ್ಯಾಸದ ಕಲಿಕೆ ಸಾಗುತ್ತಿತ್ತು ಎಂದು ಮುಳಿಯಾಲ ಸುಬ್ರಾಯ ಭಟ್ಟರು ಅಂದಿನ ಹಳ್ಳಿಯ ಶಿಕ್ಷಣದ ವ್ಯವಸ್ಥೆಯ ಬಗ್ಗೆ ತಮ್ಮ ಅಭಿಪ್ರಾಯವನ್ನು ಹೇಳುತ್ತಾರೆ.(ಸಂಪಾದಕರು-ಅಡ್ಯನಡ್ಕ ಕೃಷ್ಣಭಟ್-ಸುದರ್ಶನ ತೋನ್ಸೆ ಮಾಧವ ಅನಂತಪೈ ಅಭಿನಂದನ ಗ್ರಂಥ)

ತುಳು ಭಾಷೆಯಲ್ಲಿ ಬಂದಿರುವ ಪಾಡ್ದನಗಳು ದಕ್ಷಿಣ ಕನ್ನಡ ಜಿಲ್ಲೆಯ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕತೆಯ ಅಂಶಗಳು ಮಾನವನ ಬದುಕಿನ ಹೋರಾಟದ ಚಟುವಟಿಕೆಯ ಮೇಲೆ ಬೆಳಕು ಚೆಲ್ಲುತ್ತವೆ. ವಿಟ್ಲ ಸೀಮೆಯ ದೈವದ ಪಾಡ್ದವೊಂದು ಹಿಂದಿನ ಕಾಲದ ಅಕ್ಷರ ಕಲಿಕೆಯ ಬಗ್ಗೆ ಈ ಕೆಳಗಿನಂತೆ ಮಾಹಿತಿ ನೀಡುತ್ತದೆ.

'ಸುದೆ ಬೊಳ್ಗರೆಡ್ದ್ ಸಣ್ಣ ಪೊಯ್ಯೆ ತರ್ಪುಡಾಯರ್, ಪದ್ರಾಡ್ ಬಳ್ಳಿ ಬರೆಯರ್. ಇರುವತ್ತನಾಲ್ ಮಗ್ಗಿ ಗುಣಿತೆರ್, ಬಾಯಿತಚ್ಚರ ಪೊಯ್ಯಪಾಂಡ್ ಪೊಯ್ಯತಚ್ಚರ ಬಾಯಿಗ್ ಬತ್ತ್‌ಂಡ್ ಪೊಯ್ಯತ ಬರವು ಬುಡಿಯೆರ್,ಬಳವುತ ಅಚ್ಚರ ಪತ್ತಿಯರ್, ಬಳವು ತಚ್ಚರ ಬಾಯಿಗಾಂಡ್, ಬಾಯಿತಚ್ಚರ ಬಳವುಟು ಬತ್ತೆಡ್ ಅಯಿನ್ ಬುಡಿಯರ್ ಓಲೆ ಕಂಟಕ ಪೆತ್ಯೆರ್, ಬತ್ತಿ ಓಲೆಗ ಉತ್ತರ ಬರೆಯೆರ್. (ಕನರಾಡಿ ವಾದಿರಾಜ ಭಟ್-'ಪಾಡ್ದನಗಳು'-ವಿಟ್ಲ ಸೀಮೆಯ ಒಕ್ಕೆತ್ತೂರು ದೈವಂಗಳ್ ಪಾಡ್ದನಗಳು -ಪ್ರಸ್ತಾವನೆ-೪೫ನೇಪುಟ-ಯುಗ ಪುರುಷ ಪ್ರಕಟಣೆ-೧೯೭೪)

ಹೊಳೆಯ ದಂಡೆಗಳಲ್ಲಿ ಸಿಗುವ ಸಣ್ಣ ಹೊಯ್ಗೆಯನ್ನು ತರಿಸಿ ಅದರಲ್ಲಿ ಹನ್ನೆರಡು ಬಳ್ಳಿಗಳನ್ನು ಬರೆದರು. ಇಪ್ಪತ್ತನಾಲ್ಕು ಮಗ್ಗಿ ಗುಣಿಸಿದರು. ಬಾಯಿಯಲ್ಲಿದ್ದ ಅಕ್ಷರ ಆಗ ಹೊಯ್ಗೆಯಲ್ಲಿ ಸೇರಿತು. ಹೊಯ್ಗೆಯಲ್ಲಿ ಬರೆದುದ್ದರಿಂದ ಅವುಗಳನ್ನು ಸರಾಗವಾಗಿ ಕಂಠಪಾಠ ಮಾಡಲು ಸಹಾಯಕವಾಯಿತು. ನಂತರ ಹೊಯ್ಗೆಯಲ್ಲಿ ಬರೆಯುವುದನ್ನೇ ಬಿಟ್ಟು ಬಳಪದಲ್ಲಿ ಬರೆಯಲು ಪ್ರಾರಂಭಿಸಿದರು. ಬಳಪದ ಮೇಲೆ ಅಕ್ಷರ ಕಂಠ ಪಾಠವಾದ ಮೇಲೆ ಓಲೆ ಮತ್ತು ಲೇಖನಿಯನ್ನು ಹಿಡಿದರು. ಓಲೆಯಲ್ಲಿ ಬರವಣಿಗೆ ಆರಂಭ ಮಾಡಿದ ಇವರು, ಅಭ್ಯಾಸದ ಬಳಿಕ ಬೇರೆ ಬೇರೆ ಭಾಗಗಳಿಂದ ಬಂದಂತಹ ಓಲೆಗಳನ್ನು ಓದಿ ತಿಳಿದು ಅವುಗಳಿಗೆ ಉತ್ತರವನ್ನು ಬರೆದು ಕಳುಹಿಸುವ ಸಾಮರ್ಥ್ಯವನ್ನು ಪಡೆದು ಕೊಂಡರು ಎಂದು ಈ ಮೇಲಿನ ಪಾಡ್ದನವು ಸಾರಾಂಶವನ್ನು ವಿಶ್ಲೇಷಿಸುತ್ತದೆ.

ಒಟ್ಟಾರೆಯಾಗಿ ಪ್ರಾಚೀನ ಕನ್ನಡ ಭಾಷೆ ಕಲಿಸುವ ಶಿಕ್ಷಣ ಪರಂಪರೆಯು ಧಾರ್ಮಿಕ ವಿಧಿ ವಿಧಾನದ ಅಡಿಯಲ್ಲಿಯೇ ಪ್ರಾರಂಭ ಮಾಡಿದೆ. ಶಿಕ್ಷಣಕ್ಕೂ ಮತ ಧರ್ಮಗಳಿಗೂ ಸಂಬಂಧವಿರುವುದು ಸ್ಪಷ್ಟವಾಗುತ್ತದೆ. ಏಕೆಂದರೆ ಪ್ರಾಚೀನ ಶಿಕ್ಷಣವೆಲ್ಲಾ ಮಠ, ದೇವಸ್ಥಾನ, ಅಗ್ರಹಾರ, ಘಟಿಕ, ಬ್ರಹ್ಮಪುರಿ, ವಿಹಾರ, ಜಿನಾಲಯಗಳಲ್ಲಿ ಸಮಾಜದ ಉನ್ನತ ವರ್ಗದವರು ಶಿಕ್ಷಣದ ಸೌಲಭ್ಯವನ್ನು ಪಡೆಯುವವರಾಗಿದ್ದರು ಎಂಬುವುದನ್ನು ಗುರುತಿಸಬಹುದು. ಅರಸು

ಮನೆತನ ಮತ್ತು ಪುರೋಹಿತ ವರ್ಗಕ್ಕೂ ಶಿಕ್ಷಣದ ಜೊತೆಗೆ ಅವಿನಾಭಾವ ಸಂಬಂಧವಿರುವುದು. ಶಿಕ್ಷಣದ ಚರಿತ್ರೆ ಇತಿಹಾಸದಿಂದ ಸ್ಪಷ್ಟವಾಗುತ್ತದೆ. ನಂತರ ೧೨ನೇ ಶತಮಾನದ ವಚನಕಾರರ ಪ್ರಭಾವದಿಂದ ಶಿಕ್ಷಣದಲ್ಲಿ ಕ್ರಾಂತಿಯಾಯಿತು. ಇದರಿಂದ ಶಿಕ್ಷಣದಲ್ಲಿ ಜನಸಾಮಾನ್ಯರಿಗೂ ಅವಕಾಶ ಒದಗಿತು. ಆದರೂ ಕೂಡ ಶಿಕ್ಷಣ ಪರಂಪರೆ ರಾಜರ ಮನೆತನದ ಹಿಡಿತದಲ್ಲಿಯೇ ಮುಂದುವರೆದಿರುವುದನ್ನು ಕಾಣುತ್ತೇವೆ. ವೀರಶೈವ ಮಠಗಳಲ್ಲಿ ಬೋಧನೆ ನಡೆಯುತ್ತಿದ್ದನ್ನು ೧೨ನೇ ಶತಮಾನದಲ್ಲಿ ಕಾಣುತ್ತೇವೆ. ಈ ಮಠಗಳು ಧರ್ಮ ಮತ್ತು ವೇದಾಂತ ತತ್ವಗಳನ್ನು ಸಾರಲು ಮುಂದಾಗಿದ್ದವು. ಈ ಕಾಲ ಘಟ್ಟದಲ್ಲಿನ ವಿರಕ್ತಮಠ ಓದು ಮತ್ತು ಬರೆಯುವುದನ್ನು ಕಲಿಸುತ್ತಿದ್ದವು. ಈ ರೀತಿ ಬೋಧನೆ ಮಾಡುತ್ತಿದ್ದರಿಂದ ಓದಿಸುವ ಮಠಗಳು ಎಂದು ಕರೆಯಲಾಗುತ್ತಿತ್ತು. ಈ ಮಠಗಳು ಓದಿಸುವುದರ ಜೊತೆಗೆ ಲೆಕ್ಕಪತ್ರಗಳನ್ನು ನಿರ್ವಹಿಸುತ್ತಿದ್ದವು. ಇದರ ಜೊತೆಗೆ ವೃತ್ತಿಶಿಕ್ಷಣ ಅಂದರೆ ನೂಲುವುದು, ನೇಯುವುದು, ವೈದ್ಯಕೀಯ ಜ್ಞಾನ, ಹಾಗೂ ವ್ಯವಸಾಯ ಶಾಸ್ತ್ರಗಳನ್ನು ಹೇಳಿಕೊಡಲು ಶಾಲಾಮಠಗಳು ಸಹ ಇದ್ದವು ಎಂಬುದು ಸ್ಪಷ್ಟವಾಗುತ್ತದೆ. ಈ ಮಾದರಿಯಲ್ಲಿ ಮುಂದುವರೆದ ಶಿಕ್ಷಣ ಪದ್ಧತಿ ೧೭-೧೮ನೇ ಶತಮಾನದ ವೇಳೆಗೆ ಬ್ರಿಟೀಷರ ಆಡಳಿತದಿಂದ ಶಿಕ್ಷಣ ಬದಲಾಯಿತು. ಬ್ರಿಟೀಷರು ಕಾಲಕ್ರಮೇಣ ವಿಷಯಾನುಸಾರ ಪಠ್ಯ ಪುಸ್ತಕಗಳನ್ನು ರಚಿಸಿದರು. ಇದರಂತೆ ಕನ್ನಡ ಶಾಲೆಗಳು, ಕನ್ನಡ ಪಠ್ಯಗಳು ರಚನೆಯಾಗಿರುವುದನ್ನು ಕಾಣಬಹುದು.

### ೩.೨. ಕನ್ನಡ ಪಠ್ಯಪುಸ್ತಕಗಳ ಚಾರಿತ್ರಿಕ ಹಿನ್ನೆಲೆ

ಪ್ರಾಚೀನ ಕಾಲದಲ್ಲಿ ಲಭ್ಯವಿದ್ದ ಕೃತಿ, ಕಾವ್ಯಗಳೆಲ್ಲವೂ ಹಸ್ತಪ್ರತಿಯಲ್ಲಿ ರಚಿತವಾಗಿವೆ. ಇವುಗಳು ಮುದ್ರಣಗೊಂಡಿದ್ದು ಬ್ರಿಟೀಷರ ಆಡಳಿತದ ಅವಧಿಯಲ್ಲಿ ಎಂಬುದು ಸ್ಪಷ್ಟವಾಗುತ್ತದೆ. ಬ್ರಿಟೀಶರು ಪ್ರಾರಂಭದಲ್ಲಿ ಬಾಷಲ್‌ಮಿಶನ್ ಮೂಲಕ ಬೈಬಲ್ ಮತ್ತು ಮತ ತತ್ವದ ಪುಸ್ತಕಗಳನ್ನು ಅನುವಾದಿಸುವುದರ ಮೂಲಕ ಪಠ್ಯ ಪುಸ್ತಕಗಳನ್ನು ಭಾರತದಲ್ಲಿ ಮುದ್ರಿಸಿದರು. ಜೊತೆಗೆ ಮುದ್ರಿಸಿದ ಭಾಷೆಗೆ ಅನುಸಾರ ವ್ಯಾಕರಣ ಕೋಶಗಳನ್ನು ರಚಿಸಿದರು. ಇದರ ನಿಟ್ಟಿನಲ್ಲಿಯೇ ಮಿಶನ್ ಶಾಲೆಗಳ ವಿದ್ಯಾರ್ಥಿಗಳಿಗಾಗಿ ಪಠ್ಯ ಪುಸ್ತಕ ರಚನೆ ಮಾಡಲು ಮುಂದಾಗಿದ್ದನ್ನು ಕಾಣುತ್ತೇವೆ. ಹೀಗೆ ಮುದ್ರಣಗೊಂಡ ಪಠ್ಯ ಪುಸ್ತಕಗಳೂ ನಮ್ಮ ದೇಶದ ಅನೇಕ ಭಾಷಾ ಸಾಹಿತ್ಯಗಳಲ್ಲಿ ಕೆಲವು ಹೊಸ ಹೊಸ ಪರಂಪರೆಗಳನ್ನು ಬ್ರಿಟೀಶರು ಪ್ರಸ್ತಾಪಿಸಿದರು. ಅದರಲ್ಲಿ ಕನ್ನಡ ಭಾಷಾ ಪಠ್ಯ ಪುಸ್ತಕಗಳ ಪರಂಪರೆಯು ಒಂದಾಗಿದೆ.

ಗ್ರಂಥ ಪ್ರಕಟಣೆಗೆ 'ಸಹಾಯಕ ಬೈಬಲ್ ಸಂಘ ಹಾಗೂ ಬುಕ್ ಅಂಡ್ ಟ್ರಾಕ್ಟ್ ಬುಕ್ ಸೊಸೈಟಿಗಳ' ಮುಖಾಂತರ ಅನುಮೋದನೆಯನ್ನು ಪಡೆದು ಕೊಳ್ಳಬೇಕಿತ್ತು. ಈ ಸಂಸ್ಥೆಗಳಿಗೆ ಲಂಡನ್ನಿನಲ್ಲಿದ್ದ ಬ್ರಿಟೀಷ್ ಅಂಡ್ ಫಾರಿನ್ ಬೈಬಲ್ ಸೊಸೈಟಿ ಹಾಗೂ 'ರಿಲಿಜಿಯ ಟ್ರಾಕ್ಟ್ ಸೊಸೈಟಿ'ಗಳು ವಿಶೇಷ ಧನ ಸಹಾಯವನ್ನು ಒದಗಿಸುತ್ತಿದ್ದವು. ಇದರ ಪರಿಣಾಮದಿಂದಲೇ ಮಿಶನರಿ ಕೇಂದ್ರಗಳಲ್ಲಿ ಎಲ್ಲಾ ಮಹತ್ವದ ಸ್ಥಳದಲ್ಲಿಯೂ ಇಂಥ

ಪೂರಕ ಸಂಸ್ಥೆಗಳು ಜನ್ಮ ತಾಳಿ ಗ್ರಂಥೋದ್ಯಮಕ್ಕೆ ಸಹಾಯಕವಾದವು. ಎಂದು ಶ್ರೀನಿವಾಸ ಹಾವನೂರ ಅವರು ಹೊಸಗನ್ನಡದ ಅರುಣೋದಯ ಪುಸ್ತಕದಲ್ಲಿ ವಿಶ್ಲೇಷಿಸಿದ್ದಾರೆ.

ಕರ್ನಾಟಕದಲ್ಲಿ ಸರಕಾರದ ವತಿಯಿಂದ ಮತ್ತು ವೈಯುಕ್ತಿಕ ಸಂಘ ಸಂಸ್ಥೆಗಳಿಂದ ಮುದ್ರಣ ಚಟುವಟಿಕೆಗಳು ನಡೆದಿರುವುದು ತಿಳಿದು ಬರುತ್ತದೆ. ಮಿಶನರಿಗಳು ಬಳ್ಳಾರಿ, ಬೆಂಗಳೂರು, ಮಂಗಳೂರಿನಲ್ಲಿ ಮುದ್ರಣ ಕೈಗೊಂಡರೆ ಸರಕಾರವು ಮದರಾಸು, ಬೆಂಗಳೂರಿನಲ್ಲಿ ಮುದ್ರಣಕ್ಕೆ ಚಾಲನೆ ನೀಡಿದೆ. ಬೆಳಗಾವಿ, ಧಾರವಾಡ, ಮೈಸೂರು ನಗರಗಳಲ್ಲಿ ವೈಯಕ್ತಿಕವಾಗಿ ಬೆಳೆದು ಬಂದಿರುವುದನ್ನು ಗುರುತಿಸಬಹುದು.

ವಿಲಿಯಮ್ ಕೇರಿ ಎಂಬ ಬ್ರಿಟೀಶ್ ಅಧಿಕಾರಿ ಕನ್ನಡವನ್ನು ಕಲಿತು ಕ್ರಿ.ಶ. ೧೮೧೭ರಲ್ಲಿ 'ಎ ಗ್ರಾಮರ್ ಆಫ್ ದಿ ಕರ್ನಾಟಕ ಲಾಂಗ್ವೇಜ್' ಎಂಬ ಗ್ರಂಥವನ್ನು ಬಂಗಾಲದಲ್ಲಿ ಪ್ರಕಟಿಸಿದ. ಈ ಗ್ರಂಥ ಕನ್ನಡದ ಪ್ರಥಮ ಮುದ್ರಣವಾಗಿ ಹೊರಹೊಮ್ಮಿದೆ ಎಂದು ಮುದ್ರಣ ಇತಿಹಾಸದಿಂದ ತಿಳಿಯುತ್ತದೆ. ಮದ್ರಾಸಿನ ಪೋರ್ಟ್ ಸೇಂಟ್‌ಜಾರ್ಜ್ ಕಾಲೇಜಿನ ಅಚ್ಚುಕೂಟದಿಂದ ಜಾನ್ ಮೆಕ್ಕೆರೆನ್ ವ್ಯಾಕರಣ ಗ್ರಂಥವೂ ೧೮೯೦ರಲ್ಲಿ ಹೊರಬಂದಿತು. ವಿಲಿಯಮ್ ರೀವ್ ವಿರಚಿತ 'ಇಂಗ್ಲೀಶ್ ಕನ್ನಡ ಶಬ್ದಕೋಶ' ಮದ್ರಾಸಿನ ಕಾಲೇಜಿನಿಂದ ಮುದ್ರಣಗೊಂಡಿತು. ಇದು ಹೊಸಗನ್ನಡ ಕಾಲದ ಮೊದಲ ಕೋಶ ಅಚ್ಚಾದದ್ದು ಎಂದು ತಿಳಿದುಬರುತ್ತದೆ. ಬೆಂಗಳೂರಿನಲ್ಲಿ ಕ್ರಿ.ಶ.೧೮೪೦ಕ್ಕೆ ಮುಂಚೆ ಯಾವ ಕನ್ನಡ ಮುದ್ರಾಲಯವು ಇರಲಿಲ್ಲವೆಂದು ತಿಳಿದು ಬರುತ್ತದೆ. ವೆಸ್ಲೆ ಮಿಶನರಿಯರು ಮತಪ್ರಸಾರವನ್ನು ಕ್ರಿ.ಶ.೧೮೪೦ರಲ್ಲಿ ಸ್ಥಾಪಿಸಿಕೊಂಡರು. ಈಪ್ರೆಸ್ನಲ್ಲಿ ಪ್ರಕಟವಾದ ಮೊದಲ ಕೃತಿ ಪ್ರಶ್ನೋತ್ತರ ಶಾಲಾ ಪುಸ್ತಕವಾಗಿದೆ. ಹೀಗೆ ಪ್ರಾರಂಭವಾದ ಕನ್ನಡ ಪುಸ್ತಕ ಮುದ್ರಣಗಳು ಶಾಲಾ ಪಠ್ಯಗಳಲ್ಲಿ ಗಮನಾರ್ಹ ಬದಲಾವಣೆಗಳಿಗೆ ನಾಂದಿಯಾಯಿತು.

೧೮೨೪ರಿಂದ ಕರ್ನಾಟಕದ ಏಕೀಕರಣದವರೆಗೂ ಪಠ್ಯ ಪುಸ್ತಕಗಳ ರಚನೆ ವಿಕಾಸದ ದೃಷ್ಟಿಯಿಂದ ಗಮನಾರ್ಹವಾದ ಬದಲಾವಣೆಯನ್ನು ಕಾಣಬಹುದು. ಈ ಕಾಲಘಟ್ಟದ ಆರಂಭದ ಪಠ್ಯಗಳಲ್ಲಿ ಕನ್ನಡ ಅಕ್ಷರ ಮಾಲೆ, ಮಗ್ಗಿ, ಗಣಿತವನ್ನು ಸೇರಿಸಲಾಗಿದೆ. ಹೀಗೆ ಪ್ರಾರಂಭವಾದ ಪಠ್ಯಪುಸ್ತಕ ಮುಂದೆ ವಿಸ್ತಾರಗೊಳ್ಳುತ್ತಾ ನಡೆದಿದೆ. ಅಕ್ಷರಮಾಲೆ ಗಣಿತಗಳ ಜೊತೆಗೆ ಗದ್ಯಭಾಗ ಮತ್ತು ಪದ್ಯಭಾಗಗಳೂ ಸೇರ್ಪಡೆಗೊಂಡಿವೆ. ಕನ್ನಡ ಭಾಷೆ ಮತ್ತು ಸಾಹಿತ್ಯದ ಕಲಿಕೆಯ ಜೊತೆಗೆ ಬೇರೆ ಬೇರೆ ವಿಷಯಗಳನ್ನು ಸೇರಿಸುತ್ತಾ ಹೋಗಿರುವುದನ್ನು ಕಾಣುತ್ತೇವೆ. ಗಣಿತ ಮತ್ತು ಭಾಷೆಗಳನ್ನು ಹೇಳಿಕೊಡುವುದು ಪ್ರಾಥಮಿಕ ಹಂತದ ಶಿಕ್ಷಣದಲ್ಲಿ ಕಾಣುತ್ತೇವೆ. ಇದರಿಂದಾಗಿ ಭಾಷೆಯಲ್ಲಿ ವಿಶೇಷವಾಗಿ ಕನ್ನಡದಲ್ಲಿ ಸಮಾಜವಿಜ್ಞಾನ ಮತ್ತು ವಿಜ್ಞಾನವನ್ನು ಕುರಿತ ಪರಿಚಯಾತ್ಮಕ ಪಠ್ಯಗಳು ರಚನೆಯಾಗಿದ್ದವು. ಅಂದಿನ ಪ್ರಾಥಮಿಕ ಹಂತದ ಪಠ್ಯ ಪುಸ್ತಕಗಳನ್ನು ಇಂದಿನ ಪ್ರಾಥಮಿಕ ಪಠ್ಯ ಪುಸ್ತಕಗಳನ್ನು ತುಲನಾತ್ಮಕವಾಗಿ

ನೋಡಿದಾಗ ಅಂದು ಪಠ್ಯಗಳಲ್ಲಿ ಪಾಠ/ಪದ್ಯಗಳ ಸಂಖ್ಯೆ ಮತ್ತು ವಿಷಯ ವೈವಿಧ್ಯತೆ ಹೆಚ್ಚಿರುವ ಅಂಶವನ್ನು ಕಾಣಬಹುದು. ಇದಕ್ಕೆ ಕನ್ನಡ ಭಾಷೆಯ ಜೊತೆಗೆ ಬೇರೆ ಬೇರೆಯ ಅನ್ಯ ಶಿಸ್ತುಗಳ ವಿಷಯವನ್ನೂ ಅಳವಡಿಸಿರುವುದಕ್ಕೆ ಮೂಲ ಕಾರಣವೆಂದು ಹೇಳಬಹುದು. ಈ ವಿಧಾನ ಪ್ರಾರಂಭದಿಂದ ಹಲವು ದಶಕಗಳವರೆಗೂ ಇರುವುದನ್ನು ಪಠ್ಯಗಳಲ್ಲಿ ಕಾಣ ಬಹುದು.

ನಂತರದ ಕಾಲಮಾನದಲ್ಲಿ ಬ್ರಿಟೀಶರ ಆಡಳಿತ ಸುಧಾರಿಸಿದಂತೆ ಶೈಕ್ಷಣಿಕವಾಗಿ ಪಠ್ಯಪುಸ್ತಕಗಳು ಸುಧಾರಣೆಯನ್ನು ಕಂಡವು. ಮಾರ್‌ಸ್ಡನ್ ಮತ್ತು ಗಾರ್ತುವೇಟ್‌ನಂತಹ ಬ್ರಿಟೀಶ್ ವಿದ್ವಾಂಸರು ಪಠ್ಯಪುಸ್ತಕ ರಚನೆಯ ಸಂದರ್ಭದಲ್ಲಿ ಪ್ರಮುಖ ಪಾತ್ರವಹಿಸಿ ಪಠ್ಯಪುಸ್ತಕ ರಚಿಸಿರುವುದನ್ನು ಕಾಣುತ್ತೇವೆ. ೧೯ನೇ ಶತಮಾನದ ಕೊನೆಯ ವೇಳೆಗೆ ದೇಶಿ ವಿದ್ವಾಂಸರ ಜೊತೆಗೂಡಿ ಪಠ್ಯಗಳು ರಚನೆಯಾಗಿರುವುದನ್ನು ಕಾಣುತ್ತೇವೆ.

ಬ್ರಿಟೀಶರ ಆಳ್ವಿಕೆಯ ಸಂದರ್ಭದಲ್ಲಿ ಕರ್ನಾಟಕ ಪ್ರದೇಶ ಹಲವು ಪ್ರಾಂತ್ಯವಾಗಿ ಹರಿದು ಹಂಚಿ ಹೋಗಿತ್ತು. ಮದ್ರಾಸ, ಮುಂಬೈ, ಮಂಗಳೂರು, ಮೈಸೂರು, ಬೆಂಗಳೂರು, ಪ್ರಾಂತ್ಯಗಳನ್ನು ಕಾಣುತ್ತೇವೆ. ಈ ಪ್ರಾಂತ್ಯಗಳಿಗೆ ಅನುಸಾರವಾಗಿ ಕನ್ನಡ ಭಾಷಾ ಪಠ್ಯಗಳು ರಚನೆಯಾಗಿರುವುದನ್ನು ಕಾಣುತ್ತೇವೆ.

ಮೈಸೂರು ಪ್ರಾಂತ್ಯದಲ್ಲಿ ಎಂ.ಎಸ್.ಪುಟ್ಟಣ್ಣ ರಚಿಸಿದ ಪಠ್ಯಗಳನ್ನು ಕಾಣುತ್ತೇವೆ. ಮ್ಯಾಕ್ಸ್‌ಮುಲ್ಲರ, ಎಸ್.ಜಿ. ನರಸಿಂಹಾಚಾರ್ಯ, ಮ್ಲೇಂಛರು, ಬಿ.ಎಂ.ಶ್ರೀ ಪಠ್ಯಗಳನ್ನು ರಚಿಸಿದ್ದಾರೆ. ಮುಂಬೈ ಪ್ರಾಂತ್ಯದಲ್ಲಿ ರಾವ್‌ಸಾಹೇಬ ಪಾಂಡುರಂಗ ವೆಂಕಟೇಶ ಚಿಂತಾಮಣಿ ಪೇಠಕರ ಡಾ.ಕಿ.ಚೆ.ನಂದೀಮಠ ಶ್ರೀನಿವಾಸ ಕಿಣಿ ಉಳ್ಳಾಲ್ ಮಂಗೇಶರಾವ್ ಇತ್ಯಾದಿ. ಬೆಂಗಳೂರು ಪ್ರಾಂತ್ಯದಲ್ಲಿ ಎಂ.ಆರ್. ಶ್ರೀನಿವಾಸಮೂರ್ತಿ ಕೋಟೆಕಾರು ರಾಮರಾವ್ ವಿ.ಬಾಬುಶೆಟ್ಟಿ, ಕೆ.ಗೋಪಾಲ್‌ರಾವ್, ವಿ.ಲಕ್ಷ್ಮಣರಾವ್, ಶಿ.ಕಾರಂತ, ಪಂಜೆ ಮಂಗೇಶರಾಯ, ಕಯ್ಯಾರ ಕಿಞ್ಞಣ್ಣ ರೈ, ಬಿ. ಶಂಕರಭಟ್ಟ ಉಳ್ಳಾಲ ಮಂಗೇಶರಾವ್, ವಾಮನಭಟ್, ಬಿ.ಎಂ.ಶ್ರೀಕಂಠಯ್ಯ ಹೀಗೆಯೇ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಇನ್ನು ಹಲವಾರು ವಿದ್ವಾಂಸರು ಪುಸ್ತಕಗಳನ್ನು ಬರೆದಿರುವ ದಾಖಲೆಗಳನ್ನು ಗುರುತಿಸಬಹುದು.

ಕನ್ನಡ ಪ್ರಾದೇಶಿಕ ಪ್ರಾಂತ್ಯಗಳನ್ನು ಬಿಟ್ಟು ವಸಾಹತುಶಾಹಿ ಸಂದರ್ಭದಲ್ಲಿ ಅನ್ಯ ಪ್ರಾಂತ್ಯಗಳಲ್ಲಿ ಜನತೆ ಇರುವುದನ್ನು ಕಾಣುತ್ತೇವೆ. ಅಂದರೆ ಕೇರಳ, ಮಹಾರಾಷ್ಟ್ರ, ಗೋವಾ ಪ್ರದೇಶಗಳಲ್ಲಿನ ಕನ್ನಡ ಭಾಷಿಕರಾಗಿ ಅನ್ಯ ಪ್ರಾಂತ್ಯಗಳ ಪಠ್ಯಪುಸ್ತಕಗಳು ಎಂದು ರಚನೆ ಮಾಡಿರುವುದನ್ನು ಕಾಣುತ್ತೇವೆ. ಉದಾ.ಗೆ. The kanarese Reading Series first Book, Department of public instruction. Bomby ಮುಂಬಯಿನ ಇಲಾಖೆಯೊಳಗೆ ಸರಕಾರದ ವಿದ್ಯಾಕಾತೆಯಲ್ಲಿ ರಚನೆಯಾಗಿರುವುದನ್ನು ಕಾಣುತ್ತೇವೆ. ಕನ್ನಡ

ಮೊದಲನೇ ಪುಸ್ತಕವನ್ನು ವರ್ನ್ಯಾಕುಲರ್ ಟೆಕ್ಸ್ಟ್ ಬುಕ್ಸ್ ರಿವಿಜನ್ ಕಮಿಟಿಯವರಿಂದ ರಚಿತವಾಗಿದೆ. Published by macmilan and Co.Ltd.Bombay, Calcutta and London 1914ರಲ್ಲಿ ಪ್ರಕಟಣೆಗೊಂಡಿದೆ. ಈ ಪಠ್ಯದಲ್ಲಿ ೫೦ ಪಾಠಗಳನ್ನು ಕೊಟ್ಟಿದ್ದು ಎರಡು ಭಾಗಗಳಾಗಿ ವಿಂಗಡಿಸಿದೆ. ಮೊದಲನೇ ಭಾಗದಲ್ಲಿ ಸಾಮಾನ್ಯ ಜ್ಞಾನಕ್ಕೆಂದು ಮೂವತ್ತು ಪಾಠಗಳನ್ನು ಕೊಟ್ಟಿದೆ. ಎರಡನೇ ಭಾಗದಲ್ಲಿ ಸೃಷ್ಟಿ ಜ್ಞಾನ(ಸೃಜನಶೀಲತೆ)ದ ಪಾಠಗಳೆಂದು ೨೦ ಪಾಠ ಕೊಟ್ಟಿರುವುದನ್ನು ಕಾಣುತ್ತೇವೆ. ಈ ಪಾಠಗಳ ಪೂರ್ವದಲ್ಲಿ ಶಿಕ್ಷಕರಿಗೆ ಭಾಷಾ ಬೋಧನೆಯ ಸೂಚನೆಗಳನ್ನು ಈ ಪಠ್ಯದ ಪಾಠಗಳಿಗನುಸಾರವಾಗಿ ಕೊಟ್ಟಿದೆ.

ಕೇರಳ ಸರಕಾರ ೧೯೮೬ರಲ್ಲಿ 'ಭಾಷಾ ಪರಿಚಯ' ಎಂಬ ಪುಸ್ತಕವನ್ನು ೨ನೇ ತರಗತಿಗೆ ಪಠ್ಯಕ್ರಮವಾಗಿ ಕೊಡಲಾಗಿದೆ. ಸ್ಟೇಟ್ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಶನ್ ತಿರುವನಂತಪುರದಿಂದ ಪ್ರಕಟಣೆಗೊಂಡಿದೆ. ಇಲ್ಲಿನ ಪಾಠಗಳು ಸಂಭಾಷಣೆಯನ್ನು ಕೊಡುವಂತವುಗಳಾಗಿವೆ. ಕೋಪಿ ಪುಸ್ತಕ(ಕಾಪಿ) ಗ್ರಹಣ, ಸ್ಮರಣ, ಮೊದಲಾದ ಉದ್ದೇಶಗಳನ್ನೊಳಗೊಂಡ ಅಭ್ಯಾಸ ಸಹಿತವಾಗಿ ಪಠ್ಯಪುಸ್ತಕ ರಚನೆಗೊಂಡಿದೆ. ಈ ಪುಸ್ತಕದಿಂದ ೧೯೮೬ರ ಪೂರ್ವದಲ್ಲಿನ ಪದಗಳು ಇಂದು ಹಲವು ರೀತಿಯಲ್ಲಿ ಬದಲಾವಣೆಯನ್ನು ಹೊಂದಿರುವುದನ್ನು ಕಾಣಬಹುದು. ಉದಾ:- ಅಂದಿನ 'ಕೋಪಿ ಬರಹ'ಇಂದಿನ ಕಾಪಿ ಬರಹದ ಪುಸ್ತಕವಾಗಿದೆ. ಹೀಗೆಯೇ ಕನ್ನಡ ಪ್ರಾದೇಶಿಕವಲ್ಲದ ಪ್ರದೇಶಗಳಲ್ಲಿಯ ಕನ್ನಡ ಮಕ್ಕಳ ಕಲಿಕೆಗಾಗಿ ಕನ್ನಡ ಪಠ್ಯಗಳು ರಚಿತವಾಗಿರುವುದನ್ನು ಕಾಣಬಹುದು.

ಶಾಲೆಗಳಲ್ಲಿ ವರ್ಗಭೇದಗಳನ್ನು ಗುರುತಿಸಿದ್ದಾರೆ. ಪ್ರಾಥಮಿಕ ಮತ್ತು ಪ್ರೌಢ ಎನ್ನುವ ಎರಡು ವಿಭಾಗಗಳಿದ್ದವು. ಮೂರನೇ ವಿಭಾಗ ಉನ್ನತ ಶಿಕ್ಷಣವಾಗಿದೆ. ಪ್ರಾಥಮಿಕ ಹಂತದಲ್ಲಿ ೫ ರಿಂದ ೬ವರ್ಷದೊಳಗಿನ ಮಕ್ಕಳಿಗೆ ಬಾಲವಾಡಿ ಅಥವಾ ನರ್ಸರಿ ಎನ್ನುವ ವಿಭಾಗವಿತ್ತು. ಒಂದನೇ ತರಗತಿಯಿಂದ ನಾಲ್ಕನೇ ತರಗತಿವರೆಗೆ ಪ್ರಾಥಮಿಕವೆಂದೂ ಐದರಿಂದ ಎಂಟರವರೆಗೆ ಹಿರಿಯ ಪ್ರಾಥಮಿಕವೆಂದೂ ಒಂಬತ್ತರಿಂದ ಹನ್ನೆರಡನೇ ತರಗತಿಯವರೆಗೆ ಪ್ರೌಢವೆಂದು ತಿಳಿಯಲಾಗಿತ್ತು. (ಇಂಗ್ಲೆಂಡ್ಸ್ ಎಜುಕೇಶನಲ್ ಪಾಲಿಸಿ ಇನ್ ಇಂಡಿಯಾ-ಬೈವಿ.ವಿ. ಓಕ್, ಪಬ್ಲಿಷ್‌ಡ್ ಬೈ-ಬಿ.ಜಿ.ಪಾಲ್ ಅಂಡ್ ಕಂಪನಿ. ಮದ್ರಾಸ್-೧೯೨೫)

ಪಠ್ಯಪುಸ್ತಕಗಳ ಆಯ್ಕೆಯನ್ನು ಶಿಕ್ಷಣ ಖಾತೆಯ ಸಂಚಾಲಕರು ಅಧ್ಯಕ್ಷರಾಗಿದ್ದ ಮತ್ತು ೪೦ ಜನ ಸದಸ್ಯರಿಂದ ಕೂಡಿದ 'ಮದ್ರಾಸ್ ಪಠ್ಯ ಪುಸ್ತಕ ಸಮಿತಿಯ ಅನುಮೋದಿತ ಪುಸ್ತಕಗಳ ಪಟ್ಟಿಯನ್ನು ಸಿದ್ಧ ಮಾಡುತ್ತಿತ್ತು. ಆದರೆ ಪ್ರತಿಯೊಂದು ಶಾಲೆಗೆ ಸರ್ಕಾರ ಪಠ್ಯ ಪುಸ್ತಕಗಳನ್ನು ನೇಮಿಸುತ್ತಿರಲಿಲ್ಲ. ಸಮಿತಿ ಅನುಮೋದಿಸಿದ ಪುಸ್ತಕಗಳ ಪಟ್ಟಿಯಿಂದ ಉತ್ತಮ ಪುಸ್ತಕಗಳನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ಮುಖ್ಯೋಪಾಧ್ಯಾಯರಿಗೂ, ಸಂಬಂಧಪಟ್ಟ ಆಡಳಿತ ಮಂಡಳಿಗೂ ಅವಕಾಶವಿತ್ತು.

ಸ್ಥಳಿಯ ಮಂಡಳಿಗಳು ಮತ್ತು ಪೌರಸಮಿತಿಗಳು ಪ್ರಾಥಮಿಕ ಶಾಲೆಗಳ ಪಠ್ಯಪುಸ್ತಕಗಳ ಆಯ್ಕೆಗಾಗಿ ಪ್ರತ್ಯೇಕವಾದ 'ಸ್ಥಾಯಿಸಮಿತಿ' ಗಳನ್ನು ರಚಿಸಿಕೊಂಡಿದ್ದವು. ಪಠ್ಯ ಪುಸ್ತಕಗಳನ್ನು ನೇಮಿಸುವುದರಲ್ಲಿ ಏಕರೂಪತೆಯನ್ನು ಕಾಪಾಡಿಕೊಂಡು ಬಂದಿರಲಿಲ್ಲ. ಆದರೂ ಸಹ ಒಮ್ಮೆ ಪಠ್ಯಪುಸ್ತಕಗಳೆಂದು ಸ್ವೀಕೃತವಾದ ಪುಸ್ತಕಗಳನ್ನು ಮೂರು ವರ್ಷಗಳವರೆಗೆ ಬದಲಾಯಿಸಲು ಬರುತ್ತಿರಲಿಲ್ಲವೆಂದು ಬಿ.ವಿ.ರಾಮನ್(ಅನುವಾದ-ಶ್ರೀಶಿವಶರಣಪ್ಪ) ಕರ್ನಾಟಕದ ಪರಂಪರೆ-ಸಂಪುಟ೨ರಲ್ಲಿ ವಿವರಿಸುತ್ತಾರೆ.

೧೯೪೪ರ 'ಪ್ರಾಥಮಿಕ ಶಾಲಾ ಆಡಳಿತ' ಪುಸ್ತಕದಲ್ಲಿ ಎರಡು ವರ್ಷಗಳಿಗೊಮ್ಮೆ ಬದಲಾಯಿಸಬಹುದು ಎಂದಿದೆ. ಜಿಲ್ಲಾ ವಿದ್ಯಾಧಿಕಾರಿಗಳಿಗೆ ಮತ್ತು ಇನ್‌ಸ್ಪೆಕ್ಟರುಗಳಿಗೆ ಮಹತ್ವವಾದ ಮತ್ತು ಸಮಂಜಸವಾದ ಕಾರಣಗಳನ್ನು ವಿವರಿಸಿ ಅವರ ಅನುಮತಿ ಪಡೆದು ಎರಡು ವರ್ಷಗಳ ಅವಧಿಯೊಳಗೂ ಪಠ್ಯ ಪುಸ್ತಕಗಳನ್ನು ಬದಲಾಯಿಸಬಹುದಿತ್ತು. ಪ್ರತಿವರ್ಷ ಮೇ ತಿಂಗಳಾರಂಭದಲ್ಲಿ ಪೋರ್ಟ್ ಸೈಂಟ್ ಜಾರ್ಜ್ ಗಜೇಟಿನಲ್ಲಿ ಅಂಗೀಕಾರ ಹೊಂದಿದ ಪಠ್ಯ ಪುಸ್ತಕಗಳ ಹೆಸರುಗಳಲ್ಲಿ ಪ್ರಕಟವಾಗುತ್ತಿದ್ದವು.

ಬ್ರಿಟೀಶ್ ವಿದ್ವಾಂಸರು ರೂಪಿಸಿದ ಪಠ್ಯಗಳಿಗೂ ದೇಶಿ ವಿದ್ವಾಂಸರನ್ನು ಸೇರಿಸಿಕೊಂಡು ರೂಪಿಸಿದ ಪಠ್ಯಪುಸ್ತಕಗಳಿಗೂ ಸ್ಪಷ್ಟವಾದ ವ್ಯತ್ಯಾಸಗಳು ಕಾಣಸಿಗುತ್ತವೆ. ಉದಾಹರಣೆಗೆ. ಆರ್. ನರಸಿಂಹಚಾರ್ ಅಂತವರು ಪಠ್ಯ ಪುಸ್ತಕ ರಚನೆಯಲ್ಲಿ ತೊಡಗಿಸಿಕೊಂಡ ಕಾಲದಲ್ಲಿ ಹಳೆಗನ್ನಡ ಪಠ್ಯಗಳು, ಪದ್ಯಗಳು ಪಠ್ಯ ಪುಸ್ತಕದಲ್ಲಿ ಸೇರತೊಡಗಿದವು. ಆದರೆ ಪಠ್ಯಪುಸ್ತಕ ರಚನೆಯ ಸಂದರ್ಭದಲ್ಲಿ ಅಂದಿನ ವಸಾಹತುಶಾಹಿಯ ಸಂಸ್ಕೃತಿಯುಳ್ಳ ಆಡಳಿತವನ್ನು ಪ್ರತಿ ಬಿಂಬಿಸಬೇಕಿತ್ತು. ಮಕ್ಕಳು ಬ್ರಿಟೀಶ್ ಆಡಳಿತವನ್ನು ಮೆಚ್ಚುವ, ಪ್ರಶಂಶಿಸುವ ರೀತಿಯಲ್ಲಿ ಪಠ್ಯ ಪುಸ್ತಕಗಳು ರಚನೆಯಾಗುತ್ತಿದ್ದವು. ಅಲ್ಲದೇ ಭಾರತ ಮತ್ತು ಇಂಗ್ಲೆಂಡ್ ಜನರ ಬದುಕನ್ನು ಮುಖಾ ಮುಖಿಯಾಗಿ ಮಂಡಿಸಿ ಎರಡು ದೇಶಗಳ ಸಂಸ್ಕೃತಿ, ಧಾರ್ಮಿಕತೆ, ವೈಚಾರಿಕತೆ, ವೈಜ್ಞಾನಿಕತೆಯನ್ನು ತೌಲನಿಕವಾಗಿ ನೋಡಿದಾಗ ಬ್ರಿಟೀಶ್ ದೇಶದ ವ್ಯವಸ್ಥೆಯೆ ಸರಿಯಾದುದು ಎನ್ನುವ ರೀತಿಯಲ್ಲಿ ಪಠ್ಯ ಪುಸ್ತಕಗಳು ರಚನೆಯಾಗಿರುವುದನ್ನು ನೋಡಬಹುದು. ಇದರಿಂದ ಮಕ್ಕಳು ಸಹಜವಾಗಿ ಬ್ರಿಟೀಶ್ ದೇಶದ ಸಂಸ್ಕೃತಿಯನ್ನು ಮೆಚ್ಚುವರು, ಪ್ರಶಂಸಿ ಸುವರು. ಈ ರೀತಿಯಾಗಿ ಎರಡು ದೇಶಗಳ ಬದುಕನ್ನು ಪ್ರತಿ ಬಿಂಬಿಸಿದಾಗ ಸಂಸ್ಕೃತಿಯಿಂದ ಎರಡು ಭಿನ್ನವಾದವುಗಳು ಎಂದು ಹೇಳಿದ್ದಾರೆ. ಭಾರತ ದೇಶದ ವೃತ್ತಿಗಳಿಗೆ ಪಠ್ಯದಲ್ಲಿ ಹೆಚ್ಚಿನ ಆದ್ಯತೆ ನನೀಡಲಾಗಿದೆ. ವೃತ್ತಿಗಳ ಬಗೆಗೆ ಗೌರವ ಮನೋಭಾವ ಉಂಟಾಗುವ ರೀತಿಯಲ್ಲಿ ಪದ್ಯ, ಪಾಠಗಳು ರೂಪಿತವಾಗಿರುವುದು ಗಮನಾರ್ಹವಾದ ಸಂಗತಿಯಾಗಿದೆ.

ಹೀಗೆ ಬ್ರಿಟೀಶ್ ಅಧಿಕಾರಿಗಳ ವಿದ್ವಾಂಸರಿಂದ ರಚನೆಯಾದ ಪಠ್ಯಪುಸ್ತಕ ಸಮಿತಿ ಕಾಲಾಂತರದಲ್ಲಿ ದೇಶಿಯ ವಿದ್ವಾಂಸರನ್ನು ಸೇರಿಸಿಕೊಂಡು ಪಠ್ಯಗಳನ್ನು ರಚನೆ ಮಾಡಿತು.

೨೦ನೇ ಶತಮಾನದ ಕೊನೆಯ ವೇಳೆಗೆ ಸಂಪೂರ್ಣವಾಗಿ ದೇಶೀಯ ವಿದ್ವಾಂಸರಿಂದಲೇ ಪಠ್ಯಪುಸ್ತಕಗಳು ರಚನೆಯಾಗಿರುವುದು ಕಂಡು ಬರುತ್ತದೆ. ಉದಾ.ಗೆ. ಶಿವರಾಮ ಕಾರಂತ, ಪಂಜೆ ಮಂಗೇಶರಾಯ, ಕಯ್ಯಾರ ಕಿಞ್ಞಣ್ಣ ರೈ ಪಠ್ಯ ಪುಸ್ತಕಗಳನ್ನು ರಚಿಸಿದರು. ಇದರಿಂದ ಬಹುತೇಕವಾಗಿ ಕನ್ನಡನಾಡಿನ ಸಂಸ್ಕೃತಿ, ಧಾರ್ಮಿಕತೆ, ವೈಚಾರಿಕತೆ, ಹಾಗೂ ವೃತ್ತಿಗಳ ಬಗೆಗೆ ಪಠ್ಯಗಳಲ್ಲಿ ಪಠ್ಯ ಕ್ರಮವಾಗಿ ರಚನೆ ಮಡಿ ಕರ್ನಾಟಕದ ಸಾಹಿತ್ಯ, ಸಂಸ್ಕೃತಿ ನಾಡು ನುಡಿಯನ್ನು ಪ್ರತಿಬಿಂಬಿಸಿ ಕನ್ನಡ ಜನತೆಯನ್ನು ಜಾಗೃತಗೊಳಿಸುವ ಪ್ರಯತ್ನಗಳು ಈ ಪಠ್ಯ ಪುಸ್ತಕಗಳಿಂದ ಸ್ಪಷ್ಟವಾಗುತ್ತದೆ. ಈ ರೀತಿಯಾಗಿ ಕಾಲದಿಂದ ಕಾಲಕ್ಕೆ ಬದಲಾದ ಕನ್ನಡ ಪಠ್ಯಪುಸ್ತಕಗಳ ಚರಿತ್ರೆ, ಆಧುನಿಕ ಶಿಕ್ಷಣ ಪದ್ಧತಿ ಪ್ರಾರಂಭವಾದ ಮೇಲೆ ಪಠ್ಯ ಪುಸ್ತಕಗಳ ಪೂರೈಕೆ ಶಾಲೆಗಳಲ್ಲಿ ಶಿಕ್ಷಣ ವ್ಯವಸ್ಥೆಗಳಲ್ಲಿ ಅತ್ಯಂತ ಅಗತ್ಯವಾದ ವಿಚಾರವಾಗಿ ಬೆಳೆಯಿತು. ಆಧುನಿಕ ಪಠ್ಯಪುಸ್ತಕಗಳ ಆಂತರಿಕ, ಬಾಹ್ಯರಚನೆಯಲ್ಲಿ ಗಮನಾರ್ಹವಾದ ಬದಲಾವಣೆಯಾಗಿರುವುದು ಸ್ಪಷ್ಟವಾಗುತ್ತದೆ. ಈ ರೀತಿಯಾಗಿ ಕಳೆದ ೧೫೦ ವರ್ಷಗಳಲ್ಲಿ ಬಂದ ಕನ್ನಡ ಪಠ್ಯ ಪುಸ್ತಕಗಳು ಇಂದು ಗಣಕೀಕೃತವಾಗಿ ಪಠ್ಯ ಪುಸ್ತಕಗಳನ್ನು ಶೈಕ್ಷಣಿಕ ಮನೋವಿಜ್ಞಾನಿಗಳು, ಶಿಕ್ಷಣ ಚಿಂತಕರು, ಭಾಷಾತಜ್ಞರ, ಪ್ರಭಾವದಿಂದಾಗಿ ಪಠ್ಯಪುಸ್ತಕದ ರಚನೆ ವ್ಯವಸ್ಥೆಯಲ್ಲಿ ಅಗತ್ಯತೆಗನುಗುಣವಾಗಿ ರಚನೆಯಾಗಿರುವುದು ಕಂಡು ಬರುತ್ತದೆ.

**೩.೩. ಕನ್ನಡ ಪಠ್ಯಕ್ರಮದ ಇತಿಹಾಸ**

ಪ್ರಾಥಮಿಕ ಕನ್ನಡಭಾಷಾ ಕಲಿಕೆಯ ಪಠ್ಯ ಕ್ರಮದ ಪ್ರಾಚೀನತೆ ನಿಖರವಾಗಿ ದೊರೆಯುವುದಿಲ್ಲ. ಆದರೆ ವೇದ, ಬೌದ್ಧ, ಮುಸ್ಲಿಂ ಕಾಲದ ಶಿಕ್ಷಣ ಹಾಗು ಶಾಸನಗಳಲ್ಲಿ ದೊರಕುವ ಕನ್ನಡ ಮಾಹಿತಿಯಿಂದ ಪ್ರಾಚೀನ ಕನ್ನಡ ಸಾಹಿತ್ಯ, ಭಾಷಾ ವಿದ್ವಾಂಸರ ಕೃತಿಗಳಿಂದ ಕನ್ನಡ ಕಲಿಸುವ ಪಠ್ಯಕ್ರಮವಿರುವುದಕ್ಕೆ ಪುಷ್ಟೀಕರಣ ನೀಡುತ್ತದೆ. ಇದಕ್ಕೆ ಕಾರಣ ಶಿಕ್ಷಣದ ಪ್ರಾಚೀನತೆಯ ಪ್ರಾರಂಭದಲ್ಲಿ ಮೌಖಿಕ ಪರಂಪರೆಯ ಪಠ್ಯಕ್ರಮವಿರುವುದರ ಬಗ್ಗೆ ಪರೋಕ್ಷವಾಗಿ ದಾಖಲೆಗಳು ಸಿಗುತ್ತವೆ. ಆದ್ದರಿಂದ ಕನ್ನಡ ಪಠ್ಯಕ್ರಮವಿದೆಯೆಂದು ಹೇಳಬಹುದೇ ಹೊರತು ನಿಖರವಾಗಿ ಈ ಪಠ್ಯಕ್ರಮವನ್ನೇ ಕನ್ನಡದ ಕಲಿಕೆಯಲ್ಲಿ ಇಡಲಾಗಿತ್ತು. ಎಂದು ಹೇಳುವುದು ಕಷ್ಟಕರವಾಗಬಲ್ಲದು.

ಪ್ರಾಚೀನತೆಯ ಪಠ್ಯಕ್ರಮದ ಇತಿಹಾಸ ನಿರೂಪಿಸುವ ಪಠ್ಯಕ್ರಮ ದೊರಕದಿದ್ದರೂ ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಕನ್ನಡ ಪಠ್ಯಕ್ರಮವನ್ನು ಹೇಗೆ ನಿರೂಪಿಸಿದರು ಎಂಬ ಅಂಶಗಳು ಸ್ಪಷ್ಟವಾಗುತ್ತದೆ.

ಹತ್ತೊಂಬತ್ತನೇ ಶತಮಾನದ ವೇಳೆಗೆ ಬ್ರಿಟೀಷರು ಭಾರತದಲ್ಲಿ ಸಂಪೂರ್ಣವಾಗಿ ಪ್ರಭುತ್ವವನ್ನು ಪಡೆದವರಾಗಿದ್ದರು. ಭಾರತದಲ್ಲಿ ಶಿಕ್ಷಣದ ಪಠ್ಯಕ್ರಮ ಬದಲಾವಣೆಗೆ

ಮುಂದಾದರು. ಶಾಲಾ ಪಠ್ಯಕ್ರಮದ ಅವಶ್ಯಕತೆ ಅಗತ್ಯತೆಯನ್ನು ಅರಿತು ಮಿಷನರಿಗಳು, ಕ್ರೈಸ್ತ ಅಧಿಕಾರಿಗಳು, ದೇಶಿಯ ವಿದ್ವಾಂಸರು ಬೇರೆ ಬೇರೆ ಮಾದರಿಗಳಲ್ಲಿ ಪಠ್ಯಕ್ರಮವನ್ನು ರೂಪಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಇದರ ಫಲವಾಗಿಯೇ ಪ್ರಾಚೀನ ಕಾಲದ ಮಹಾಕಾವ್ಯಗಳು, ಪುರಾಣಗಳು ಮತ್ತು ಇವುಗಳ ಕೆಲವು ಆಯ್ದ ಭಾಗಗಳು ಶೈಕ್ಷಣಿಕ ಪಠ್ಯಕ್ರಮದಲ್ಲಿ ಸೇರಲ್ಪಟ್ಟಿದ್ದವು. ಇದರಿಂದ ಶಾಲಾ ಪಠ್ಯಕ್ರಮವು ಹೊಸ ಸಾಧ್ಯತೆಯೊಂದನ್ನು ಕಂಡು ಕೊಂಡಿತು ಎಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಸುಮಾರು ೧೮೬೨ ರಿಂದ ೧೮೬೬ರ ಸಂದರ್ಭದಲ್ಲಿ 'ಕಥಾಮಂಜರಿ' 'ರಾವಣ ದಿಗ್ವಿಜಯ,' 'ಚನ್ನಬಸವ ಪುರಾಣ'ದ ಕೆಲವು ಭಾಗಗಳು, ಕಥಾಸಪ್ತತಿಗಳು, ಶಾಲಾ ಪಠ್ಯಕ್ರಮವಾಗಿ ಸೇರಿದವು. ಇದರ ಜೊತೆಗೆ 'ಕಲಾವತೀ ಪರಿಣಯ' 'ಮಿತ್ರಾವಿಂದ ಗೋವಿಂದ', 'ದಮಯಂತೀ ಸ್ವಯಂವರ', 'ಅದ್ಭುತ ರಾಮಾಯಣ' ಇತ್ಯಾದಿ ಕೃತಿಗಳು ಸಹ ಶಾಲಾ ಪಠ್ಯಕ್ರಮದಲ್ಲಿ ಸೇರಿರುವುದನ್ನು ಬ್ರಿಟೀಶರ ಕಾಲದ ಪಠ್ಯ ಪುಸ್ತಕಗಳಿಂದ ಸ್ಪಷ್ಟವಾಗುತ್ತದೆ.

ಬ್ರಿಟೀಶರ ಕಾಲದ ಪಠ್ಯಕ್ರಮ ರಚನೆಯು ಪ್ರಾರಂಭ ಘಟ್ಟದಲ್ಲಿ ಭಾಷಾ ಚಿಂತಕರ ಚಟುವಟಿಕೆಗಳ ಮೂಲಕವೇ ಎಂಬುದು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಕೆಲವು ಪಠ್ಯಗಳು ಪಠ್ಯಕ್ರಮಕ್ಕೆ ಸೇರಿರುವುದನ್ನು ಚರ್ಚಿಸಬಹುದು. ಇದರಲ್ಲಿ ಮುಖ್ಯವಾದವುಗಳೆಂದರೆ 'ಸಂಣಕರ್ಣಾಟಕ ಕಾವ್ಯಮಾಲೆ' (೧೮೬೫) ಮತ್ತು 'ಪ್ರಾಕ್ಕಾವ್ಯ ಮಾಲಿಕೆ' (conarese poftical Anthology 1965) ಇತ್ಯಾದಿ. ಸಂಣಕರ್ಣಾಟಕ ಕಾವ್ಯಮಾಲೆಯಲ್ಲಿ ಬಸವಪುರಾಣ, ಪ್ರಭುಲಿಂಗ ಲೀಲೆ, ಚಂದ್ರ ಪ್ರಭಾಪುರಾಣ, ಜಗನ್ನಾಥ ವಿಜಯ, ಭಾಗವತ, ಮುಂತಾದ ಕೃತಿಗಳಿಂದಾಯ್ದ ಕಾವ್ಯ ಭಾಗಗಳಿವೆ. ಈ ಕಾವ್ಯ ಭಾಗಗಳನ್ನು ವಿವಿಧ ವಿಷಯಗಳಿಗೆ ಅನುಸಾರವಾಗಿ ಆಯ್ಕೆ ಮಾಡಿ ಕೊಂಡಿರುವುದಲ್ಲದೆ ಅವುಗಳಿಗೆ ಟೀಕು ಮತ್ತು ಕಠಿಣ ಪದಗಳಿಗೆ ಅರ್ಥವನ್ನು ಸೂಚಿಸಿದ್ದಾರೆ. ಆದರೆ ಇದಕ್ಕೆ ಪೂರ್ವ ಪಠ್ಯಕ್ರಮಗಳಲ್ಲಿ ದೊರಕುವುದಿಲ್ಲ.(ದೊರೆತ ಪುಸ್ತಕಗಳ ಆಧಾರಿತವಾಗಿ)

ಮೇಲಿನ ಪಠ್ಯಕ್ರಮದ ಸೇರ್ಪಡೆಯ ಹೊಸ ಮಾದರಿಯನ್ನು ಶಾಲಾ ಪಠ್ಯಕ್ರಮದ ವಸ್ತುವಾಗಿ ಏಕೆ ಸಿದ್ಧಪಡಿಸಿದರು ಎಂಬ ಪ್ರಶ್ನೆ ಬರುವುದು ಸಹಜ. ಪ್ರಾಚೀನ ಕಾವ್ಯ ಪ್ರಕಾರದ ಭಾಗಗಳನ್ನು ಆಯ್ದುಕೊಂಡು ಶಿಕ್ಷಣದ ಸಂದರ್ಭದಲ್ಲಿ ಹೊಸ ಓದಿಗೆ ಒಡ್ಡುವ, ಆ ಮೂಲಕ ಅದರ ಅರ್ಥ ವ್ಯಾಪ್ತಿಯಲ್ಲಿ ವಿಸ್ತರಿಸುವ ಮತ್ತು ಸೀಮಿತಗೊಳಿಸುವ ಪ್ರಯತ್ನಗಳು ನಡೆದವು. ಇನ್ನೊಂದೆಡೆ ಅವುಗಳಿಗೆ ಬರೆದಿರುವ ಟೀಕು ಮತ್ತು ಪದಗಳ ಅರ್ಥ ಕಾವ್ಯವನ್ನು ಮರು ರೂಪಿಸಿಕೊಂಡು ಅವುಗಳಿಗೆ ನಿರ್ದಿಷ್ಟವಾದ ಅರ್ಥ ಕೊಡುವ ಕೆಲಸಗಳು ನಡೆಯಲಾರಂಭಿಸಿದವು. ಇದರಿಂದ ಸಾಹಿತ್ಯಪರಂಪರೆಯ ಕಾವ್ಯಗಳು ಪಠ್ಯಕ್ರಮದ ಹಿನ್ನೆಲೆಯಲ್ಲಿ ಅಧ್ಯಯನಕ್ಕೊಳಪಡಿಸುವ ಸಾಧ್ಯತೆಗಳನ್ನು ಕಂಡುಕೊಂಡವು ಎಂದು ಹೇಳಬಹುದು.

ಪಠ್ಯ ಪುಸ್ತಕಗಳನ್ನು ರಚಿಸುವ ಸಂದರ್ಭದಲ್ಲಿ ಬ್ರಿಟೀಷರು ಸ್ಥಾಪಿಸಿದ್ದ ಮಿಷನರಿಗಳ ಪಾತ್ರ ಮಹತ್ವದ್ದು. ಆದರೆ ಈ ಮಿಷನರಿಗಳು ಯಾವ ಹಿನ್ನೆಲೆಯಲ್ಲಿ ಕೃತಿಗಳನ್ನು ಆಯ್ದುಕೊಂಡರು ಮತ್ತು ಹೇಗೆ ಅವುಗಳನ್ನು ವಿಂಗಡಿಸಿಕೊಂಡು ಪಠ್ಯಕ್ರಮದಲ್ಲಿ ಸೇರಿಸಿ ಕೊಂಡಿದ್ದರು ಎಂಬುದರ ಬಗ್ಗೆ ಖಚಿತ ಮಾಹಿತಿ ದೊರಕುವುದು ಕಷ್ಟಕರ. ಆದರೂ ಲಭ್ಯ ಶಾಲಾ ಪಠ್ಯಕ್ರಮಗಳ ಪಠ್ಯಕ್ರಮವನ್ನು ಗಮನಿಸಿ ಹಾಗೂ ಅವುಗಳ ಬಗ್ಗೆ ಬಂದಿರುವ ಅಧ್ಯಯನಗಳ ಮಾಹಿತಿಯನ್ನು ಆಧರಿಸಿ ಒಂದೆರಡು ಸಂಗತಿಗಳನ್ನು ವಿಶ್ಲೇಷಿಸಲು ಸಾಧ್ಯವಿದೆ. ೧೮೬೫ರಲ್ಲಿ ಸಿದ್ಧಗೊಂಡ 'ಸಂಣಕರ್ಣಾಟಕ ಕಾವ್ಯಮಾಲೆಯಲ್ಲಿ, ಕೇವಲ ಕಾವ್ಯಭಾಗಗಳ ಆಯ್ದ ಭಾಗಗಳನ್ನು ಮತ್ತು ಅವುಗಳಿಗೆ ಬರೆದ ಟೀಕು ಮತ್ತು ಪದಗಳ ಅರ್ಥ ಇರುವುದನ್ನು ಕಾಣುತ್ತೇವೆ. ಆದರೆ ೧೮೬೮ ರಲ್ಲಿ ವರ್ಥರ ಸಂಪಾದಿಸಿದ 'ಪ್ರಕಾವ್ಯಮಾಲಿಕೆ'ಗಿಂತ ಭಿನ್ನವಾದ ತಳಹದಿಯಲ್ಲಿ ರಚನೆಯಾಗಿರುವುದನ್ನು ಕಾಣುತ್ತೇವೆ. ಇಲ್ಲಿರುವ ಪಠ್ಯಕ್ರಮದ ಧಾರ್ಮಿಕ ನೆಲೆಯಲ್ಲಿ ವಿಭಜನೆಗೊಂಡಿರುವುದು ಈ ಕೃತಿಯಲ್ಲಿನ ಅರ್ಥ ಮತ್ತು ಭಾವಾನುವಾದ ಸ್ಪಷ್ಟಪಡಿಸುತ್ತವೆ.

'ಪ್ರಕಾವ್ಯ ಮಾಲಿಕೆಯಲ್ಲಿ' ಕಾವ್ಯ ಭಾಗಗಳನ್ನು ಧರ್ಮದ ಆಧಾರಿತವಾಗಿ ಆಯ್ಕೆ ಮಾಡಿಕೊಂಡು ವಿಂಗಡಿಸಿಕೊಳ್ಳಲಾಗಿದೆ. ಬ್ರಾಹ್ಮಣ ಮತಕ್ಕೆ ಜೈಮಿನಿ ಭಾರತ, ಆದಿಪುರಾಣ(?) ಭಾಗವತ ದಾಸರಪದಗಳನ್ನು ವೀರಶೈವ ಮತಕ್ಕೆ ಬಸವಪುರಾಣ, ಚನ್ನಬಸವ ಪುರಾಣ, ಸರ್ವಜ್ಞನ ವಚನಗಳು ಮತ್ತು ರಾಜಶೇಖರ ವಿಳಾಸದಿಂದಾಯ್ದು ಪದ್ಯಗಳನ್ನು ಆಯ್ಕೆ ಮಾಡಿಕೊಂಡರೆ ಜೈನ ಧರ್ಮಕ್ಕೆ ಸಂಬಂಧಪಟ್ಟಂತೆ ಶಾಸ್ತ್ರಸಾರ ಮತ್ತು ಧರ್ಮ ಪರೀಕ್ಷೆಯ ಆಯ್ದ ಭಾಗಗಳನ್ನು ಅಳವಡಿಸಿದೆ. ದೇವಸ್ತೋತ್ರ, ಇಹಪರ ಭೇದ, ಸಾಯಂಕಾಲದ ಗೀತೆಗಳ ಕೆಲವು ಭಾಗಗಳನ್ನು ಕ್ರೈಸ್ತ ಮತ ಧರ್ಮಕ್ಕೆ ಅನುಗುಣವಾಗಿ ಆಯ್ಕೆ ಮಾಡಿಕೊಂಡಿ ರುವುದು ಈ ಕಾಲಘಟ್ಟದ ಶಾಲಾ ಪಠ್ಯಕ್ರಮದ ಉದ್ದೇಶವನ್ನು ಸ್ಪಷ್ಟಪಡಿಸುತ್ತವೆ. ಒಟ್ಟಾರೆಯಾಗಿ ಈ ಪಠ್ಯಕ್ರಮ ಧಾರ್ಮಿಕ ಹಿನ್ನೆಲೆಯಲ್ಲಿ ರಚನೆಯಾಗಿವೆ.

ಬ್ರಿಟೀಷರ ಆಳ್ವಿಕೆಯ ಸಂದರ್ಭದಲ್ಲಿ ಪಠ್ಯಕ್ರಮ ಇಂಗ್ಲೀಷ್ ಮಾಧ್ಯಮದಲ್ಲಿ ಕಂಡುಬರುತ್ತದೆ. ಕನ್ನಡ ಪಠ್ಯಗಳನ್ನೇ ಇಂಗ್ಲೀಷ್‌ಗೆ ಅನುವಾದ ಮಾಡಿ ಕಲಿಸಿದ ನಿದರ್ಶನಗಳು ಕಂಡುಬರುತ್ತವೆ. ನಂತರ ಪ್ರಾದೇಶಿಕತೆ ಭಾಷೆಯಲ್ಲಿ ಪಠ್ಯಕ್ರಮಗಳು ರಚನೆಯಾದವು. ಭಾಷಾ ಚಟುವಟಿಕೆಯು ಸಹ ಪ್ರಾರಂಭದಲ್ಲಿ ಇಂಗ್ಲೀಷ್ ಮಾಧ್ಯಮದಲ್ಲಿ ಕಂಡುಬರುತ್ತದೆ. ನಂತರ ಪ್ರಾದೇಶಿಕತೆಯಲ್ಲಿಯೇ ಕಠಿಣ ಪದಗಳ ಅರ್ಥ, ಭಾವಾನುವಾದ, ಪ್ರಶ್ನೋತ್ತರಗಳು, ಪಠ್ಯಕ್ರಮದ ಅಭ್ಯಾಸ, ಚಟುವಟಿಕೆಯಲ್ಲಿ ಕಾಣಿಸಿಕೊಂಡಿವೆ.

ಆಂಗ್ಲರ ಆಡಳಿತದ ಸಂದರ್ಭದಲ್ಲಿ ರಚನೆಯಾದ ಪ್ರಾಥಮಿಕ ಕನ್ನಡ ಭಾಷಾ ಪಠ್ಯಪುಸ್ತಕಗಳು ನನ್ನ ಅಧ್ಯಯನ ಸಂದರ್ಭದಲ್ಲಿ ದೊರೆತಿದ್ದು ಅವುಗಳಲ್ಲಿನ ಪಠ್ಯಕ್ರಮದ

ವಿಶ್ಲೇಷಣೆಯನ್ನು ಮಾಡುವ ಪ್ರಯತ್ನವನ್ನು ಮಾಡಿರುತ್ತೇನೆ. ಈ ಅಧ್ಯಯನವು ಕಾಲಮಿತಿಗೆ ಒಳಪಟ್ಟಿರುವುದರಿಂದ ಕೆಲವನ್ನು ಮಾತ್ರ ಪಠ್ಯಕ್ರಮದ ಹಿನ್ನಲೆಯಲ್ಲಿ ಈ ಕೆಳಗಿನಂತೆ ಚರ್ಚೆ ಮಾಡಿರುತ್ತೇನೆ.

ಬ್ರಿಟೀಷರ ಕಾಲದ ಪ್ರಾಥಮಿಕ ಪಠ್ರಕ್ರಮವು ಬಾಲದರ್ಜೆಯ ಪಠ್ಯವನ್ನು ಪ್ರಾಥಮಿಕ ಪಠ್ಯಕ್ರಮ, ಹಿರಿಯ ಪ್ರಾಥಮಿಕ ಹಂತದ ಪಠ್ಯಕ್ರಮಗಳೆಂದು ಗುರುತಿಸಬಹುದು.

ಬಾಲಕ ದರ್ಜೆಯ ಪಠ್ಯಗಳು ಅಕ್ಷರಮಾಲೆ, ಬಾಲಶಿಕ್ಷೆ. ಕನ್ನಡ ಬಾಲಬೋಧೆ, ಕರ್ಣಾಟಕ ಬಾಲಬೋಧೆ ಅಂಕಲಿಪಿ, ಚಿಕ್ಕವರಿಗೆ ತಕ್ಕಂಥ ಪಾಠಗಳು, ಕನ್ನಡ ಮೂಲ ಪಾಠಕ, ಕನ್ನಡ ಮೊದಲನೇ ಪಾಠಕ ಭಾಗ-೧ ಎನ್ನುವ ಇತ್ಯಾದಿ ಹೆಸರುಗಳು ಇದ್ದವು. ಎಂಬುದು ಮಂಗಳೂರಿನ ಬಾಷಲ್‌ಮಿಶನ್‌ನಲ್ಲಿ ಸಂಗ್ರಹಿಸಿದ ಶಾಲಾ ಪಠ್ಯಗಳ ಮೈಕ್ರೋ ಫಿಲ್ಮಿನಿಂದ ತಿಳಿದು ಬರುತ್ತದೆ. ಈ ಪಠ್ಯಕ್ರಮದ ಜೊತೆಗೆ ಕಲಿಸುವವನಿಗೆ ಸೂಚನೆಗಳನ್ನು ಕೊಡಲಾಗಿದೆ. ಈ ವಿಚಾರವನ್ನು ಪಠ್ಯದ ಪ್ರಾರಂಭ ಇಲ್ಲವೇ ಅಂತ್ಯದಲ್ಲಿ ಕೊಡಲಾಗಿದೆ. ಈ ವಿವರಗಳ ಕೈಪಿಡಿಯಿಂದ ಬೋಧಕನು ಪಠ್ಯಕ್ರಮವನ್ನು ಹೇಗೆ ಬಳಸಬೇಕು ಮತ್ತು ಬೋಧನೆಯು ಪರಿಣಾಮಕಾರಿಯಾಗಲು ಕಲಿಕಾ ಚಟುವಟಿಕೆಗಳನ್ನು ಹೇಗೆ ನಡೆಸಿಕೊಂಡು ಹೋಗಬೇಕು ಎಂಬುದನ್ನು ತಿಳಿಯಲು ಈ ವಿವರಗಳು ಸಹಕಾರಿಯಾದವುಗಳಾಗಿವೆ.

ಬಾಲಕ ದರ್ಜೆಯ ಪಠ್ಯಗಳ ಆರಂಭಿಕ ರಚನೆಯಲ್ಲಿ ವರ್ಣಮಾಲೆಯ ಅಕ್ಷರಗಳನ್ನು ಮಕ್ಕಳಿಗೆ ಪರಿಚಯಿಸಲು ಕ್ರಮಾನುಗತವಾಗಿ ಕೊಟ್ಟಿರುವುದನ್ನು ಕಾಣುತ್ತೇವೆ. ನಂತರ ಪಠ್ಯಕ್ರಮದ ಬೆಳವಣಿಗೆಯಲ್ಲಿ ಕೆಲವು ಅಕ್ಷರಗಳನ್ನು ಮಾತ್ರ ಪರಿಚಯಿಸಲು ಹಲವು ಪ್ರಯೋಗಗಳನ್ನು ಮಾಡಿರುವುದನ್ನು ಕಾಣುತ್ತೇವೆ. ಹೀಗೆ ಅಕ್ಷರಗಳ ಪರಿಚಯಕ್ಕಾಗಿ, ಪ್ರಯೋಗಕ್ಕಾಗಿ ಬೋಧನಾ ವಿಧಾನದಲ್ಲಿ ಬದಲಾವಣೆಗಳು ನಡೆದಂತೆ, ಪಠ್ಯಕ್ರಮದ ರಚನೆಯ ವ್ಯವಸ್ಥೆಯಲ್ಲಿಯೂ ಬದಲಾದ ಅಂಶಗಳನ್ನು ಕಾಣಬಹುದು. (ಕನ್ನಡ ಅಕ್ಷರಮಾಲೆ – ೧೮೪೪ ಅಕ್ಷರಮಾಲೆಯ ಅಕ್ಷರಗಳಿಗನುಸಾರವಾಗಿ–ಅಕ್ಷರ ಪದ್ಧತಿ)

ಬಾಲದರ್ಜೆಯ ಪಠ್ಯಕ್ರಮ ಆರಂಭಿಕ ಹಂತದಲ್ಲಿ ಕಲ್ಲಚ್ಚಿನ ಮೂಲಕ ಮುದ್ರಣಗೊಳ್ಳುತ್ತಿದ್ದವು. ಉದಾ: ೧೮೪೪ ರ ಅಕ್ಷರಮಾಲೆಯ ಪಠ್ಯಕ್ರಮವನ್ನು ಗಮನಿಸಬಹುದು. ಈ ಪುಸ್ತಕದ ಪಠ್ಯಕ್ರಮವು ಮೋಡಿ ರೂಪದ ಬರಹದಲ್ಲಿ ರಚನೆಯಾಗಿರುವುದನ್ನು ಗುರುತಿಸಬಹುದು.

ಅ ([illegible]) ಈ ([illegible]) ಋ (ಬು)

ೠ (ಬೂ) ಐ ([illegible]) ಓ ([illegible])

ಅಃ ([illegible]

ಘ (ಘ) ಜ (ಜ) ಢ (ಢ)
ಪ (ಪ) ಫ (ಫ) ಭ (ಭ)
ಷ (ಷ) ಸ (ಸ) ಹ (ಹ)

ಈ ರೀತಿಯಾಗಿ ಅಕ್ಷರಗಳ ರೂಪಗಳು ಭಿನ್ನವಾಗಿ ಹತ್ತು ಹದಿಮೂರು ವರುಷಗಳ ತನಕ ಪಠ್ಯಕ್ರಮದಲ್ಲಿ ರಚನೆಯ ವಿಧಾನವನ್ನು ಕಾಣಬಹುದಾಗಿದೆ. ಈ ಬಾಲದರ್ಜೆಯ ಪಠ್ಯಕ್ರಮವು ಮದ್ರಾಸ್ ಪ್ರಾಂತ್ಯದ ಸಾರ್ವಜನಿಕ ಶಿಕ್ಷಣ ಇಲಾಖೆಯ ಅನುಮತಿ ಪಡೆದು ಪಠ್ಯಕ್ರಮ ರಚನೆಯಾಗುತ್ತಿತ್ತು. ಈ ಪಠ್ಯಕ್ರಮವು ಒಂದು ಪ್ರಾಂತ್ಯದಿಂದ ಇನ್ನೊಂದು ಪ್ರಾಂತ್ಯಕ್ಕೆ ಸಲ್ಲುತ್ತಿತ್ತು ಎಂಬುದು ಈ ಕಾಲಘಟ್ಟದ ಎಲ್ಲಾ ಪ್ರಾಂತ್ಯದ ಪಠ್ಯಗಳಿಂದ ತಿಳಿದು ಬರುತ್ತವೆ. ಈ ಪಠ್ಯಕ್ರಮವು ಪುಟದ ಮಿತಿಗೆ ಒಳಪಟ್ಟಿರಲಿಲ್ಲವೆಂಬುದು ಈ ಪುಸ್ತಕಗಳಿಂದ ಸ್ಪಷ್ಟವಾಗುತ್ತದೆ. ೨೭ ಪುಟಗಳಿಂದ ಅರವತ್ತೇಳು ಪುಟದವರೆಗೂ ಪಾಠಗಳು ಇದ್ದಂತೆ ಭಾಸವಾಗುತ್ತದೆ. ಹಾಗೆಯೇ ಪಾಠಗಳನ್ನು ಮಿತಿಗೆ ಒಳಪಡಿಸಿರಲಿಲ್ಲ. ಒಂದು ಪಠ್ಯದಲ್ಲಿ ನಾಲ್ಕು ಪಾಠಗಳಿಂದ ಪಠ್ಯಕ್ರಮ ರಚನೆಯಾಗಿದ್ದರೆ, ಇನ್ನೊಂದು ಪಠ್ಯದಲ್ಲಿ ಎಂಬತ್ಮೂರು ಪಾಠಗಳ ವ್ಯಾಪ್ತಿಯಿರುವ ಪಠ್ಯಕ್ರಮವನ್ನು ಗುರುತಿಸಬಹುದು. "ಈ ರೀತಿಯಾಗಿ ಪಠ್ಯಕ್ರಮದ ವ್ಯಾಪ್ತಿ ಹೆಚ್ಚಾಗಿರಲು ಕಾರಣ ಮಕ್ಕಳು ಇದರಲ್ಲಿನ ಅರ್ಧದಷ್ಟಾದರೂ ಕಲಿತುಕೊಳ್ಳಲಿ ಎಂಬ ಉದ್ದೇಶ ಮಾತ್ರ ಇದ್ದಿತು ಎಂಬುದನ್ನು ಬಿ.ಎಂ.ಶ್ರೀ ಅವರ ಶಾಲಾ ಪಠ್ಯ ಪುಸ್ತಕಗಳ ರಚನೆಯ ಮುನ್ನುಡಿಯಲ್ಲಿ ದೊರೆಯುತ್ತದೆ."

ಬಾಲದರ್ಜೆಯಲ್ಲಿ ಅಕ್ಷರಾಭ್ಯಾಸದೊಂದಿಗೆ ಗಣಿತದ ವಿಚಾರ ಕೊಟ್ಟಿರುವುದನ್ನು ಗುರುತಿಸಬಹುದು. ಮುಖ್ಯವಾಗಿ ಮಗ್ಗಿಯಪಾಠ ಕ್ರಿ.ಶ.೧೮೪೪ರಲ್ಲೇ ಚಾಲ್ತಿಯಲ್ಲಿದ್ದುದನ್ನು 'ಅಕ್ಷರಮಾಲೆ' ಪುಸ್ತಕಗಳಿಂದ ಗುರುತಿಸಲು ಸಾಧ್ಯವಾಗಿದೆ. ಈ ಮಗ್ಗಿ ಅಕ್ಷರಗಳ ರೂಪಗಳು ಭಿನ್ನವಾಗಿ ಮೂಡಿ ಬಂದಿರುವುದನ್ನು ಕಾಣಬಹುದು. ಈ ಪಠ್ಯಕ್ರಮದಲ್ಲಿ(ಅಂ)(ಆ)(ಈ) (ಈ) (ಖ) (ಭ) (ಮಾ) (ಹ) ಈ ಅಕ್ಷರಗಳನ್ನು ಹೊರತುಪಡಿಸಿ ಉಳಿದ ವರ್ಣಗಳು ಇತ್ತೀಚಿನ ಪಠ್ಯಕ್ರಮದ ಅಕ್ಷರಗಳ ಬಳಕೆಯಲ್ಲಿರುವಂತೆಯೇ ರಚನೆಗಳನ್ನು ಇಲ್ಲಿ ಕಾಣಬಹುದು. ಈ ರೀತಿಯ ಅಕ್ಷರ ರಚನೆಯ ಕ್ರಮಣಿಕೆಯ ರೂಪಗಳನ್ನು ಕ್ರಿ.ಶ.೧೮೭೯ರವರೆಗೂ ಉಳಿದುಕೊಂಡು ಬಂದಿರುವುದನ್ನು ಭಾಷಾಮಿಷನರಿ (ಮಂಗಳೂರು) ಸಂಗ್ರಹಿಸಿದ ಮೈಕ್ರೋಫಿಲ್ಮ್‌ನಿಂದ ಸ್ಪಷ್ಟವಾಗುತ್ತದೆ.

ಮೈಕ್ರೋಫಿಲ್ಮ್‌ನಲ್ಲಿ ಸಂಗ್ರಹಿಸಿದ ಬಾಲದರ್ಜೆಯ ಪಠ್ಯಕ್ರಮವನ್ನು ಗಮನಿಸಿದಾಗ ಅಕ್ಷರ ಕಲಿಕೆಯ ಪ್ರಚೋದನೆಗಿಂತ ಆಡು ಮಾತಿಗೂ ಪಠ್ಯಕ್ರಮಕ್ಕೂ ಸಂಬಂಧ ಬೆಳೆದು ಈ ವಿಧಾನದ ಮೂಲಕ ಬರವಣಿಗೆ ಹತ್ತಿರವಾಗಬೇಕು ಎನ್ನುವ ನಿಟ್ಟಿನಲ್ಲಿ ರಚನೆಯಾಗಿದೆ. ಇದರಿಂದ ಕಲಿಕೆ ಅರ್ಥಪೂರ್ಣವಾಗಿ ಮಕ್ಕಳು ಆಸಕ್ತಿಯಿಂದ ಕಲಿತುಕೊಳ್ಳಬಹುದು.

ಅಂದರೆ ಅಕ್ಷರಾಭ್ಯಾಸದಿಂದ ಪ್ರಾರಂಭವಾದ ಪಠ್ಯಕ್ರಮ ಮಾತಿಗೆ, ಓದಿಗೆ ಮತ್ತು ಬರವಣಿಗೆಗೆ ಅವಕಾಶ ಕೊಟ್ಟಿತು ಎಂಬುದನ್ನು ಗುರುತಿಸಬಹುದು. ಒಟ್ಟಾರೆಯಾಗಿ ಬಾಲದರ್ಜೆಯ ಪಠ್ಯಕ್ರಮವು ಅಕ್ಷರ ಅಭ್ಯಾಸದ ಜೊತೆಗೆ ಆಲಿಸುವ ಮತ್ತು ಮಾತನಾಡುವ ಕೌಶಲ್ಯಗಳ ಬೆಳವಣಿಗೆಯ ದೃಷ್ಟಿಯಿಂದ ರಚನೆಯಾಗಿರುವುದು ಸ್ಪಷ್ಟವಾಗುತ್ತದೆ.

'ಕನ್ನಡ ಮೂಲ ಪಾಠಕ'(೧೮೮೫) ಎಂಬ ಪುಸ್ತಕವು ಮೈಕ್ರೋಫಿಲ್ಮ್‌ನಲ್ಲಿ ದಾಖಲಾಗಿದೆ. ಇದರಲ್ಲಿ ಹಲವು ಚಿತ್ರಗಳನ್ನು ಕಾಣಬಹುದು. ಈ ವಿಧಾನದ ಸೇರ್ಪಡೆಗೆ ಕಾರಣ ವಿದ್ಯಾರ್ಥಿಗೆ ಆಸಕ್ತಿ ಮೂಡಿಸುವುದಕ್ಕಾಗಿ ರಚನೆಯಾದಂತೆ ತೋರುತ್ತದೆ. ಈ ಪಠ್ಯದ ಪ್ರಾರಂಭದ ನಾಲ್ಕು ಪುಟಗಳಲ್ಲಿ ವರ್ಣಮಾಲೆ ಹಾಗೂ ಕಾಗುಣಿತವನ್ನು ಪರಿಚಯಿಸುವ ಪಠ್ಯಕ್ರಮವಿದೆ. ಆದರೆ ಈ ಪಠ್ಯದಲ್ಲಿ 'ಋ' ಕಾರವನ್ನು ನೇರವಾಗಿ ಬಳಸದೆ, ಮೂವತ್ತಾರನೇ ಪಾಠ (ಪುಟ ೩೭ರಲ್ಲಿ) ಖಡ್ಗಾಮೃಗದ ಚಿತ್ರ ಕೊಟ್ಟು 'ಋ' ಕಾರ – ಕೃ ಗೃ ತ್ರೃ – ಎಂದು ಪರಿಚಯಿಸಿರುವುದನ್ನು ಕಾಣಬಹುದು. 'ಋ' ಕಾರವನ್ನು ಕಾರದಂತಹ ಪದಗಳ ಮೂಲಕ ಪರಿಚಯಿಸಲಾಗಿದೆ. ಉದಾಹರಣೆಗೆ : (ಕೃಪೆ,ಗೃಹ,ದೃಷ್ಟಿ) ಕೆಲವು ಪಾಠದಲ್ಲಿ 'ಋ'ಕಾರ ಬಳಕೆಯಾಗಿದ್ದರೂ ವರ್ಣಮಾಲೆ ಸಂದರ್ಭದಲ್ಲಿ ಈ 'ವರ್ಣ'ವನ್ನು ಪರಿಚಯಿಸುವ ಕ್ರಮ ಕಾಣಿಸಿಕೊಳ್ಳುವುದಿಲ್ಲ. ಕಾರಣ ಕನ್ನಡದಲ್ಲಿ 'ಋ' ಕಾರದ ಬಳಕೆ ಕಡಿಮೆ ಎಂದು ಭಾವಿಸಿ ಕೈ ಬಿಟ್ಟಂತೆ ತೋರುತ್ತದೆ. ಇದರಿಂದ ಮಕ್ಕಳಿಗೆ 'ಋ' ಕಾರದ ಬಗ್ಗೆ ಸಂದಿಗ್ದತೆ ಆಗಿದ್ದರು ಆಗಿರಬಹುದು ಎಂದು ಅಭಿಪ್ರಾಯ ಪಡುವುದರಲ್ಲಿ ಅರ್ಥವಿದೆ ಎಂದುಕೊಳ್ಳ ಬಹುದು.

ಒಟ್ಟಾರೆಯಾಗಿ ಬಾಲದರ್ಜೆಯ ಪಠ್ಯಕ್ರಮವು ಒಂದು ಮತ್ತು ಎರಡನೇ ಭಾಗಗಳಾಗಿದ್ದು ಒಂದನೇ ಭಾಗದಲ್ಲಿ ಅಕ್ಷರಮಾಲೆ, ಕಾಗುಣಿತ , ಒತ್ತಕ್ಷರ, ಪದರಚನೆಯ ಕ್ರಮಣಿಕೆ ಇದ್ದರೆ ಎರಡನೇ ಭಾಗದಲ್ಲಿ ಪಾಠ ಪದ್ಯಗಳನ್ನು ಕೊಟ್ಟಿರುವುದನ್ನು ಗುರುತಿಸಬಹುದು. ಈ ಎರಡನೇ ಭಾಗವು ಆಲಿಸುವ, ಮಾತನಾಡುವ ಹಾಗೂ ಬರೆಯುವ ಕೌಶಲ್ಯಕ್ಕೆ ಆದ್ಯತೆ ನೀಡಿರುವುದು ಸ್ಪಷ್ಟವಾಗುತ್ತದೆ.

ಕನ್ನಡ ಮೊದಲನೆಯ ಪುಸ್ತಕವನ್ನು ಮಾರ್ಸ್‌ಡೆನ್ ರಚಿಸಿದ್ದಾನೆ. ಇದನ್ನು ಎರಡನೇ ತರಗತಿ ಪಠ್ಯಕ್ರಮವಾಗಿ ಕೊಟ್ಟಿದೆ. ಇದರಲ್ಲಿ ಮೂವತ್ತೆಂಟು ಪಾಠಗಳನ್ನು ಕೊಡಲಾಗಿದೆ. ಇದರಲ್ಲಿ ನನ್ನ ತಾಯಿ, ಬುದ್ಧಿವಾದ, ನೀತಿವಾಕ್ಯಗಳು, ವಿದ್ಯೆ, ನಕ್ಷತ್ರ ವಿದ್ಯಾಭ್ಯಾಸ ಎಂಬ ಮೂವತ್ತೊಂದು ಪಾಠಗಳನ್ನು ಕೊಡಲಾಗಿದೆ. ಪಾಠಗಳ ಪ್ರಾರಂಭಕ್ಕಿಂತ ಮೊದಲು ಬೋಧಕರಿಗೆ ಬೋಧನೆಯ ವಿಧಾನದ ಸೂಚನೆಗಳನ್ನು ಕೊಡಲಾಗಿದೆ. ಬೋಧಕನು ಪಾಠದ ಆರಂಭಕ್ಕೆ ಮುನ್ನ ಚಿತ್ರಗಳ ಕಡೆಗೆ ಮಕ್ಕಳ ಮನಸ್ಸನ್ನು ಆಕರ್ಷಿಸಿ ಚಿತ್ರದಲ್ಲಿನ ವಸ್ತುಗಳ ಬಗ್ಗೆ ಸಂಕ್ಷಿಪ್ತವಾಗಿ ಪರಿಚಯಿಸಬೇಕು ಎಂದು ಹೇಳಿದೆ. ಈ ಪಠ್ಯಕ್ರಮದ ಪ್ರತಿಯೊಂದು

ಪಾಠದಲ್ಲಿಯೂ ಕಪ್ಪು ಬಿಳುಪಿನ ಮಿಶ್ರಣದ ಚಿತ್ರಗಳಿದ್ದು ಪಾಠಗಳನ್ನು ಮಕ್ಕಳು ಜ್ಞಾಪಕದಲ್ಲಿಡಲು ಸಹಾಯಕವಾಗಬಲ್ಲದು. ಪಾಠದ ವಿವರಣೆಯ ವಿಧಾನ ಸರಳವಾಗಿದ್ದು ಮಕ್ಕಳಿಗೆ ಪಾಠದ ವಿವರಣೆ ತಲುಪುವಂತೆ ಸಂಕ್ಷಿಪ್ತವಾಗಿ ಕೊಡಲಾಗಿದೆ. ಹಸು, ನಾಯಿ, ಕುದುರೆ, ಬೆಕ್ಕು, ಆಡು, ಆನೆ, ಗಂಗೆತ್ತು, ಕೋತಿ, ಎಂಬ ಇತ್ಯಾದಿ ಪ್ರಾಣಿಗಳ ಪಾಠಗಳನ್ನು ಕೊಡಲಾಗಿದೆ. ಕಾರಣ ಮಕ್ಕಳಿಗೆ ಪ್ರಾಣಿ ಪಕ್ಷಿಗಳಿಗೂ ಆತ್ಮೀಯ ಸಂಬಂಧವಿರುವುದರಿಂದ ಅವುಗಳಿಂದ ಆಕರ್ಷಿತರಾಗಿ ಕಲಿಕೆಯಲ್ಲಿ ಆಸಕ್ತಿಯಿಂದ ತೊಡಗಿಸಿಕೊಳ್ಳುವರು ಎಂಬ ಕಾರಣಕ್ಕಾಗಿ ಈ ರೀತಿ ಕೊಡಲಾಗಿದೆ. ಇದರ ಜೊತೆಗೆ ಜನಸಾಮಾನ್ಯರು ಮಾಡುವ ಕಸುಬುಗಳ ಬಗ್ಗೆ ಪಾಠಗಳನ್ನು ಕೊಟ್ಟಿರುವುದನ್ನು ಕಾಣಬಹುದು. ಪಾಠಗಳನ್ನು ಕೊಡುವ ಪೂರ್ವದಲ್ಲಿ ಕಠಿಣ ಪದಗಳಿದ್ದಲ್ಲಿ ಚಾಲ್ತಿಯಲ್ಲಿರುವ ಪದಗಳಿಂದ ಹೇಳಿ ಕೊಡಬೇಕು ಎಂದು ಹೇಳಿದೆ. ಇದು ಒಂದು ಉತ್ತಮ ವಿಧಾನವೆಂದೇ ಹೇಳಬಹುದು. ಏಕೆಂದರೆ ಮಕ್ಕಳು ಬಳಸುವ ಪದಗಳಿಂದ ಪರಿಚಯಿಸಿದರೆ ಅರ್ಥಪೂರ್ಣ ಕಲಿಕೆಯಾಗಬಲ್ಲದು, ಎಂದು ಈ ರೀತಿ ಕೊಟ್ಟಿರುವುದನ್ನು ಕಾಣಬಹುದು. ಉದಾಹರಣೆ 'ಭತ್ತ ಕುಟ್ಟುವುದು ಒನಕೆಯಿಂದ ಕುಟ್ಟುವಾಗ ಸಿಪ್ಪೆಯು ನುರಿದು ಅಕ್ಕಿಯು' ಬೇರೆಯಾಗುವುದು. ಭತ್ತವನ್ನು ಬೇಯಿಸದ ಕುಟ್ಟಿ ಮಾಡಿದ ಅಕ್ಕಿಗೆ ಬೆಳತಿಗೆ ಅಕ್ಕಿ ಎಂದು ಹೆಸರು. ಕುಸಲು ಅಕ್ಕಿಯೆಂದರೆ ಭತ್ತವನ್ನು ಬೇಯಿಸಿ ಕುಟ್ಟಿ ಮಾಡಿದ ಅಕ್ಕಿಯೆಂದು ಹೇಳಿದೆ. (ಪಾಠ–೭ಪುಟ–೧೫)

ಆರು ಗದ್ಯಪಾಠಗಳಲ್ಲಿ ಏಳು ಕವನಗಳಲ್ಲಿ ಚಿತ್ರಗಳಿಲ್ಲದಿರುವುದನ್ನು ಗಮನಿಸಬಹುದು. ಇಲ್ಲಿಯ ಕವನಗಳನ್ನು ಬುದ್ಧಿವಾದ ಮತ್ತು ನೀತಿ ಮಾತುಗಳಿಂದ ಕೂಡಿದೆ. 'ಬುದ್ಧಿವಾದ' ಮತ್ತು 'ವಿದ್ಯೆ' ಎಂಬ ಕವನಗಳು ದ್ವಿಪದಿಯಲ್ಲಿ ಮೂಡಿ ಬಂದಿರುವುದನ್ನು ಕಾಣಬಹುದು. ನನ್ನ ತಾಯಿ, ಶರಷಟ್ಪದಿಯಲ್ಲಿದೆ. ಈ ವಿಧಾನವನ್ನು ಗಮನಿಸಿದರೆ ಕವನ, ಹಾಡುಗಳಲ್ಲಿ ಛಂದಸ್ಸು ಅಳವಡಿಸುತ್ತಿದ್ದುದನ್ನು ಗಮನಿಸಬಹುದು. ಕವಿತೆಗಳಿಗೆ ಛಂದಸ್ಸೆ ಮುಖ್ಯವಾಗಿದ್ದಿತು. ಇದರ ಜೊತೆಗೆ ಪದ್ಯಗಳಿಗೆ ರಾಗ ತಾಳಗಳನ್ನು ಸೂಚಿಸಿರುವುದನ್ನು ಕಾಣಬಹುದು. ಉದಾಹರಣೆಗೆ ನಕ್ಷತ್ರ ಕವನ, ಮಿನುಗೆಲೆ, ಮಿನುಗೆಲೆ, ನಕ್ಷತ್ರ (ಪಾಠ–೨೭ ಪುಟ–೪೪,೪೫) ಈ ಪದ್ಯಕ್ಕೆ ರಾಗ ಮೋಹನ ನೋಟು–ತಾಳಚಾಪು–ಎಂದು ಕೊಟ್ಟಿರುವುದನ್ನು ಕಾಣಬಹುದು. ಆದರೆ ಈ ಪಠ್ಯದುದ್ದಕ್ಕು ವ್ಯಾಕರಣ ವಿಚಾರದ ಆದ್ಯತೆಗೆ ಕಡಿಮೆ ಇರುವುದನ್ನು ಗುರುತಿಸಬಹುದು.

ಮೈಸೂರು ಪ್ರಾಂತ್ಯದಲ್ಲಿ ಎಂ.ಎಸ್.ಪುಟ್ಟಣ್ಣನವರು ರಚಿಸಿದ ಪಠ್ಯಗಳನ್ನು ಗುರುತಿಸಬಹುದು. ಇವರ ಒಂದನೇ ಪುಸ್ತಕವು ೧೯೦೮ರಲ್ಲಿ ರಚನೆಯಾಗಿದೆ. ಪ್ರಾಣಿ. ಪಕ್ಷಿ ಪ್ರಕೃತಿಯ ಬಗ್ಗೆ ತಿಳಿವಳಿಕೆಯನ್ನು ನೀಡಲು ಕುರಿ, ಮೇಕೆ, ಇರುವೆ, ದುಂಬಿ, ಕಾಡು ಮೃಗಗಳು, ಹುಲಿ, ಗಿಳಿ, ಹಾವು, ಆಲದಮರ, ಕೆರೆ, ಹಲಸಿನಮರ, ಕಿತ್ತಳೆ, ಮಾದಳ,

ಚಕೋತ, ತೆಂಗಿನಮರ, ಎಲೆ, ಅಡಕೆ, ಬಿದಿರು, ಹೊಳೆ, ಅಕ್ಕಿ, ಇಬ್ಬನಿ, ಮಂಜು, ಕಲ್ಲುಗಳು, ದ್ವಿದಳ ಧಾನ್ಯಗಳು, ನಕ್ಷತ್ರಗಳು, ಕಾಯಿಪಲ್ಯಗಳು, ಚಂದ್ರ, ಹೂಗಳು, ಜೇಡರಹುಳು, ತೇಗ, ಹೊನ್ನೆ, ಕರಿಯಮರ ಎಂಬ ಇತ್ಯಾದಿ ಇಪ್ಪತೇಳು ಪಾಠಗಳು ಇವೆ. ಇದರ ಜೊತೆಗೆ ಗೋವಿನ ಕಥೆ, ನರಿಯ ಯುಕ್ತಿ, ಒಡ ಹುಟ್ಟಿದವರಲ್ಲಿ ಪ್ರೀತಿ, ನಕಲಿಯಶಾಮ, ಒಳ್ಳೆಯ ಹುಡುಗ, ಎಂಬ ಇತ್ಯಾದಿ ಕಥೆಗಳನ್ನು ಕೊಡಲಾಗಿದೆ. ಇವುಗಳನ್ನು ಮಕ್ಕಳ ಮಾನಸಿಕ ಸಾಮರ್ಥ್ಯಕ್ಕೆ ಅನುಗುಣವಾಗಿ ವಿವರಣೆ ನೀಡಿರುವುದನ್ನು ಕಾಣಬಹುದು. ಈ ಪಠ್ಯಕ್ರಮವು ನೀತಿ ಪ್ರತಿಪಾದನೆ, ಮನೋರಂಜನೆಯ ರೀತಿಯಲ್ಲಿ ಕಲಿಕೆಯಾಗುವಂತೆ ಕೊಡಲಾಗಿದೆ. ವಿಜ್ಞಾನದ ತಿಳುವಳಿಕೆಗಾಗಿ ಗಾಳಿ, ತಾಮ್ರ, ಕಂಚು, ನೀರು, ಮೋಡ, ಮಿಂಚು, ಗುಡುಗು, ಇಟ್ಟಿಗೆ, ಹಡಗು, ಹೊಗೆಯ ಗಾಡಿ, ಇತ್ಯಾದಿ ಅಂಶಗಳನ್ನು ಕಲಿಸಿಕೊಡುವ ರೀತಿಯಲ್ಲಿ ರಚನೆಯಾಗಿದೆ.

ಈ ಪಠ್ಯವನ್ನು ಗಮನಿಸಿದಾಗ ಪಠ್ಯಕ್ರಮ ಕೇವಲ ಕನ್ನಡ ಭಾಷೆಯನ್ನು ಕಲಿಸದೆ ಮಗುವಿನಲ್ಲಿ ವೃತ್ತಿ ತರಬೇತಿಯ ಅಂಶಗಳು ಹಾಗೂ ಮಗುವಿನ ಸಮಗ್ರ ವ್ಯಕ್ತಿತ್ವದ ಅಗತ್ಯತೆಯ ವಿಶ್ಲೇಷಣೆ ಮಾಡುವುದರ ಮೂಲಕ ಕಲಿಸುವ ಉದ್ದೇಶ ಹೊಂದಿದೆ ಎಂಬುದು ಸ್ಪಷ್ಟವಾಗುತ್ತದೆ. ಜೊತೆಗೆ ನಾಡಿನ ಸಂಸ್ಕೃತಿ ಧಾರ್ಮಿಕತೆಯ ಅಂಶಗಳನ್ನು ತಿಳಿಸುವ ನಿಟ್ಟಿನಲ್ಲಿ ರಚನೆಯಾಗಿದೆ ಎಂದು ಹೇಳಬಹುದು. ಆದರೆ ಇಲ್ಲಿ ಛಂದಸ್ಸಿನ ಭಾರವನ್ನು ಕಡಿಮೆ ಮಾಡಿರುವುದು ವಿಶೇಷ. ಆದರೆ ವ್ಯಾಕರಣ ಅಂಶಗಳನ್ನು ತಿಳಿಸುವ ಪ್ರಯತ್ನ ಈ ಪಠ್ಯಕ್ರಮದಿಂದ ನಡೆದಿಲ್ಲವೆಂದು ಹೇಳಬಹುದು.

೧೮೬೭ರಲ್ಲಿ ಕಿಟೆಲ್ ರಚನೆಯ ಕನ್ನಡ ಪಾಠಗಳ ಮೂರನೇ ಪುಸ್ತಕವು ದೊರಕಿದೆ. ಈ ಪುಸ್ತಕದಲ್ಲಿ ಸಂಸ್ಕೃತ ಶಬ್ದಗಳ ಮೂಲಾರ್ಥವನ್ನು ಕೊಡಲಾಗಿದೆ. ಪ್ರಾರಂಭದಲ್ಲಿ ಪೀಠಿಕೆಯನ್ನು ನೀಡಿದ್ದು ಪೀಠಿಕೆಯಲ್ಲಿ ಪುಲಿಗೆರೆ ಸೋಮನಾಥನ ಶತಕದಿಂದ ಆಯ್ದ ಕವನಗಳನ್ನು ಕೊಡಲಾಗಿದೆ.

ಉದಾ : ಹಲವಂ ಬಲ್ಲವರಿಂದ ಕಲ್ತು..... ಎಂಬ ಶ್ಲೋಕಗಳ್ನು ಕೊಟ್ಟು ಅದರ ಅರ್ಥವನ್ನು ಕೊಡಲಾಗಿದೆ. ಇದರ ಜೊತೆಗೆ ಸಂಸ್ಕೃತದ ಶ್ಲೋಕಗಳನ್ನು ಕೊಟ್ಟಿರುವುದನ್ನು ಕಾಣುತ್ತೇವೆ.

ಈ ಪಠ್ಯಕ್ರಮದಲ್ಲಿ ಭಾಷೆಗಳನ್ನು ಪರಿಚಯಿಸುವ ಸಲುವಾಗಿ ಶಬ್ದ,ಭಾಷೆ–ಎನ್ನುವ (ಪುಟಳಳಿರಲ್ಲಿ) ಭಾಷೆಯ ಬಗ್ಗೆ ವಿವರಿಸಿ ಜಗತ್ತಿನಲ್ಲಿ ನೂರೈವತ್ತಕ್ಕಿಂತ ಹೆಚ್ಚು ಭಾಷೆಗಳಿವೆ ಎಂದು ಹೇಳಿದೆ. ಈ ರೀತಿಯಲ್ಲಿ ರಚನೆಯಾದ ಈ ಪುಸ್ತಕದ ಪಠ್ಯಕ್ರಮವು ಬೇರೆ ಬೇರೆ ದೇಶಗಳ ಭಾಷೆಯ ಪದಗಳನ್ನು ಇಲ್ಲಿ ಸೇರಿಸಿರುವುದನ್ನು ಕಾಣಬಹುದು.

| ಉದಾ:– | ಸಂಸ್ಕೃತ, | ಇಂಗ್ಲೀಶ್, | ಜರ್ಮನಿ |
|---|---|---|---|
| | ಪಿತೃ | ಪಾತರ್ | ಪಾತೆರ್ |
| | ಬ್ರಾತೃ | ಬ್ರೊತರ್ | ಬ್ರೂದೆರ್ |
| | ಸ್ವಸೃ | ಸಿಸ್ತರ್ | ಸ್ವಸ್ತರ್ |
| | ಸಂ | ಇಂ | ಜ |
| | ಗೋ | ಕೌ | ಕೂ, ಕೋ |

'ಕನ್ನಡ ಆರನೆಯ ಪುಸ್ತಕ' ಏಳನೇ ತರಗತಿಯ ವಿದ್ಯಾರ್ಥಿಗಳಿಗೆಂದು ಪಠ್ಯಕ್ರಮ ಕೊಡಲಾಗಿದೆ. ಇದರಲ್ಲಿ ಇಪ್ಪತ್ತೈದು ಪಾಠಗಳಿವೆ. ನೂರಹನ್ನೆರಡು ಪುಟಗಳಿಂದ ರಚನೆಗೊಂಡಿದೆ. ಹದಿನೇಳು ಗದ್ಯಪಾಠ, ಎಂಟು ಪದ್ಯಗಳನ್ನು ಕೊಡಲಾಗಿದೆ. ಪಾಠ, ಪದ್ಯಗಳೆಂದು ಬೇರ್ಪಡಿಸಿಕೊಡದೆ ಮಿಶ್ರ ಬಳಕೆಯ ರೀತಿಯಲ್ಲಿ ಕೊಟ್ಟಿರುವುದನ್ನು ಕಾಣುತ್ತೇವೆ. ಇಲ್ಲಿ ರಚನೆಯಾದ ಪಾಠ ಪದ್ಯಗಳೆಲ್ಲವು ಛಂದಸ್ಸು ಆಧಾರಿತವಾಗಿ ರಚನೆಯಾದವುಗಳಾಗಿವೆ.

ಉದಾಹರಣೆಗೆ 'ದಿಲೀಪನೂ' 'ನಂದಿಯೂ' ಭಾಮಿನಿ ಷಟ್ಪದಿಯಲ್ಲಿದೆ. 'ವಸಂತಋತು' ವಾರ್ಧಕ ಷಟ್ಪದಿಯಲ್ಲಿದೆ. 'ಪುಷ್ಪೋದ್ಭವ ಚರಿತಂ' ಚಂಪೂವಿನಲ್ಲಿ ರಚನೆಯಾಗಿದೆ. ಹೀಗೆ ಮಾತ್ರಾಗಣ ಮತ್ತು ಅಕ್ಷರಗಣಗಳ ಛಂದಸ್ಸಿನ ಪದ್ಯ ಭಾಗಗಳನ್ನು ನೀಡಲಾಗಿದೆ. ಆದರೆ ವ್ಯಾಕರಣಕ್ಕೆ ಸಂಬಂಧಿಸಿದಂತಹ ಚಟುವಟಿಕೆಗಳಾಗಲೀ ಪಾಠ, ಪದ್ಯಗಳನ್ನು ಕೊಟ್ಟಿರುವುದಿಲ್ಲ.

ಒಟ್ಟಾರೆಯಾಗಿ ಬ್ರಿಟೀಷರ ಕಾಲದ ಪ್ರಾಥಮಿಕ ಶಿಕ್ಷಣದ ಕನ್ನಡ ಭಾಷಾ ಪಠ್ಯಕ್ರಮವು ಪ್ರಾರಂಭದ ಭಾಗದಲ್ಲಿ ಪದ, ಧ್ವನಿ, ವಾಕ್ಯರಚನೆಯನ್ನು ನೇರವಾಗಿ ಹೇಳದಿದ್ದರು, ಪರೋಕ್ಷವಾಗಿ ಕಠಿಣ ಪದಗಳನ್ನು ಬಿಡಿಸುವುದರ ಮೂಲಕ ಹೇಳಿಕೊಟ್ಟಿರುವುದನ್ನು ಕಾಣಬಹುದು. ಓದಿ ತಿಳಿ ಎಂಬ ಚಟುವಟಿಕೆಯ ಮೂಲಕ ಪದಗಳ ಅರ್ಥವನ್ನು ಕೊಟ್ಟಿರುವುದನ್ನು ಕಾಣಬಹುದು. ಇದರ ಜೊತೆಗೆ ಹಿರಿಯ ಪ್ರಾಥಮಿಕ ತರಗತಿಗಳಿಗೆ ಬಂದಂತೆ ಕನ್ನಡ ಪಠ್ಯಕ್ರಮದಲ್ಲಿ ಶಾಸ್ತ್ರಜ್ಞಾನ, ಸಾರ್ವಜನಿಕ ಕರ್ತವ್ಯ, ಮಿತವ್ಯಯ, ಆಪತ್ತಿನಲ್ಲಿ ಸರ್ಕಾರಿ ಉದ್ಯೋಗ, ಬ್ರಿಟೀಶರ ಆಡಳಿತ ಯೋಜನೆ ಮತ್ತು ಪ್ರಯೋಜನ. ಕಂದಾಯಗಳೆಂದರೇನು? ನಾವು ಅವುಗಳನ್ನು ಏಕೆ ಕೊಡಬೇಕು ಎಂಬ ಪಾಠಗಳನ್ನು ಕೊಟ್ಟಿರುವುದನ್ನು ಕಾಣುತ್ತೇವೆ. ಇದರ ಜೊತೆಗೆ ವಚನಗಳು, ಹರಿದಾಸರ ಹಾಡುಗಳು ಹಾಗೂ ಸರ್ವಜ್ಞನ ತ್ರಿಪದಿಗಳನ್ನು ಮಕ್ಕಳ ನೀತಿಪಾಠ ತಿಳುವಳಿಕೆಗಾಗಿ ಇಡಲಾಗಿದೆ. ಅಂದರೆ ಈ ಕಾಲ ಘಟ್ಟದ ಪಠ್ಯಕ್ರಮವು ಮಗುವಿನ ಭಾವಿ ಭವಿಷ್ಯತ್ತನ್ನು ರೂಪಿಸಿಕೊಳ್ಳಲು ಬೇಕಾದ ಅಗತ್ಯತೆಯ ಅಂಶಗಳು ಹಾಗೂ ಜವಾಬ್ದಾರಿಗಳನ್ನು ಅಳವಡಿಸಿರುವುದನ್ನು ಕಾಣುತ್ತೇವೆ. ಭಾಷಾ ದೃಷ್ಟಿಯಿಂದ ಈ ಪಠ್ಯಕ್ರಮದಲ್ಲಿ ಕ್ಲಿಷ್ಟತೆಯಿಂದ ಸರಳತೆಯ ಕಡೆಗೆ ರಚನೆಯಾಗಿದೆ. ಸಂಸ್ಕೃತದ ಪದಗಳ

ಬಳಕೆ ಇದ್ದರು, ಕನ್ನಡ ಪದಗಳ ಬಳಕೆಯಾಗಿದೆ. ಜೊತೆಗೆ ಕಠಿಣ ಪದಗಳಿಗೆ ಸರಳ ಅರ್ಥದಲ್ಲಿ ಕೊಡುವ ಪ್ರಯತ್ನ ನಡೆದಿದೆ. ಪದ್ಯಗಳಲ್ಲಿ ಪ್ರಾಸ, ಲಯವನ್ನು ಬಳಸಿ ಆಲಿಸುವ ಪ್ರಕ್ರಿಯೆಗೆ ಆದ್ಯತೆ ನೀಡಿದೆ. ಇದರ ಜೊತೆಗೆ ಇಂದಿನ 'ಕಾಪಿ ಪುಸ್ತಕವನ್ನು ಕೋಫಿಪುಸ್ತಕ' ಎಂದು ಬಳಸಿರುವುದನ್ನು ಈ ಕಾಲ ಘಟ್ಟದ ಪಠ್ಯಗಳಿಂದ ತಿಳಿದು ಬರುತ್ತದೆ.(೧೯೮೬ರ ಕೇರಳ ಸರ್ಕಾರ ಮುದ್ರಿಸಿದ ಕನ್ನಡ ಪಠ್ಯದಲ್ಲಿ ನೋಡಬಹುದು)

ಈ ಕಾಲಘಟ್ಟದ ಪಠ್ಯಕ್ರಮದಲ್ಲಿ ವ್ಯಾಕರಣದ ತಿಳುವಳಿಕೆಗೆ ಆದ್ಯತೆಯನ್ನು ನೀಡಿರುವುದು ಕಡಿಮೆ ಪ್ರಮಾಣದಲ್ಲಿದೆ. ಛಂದಸ್ಸಿನ ತಿಳುವಳಿಕೆ ಹೆಚ್ಚಾಗಿದೆ. ಆದರೆ ಪ್ರಾದೇಶಿಕ ಭಾಷೆಯಲ್ಲಿ ಪಠ್ಯಕ್ರಮ ರಚನೆಯಾಗಿರುವುದು ಗಮನಾರ್ಹ ಅಂಶವಾಗಿದೆ. ಇತ್ತೀಚಿನ ಪಠ್ಯಕ್ರಮದೊಂದಿಗೆ ಹೋಲಿಸಿ ನೋಡಿದರೆ ಪಠ್ಯಕ್ರಮ ರಚನೆಯು ಹಿಂದಿನ ಕಾಲದ ಪಠ್ಯಕ್ರಮದಂತೆ ಕ್ಲಿಷ್ಟವಾಗಿರದೆ ಕಾಲ ಪರಿಮಿತಿಗೆ ಒಳಪಟ್ಟು ಸರಳ ರೀತಿಯಲ್ಲಿ ರಚನೆಯಾಗಿರುವುದನ್ನು ಕಾಣಬಹುದು. ಹಿಂದಿನ ಪಠ್ಯಗಳು ಚಟುವಟಿಕೆ ಆಧಾರಿತವಾಗಿಲ್ಲ ಆದರೆ ಇಂದಿನ ಪಠ್ಯಗಳು ಚಟುವಟಿಕೆ ಆಧಾರಿತವಾಗಿರುವುದನ್ನು ಗುರುತಿಸಬಹುದು. ಜೊತೆಗೆ ಇಂದಿನ ಪಠ್ಯಗಳು ಮಕ್ಕಳ ಕಲಿಕೆ ಮತ್ತು ಮೌಲ್ಯಮಾಪನಗಳನ್ನು ಮಾಡಲು ಸಹಕಾರಿಯಾದವುಗಳಾಗಿವೆ. ಈ ವಿಧಾನವು ಕರ್ನಾಟಕದ ಏಕೀಕರಣದ ನಂತರ ಬಂದ ಪಠ್ಯಗಳಲ್ಲಿ ಸೇರ್ಪಡೆಯಾಗುತ್ತ ಬಂದಿರುವುದನ್ನು ಕಾಣುತ್ತೇವೆ. ಅಲ್ಲದೇ ೧೯೧೫ರ ದಶಕದಿಂದ ಇತ್ತೀಚಿಗೆ ಕನ್ನಡ ಭಾಷಾ ಪಠ್ಯ(ನನಗೆ ಲಭ್ಯವಾದ)ಗಳು ವ್ಯಾಕರಣ ರಚನೆಯಿಂದ ರಚನೆಯಾದವುಗಳಾಗಿ ಅದರಲ್ಲೂ ೧೯೮೦ರ ದಶಕದಿಂದ ಇತ್ತೀಚೆಗೆ ವ್ಯಾಕರಣ ವಿಚಾರ, ಭಾಷಾ ತಿಳುವಳಿಕೆ ಮತ್ತು ಭಾಷಾ ಕೌಶಲ್ಯಗಳ ತಿಳುವಳಿಕೆಯನ್ನು ರೂಢಿಸಲು ಮತ್ತು ರಚಿಸಲು ಸಿದ್ಧಪಡಿಸಿದ ಪಠ್ಯಕ್ರಮವನ್ನು ಇಂದಿನ ಪಠ್ಯದಲ್ಲಿ ಕಾಣುತ್ತೇವೆ.

**೩.೬. ಕರ್ನಾಟಕ ಏಕೀಕರಣದ ನಂತರ ಕನ್ನಡ ಭಾಷಾ ಪಠ್ಯಕ್ರಮ**

ಭಾರತ ದೇಶ ಸ್ವಾತಂತ್ರ ವನ್ನು ಪಡೆದು ಸಂವಿಧಾನ ರಚನೆಯಾಗುವವರೆಗೂ ಕರ್ನಾಟಕ ಪ್ರಾಂತ್ಯ ಹರಿದು ಹಂಚಿ ಹೋಗಿತ್ತು. ನಂತರ ಹಳೆಯ ಮೈಸೂರು ಎಂದು ನಾಮಕರಣಗೊಂಡಿತು. ಪುನಃ ಕನ್ನಡ ಪ್ರಾಂತ್ಯಗಳೆಲ್ಲವನ್ನೂ ಒಗ್ಗೂಡಿಸಿ ಕರ್ನಾಟಕ ಏಕೀಕರಣವನ್ನು ಮಾಡಲಾಯಿತು. ಇದರಿಂದ ಕರ್ನಾಟಕದ ಎಲ್ಲಾ ಪ್ರಾಂತ್ಯದವರಿಗೂ 'ಏಕರೂಪದ' ಪಠ್ಯಕ್ರಮ ರಚನೆ ಮಾಡಲು ಪ್ರಾರಂಭಿಸಿತು.

ಈ ಪಠ್ಯಕ್ರಮ ರಚನೆ ಮಾಡಲು ಸಮಿತಿಯೊಂದನ್ನು ನೇಮಿಸಿತು. ಆ ಸಮಿತಿಯ ಅನ್ವಯ ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿ ಪಠ್ಯಕ್ರಮವನ್ನು ರಚಿಸಿತು. ಈ ಪಠ್ಯಗಳ ಪ್ರಾರಂಭದಲ್ಲಿ ಮುನ್ನುಡಿಯನ್ನು ಈ ಸಮಿತಿಯ ಅಧ್ಯಕ್ಷರು ಕೊಡುತ್ತಿದ್ದರು. ಈ ಮುನ್ನುಡಿಯಲ್ಲಿ ಕನ್ನಡ ಪಠ್ಯಕ್ರಮದ ರಚನೆಯ ಉದ್ದೇಶವನ್ನು ಸ್ಪಷ್ಟಪಡಿಸುತ್ತಿತ್ತು. ಜೊತೆಗೆ ಬೋಧಕರು ಈ

ಪಠ್ಯಕ್ರಮವನ್ನು ಯಾವ ವಿಧಾನ ಅನುಸರಿಸಿ ಕಲಿಸಬೇಕು ಎಂಬ ಇತ್ಯಾದಿ ಮಾಹಿತಿಯನ್ನು ಕೊಡಲಾಗುತ್ತಿತ್ತು. ಈ ಪದ್ಧತಿಯನ್ನು ಇಂದಿನ ಪಠ್ಯಗಳಲ್ಲಿಯೂ ಕೊಟ್ಟಿರುವುದನ್ನು ಕಾಣುತ್ತೇವೆ.

೧೯೫೮ರಲ್ಲಿ ಪ್ರಕಟಿಸಿದ ಕನ್ನಡ ಮೂರನೇ ಪುಸ್ತಕದಲ್ಲಿ ಬಂದ ಮುನ್ನುಡಿಯಲ್ಲಿ ಈ ರೀತಿ ಸೂಚಿಸಿರುವುದನ್ನು ಕಾಣಬಹುದು. ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿ ತರಗತಿಗನುಸಾರ ನಾಡಿನ ವಿಷಯ ವೈವಿಧ್ಯತೆಯನ್ನು ಕಲಿಕೆಯಲ್ಲಿ ಅಳವಡಿಸಿಕೊಳ್ಳಬೇಕು. ಎಂದು ಹೇಳಿದೆ. ಜೊತೆಗೆ ಸರಳತೆಯಿಂದ ಕಠಿಣತೆಯ ಕಡೆಗೆ ವಿಷಯವನ್ನು ಅಳವಡಿಸಲಾಗಿದೆ. ಎಂದು ವಿವರಿಸಿದೆ. ಪಠ್ಯಕ್ರಮವನ್ನು ಭೋದಿಸುವಾಗ ಮಕ್ಕಳ ಕಲಿಕೆ ಅರ್ಥಪೂರ್ಣವಾಗಲು ಸಂದರ್ಭನುಸಾರ ಚಿತ್ರಗಳ ಬಳಕೆ ಮಾಡಿಕೊಳ್ಳಬೇಕು ಎಂದು ವಿಶ್ಲೇಷಿಸಲಾಗಿದೆ.

ಬ್ರಿಟೀಶರ ಕಾಲದ ಪಠ್ಯಕ್ರಮವು ಮಿತಿಗಳಿಲ್ಲದೆ ರಚನೆಯಾಗುತ್ತಿತ್ತು. ಆದರೆ ಈ ಸಂದರ್ಭದಲ್ಲಿ ಮಿತಿಗೆ ಒಳಪಟ್ಟು ಪಠ್ಯಕ್ರಮ ರಚನೆಯಾಯಿತು. ಒಂದರಿಂದ ನಾಲ್ಕನೇ ತರಗತಿಯವರೆಗಿನ ಪಠ್ಯಕ್ರಮವು ೧೦೦ ಪುಟಕ್ಕೆ ಮೀರದಂತೆ ರಚನೆಯಾಗಿರುವುದನ್ನು ಗುರುತಿಸಬಹುದು. ಐದರಿಂದ ಏಳನೇ ತರಗತಿಯವರೆಗೆ ೧೭೦ ಪುಟ ಮೀರದಂತೆ ಪಠ್ಯಕ್ರಮ ರಚನೆ ಆಗಿರುವುದನ್ನು ಕಾಣಬಹುದು. ವಸಾಹತುಶಾಹಿ ಕಾಲದಲ್ಲಿ ಚಿತ್ರಗಳನ್ನು ಕಪ್ಪು ಬಿಳುಪು ಚಿತ್ರಗಳನ್ನು ನೋಡಬಹುದು. ಆದರೆ ಈ ಸಂದರ್ಭದ ಹೊತ್ತಿಗೆ ಪಠ್ಯಕ್ರಮದಲ್ಲಿ ಬಣ್ಣದ ಚಿತ್ರಗಳು ಬಳಕೆಯಲ್ಲಿವೆ. ನೋಡಲು ಕಪ್ಪು ಬಿಳುಪಿನ ಚಿತ್ರಗಳು ಆಕರ್ಷಣೀಯವಾಗಿವೆ ಎಂದು ಹೇಳಬಹುದು.

ಕನ್ನಡ ಒಂದನೇ ಪುಸ್ತಕವು ೧೯೬೫ರಲ್ಲಿ ಶಿ.ಚೆ. ನಂದೀಮಠರವರ ಅಧ್ಯಕ್ಷತೆಯಲ್ಲಿ ರಚನೆಯಾಗಿದೆ.ಇದರಲ್ಲಿ ಧ್ವನಿ, ಪದ, ವಾಕ್ಯವನ್ನು ಹೇಳಿಕೊಡುವುದನ್ನು ಕಾಣುತ್ತೇವೆ. ಆಲಿಸುವ ಪ್ರಕ್ರಿಯೆಗಾಗಿ ಕಥನ ಪದ್ಧತಿಯನ್ನು ಅನುಸರಿಸಿರುವುದನ್ನು ಕಾಣಬಹುದು. ವರ್ಣಮಾಲೆಯನ್ನು ಕಲಿಸಲು ಪ್ರಾರಂಭದಲ್ಲಿಯೇ ಪದಗಳ ಮೂಲಕ ಕಲಿಸುವುದನ್ನು ಕಾಣುತ್ತೇವೆ. ಉದಾ:- ಆಟ, ಊಟ, ಓಟ, ಮರ, ಜನ, ಚರಕ....... ಇತ್ಯಾದಿ. ಪಾಠ ಪದ್ಯಗಳೆಂದು ಪ್ರತ್ಯೇಕವಾಗಿ ಕೊಡದೆ ಮಿಶ್ರ ರೀತಿಯಲ್ಲಿ ರಚನೆಗೊಂಡಿದೆ. ಇದರಿಂದ ಮಕ್ಕಳು ಆಸಕ್ತಿಯಿಂದ ಕೇಳಲು ಸಹಾಯಕವಾಗಬಲ್ಲದು.

ಈ ಕಾಲಘಟ್ಟದ ಕಿರಿಯ ಪ್ರಾಥಮಿಕ ಶಾಲಾ ಪಠ್ಯಕ್ರಮವನ್ನು ಗಮನಿಸಿದಾಗ ಒಂದರಿಂದ ನಾಲ್ಕನೇ ತರಗತಿಯವರೆಗಿನ ಪುಸ್ತಕಗಳಲ್ಲಿ ನಾಲ್ಕರಿಂದ ಒಂಬತ್ತು ಪದ್ಯಗಳಿರುವುದನ್ನು ಕಾಣಬಹುದು. ಒಂದರಿಂದ ಮೂರನೇ ತರಗತಿಯವರೆಗೆ ಧ್ವನಿ,ಪದ, ವಾಕ್ಯ ರಚನೆಯು ಸರಳ ಪಠ್ಯಕ್ರಮದ ಮೂಲಕ ಸಾಗಿರುವುದನ್ನು ಕಾಣಬಹುದು. ಇಲ್ಲಿ ಆಟದ ಮೂಲಕ ಪಾಠ ಎಂಬ ತತ್ವವನ್ನು ಅನುಸರಿಸಿ ಪಠ್ಯ ರಚನೆಯಾಗಿದೆ. ಇನ್ನು ಐದರಿಂದ ಏಳನೇ ತರಗತಿಯಲ್ಲಿ ಕರಕುಶಲ ವೃತ್ತಿ ಕೆಲಸದ ಪಾಠಗಳು, ನೀತಿಪಾಠ,

ಕನ್ನಡ ನಾಡಿನ ಸಂಸ್ಕೃತಿ, ನಾಡಹಬ್ಬಗಳ ಬಗ್ಗೆ ಪರಿಚಯಿಸಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ಗಾಂಧೀಜಿ, ನೆಹರು, ವಲ್ಲಭಭಾಯಿ ಪಟೇಲ್ ಕನ್ನಡ ಎನೆ ಕುಣಿದಾಡುವುದೆನ್ನದೆ, ಟುವ್ವಿ! ಟುವ್ವಿ ! ತಿರುಕನ ಕನಸು ಪಾಠಗಳನ್ನು ನೋಡಬಹುದು. ಇವಗಳ ಬಳಕೆ ಮೂರನೇ ತರಗತಿಯಲ್ಲಿ ಪ್ರಾರಂಭವಾಗಿರುವುದನ್ನು ಕಾಣುತ್ತೇವೆ. ಆದರೆ ಹೆಚ್ಚಾಗಿ ಹಿರಿಯ ಪ್ರಾಥಮಿಕ ಪಠ್ಯದಲ್ಲಿ ಎಂದು ಹೇಳಬಹುದು.

ಕನ್ನಡ ಐದನೇ ಪುಸ್ತಕವನ್ನು ಶಿ.ಚೆ. ನಂದೀಮಠ ೧೯೬೧ರಲ್ಲಿ ರಚಿಸಿದ್ದಾರೆ. ಈ ಪುಸ್ತಕದ ಪ್ರಾರಂಭದಲ್ಲಿ ಸೂಚನೆಯನ್ನು ಕೊಡಲಾಗಿದೆ. ಮಕ್ಕಳ ಅಸಕ್ತಿ ಓದುವ ಅಭಿರುಚಿ, ಸಾಹಿತ್ಯ ಸಂಸ್ಕೃತಿಗಳ ಪ್ರೇಮ, ವಿಚಾರ ಶಕ್ತಿ ಮತ್ತು ಗ್ರಹಣ ಶಕ್ತಿಗಳ ವಿಕಾಸ, ಮಾನವನ ಅಗತ್ಯತೆಗೆ ಬೇಕಾದ ಅಂಶಗಳನ್ನು ಕಲಿಕೆಗೆ ಅಳವಡಿಸಲಾಗಿದೆ. ಈ ಪಠ್ಯ ರಚನೆಯಾದ ಸಂದರ್ಭದಲ್ಲಿ ಪ್ರಮಾಣೀಕರಣ ಕನ್ನಡವನ್ನು ಬಳಸಬೇಕದ ಅನಿವಾರ್ಯವಿದ್ದಿತು. ಆದರೂ ಕೂಡ ಮಕ್ಕಳು ತಮ್ಮ ಪ್ರಾಂತ್ಯದಲ್ಲಿ ಬಳಸುವ ಶಬ್ದಗಳನ್ನೇ ಉಪಯೋಗಿಸಲಾಗಿದೆ. ಅದಕ್ಕೆ ತಕ್ಕದಾದ ವಿಶ್ಲೇಷಣೆಯನ್ನು ಪದ್ಯ ಪಾಠಗಳ ಅಭ್ಯಾಸ ಚಟುವಟಿಕೆಗಳಲ್ಲಿ ತಿಳಿಸಲಾಗಿದೆ. ಬ್ರಿಟೀಶರ ಕಾಲದಲ್ಲಿ ಒಂದು ವಾಕ್ಯದ ಅಥವಾ ವಿಶ್ಲೇಷಣಾತ್ಮಕ ಪ್ರಶ್ನೆಗಳನ್ನು ಮಾತ್ರ ಕೊಟ್ಟಿರುವುದನ್ನು ಕಾಣುತ್ತೇವೆ. ಆದರೆ ಈ ಕಾಲಘಟ್ಟದಲ್ಲಿ ಪದಗಳ ಅರ್ಥ ಒಂದು, ನಾಲ್ಕು ವಾಕ್ಯಗಳ ರಚನೆಯ ಪ್ರಶ್ನೆಗಳು ಎಂದು ವಿಭಜಿಸಲಾಗಿದೆ. ಅಂದರೆ ಒಂದೇ ಶಬ್ದ ಹಲವು ಭಾಗಗಳಲ್ಲಿ ಬಳಕೆ ಇರುವ ಶುದ್ಧ ರೂಪದ ಪದದ ಬಳಕೆಯ ವಿವರವನ್ನು ಕೂಡಲಾಗಿದೆ. ಉದಾಹರಣೆಗೆ ಪಾಠ–೧ ನಮ್ಮ ಶಾಲೆಯಲ್ಲಿ 'ಕಡ್ಡಿ ಕಸರು' ಎಂಬ ಪದಕ್ಕೆ 'ಕಸ ಕಡ್ಡಿ' ಎಂದು ಕೊಡಲಾಗಿದೆ. ಪಾಠ ಎರಡು 'ಧೀರಚೆನ್ನ' ಪಾಠದಲ್ಲಿ 'ಮಲುಕು' ಎಂಬ ಪದಕ್ಕೆ ಸರಗುಣಿಕೆ, ಸರಗಂಟು ಎಂದು ಕೊಡಲಾಗಿದೆ.

ಈ ಪಠ್ಯಕ್ರಮದಲ್ಲಿ ಸ್ವಾತಂತ್ರಪೂರ್ವದಲ್ಲಿ ಇದ್ದ ಕೆಲವು ಪಾಠಗಳು ಪುನಃ ಮೂಡಿ ಬಂದಿದೆ. ಉದಾಹರಣೆಗೆ 'ಕಂಬಳ' ಪಾಠ. ಈ ಪಠ್ಯಕ್ರಮದ ಜೊತೆಗೆ ಕಾರ್ನಾಡು ಸದಾಶಿವರಾಯರ ದೇಶಭಕ್ತಿ ದಲಿತರ ಉದ್ದಾರಕ್ಕಾಗಿ ಮಾಡಿದ ಸೇವೆಯನ್ನು ಗುರುತಿಸಲಾಗಿದೆ. ರಾಷ್ಟ್ರದ ತಿಳುವಳಿಕೆಗಾಗಿ ಸರೋಜಿನಿ ದೇವಿ. ಮಹಾದಾನಿ ನೊಬೆಲ್ ಪ್ಲಾರೆನ್ಸ ನೈಟಿಂಗೇಲ್ ಪಾಠಗಳು ರಚನೆಯಾಗಿವೆ. ಗಾಂಧೀಜಿಯ ಕುರಿತಾಗಿ ಉಪ್ಪಿನ ಸತ್ಯಾಗ್ರಹದ ಪರಿಚಯವನ್ನು ಕೊಡಲಾಗಿದೆ. ನಮ್ಮ ಕನ್ನಡನಾಡು. ನುಡಿ, ಹಂಪೆ, ಸತ್ಯಾಶ್ರಯ, ಪುಲಿಕೇಶಿ, ಅಕ್ಬರ್, ರವೀಂದ್ರನಾಥ ಠಾಕೋರರ ಭಾರತೀ ಹೀಗೆ ಪರಿಚಯದ ಪಾಠಗಳನ್ನು ಕೊಟ್ಟಿರುವದು ಕಂಡುಬರುತ್ತದೆ. ಮಕ್ಕಳಿಗೆ ಅಂತರರಾಷ್ಟ್ರೀಯ ತಿಳುವಳಿಕೆಗಾಗಿ 'ಹಡಗಿನಲ್ಲಿ ಪ್ರಯಾಣ' 'ಜಪಾನಿನ ಮಕ್ಕಳು' ವೆಸೂವಿಯಸ್ ಮತ್ತು ಪಾಂಪೆ ಪಾಠಗಳನ್ನು ಕೊಟ್ಟಿರುವುದನ್ನು ಕಾಣುತ್ತೇವೆ. ಪದ್ಯಭಾಗವನ್ನು ಪ್ರತ್ಯೇಕವಾಗಿ ಕೊಡುವ ಪದ್ಧತಿಯನ್ನು ಈಪಠ್ಯದಲ್ಲಿ ಕೊಟ್ಟಿರು ವುದನ್ನು ಕಾಣಬಹುದು. ಇಲ್ಲಿಯು ಸಹ ವ್ಯಾಕರಣಕ್ಕೆ ಸಂಬಂದಿಸಿದ ಚಟುವಟಿಕೆಗಳು

ಕಡಿಮೆ ಪ್ರಯಾಣದಲ್ಲಿ ಹೇಳಿ ಕೊಡುವುದನ್ನು ಗುರುತಿಸಬಹುದು. ಈ ರೀತಿಯ ಕಲಿಕೆ ೧೯೮೦ರ ದಶಕದ ಪಠ್ಯಕ್ರಮಗಳಲ್ಲಿ ಕಾಣುತ್ತೇವೆ.

೧೯೮೬ರಿಂದ ಪಠ್ಯಕ್ರಮದ ರಚನೆಯ ವ್ಯವಸ್ಥೆ ಸಂಪೂರ್ಣವಾಗಿ ಬದಲಾವಣೆ ಕಂಡಿತು. ೧೯೮೬ ಹೊಸರಾಷ್ಟ್ರೀಯ ಶಿಕ್ಷಣ ನೀತಿ ಅನ್ವಯ ಪಠ್ಯಕ್ರಮಗಳು ರಚನೆಯಾದವು. ಇದರ ಪ್ರಕಾರ ೧ ರಿಂದ ೪ ನೇ ತರಗತಿಯವರೆಗೆ ಮಾತೃಭಾಷೆಯಲ್ಲಿ ಪಠ್ಯಕ್ರಮ ರಚನೆಯಾಯಿತು. ಹಿರಿಯ ಪ್ರಾಥಮಿಕ ಹಂತದಲ್ಲಿ ತ್ರಿಭಾಷಾಸೂತ್ರದ ಅನ್ವಯ ಪಠ್ಯಕ್ರಮ ರಚನೆಯಾಗಿರುವುದನ್ನು ಕಾಣುತ್ತೇವೆ. ಉದಾ.ಗೆ ೧೯೮೬ ಕನ್ನಡ ಭಾರತಿ–೨ನೇತರಗತಿ ಪಠ್ಯಕ್ರಮವನ್ನು ನೋಡಿದಾಗ ಸ್ಪಷ್ಟವಾಗುತ್ತದೆ.

ಈ ಪಠ್ಯದ ಪ್ರಾರಂಭದಲ್ಲಿ ಅಧ್ಯಾಪಕರಿಗೆ ಮೊದಲು ಮುನ್ನುಡಿ ಕೊಟ್ಟಿದ್ದು ನಂತರ ಚಿತ್ರ ಪುಟಗಳ ಮೂಲಕ ಕುಶಲಕರ್ಮಿಗಳು, ವೃತ್ತಿನಿರತರು, ಐತಿಹಾಸಿಕ ಸ್ಥಳಗಳು, ಪರಿಸರ, ಬೆಳೆಗಳು, ಗಿಡಮರಗಳು ಮತ್ತು ಚಿತ್ರಕಥೆ–೧ ಸಿಂಹ ಮತ್ತು ಇಲಿ, ಚಿತ್ರಕಥೆ–೨ ತೆನಾಲಿ ರಾಮನ ಕಥೆ ಕೊಡಲಾಗಿದೆ. ಈ ರಚನೆಯ ಕ್ರಮ ಮಕ್ಕಳ ಸಾಮರ್ಥ್ಯಾನುಸಾರ ಸಂಕ್ಷಿಪ್ತವಾಗಿ ಕೊಡಲಾಗಿದೆ. ನಮ್ಮೂರು, ನರಿಯ ಉಪಾಯ, ಅಜ್ಜಿಯನುಡಿ, ಮುದ್ದಿನಕರು, ವಾಸನೆಯಬೆಲೆ, ಸೋಮಭೀಮ, ತೆಂಗು, ನಮ್ಮೂರಸಂತೆ, ಐಕ್ಯಗಾನ, ಸಹಬಾಳ್ವೆ, ನೆರಳು ಹೀಗೆಯೆ ಪದ್ಯ ಪಾಠಗಳೋಪಾದಿಯಲ್ಲಿ ಕೊಟ್ಟಿದೆ. ಅಲ್ಲದೇ ಪದಗಳ ಅ ಕಾರಾದಿ ಮತ್ತು ಒತ್ತಕ್ಷರಗಳ ಪಟ್ಟಿಯನ್ನು ಸಹ ಸೇರಿಸಲಾಗಿದೆ.

ಈ ಪಠ್ಯಕ್ರಮವನ್ನು ಗಮನಿಸಿದಾಗ ಭಾಷೆ ಮಗುವಿನ ಜೀವನದ ಅವಿಭಾಜ್ಯ ಅಂಗವೆಂದು ವಿವರಿಸಿದೆ. ಇದರ ಜೊತೆಗೆ ಮಗುವಿನ ಸರ್ವತೋಮುಖ ಬೆಳವಣಿಗೆಗೆ ಅನುಕೂಲವಾಗುವಂತೆ ಗಣಿತ, ಸಮಾಜೋಪಯೋಗಿ ಉತ್ಪಾದಕ ಕಾರ್ಯ, ಆರೋಗ್ಯ ಮತ್ತು ದೈಹಿಕ ಶಿಕ್ಷಣ ಕಲೆ ಮತ್ತು ಸೃಜನಶೀಲ ಅಭಿವ್ಯಕ್ತಿ, ಮೌಲ್ಯ ಶಿಕ್ಷಣದಂತಹ ಮುಂತಾದವುಗಳನ್ನು ಕನ್ನಡ ಭಾಷೆಯ ಕಲಿಕೆಯೊಟ್ಟಿಗೆ ಪರೋಕ್ಷವಾಗಿ ಪರಿಚಯ ಮಾಡಿಕೊಳ್ಳಲು ಸಾಧ್ಯವಾಗುವಂತೆ ಈ ಪಠ್ಯಕ್ರಮ ರಚನೆಯಾಗಿರುವುದು ಸ್ಪಷ್ಟವಾಗುತ್ತದೆ.

ಪ್ರತಿ ಗದ್ಯಪಾಠವು ಅಭ್ಯಾಸ ಮತ್ತು ಸೂಚನೆ ಎಂಬ ಮೂರು ಭಾಗಗಳಾಗಿ ಕೊಟ್ಟಿರುವುದನ್ನು ಕಾಣುತ್ತೇವೆ. ಎಲ್ಲಾ ಗದ್ಯ ಪಾಠಗಳಲ್ಲಿಯೂ ಆರರಿಂದ ಎಂಟರವರೆಗೆ ಅಭ್ಯಾಸಗಳಿದ್ದರೆ ಪ್ರತಿ ಪದ್ಯಪಾಠದಲ್ಲಿಯೂ ನಾಲ್ಕರಿಂದ ಆರರವರೆಗೆ ಅಭ್ಯಾಸಗಳಿವೆ. ಸಾಮಾನ್ಯವಾಗಿ ಪಾಠವನ್ನು ಕಲಿತು ಪ್ರಶ್ನೆಗಳಿಗೆ ಉತ್ತರಿಸುವ ಅಭ್ಯಾಸವು ವಿಷಯ ಗ್ರಹಣಕ್ಕೆ ಮತ್ತು ಅದರ ಮೌಲ್ಯಮಾಪನಕ್ಕೆ ಒತ್ತು ಕೊಟ್ಟಿವೆ. ಉಳಿದ ಅಭ್ಯಾಸಗಳು ಭಾಷೆಯ ಕಲಿಕೆ ಮತ್ತು ಮೌಲ್ಯಮಾಪನಕ್ಕೆ ಒತ್ತು ಕೊಟ್ಟಿರುವುದು ಸ್ಪಷ್ಟವಾಗುತ್ತದೆ. ಈ ಪಾಠಗಳ ಅಭ್ಯಾಸಗಳು ಮಕ್ಕಳ ಭಾಷಾ ಸಾಮರ್ಥ್ಯಕ್ಕೆ ಅನುಗುಣವಾಗಿ ಬಾಯಿಮಾತಿನಲ್ಲಿ ಬರವಣಿಗೆಯಲ್ಲಿ ಅಭ್ಯಾಸ

ಮಾಡಿಸುವ ರೀತಿಯಲ್ಲಿ ಚಟುವಟಿಕೆಯನ್ನು ಕೊಡಲಾಗಿದೆ. ಈ ಎಲ್ಲಾ ಅಂಶಗಳು ಒಂದಲ್ಲಾ ಒಂದು ರೀತಿಯಿಂದ ಪಾಠ/ಪದ್ಯ ಮತ್ತು ಅಭ್ಯಾಸ ಚಟುವಟಿಕೆಗೆ ಸಂಬಂಧ ಕಲ್ಪಿಸಿ ರಚನೆ ಮಾಡಲಾಗಿದೆ. ಪಾಠಗಳಲ್ಲಿ, ಅಭ್ಯಾಸಗಳಲ್ಲಿ ಲೇಖನ ಚಿನ್ಹೆಗಳ ಬಳಕೆ ಸಮಗ್ರವಾಗಿ ನಡೆದಿದೆ. ಆದರೆ ಇದರ ಬಗ್ಗೆ ಅಭ್ಯಾಸ ಮಾಡಲು ಅನುಕೂಲವಾಗುವಂತೆ ಪ್ರತ್ಯೇಕವಾಗಿ ಅಭ್ಯಾಸಗಳನ್ನು ಕೊಟ್ಟಿರದೇ ಇರುವ ಅಂಶವನ್ನು ಸಹ ಕಾಣಬಹುದಾಗಿದೆ.

ಗುಣಿತಾಕ್ಷರ ಒತ್ತಕ್ಷರಗಳ ಬಳಕೆ ಅರ್ಥ ಮತ್ತು ರಚನೆಯ ದೃಷ್ಟಿಯಿಂದ ವಿಶಿಷ್ಟವೆನಿಸುವ ಪದಗಳನ್ನು ವಾಕ್ಯಗಳಲ್ಲಿ ಅಭ್ಯಾಸ ಮಾಡಿಸಲು 'ಓದಿ ಅಭ್ಯಾಸ' ಎಂಬ ಕ್ರಮಣಿಕೆಯನ್ನು ಕೊಟ್ಟಿದೆ. ಇದರಂತೆ ಹೊಂದಿಸಿ ಬರೆಯಿರಿ, ಈ ಪ್ರಶ್ನೆಗಳಿಗೆ ಉತ್ತರಿಸಿ, ಓದಿ-ತಿಳಿ, ಖಾಲಿ ಬಿಟ್ಟ ಸ್ಥಳಗಳನ್ನು ಸರಿಯಾದ ಪದದಿಂದ ತುಂಬಿ ಇತ್ಯಾದಿ ಭಾಷಾ ಚಟುವಟಿಕೆಗಳನ್ನು ಕೊಟ್ಟಿರುವುದನ್ನು ಈ ಪಠ್ಯದಲ್ಲಿ ಕಾಣಬಹುದಾಗಿದೆ. ಈ ರೀತಿಯ ಚಟುವಟಿಕೆ ಆಧಾರಿತ ಪಠ್ಯಕ್ರಮ ರಚನೆಯ ವ್ಯವಸ್ಥೆಯನ್ನು ಹಿಂದಿನ ಪಠ್ಯಗಳಲ್ಲಿ ದೊರಕುವುದಿಲ್ಲ. ಆದರೂ ಸಹ ೧೯೬೫ ರಿಂದ ಪಠ್ಯಕ್ರಮದಲ್ಲಿ ಸ್ವಲ್ಪಮಟ್ಟಿಗೆ ವ್ಯಾಕರಣ ಅಂಶ ಕೊಟ್ಟಿರುವುದನ್ನು ಕಾಣುತ್ತೇವೆ. ಆದರೆ ಪರಿಪೂರ್ಣವಾಗಿ ವ್ಯಾಕರಣ ಚಟುವಟಿಕೆಯ ಮೂಲಕ ಪಠ್ಯಕ್ರಮ ರಚನೆಯಾಗಿರುವುದು ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯ ನಂತರ ಬಂದ ಪಠ್ಯಕ್ರಮದಿಂದ ಎಂಬುದು ಅಧ್ಯಯನ ಸಂದರ್ಭದಲ್ಲಿ ದೊರೆತ ಪಠ್ಯದಿಂದ ಸ್ಪಷ್ಟವಾಗುತ್ತದೆ. ಈ ವಿಧಾನ ಮುಂದುವರೆಯುತ್ತ ಬಂದಿರುವುದನ್ನು ಇಂದಿನ ಪಠ್ಯ ಪುಸ್ತಕಗಳಲ್ಲಿ ಕಾಣುತ್ತೇವೆ. ಆದರೆ ಪರಿಷ್ಕರಣೆಗೊಂಡು ರಚನೆಯಾಗಿರುವುದನ್ನು ಸಹ ಇಂದು ಕಾಣಬಹುದಾಗಿದೆ.

• • •

## ಅಧ್ಯಾಯ : ನಾಲ್ಕು

# ಧ್ವನಿರಚನೆ

---

೪.೧. ಕನ್ನಡ ಭಾಷಾ ಪಠ್ಯಪುಸ್ತಕಗಳ ಪ್ರಾಸ್ತವಿಕ ಮಾತು

೪.೨. ಧ್ವನಿರಚನೆಯ ಸ್ವರೂಪ

೧. ಕನ್ನಡ ಪಠ್ಯಪುಸ್ತಕಗಳಲ್ಲಿ ವರ್ಣಮಾಲೆಯ ಪರಿಚಯ

೨. ಕನ್ನಡ ಭಾಷಾ ಪಠ್ಯಪುಸ್ತಕಗಳಲ್ಲಿನ ಧ್ವನಿ ವ್ಯವಸ್ಥೆ

೩. ಆಧುನಿಕ ಚಿಂತಕರ ಅಭಿಪ್ರಾಯಗಳ ವಿಶ್ಲೇಷಣೆ

## ಅಧ್ಯಾಯ : ನಾಲ್ಕು

# ಧ್ವನಿರಚನೆ

### ೪.೧ ಕನ್ನಡ ಭಾಷಾ ಪಠ್ಯಪುಸ್ತಕಗಳ ಪ್ರಾಸ್ತಾವಿಕ ಮಾತು

ಕರ್ನಾಟಕ ಸರ್ಕಾರ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ ಉದ್ದೇಶ ಮತ್ತು ಗುಣಮಟ್ಟದ ಸುಧಾರಣೆಗಾಗಿ ಬೋಧನೆಯಲ್ಲಿ ಪರಿಣಾಮಕಾರಿಯಾಗುವಂತೆ ಮಾಡಲು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಬಂದಿದೆ. ಕಲಿಕೆಯ ಕನಿಷ್ಠ ಮಟ್ಟವನ್ನು ಗಮನದಲ್ಲಿಟ್ಟುಕೊಂಡು ಪಠ್ಯಪುಸ್ತಕಗಳನ್ನು ವಿವಿಧ ಕಾರ್ಯಗಾರಗಳ ಮೂಲಕ ಪರಿಷ್ಕರಿಸಿ ಚರ್ಚಿಸಿ, ರಚಿಸಲಾಗುತ್ತಿದೆ. ಈ ಎಲ್ಲಾ ಕಾರ್ಯಕ್ರಮಗಳ ಮುಖ್ಯ ಉದ್ದೇಶ ಪಠ್ಯಪುಸ್ತಕಗಳನ್ನು ಸಮಾಜ ಮುಖಿಗೊಳಿಸುವ ಪ್ರಯತ್ನವಾಗಿದೆ. ಆಯಾಕಾಲದ ಆಶಯಕ್ಕೆ ತಕ್ಕಂತೆ ವೈಜ್ಞಾನಿಕವಾಗಿ ಪಠ್ಯಪುಸ್ತಕಗಳನ್ನು ರಚಿಸಲಾಗುತ್ತಿದೆ. ಜ್ಞಾನ ಶಾಖೆಗಳಲ್ಲಿ ಒಂದಾದ ಶಿಕ್ಷಣ ಎಲ್ಲರ ಪ್ರಗತಿಗೆ ದಾರಿಯಾಗಿದೆ. ಕಲಿಕೆ ಮತ್ತು ಬೋಧನೆ ಶೈಕ್ಷಣಿಕವಾಗಿ ಅತ್ಯಂತ ಪರಿಣಾಮಕಾರಿಯಾದ ಮಾಧ್ಯಮವಾಗಿದೆ. ಸಮಾಜದಲ್ಲಿ ಬಳಕೆಯಲ್ಲಿರುವ ಭಾಷೆ, ಸಂಸ್ಕೃತಿ, ಸಾಹಿತ್ಯ ಮತ್ತು ಕಲೆ ಇವುಗಳನ್ನು ಸಮರ್ಪಕ ರೀತಿಯಲ್ಲಿ ಪಠ್ಯಪುಸ್ತಕದ ವಿಷಯವನ್ನು ಅಳವಡಿಸಲಾಗಿದೆ.

ಮಗುವಿನ ವಯಸ್ಸು ಮತ್ತು ಮಾನಸಿಕ ಮಟ್ಟಕ್ಕೆ ಅನುಗುಣವಾಗಿ ಕನ್ನಡ ಭಾಷೆಯ ಕಲಿಕೆಯನ್ನು ಪರೋಕ್ಷವಾಗಿ ಪರಿಚಯಿಸುವ ಉದ್ದೇಶ ಹೊಂದಿದೆ. ಹಾಗೆಯೇ ಮನೆ ಮಾತುಳ್ಳ ಮಕ್ಕಳು ಕನ್ನಡ ಭಾಷೆಯನ್ನು ಔಪಚಾರಿಕ ನೆಲೆಯಲ್ಲಿ ಕಲಿಯಬೇಕಾಗಿದೆ. ಈ ರೀತಿ ಕಲಿಯುವಾಗ ಅನೌಪಚಾರಿಕ ನೆಲೆಯ ಕನ್ನಡ ಭಾಷೆಯ ಮಾದರಿಗಳು ಅಡ್ಡಿಪಡಿಸುತ್ತಿರುತ್ತವೆ. ಅಂತಹ ಅಡ್ಡಿಪಡಿಸುವ/ವ್ಯತ್ಯಾಸದಿಂದಿರುವ ಭಾಷಾ ಮಾದರಿಗಳನ್ನು ವೈಜ್ಞಾನಿಕ ಭಾಷಾಬೋಧನೆ ಮತ್ತು ಕಲಿಕೆಯ ತತ್ವಗಳ ಆಧಾರದಿಂದ ಪರಿಹರಿಸಬೇಕಾಗಿದೆ. ಭಾಷಾ ಕಲಿಕೆಯ ಮುಖ್ಯ ಉದ್ದೇಶ ವಿಷಯಗ್ರಹಣ, ಅಭಿವ್ಯಕ್ತಿ, ರಸಾನುಭವವನ್ನು ಹೊಂದುವುದಲ್ಲದೇ ಆಲಿಸುವ, ಮಾತನಾಡುವ, ಓದುವ ಮತ್ತು ಬರೆಯುವ ಉದ್ದೇಶವನ್ನು ಹೊಂದಿದೆ. ಸುಶಿಕ್ಷಿತರಾಗಲು ಪಠ್ಯಗಳು ಪ್ರಮುಖ ಸಾಧನವಾಗಿದೆ. ಅಲ್ಲದೆ, ಕಲಿಕೆ ಮತ್ತು ಬೋಧನೆಗಳ ಮಾಧ್ಯಮವೂ ಆಗಿದೆ. ಒಂದು ಪಠ್ಯ ನಿರ್ಮಾಣದ ಹಿಂದೆ ಒಂದು ನಾಡಿನ ಸಾಂಸ್ಕತಿಕ, ಭಾಷಿಕ ಸ್ವರೂಪ ಅಡಗಿರುತ್ತದೆ.

ರಾಷ್ಟ್ರಾದ್ಯಂತ ಹೊಸ ರಾಷ್ಟ್ರೀಯ ಶಿಕ್ಷಣ ನೀತಿ (New Education policy ೧೯೮೬) ಜಾರಿಗೆ ಬಂತು. ಈ ನೀತಿಯಲ್ಲಿದ್ದ ಶೈಕ್ಷಣಿಕ ಕೊರತೆಗಳನ್ನು ನೀಗಿಸುವುದರ ಹಿನ್ನೆಲೆಯಲ್ಲಿ ಎನ್.ಸಿ.ಇ.ಅರ್.ಟಿ. ಡಿ.ಎಸ್.ಇ.ಅರ್.ಟಿ., ಸಿ.ಇ.ಅರ್.ಟಿ. ಸಂಸ್ಥೆಗಳು ಪ್ರಕಟಿಸಿದ ಪರಿಷ್ಕೃತ ಕಲಿಕೆಯ ಕನಿಷ್ಟ ಮಟ್ಟದ ತತ್ವಗಳನ್ನೊಳಗೊಂಡಿದೆ. ಇಂತಹ ತತ್ವಗಳನ್ನು ಆಧರಿಸಿ ಪಠ್ಯಗಳು ರಚನೆಯಾಗುತ್ತಿವೆ. ೧೯೯೫-೯೬ ನೇ ವರ್ಷದಲ್ಲಿ ಕರ್ನಾಟಕ ಸರ್ಕಾರ ಕಲಿಕೆಯ ಕನಿಷ್ಠ ಸಾಮರ್ಥ್ಯ ಆಧಾರಿತ ಪಠ್ಯವಸ್ತು ಮತ್ತು ಪಠ್ಯಪುಸ್ತಕಗಳನ್ನು ರಚಿಸಿ ಅನುಷ್ಠಾನಕ್ಕೆ ತರಲಾಯಿತು. ಆ ರೀತಿ ತರುವಾಗ ಬೇರೆ ಬೇರೆ ನೀತಿಗಳಿಂದ ಕಲಿಕೆಗೆ ಪೂರಕವಾಗಿರುವಂತೆ ಅಭ್ಯಾಸ ಚಟುವಟಿಕೆಗಳನ್ನು ಅಳವಡಿಸಲಾಗಿದೆ.

ಮಗುವಿನ ಸಾಮರ್ಥ್ಯದ ಹಿನ್ನೆಲೆಯನ್ನು ಗಮನಿಸಿ ನಲಿ-ಕಲಿ ಪದ್ಧತಿಯನ್ನು ತರಲಾಗಿದೆ. ರೂಪ ಸಾಮ್ಯ ಪದ್ಧತಿಯೊಂದಿಗೆ ಧ್ವನಿ ಸಾಮ್ಯ ಪದರಚನಾ ಕ್ರಮದಲ್ಲಿ ಪಠ್ಯಗಳನ್ನು ರೂಪಿಸಲಾಗಿದೆ. ಹಾಗೆಯೇ ಚಿತ್ರದ ಮೂಲಕ ರೂಪ ಸಾಮ್ಯದ ಅಕ್ಷರಗಳೊಂದಿಗೆ ಸರಳ ಪದ ರಚಿಸುವಂತೆ ಅಳವಡಿಸಿಕೊಳ್ಳಲಾಗಿದೆ. ಕಿರುವಾಕ್ಯಗಳನ್ನು ನಿರ್ಮಾಣ ಮಾಡುವ, ಓದು ಬರಹವನ್ನು ಹಂತಹಂತವಾಗಿ ಕಲಿಯುವ ಕ್ರಮಕ್ಕೆ ಆದ್ಯತೆ ನೀಡಲಾಗಿದೆ. ಕನ್ನಡ ಕಲಿ-ನಲಿ-೧ ಇದೇ ಅನುಕ್ರಮಣಿಕೆಯಲ್ಲಿ ರಚಿತಗೊಂಡಿದೆ. ಅಂದರೆ ಔಪಚಾರಿಕ ನೆಲೆಯಲ್ಲಿ ಮಗು ಕನ್ನಡ ಭಾಷೆಯನ್ನು ನಲಿಯುತ್ತ ಕಲಿಯುವ ಮತ್ತು ಕಲಿಯುತ್ತ ನಲಿಯುವ ಈ ವಿಧಾನ ಪಠ್ಯದಲ್ಲಿ ಬಳಕೆಯಾಗಿರುವುದರಿಂದ ಪರಿಣಾಮಕಾರಿಯಾದ ಪ್ರಭಾವ ಮಕ್ಕಳಿಗೆ ಆಗುವುದು. ಪ್ರಸ್ತುತ ಪಠ್ಯದಲ್ಲಿ ಓದುವ ಮತ್ತು ಬರೆಯುವ ವಿಧಾನವನ್ನು ಪ್ರಗತಿಗೊಳಿಸಲು ಪ್ರತಿಯೊಂದು ಪಾಠದಲ್ಲಿ ಚಟುವಟಿಕೆಗಳನ್ನು ನೀಡಲಾಗಿದೆ. ಪಠ್ಯದಲ್ಲಿ ಅನಗತ್ಯ ವ್ಯಾಕರಣಾಂಶ ಗಳನ್ನು, ಸಂಕೀರ್ಣ ವಾಕ್ಯಗಳು ಬಳಕೆಯಾಗದಂತೆ ನೋಡಿಕೊಳ್ಳಲಾಗಿದೆ. ಒಂದು ವೇಳೆ ಈ ಮಾದರಿಯ ರಚನೆಗಳು ಇದ್ದರೂ ಅಂತಹವುಗಳನ್ನು ಸರಳಗೊಸಲಾಗಿದೆ.

ಮೂಲಾಕ್ಷರ, ಗುಣಿತಾಕ್ಷರ ಮತ್ತು ಒತ್ತಕ್ಷರಗಳನ್ನು ವೈಜ್ಞಾನಿಕವಾಗಿ ಅತ್ಯಂತ ಸರಳ ಕ್ರಮದಲ್ಲಿ ಅಳವಡಿಸಲಾಗಿದೆ. ಮಗುವಿನ ಕಲಿಕೆಯನ್ನು ಪರಿಣಾಮಕಾರಿಯಾಗಿ ಮತ್ತು ಸೃಜನಶೀಲತೆ ಗೊಳಿಸುವ ವಿಕಾಸದ ಉದ್ದೇಶದಿಂದ ಅಭ್ಯಾಸಗಳನ್ನು ಓದು-ತಿಳಿ, ಗಮನಿಸಿ, ಅಭ್ಯಾಸ ಚಟುವಟಿಕೆ, ಭಾಷಾಭ್ಯಾಸ ಮತ್ತು ಭಾಷಾಚಟುವಟಿಕೆಗಳನ್ನು ಪಠ್ಯದ ವಸ್ತುವಿಗೆ ಅನುಗುಣವಾಗಿ ಕೊಡಲಾಗಿದೆ. ಪ್ರತಿಯೊಂದು ಪಾಠದಲ್ಲೂ ಸೃಜನಶೀಲ ಕ್ರಿಯೆಯನ್ನು ಅಳವಡಿಸಲಾಗಿದೆ. ಪಠ್ಯದಲ್ಲಿ ಹಿಮಮಣಿ ಮತ್ತು ಅರ್ಥಸಹಿತ ಪದಭಾಗವು ಕಲಿಕೆಗೆ ಪೂರಕವಾಗಿದೆ. ಚಿತ್ರ ನೋಡುವುದು , ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು, ಸಂಬಂಧಿಸಿದ ಕೌಶಲ ಮತ್ತು ಸೃಜನಶೀಲತೆ ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕನ್ನಡ ಕಲಿನಲಿ-೧ ರಚನೆಗೊಂಡಿದೆ. ರ, ಗ, ಸ, ದ, ಅ, ಈ ಧ್ವನಿಗಳಿಂದ ಹಲವು ಪದರಚನೆಯನ್ನು ಮಾಡಬಹುದಾಗಿದೆ. ಉದಾಹರಣೆಗೆ ಅರಸ, ಸರ

ರಸ, ದಸರ, ಅಗಸ ಇತ್ಯಾದಿ ಪದಗಳನ್ನು ಓದಲು ಮತ್ತು ಬರೆಯಲು ಸೂಚಿಸಲಾಗಿದೆ. ಈ ಸೂತ್ರದ ಮುಖ್ಯ ಉದ್ದೇಶ ಸಮಗ್ರ ಕನ್ನಡ ವರ್ಣಮಾಲೆಯಲ್ಲಿ ಬರುವ ಅಕ್ಷರಗಳನ್ನು ಕಲಿಸುವ ಉದ್ದೇಶವನ್ನು ಹೊಂದಿದೆ.

ಇಂತಹ ಅಕ್ಷರ ಸೂತ್ರವನ್ನು ಬಳಸಿಕೊಂಡು ಮುಂದಿನ ಪಾಠಕ್ಕೆ ಪ್ರಯೋಜನವಾಗುವಂತೆ ಅಳವಡಿಸಲಾಗಿದೆ. ಕಲಿತ ಅಕ್ಷರ ಮತ್ತು ಪದಗಳನ್ನು ಮಕ್ಕಳಿಗೆ ನೆನಪಿಸಿ, ನಂತರ ಮುಂದಿನ ಅಕ್ಷರವನ್ನು ಕಲಿಯುವುದಕ್ಕೆ ದಾರಿ ಮಾಡಿಕೊಡಲಾಗಿದೆ. ಅಕ್ಷರ ಕಲಿಯುವುದು, ಕಲಿತ ಅಕ್ಷರಗಳಿಂದ ಪದ ರಚಿಸುವುದು, ರಚಿಸಿದ ಪದಗಳನ್ನು ಓದುವುದು ಮತ್ತು ಬರೆಯುವುದು ಕಲಿಕೆಯ ಪ್ರಮುಖ ಉದ್ದೇಶವಾಗಿದೆ. ಹೀಗೆ ಪೂರ್ಣ ಮೂಲಾಕ್ಷರದ ಪರಿಚಯವಾದ ನಂತರ ಗುಣಿತಾಕ್ಷರದ ಪರಿಚಯ ಆಗಬೇಕಾಗುತ್ತದೆ. ಗುಣಿತಾಕ್ಷರದ ಪದರಚನೆ ಓದಿಗೆ ದಾರಿ ಮಾಡಿಕೊಡುತ್ತದೆ. ಹಾಗೆಯೇ ಒತ್ತಕ್ಷರದ ಕಲ್ಪನೆ ಮಕ್ಕಳಿಗೆ ಅವುಗಳ ರೂಪಸಾಮ್ಯದ ಮೇಲೆ ವರ್ಗೀಕರಿಸಿ ನೀಡಿದೆ. ಜೊತೆಗೆ ಆಲಿಸುವಿಕೆಯಂತಹ ಪ್ರಕ್ರಿಯೆಯನ್ನು ಪರಿಣಾಮಕಾರಿಗೊಳಿಸಲು ೧,೨,೩,೪,ಮತ್ತು ೬ ನೇ ಪಾಠಗಳನ್ನು ಅಳವಡಿಸಲಾಗಿದೆ. ಬರಹವನ್ನು ಕಲಿಸಲು ರೇಖಾವಿನ್ಯಾಸವನ್ನು ನೀಡಲಾಗಿದೆ. ಹಾಗೆ ನೋಡಿದರೆ ಓದು-ಬರಹ ಎರಡನ್ನು ಒಟ್ಟೊಟ್ಟಿಗೆ ಸೂತ್ರಬದ್ಧವಾಗಿ ಮಕ್ಕಳು ಕಲಿಯಬೇಕಾಗಿದೆ.

ಎರಡನೇ ತರಗತಿಯ ಕನ್ನಡ ಕಲಿ-ನಲಿ ಎಂಬ ಪುಸ್ತಕವು ಒಂದನೇ ತರಗತಿಯಲ್ಲಿ ಕಲಿತ ಅಂಶಗಳನ್ನು ಪುನಾರಾವರ್ತಿಸಿಕೊಳ್ಳಲು ಅವಕಾಶ ಕಲ್ಪಿಸಿದೆ. ಮಗುವಿನ ಸರ್ವತೋಮುಖ ಸಂಪನ್ನ ಬೆಳವಣಿಗೆ ಭಾಷಾ ಕಲಿಕೆಯಿಂದ ಮಾತ್ರ ಸಾಧ್ಯ ಎಂಬ ಸತ್ಯವನ್ನು ಅರಿಯಬೇಕಾಗಿದೆ. ಮಗುವಿನ ವಯಸ್ಸು ಮತ್ತು ಮಾನಸಿಕ ಬೆಳವಣಿಗೆಗೆ ಅನುವಾಗುವಂತಹ ಪೂರಕ ಕಲಿಕಾ ವಿಷಯವನ್ನು ಕನ್ನಡ ಭಾಷೆಯ ಕಲಿಕೆಯ ಜೊತೆಯಲ್ಲಿ ಪರೋಕ್ಷವಾಗಿ ಪರಿಚಯಿಸುವ ಉದ್ದೇಶದಿಂದ ಕನ್ನಡ ಭಾಷೆಯ ಈ ಪುಸ್ತಕ ರಚನೆಗೊಂಡಿದೆ. ಪ್ರಚಲಿತ ಭಾಷಾ ಬಳಕೆಯ ಅವಶ್ಯಕತೆ ಇಂದಿನ ಶಿಕ್ಷಣದ ಸಿದ್ಧಾಂತವಾಗಿರುವುದರಿಂದ ವೈಜ್ಞಾನಿಕ ಭಾಷಾ ಬೋಧನೆಯ ಮತ್ತು ಕಲಿಕೆಯ ತತ್ವಗಳ ಆಧರಿಸಿ ರಚನೆಯಾದಂತೆ ತೋರುತ್ತದೆ. ಇದರಿಂದ ಮಕ್ಕಳು ಭಾಷಾ ಕಲಿಕೆಯ ಉದ್ದೇಶಗಳಾದ ವಿಷಯಗ್ರಹಣ, ಅಭಿವ್ಯಕ್ತಿ, ರಸಾನುಭವಗಳನ್ನು ಹೊಂದಿ ಆಲಿಸುವ, ಮಾತನಾಡುವ, ಓದುವ ಮತ್ತು ಬರೆಯುವ ಕೌಶಲಗಳನ್ನು ಬಳಸುವ ಸಾಮರ್ಥ್ಯವನ್ನು ಪಡೆಯುತ್ತಾರೆ ಎಂಬ ಸಿದ್ಧಾಂತಕ್ಕೆ ಒಳಪಟ್ಟು ಕನ್ನಡ ಭಾಷಾ ಪಠ್ಯವನ್ನು ರಚಿಸಿದಂತೆ ತೋರುತ್ತದೆ.

ಈ ಪುಸ್ತಕದ ವಿನ್ಯಾಸ ಹಾಗೂ ಸಾರ, ನಾಡಿನ ಶ್ರೀ ಸಾಮಾನ್ಯರ ಬದುಕಿನ ಪರಿಸರವನ್ನು ಅವಲಂಬಿತವಾಗಿರುತ್ತದೆ. ಆಯಾ ಹೊತ್ತಿನ ಸಾಮಾಜಿಕ ಹೊತ್ತಿನಲ್ಲಿ ನಿರ್ಧರಿಸುವಂತಹ ರೀತಿಯಲ್ಲಿ ನೈತಿಕ ಮೌಲ್ಯಗಳನ್ನು ಅಳವಡಿಸಿಕೊಂಡು ಸಮಸ್ತ ನಾಗರಿಕರಿಗೆ

ನಂಬಿಕೆಯ ಪಾತ್ರವಾಗಿ ಈ ಪಠ್ಯ ರಚನೆಯಾದಂತೆ ಮೇಲ್ನೋಟಕ್ಕೆ ಕಂಡುಬರುತ್ತದೆ. ಒಂದನೇ ತರಗತಿಯಲ್ಲಿ ಕಲಿತ ಸಾಮರ್ಥ್ಯ ಹಿನ್ನಲೆಯನ್ನು ಬಳಸಿಕೊಂಡು ರಚಿತವಾಗಿದೆ. ನಲಿಕಲಿ ಪದ್ಧತಿ, ರೂಪ ಸಾಮ್ಯ ಪದ್ಧತಿಯೊಂದಿಗೆ ಧ್ವನಿ ಸಾಮ್ಯ ಪದ ಮತ್ತು ವಾಕ್ಯರಚನೆಯ ಕ್ರಮದಲ್ಲಿ ಪಠ್ಯ ರಚಿತವಾಗಿದೆ.

ಚಿತ್ರ ಪದ್ಧತಿಯನ್ನು ಪ್ರಧಾನವಾಗಿ ಅಳವಡಿಸಿಕೊಳ್ಳಲಾಗಿದೆ. ಕಾರಣ ಮಗುವಿನ ಮನಸ್ಸನ್ನು ಆಕರ್ಷಣೆಗೊಳಿಸಿ ಕಲಿಕೆಯಲ್ಲಿ ಆಸಕ್ತಿಯನ್ನು ತರುವುದಕ್ಕಾಗಿ ಇಂತಹ ಪ್ರಯತ್ನಗಳಿಗೆ ಕೈಹಾಕಿದಂತೆ ಕಂಡುಬರುತ್ತದೆ. ಈ ಚಿತ್ರಗಳಿಗೆ ಅನುಗುಣವಾಗಿ ರೂಪ ಸಾಮ್ಯದ ಅಕ್ಷರಗಳನ್ನು ಕೊಡಲಾಗಿದೆ. ಈ ಅಕ್ಷರಗಳೊಂದಿಗೆ ಪದ ರಚಿಸುತ್ತ ವಾಕ್ಯವನ್ನು ಕಟ್ಟುವಂತಹ ಕಲಿಕೆಗೆ ಅವಕಾಶ ಮಾಡಿ ಕೊಟ್ಟಿದೆ. ಓದಿನ ಒಂದೊಂದೇ ಹಂತಗಳನ್ನು ಕಲಿಸುತ್ತಾ ಕರಗತ ಮಾಡಿಸಿ ಕೊಡುವ ಗೋಜಿಗೆ ಹೋದಂತೆ ಕಾಣುತ್ತದೆ.

ಭಾಷಾ ಕೌಶಲಗಳಾದ ಆಲಿಸುವುದು, ಮಾತನಾಡುವುದು, ಓದುವ ಕೌಶಲ್ಯಗಳನ್ನು ಮಕ್ಕಳನ್ನು ವೃದ್ಧಿಪಡಿಸಲು, ಪ್ರತಿ ಪಾಠ ಪದ್ಯದಲ್ಲಿ ಅಭ್ಯಾಸ, ಚಟುವಟಿಕೆಯ ಮೂಲಕ ಕಲಿಯುವಂತೆ ಅವಕಾಶ ಮಾಡಿ ಕೊಟ್ಟಿದೆ. ಇದ್ದಂತೆ ತೋರುತ್ತದೆ. ಆದರೆ ಕೆಲವೊಂದು ಸಂದರ್ಭಗಳಲ್ಲಿ ಪಠ್ಯದ ದೊಡ್ಡ ವಾಕ್ಯ ಅನಗತ್ಯ ವ್ಯಾಕರಣಾಂಶಗಳನ್ನು ಕೊಡಲಾಗಿದೆ. ಸಂವಹನ ಕ್ರಿಯೆಗೆ ವ್ಯವಸ್ಥಿತ ಚಟುವಟಿಕೆಯನ್ನು ನಿರ್ಮಿಸಿದೆ. ಚಿತ್ರಗಳ ಪುನರಚನೆಯನ್ನು ಅರ್ಥಪೂರ್ಣವಾಗಿ ಕೊಟ್ಟಿದೆ. ಮೂಲಾಕ್ಷರ, ಗುಣಿತಾಕ್ಷರ ಮತ್ತು ಒತ್ತಕ್ಷರವನ್ನು ವೈಜ್ಞಾನಿಕವಾಗಿ ಅತ್ಯಂತ ಸರಳ ರೀತಿಯ ಕ್ರಮ ಅನುಸರಿಸಿ ಪಠ್ಯವನ್ನು ನಿರ್ಮಿಸಲಾಗಿದೆ. ಮಗುವಿನ ಸಾಮರ್ಥ್ಯಕ್ಕೆ ಅನುಗುಣವಾಗಿ ಉಪಯೋಗವಾಗುವಂತಹ ಸರಳ ರೀತಿಯ ಅಭ್ಯಾಸಗಳನ್ನು ಕೊಟ್ಟಿದ್ದು ಅದರಲ್ಲಿ ಪ್ರಮುಖವಾಗಿ ಓದಿ–ತಿಳಿ, ಗಮನಿಸಿ, ಅಭ್ಯಾಸ, ಅಭ್ಯಾಸ–ಚಟುವಟಿಕೆ, ಭಾಷಾಭ್ಯಾಸ ಮತ್ತು ಭಾಷಾ ಚಟುವಟಿಕೆಗಳನ್ನು ಶ್ರೇಣಿಕೃತ ರೀತಿಯಲ್ಲಿ ಕೊಟ್ಟಂತೆ ಕಂಡು ಬರುತ್ತದೆ. ನೆನಪಿನಂಗಳ ಎಂಬ ಶೀರ್ಷಿಕೆ ಅಡಿಯಲ್ಲಿ ಮಗು ಕಲಿಯುವ ಧ್ವನಿರಚನೆ, ಪದರಚನೆ, ವಾಕ್ಯ ರಚನೆಗಳನ್ನು ನೆನಪಿಸಿಕೊಂಡು ಬರೆಯುತ್ತದೆ. ಜೊತೆಗೆ ಸೃಜನಶೀಲರಾಗಿ ವಿಕಾಸ ಹೊಂದುವಂತಹ, ಯೋಜನೆಗಳ ಹಿನ್ನೆಲೆಯಲ್ಲಿ ರೂಪಿತವಾದಂತಹ ಅಂಶಗಳು ಕಂಡು ಬರುತ್ತವೆ. ಅಭ್ಯಾಸಗಳಲ್ಲಿ ಚಿತ್ರಗಳನ್ನು ಬಳಸಿ ಕಥೆ/ಕವನ/ ಇಲ್ಲವೇ ಘಟನೆ ರೂಪಿಸಲು ಉಚಿತ ಪ್ರಯತ್ನ ಮಾಡಿದೆ. ಇದರಿಂದ ಮಕ್ಕಳು ಸ್ವತಂತ್ರವಾಗಿ ಕಲ್ಪನೆ ಮಾಡಿಕೊಂಡು ಧ್ವನಿ, ಪದ, ವಾಕ್ಯಗಳನ್ನು ಸಮಯ ಸಂದರ್ಭಕ್ಕೆ ತಕ್ಕಂತೆ ಬಳಸುವ ವಿಧಾನವನ್ನು ಕಲಿಸುವುದಕ್ಕೆ ಇಂತಹ ಯೋಜನೆಗಳನ್ನು ಸೈದ್ಧಾಂತಿಕ ಹಿನ್ನಲೆಯನ್ನು ಬಳಕೆ ಮಾಡಿಕೊಂಡಂತೆ ಕಂಡು ಬರುತ್ತದೆ. ಈ ಮೇಲಿನ ಚಟುವಟಿಕೆಗಳೆಲ್ಲವು ಪಾಠ, ಪದ್ಯಗಳಲ್ಲಿ ಬಂದ ಪದ, ವಾಕ್ಯ ಘಟನೆಗಳನ್ನೇ ತೆಗೆದುಕೊಳ್ಳಲಾಗಿದೆ. ಕಾರಣ ಮಗುವಿಗೆ ಅರ್ಥಪೂರ್ಣ

ಕಲಿಕೆ ಹಾಗೂ ಆಲಿಸುವ ಕ್ರಿಯೆಯನ್ನು ವೃದ್ಧಿಸುವ ನಿಟ್ಟಿನಲ್ಲಿ ಇಂತಹ ಯೋಜನೆಗಳನ್ನು ಹಾಕಿಕೊಂಡಂತೆ ಕಂಡು ಬರುತ್ತದೆ.

೧೯೮೬ರಿಂದ ರಾಷ್ಟ್ರದಾದ್ಯಂತ ಹೊಸ ರಾಷ್ಟ್ರೀಯ ಶಿಕ್ಷಣ ನೀತಿ ಅನ್ವಯ ಮೂರನೇ ತರಗತಿಯ ಕನ್ನಡ ಭಾಷಾ ಪಠ್ಯಪುಸ್ತಕವನ್ನು ಸಹ ಶೈಕ್ಷಣಿಕ ಕೊರತೆಗಳನ್ನು ತುಂಬಿಕೊಡುವ ದೃಷ್ಠಿಯಿಂದ ಎನ್.ಸಿ.ಇ.ಅರ್.ಟಿ. ಸಂಸ್ಥೆ ಪ್ರಕಟಿಸಿದ ಪರಿಷ್ಕೃತ ಕಲಿಕೆಯ ಕನಿಷ್ಟ ಮಟ್ಟದ ತತ್ವಗಳನ್ನು ಆಧರಿಸಿ ಪಠ್ಯಗಳ ರಚನೆಗೆ ಮುಂದಾಗಿರುವುದು ಸ್ಪಷ್ಟವಾಗುತ್ತದೆ.

ಶಿಕ್ಷಣ ಕ್ರಾಂತಿ ನಡೆದಿರುವ ೨೧ನೇ ಶತಮಾನದ ಸಂದರ್ಭದಲ್ಲಿ ಬೋಧನಾ ವಿಧಾನವನ್ನು ವೈಜ್ಞಾನಿಕಗೊಳಿಸುವ ಅಂಶವನ್ನು ಆಧಾರವಾಗಿಟ್ಟುಕೊಂಡು ಸರ್ಕಾರ ವೈಜ್ಞಾನಿಕ ಮತ್ತು ವ್ಯಾಪಕವಾಗಿ ತಯಾರಿಸಲಾದ ಕನ್ನಡ ಕಲಿ–ನಲಿ–೨ ಪುಸ್ತಕವು ಚಟುವಟಿಕೆಯಾಧಾರಿತವಾಗಿ ರಚನೆಯಾಗಿರುವುದನ್ನು ಕಾಣುತ್ತೇವೆ. ಮೇಲು ನೋಟಕ್ಕೆ ಈ ಪುಸ್ತಕ ಓದು ಬರಹವನ್ನು ಕಲಿಸುತ್ತದೆ ಎಂಬ ಅಂಶ ಕಂಡು ಬಂದರೂ, ಮಗುವಿನ ಮಾತೃ ಭಾಷೆಯ ತಿಳುವಳಿಕೆಯ ಜೊತೆಗೆ ಸರ್ವತೋಮುಖ ಬೆಳವಣಿಗೆಗೆ ಸಹಾಯಕವಾಗುವ ಸಿದ್ಧಾಂತಕ್ಕೆ ಒಳಪಟ್ಟಿದೆ ಎಂದು ಇಲ್ಲಿನ ಚಟುವಟಿಕೆಯಾಧಾರಿತ ಮತ್ತು ಸೃಜನಶೀಲತೆಯ ಅಂಶಗಳನ್ನು ನೋಡಿದರೆ ಸ್ಪಷ್ಟವೆನಿಸುತ್ತದೆ.

ಓದು ಮತ್ತು ಬರಹಕ್ಕೆ ಪಠ್ಯದ ಪ್ರತಿ ಪಾಠದಲ್ಲಿ ಚಟುವಟಿಕೆಯ ಮೂಲಕ ಮಗುವಿಗೆ ಅವಕಾಶವನ್ನು ಕಲ್ಪಿಸುವ ಮೂಲಕ, ದೊಡ್ಡ ವಾಕ್ಯಗಳನ್ನು ಸರಳಗೊಳಿಸಿ ವ್ಯಾಕರಣಾಂಶಗಳನ್ನು ತಿಳಿಸುವ ಮೂಲಕ ಭಾಷೆಯ ರಚನೆಯ ವಿಧಾನವನ್ನು ಹೇಳಿ ಕೊಡಲಾಗುತ್ತದೆ. ಅಂದರೆ ಬರಹದ ಭಾಷೆಯ ಆಯಾಮಗಳನ್ನು ಹೇಳಿಕೊಡಲಾಗುತ್ತದೆ. ಚಿತ್ರಗಳ ಪುನರಚನೆಯನ್ನು ಅರ್ಥಪೂರ್ಣಗೊಳಿಸುವ ಪ್ರಯತ್ನ ನಡೆದಿದೆ. ಇದರ ಉದ್ದೇಶ ಮಕ್ಕಳು ಆಲೋಚಿಸಿ ಕಥೆಯನ್ನು ಕಟ್ಟುತ್ತಾರೆ. ಪ್ರಬಂಧ ಮಾದರಿಯ ಅಥವಾ ಗಾದೆ ಮಾತುಗಳಾಗಲಿ, ಒಗಟುಗಳನ್ನು ವಿಸ್ತರಿಸುವಲ್ಲಿ ಸಮರ್ಥರಾಗುತ್ತಾರೆ.

ಮಗು ತನ್ನ ಸಾಮರ್ಥ್ಯವನ್ನು ಉಪಯೋಗಿಸಿಕೊಳ್ಳಲು, ವೃದ್ಧಿಸಿಕೊಳ್ಳಲು ಅಭ್ಯಾಸಗಳನ್ನು ಕೊಡಲಾಗಿದೆ. ಅದರಲ್ಲಿ ಪ್ರಮುಖವಾಗಿ (ಹಿಂದಿನ ತರಗತಿಗಳಲ್ಲಿರುವಂತೆ) ಓದು ತಿಳಿ ಗಮನಿಸಿ, ಗಮನಿಸಿ ತಿಳಿ, ಅಭ್ಯಾಸ, ಅಭ್ಯಾಸ–ಚಟುವಟಿಕೆ, ಭಾಷಾಭ್ಯಾಸ ಮತ್ತು ಭಾಷಾ ಚಟುವಟಿಕೆಗಳನ್ನು ಶ್ರೇಣಿಕೃತ ರೀತಿಯಲ್ಲಿ ಕೊಡಲಾಗಿದೆ. ಇದು ಸಾಮಾನ್ಯದಿಂದ ವಿಶಿಷ್ಠದೆಡೆಗೆ ಎಂಬ ತತ್ವಕ್ಕೆ ಒಳಪಟ್ಟು ರಚನೆಯಾಗಿರಬೇಕೆಂದೆನಿಸುತ್ತದೆ. ಈ ಪಠ್ಯವು ಸಹ ನೆನಪಿನಂಗಳ ಶೀರ್ಷಿಕೆ ಅಡಿಯಲ್ಲಿ ಮಗು ಕಲಿತ ಪದಗಳನ್ನು ನೆನಪಿಸಿ ಬರೆಯುವುದು,ಓದುವುದು, ಜೊತೆಗೆ ಆಲಿಸುವ, ಮಾತನಾಡುವುದನ್ನು ಕಲಿಯುತ್ತದೆ. ಅಲ್ಲದೆ ಧ್ವನಿರಚನೆ, ಪದರಚನೆ, ವಾಕ್ಯ ಕಟ್ಟುವ ಮತ್ತು ಸೃಜನಾತ್ಮಕತೆಯ ಅಂಶಗಳನ್ನು ತರಗತಿಗೆ ಅನುಸಾರವಾಗಿ ಹೇಳಿಕೊಡುವ ಪ್ರಯತ್ಯ ನಡೆದಿದೆ.

ಅಭ್ಯಾಸಗಳಲ್ಲಿ ಚಿತ್ರ ಬಳಸಿ ಕಥೆ/ಕವನ ಇಲ್ಲವೇ ಘಟನೆ ರೂಪಿಸುವ ಸಲುವಾಗಿ ಇಂತಹ ಪ್ರಯತ್ನಗಳು ಮನೋವಿಜ್ಞಾನಿಗಳ ಪ್ರಯೋಗದ ಹಿನ್ನೆಲೆಯಲ್ಲಿ ಪಠ್ಯದ ರಚನೆ ನಡೆದಿದೆ. ಓದು ಮತ್ತು ಕಲಿಕೆಗೆ ಹೆಚ್ಚು ಆದ್ಯತೆ ಕೊಡುವ ನಿಟ್ಟಿನಲ್ಲಿ ಪಠ್ಯ ರಚನೆ ಮಾಡಿದಂತೆ ತೋರುತ್ತದೆ. ಸಂತಸದಾಯಕ ರೀತಿಯಲ್ಲಿ ಮಗುವಿಗೆ ಆಯಾಸವಾಗದಂತೆ ಕಲಿಕೆಯನ್ನು ಪ್ರೇರೆಪಿಸುವ ನಿಟ್ಟಿನಲ್ಲಿ ಸೃಜನಶೀಲತೆಯ ಚಟುವಟಿಕೆಗಳ ಅಂಶಗಳನ್ನು ಪ್ರತಿ ಪಾಠ, ಪದ್ಯಗಳಲ್ಲಿ ಅಳವಡಿಸಿರುವುದನ್ನು ಕಾಣುತ್ತೇವೆ. ಭಾಷಾ ವೈಜ್ಞಾನಿಕ ಮತ್ತು ಸೈದ್ಧಾಂತಿಕ, ತಾತ್ವಿಕ ಚೌಕಟ್ಟಿನಲ್ಲಿ ತರಗತಿಯ ಮಟ್ಟಕ್ಕೆ ಅನುಗುಣವಾಗಿ ಆನಂದ ರೀತಿಯ ಕಲಿಕೆಯಲ್ಲಿ, ಪ್ರೇರಣೆ, ಆಸಕ್ತಿ, ಉಳಿಸಿ ಬೆಳೆಸುವ, ಕಟ್ಟುವ ದೃಷ್ಟಿಯಿಂದ ರಚನೆಯಾಗಿದೆ. ಪ್ರಾಥಮಿಕ ತರಗತಿಗಳ ಅಭ್ಯಾಸ ಸಹಿತ ಪಠ್ಯಪುಸ್ತಕ ಕನ್ನಡ ಕಲಿ–ನಲಿ –೨ನ್ನು ರಚಿಸಿರುವ ಅಂಶಗಳು ಮೇಲ್ನೋಟಕ್ಕೆ ಕಂಡು ಬರುತ್ತದೆ. ಕನ್ನಡ ಭಾಷೆಯ ಶಿಷ್ಟ ಭಾಷಾ ರೂಪದೊಂದಿಗೆ ಪ್ರಾದೇಶಿಕ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಪ್ರಭೇದವನ್ನು ಗಮನಿಸಿ. ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ತಿಳುವಳಿಕೆಯ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಪಠ್ಯಪುಸ್ತಕ ರಚನೆಯಾಗಿರುವುದು ಕಂಡು ಬರುತ್ತದೆ. ಭಾಷಾ ಸಂಪ್ರದಾಯವನ್ನು ತಿರಸ್ಕರಿಸದೆ ಆಧುನಿಕತೆ ಮತ್ತು ದೇಶಿಯತೆಯ ಹಂಬಲದ ತಿಳುವಳಿಕೆಯನ್ನಿಟ್ಟುಕೊಂಡು ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿ ಪಠ್ಯ ರಚಿತವಾಗಿರುವುದು ಕಂಡು ಬರುತ್ತದೆ.

ಕನ್ನಡ ಕಲಿ–ನಲಿ–೨ ಅಭ್ಯಾಸ ಸಹಿತ ಪಠ್ಯಪುಸ್ತಕ ಭಾಷೆಯನ್ನು ಆಧುನೀಕರಣ ಮತ್ತು ಶಿಷ್ಟೀಕರಣಕ್ಕೆ ಓಗೊಟ್ಟು ಸಮಂಜಸ ಭಾಷಿಕ ಮಾರ್ಪಾಡುಗಳ ಹಿನ್ನೆಲೆಯಲ್ಲಿ ರಚಿತವಾಗಿರುವುದನ್ನು ಕಾಣುತ್ತೇವೆ. ಕಲಿಕೆಯ ಕನಿಷ್ಟ ಮಟ್ಟದ ಸಾಮರ್ಥ್ಯಗಳನ್ನು ಅನುಲಕ್ಷಿಸಿಕೊಂಡು ಪಠ್ಯದ ಸಾರಾಂಶ, ಪಠ್ಯಕ್ರಮ, ಅಭ್ಯಾಸ, ಅಭ್ಯಾಸ–ಚಟುವಟಿಕೆ, ಭಾಷಾಭ್ಯಾಸ, ಚಟುವಟಿಕೆ ಅಳವಡಿಸಿದೆ. ಕಲಿಕೆಯ ಸಾಮರ್ಥ್ಯ, ಕೌಶಲ ಹಾಗೂ ಬೋಧನಾ ಮಟ್ಟಗಳು ತರಗತಿಯ ಮಕ್ಕಳ ವಯೋಮಾನ ಮತ್ತು ಮಾನಸಿಕ ಸ್ತರಕ್ಕೆ ತಕ್ಕಂತೆ ನಿರ್ಣಯಿಸಿದೆ. ಸಮಗ್ರ ಕರ್ನಾಟಕದ ಕನ್ನಡ ಮಕ್ಕಳಿಗೆ ಯಾವುದೇ ರೀತಿಯಿಂದಲು ಇದು ಹೊರೆಯಲ್ಲ. ಸಮರ್ಪಕ ರೀತಿಯಲ್ಲಿ ಪ್ರಾಂತೀಯತೆ, ಔದ್ಯೋಗಿಕತೆ, ಸಾಮಾಜಿಕತೆಯನ್ನು ಕಾಯ್ದುಕೊಂಡು ಕನ್ನಡದ ಪ್ರಭೇದ ಸಮನ್ವಯತೆಯನ್ನು ಸಮತೋಲನವಾಗಿಸಿದೆ.....(೨ನೇ ತರಗತಿ, ಅಧ್ಯಕ್ಷರ ಮಾತು)

ಒಟ್ಟಾರೆಯಾಗಿ ಈ ಪುಸ್ತಕವು ಕ್ರಿಯಾತ್ಮಕ ವ್ಯಾಕರಣವನ್ನು ಭಾಷಾಭ್ಯಾಸದಲ್ಲಿ ನಿರೂಪಿಸಿದೆ. ಭಾಷಾ ಚಟುವಟಿಕೆಯಲ್ಲಿ ಭಾಷಾ ಸೃಜನಶೀಲತೆಗೆ ಅವಕಾಶ ಮಾಡಿಕೊಟ್ಟಿದೆ. ಭಾಷಾಭ್ಯಾಸ ಇದು ವ್ಯಾಕರಣಕ್ಕೆ ಸಂಬಂಧಿಸಿದಂತೆ ನಿಯಮಾವಳಿಯ ಮೂಲಕ ಭಾಷಾ ರಚನೆಯ ವಿವಿಧ ಆಯಾಮಗಳನ್ನು ವಿವರಣಾತ್ಮಕವಾಗಿ ಮಗುವಿನ ಸಾಮರ್ಥ್ಯಕ್ಕೆ ಅನುಗುಣವಾಗಿ ಮಾಹಿತಿಯನ್ನು ಒದಗಿಸಿದೆ. ಮಗುವಿನ ಅವಶ್ಯಕತೆಗೆ ತಕ್ಕಂತೆ ಪಠ್ಯಕ್ರಮವನ್ನು ಸಾಮಾನ್ಯದಿಂದ

ವಿಶಿಷ್ಟದೆಡೆಗೆ ಕೊಂಡೊಯ್ಯುವಂತಹ ಶಿಕ್ಷಣದ ಚೌಕಟ್ಟಿನಲ್ಲಿ ಅವಶ್ಯಕತೆಗೆ ತಕ್ಕಂತೆ ನಮೂದಿಸಿದೆ. ವ್ಯಾಕರಣ ಅಂಶಗಳ ನಿಯಾಮಾವಳಿಗಳನ್ನು ಪ್ರತ್ಯೇಕವಾಗಿ ಮಾಡದ ಸೃಜನಶೀಲತೆ, ಕ್ರಿಯಾತ್ಮಕ ರೀತಿಯಲ್ಲಿ ಭಾಷಾ ನಿಯಮಗಳ ಚೌಕಟ್ಟನ್ನು ಪರಿಚಯಿಸುವ ಪ್ರಯತ್ನವನ್ನು ಮಾಡಲಾಗುತ್ತಿದೆ. ಭಾಷಾ ಚಟುವಟಿಕೆಯ ಕ್ರಿಯೆ ಮಕ್ಕಳಲ್ಲಿ ಸೃಜನಶೀಲತೆಯನ್ನು ವೃದ್ಧಿಸುವ ನಿಟ್ಟಿನಲ್ಲಿ ಈ ಒಂದು ವಿಧಾನ ಮುಖ್ಯ. ಹೊಸ ಹೊಸ ಪದರಚನೆ, ಧ್ವನಿರಚನೆಯ ಬಳಕೆ, ವಾಕ್ಯದ ತಿಳುವಳಿಕೆ, ವಿವರಣೆ, ನಿರೂಪಣೆ ಕುತೂಹಲಕಾರಿಯಾಗಿ ಭಾಷೆಯ ಕ್ರಮಾನುಗತ ಕಲಿಕೆಗೆ ಇಂಬು ಕೊಟ್ಟಿದೆ. ಒಟ್ಟಾರೆ ಈ ಪಠ್ಯಪುಸ್ತಕ ರಚನೆ ಅಭ್ಯಾಸ ಸಹಿತ ಪಠ್ಯಪುಸ್ತಕವಾಗಿದೆ. ಮಗುವಿನ ಬರವಣಿಗೆಗೆ ಆದ್ಯತೆ ನೀಡಿರುವುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ನಾಲ್ಕನೇ ತರಗತಿಯ ಪಠ್ಯಪುಸ್ತಕವು ಸಹ ವಿವಿಧ ಭಾಷಾ ವಿದ್ವಾಂಸರ, ಶಿಕ್ಷಣ ತಜ್ಞರ, ಮನೋವಿಜ್ಞಾನಿಗಳ ಸಲಹೆಗಳ ಮೂಲಕ ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿ ಅನ್ವಯ ಪರಿಷ್ಕರಣೆಗೊಂಡು ರಚಿತವಾಗಿದೆ.

ಮಗುವಿನ ದೈಹಿಕ ವಯಸ್ಸು ಮತ್ತು ಮಾನಸಿಕ ವಿಕಾಸದ ಬೆಳವಣಿಗೆಗೆ ಅನುಕೂಲವಾಗುವಂತೆ ಕಲಿಕೆಗೆ ಪೂರಕವಾದ ವಿಷಯಗಳನ್ನು ಕನ್ನಡ ಭಾಷೆಯ ರಚನೆಯ ನಿಯಮಗಳನ್ನು ಕಲಿಸುವ ಪ್ರಯತ್ನ ನಡೆದಿದೆ. ಜೊತೆಗೆ ಪರೋಕ್ಷವಾಗಿ ಅವುಗಳನ್ನು ಪರಿಚಯಿಸುವ ಉದ್ದೇಶದಿಂದ ಪ್ರಸ್ತುತ ೪ನೇ ತರಗತಿಯ ಕನ್ನಡ ಪಠ್ಯಪುಸ್ತಕ ರಚನೆಗೊಂಡಿದೆ. ಮಾತೃ ಭಾಷೆಯಾಗಿ ಕನ್ನಡವನ್ನು ಕಲಿಸುವಂತಹ ಅಂಶಗಳನ್ನು ಒಳಗೊಂಡಿದೆ. ಈ ಮಕ್ಕಳು ಬಳಸುವ ಭಾಷೆಯ ಅವಶ್ಯಕತೆಯನ್ನು ಅನುಲಕ್ಷಿಸಿ ಈ ಪಠ್ಯವನ್ನು ರಚಿಸಲಾಗಿದೆ ಎಂಬುದು ಈ ಪಠ್ಯಗಳ ವಿಶ್ಲೇಷಣೆಯಿಂದ ಸ್ಪಷ್ಟವಾಗುತ್ತದೆ.

ಪ್ರಸಕ್ತ ಸಾಲಿನಲ್ಲಿರುವ ಶಿಕ್ಷಣದ ಸಿದ್ಧಾಂತಗಳನ್ನು ಈ ಪಠ್ಯಗಳಲ್ಲಿ ಅಳವಡಿಸಿಕೊಳ್ಳಲಾಗಿದೆ. ವೈಜ್ಞಾನಿಕವಾಗಿ ಕನ್ನಡಭಾಷಾ ಬೋಧನೆ ಮತ್ತು ಕಲಿಕೆಯ ತತ್ವಗಳ ಆಧಾರದಿಂದ ರಚನೆಗೊಂಡಂತಹ ಪುಸ್ತಕ ಇದಾಗಿದೆ. ಈ ಅಂಶಗಳಿಂದ ಕನ್ನಡ ಭಾಷೆಯನ್ನು ಕಲಿಯುವ ಮಕ್ಕಳು ಕಲಿಕಾ ಉದ್ದೇಶಗಳಾದ ವಿಷಯಗ್ರಹಣ, ಅಭಿವ್ಯಕ್ತಿ, ರಸಾನುಭವಗಳನ್ನು ಹೊಂದುತ್ತವೆ. ಆಲಿಸುವ, ಮಾತನಾಡುವ, ಓದುವ ಮತ್ತು ಬರೆಯುವ ಭಾಷಾ ಕೌಶಲಗಳಲ್ಲಿ ಸಮರ್ಥರಾಗುವರು. ಎನ್.ಸಿ.ಇ.ಆರ್.ಟಿ. ಮತ್ತು ಡಿ.ಎಸ್.ಇ.ಆರ್.ಟಿ. ಸಂಸ್ಥೆಗಳು ಪ್ರಕಟಿಸಿದ ಕಲಿಕೆಯ ಕನಿಷ್ಠ ಮಟ್ಟದ ತತ್ವಗಳನ್ನು ಆಧರಿಸಿ ಪಠ್ಯ ರಚನೆಯಾಗಿರುವುದು ಕಂಡು ಬರುತ್ತದೆ. ೨೧ನೇ ಶತಮಾನಕ್ಕೆ ಕಾಲಿಟ್ಟಿರುವ ಸುಸಂದರ್ಭದಲ್ಲಿ ಬೋಧನಾಕ್ರಮವನ್ನು ವೈಜ್ಞಾನಿಕಗೊಳಿಸುವುದು ಸರಿಯಷ್ಟೇ. ಅದಕ್ಕಾಗಿ ಸರಕಾರ ವೈಜ್ಞಾನಿಕವಾಗಿ ಮತ್ತು ವ್ಯಾಪಕವಾಗಿ ತಯಾರಿಸಲಾದ ಪ್ರಸ್ತುತ ಪಠ್ಯಪುಸ್ತಕದ ಯೋಜನೆ ಸಾಹಸದ ಪ್ರತೀಕವೆ ಆಗಿದೆ.

'ಕಲಿಕೆಗೆ ಪೂರಕವಾಗಿರುವಂತೆ ರಚಿತವಾದ ಅಭ್ಯಾಸ ಸಹಿತ ಪಠ್ಯಪುಸ್ತಕ ಕನ್ನಡ ಕಲಿ–ನಲಿ–೪ ಪಠ್ಯದಲ್ಲಿ ಕಂಡುಬಂದ ಕೊರತೆಗಳನ್ನು ಗಮನಿಸಿ. ಚರ್ಚಿಸಿ. ವೈಜ್ಞಾನಿಕ

ಪರಿಹಾರಗಳೊಂದಿಗೆ ಸಮಿತಿಯ ಮೂಲಕ ಪಠ್ಯವನ್ನು ಪುನರಚನೆಯನ್ನು ಮಾಡಲಾಗಿದೆ.' ಎಂದು ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷರು ಹೇಳುತ್ತಾರೆ. (ತರಗತಿ-೪ ಅಧ್ಯಕ್ಷರ ಮಾತು)

ಈ ಪುಸ್ತಕದಲ್ಲಿ ನಾಲ್ಕು ಭಾಷಾ ಕೌಶಲಗಳ ಬೆಳವಣಿಗೆಗೆ ಆದ್ಯತೆ ನೀಡಲಾಗಿದೆ. ಆದರೂ ಬಹುಪಾಲು ಓದು ಮತ್ತು ಬರಹಕ್ಕೆ ಎಲ್ಲಾ ಪಾಠ ಪದ್ಯಗಳಲ್ಲಿಯೂ, ಚಟುವಟಿಕೆ ಆಧಾರಿತವಾಗಿ ಕಲಿಯುವಂತಹ ಅವಕಾಶವನ್ನು ಕಲ್ಪಿಸಿರುವುದು ಅಧ್ಯಯನದಿಂದ ಕಂಡು ಬರುತ್ತದೆ. ಪಠ್ಯದಲ್ಲಿ ದೊಡ್ಡ ವಾಕ್ಯ ಹಾಗೂ ವ್ಯಾಕರಣದ ಕ್ಲಿಷ್ಟತೆಯನ್ನು ಮಾಡದೆ. ಅಗತ್ಯತೆಯ ವ್ಯಾಕರಣಾಂಶಗಳನ್ನೇ ಸರಳಗೊಳಿಸಿ ಸಂವಹನ ಕ್ರಿಯೆಗೆ ವ್ಯವಸ್ಥಿತವಾಗಿ ಚಟುವಟಿಕೆಗಳನ್ನು ನಿರ್ಮಿಸಲಾಗಿದೆ. ಪಾಠ ಪದ್ಯ ಹಾಗೂ ಪ್ರಶ್ನಾವಳಿಯ ಚಟುವಟಿಕೆಗಳಲ್ಲಿ ಚಿತ್ರಗಳನ್ನು ಕೊಡಲಾಗಿದೆ. ಚಿತ್ರಗಳ ಸಹಾಯದಿಂದ ಕಲಿಕೆಯನ್ನು ಅರ್ಥಪೂರ್ಣಗೊಳಿಸುವ ಪ್ರಯತ್ನಗಳು ನಡೆದಿವೆ. ಮಗುವಿನ ಸಾಮರ್ಥ್ಯಕ್ಕೆ ತಕ್ಕಂತೆ, ಹಾಗೂ ಸದುಪಯೋಗವಾಗುವ ರೀತಿಯಲ್ಲಿ ಅಭ್ಯಾಸಗಳನ್ನು ಹಿಂದಿನ ತರಗತಿಗಳಲ್ಲಿ ನೀಡಿದಂತೆ ಶ್ರೇಣೀಕೃತವಾಗಿ ಇಲ್ಲಿಯೂ ಕೊಡಲಾಗಿದೆ. ಮಗು ಹಿಂದಿನ ತರಗತಿಯಲ್ಲಿ ಅಥವಾ ಪರಿಸರದಲ್ಲಿ ಕಲಿತ ಪದಗಳನ್ನು ನೆನಪಿಸಿ ಬರೆಯುತ್ತದೆ. ಅದರೊಡನೆ ವಾಕ್ಯ ಕಟ್ಟುವ ಬಗೆಗೆ ಅವಕಾಶವಿದೆ. ಅಲ್ಲದೆ ಸೃಜನಶೀಲತೆಯ ಹಿನ್ನೆಲೆಯಲ್ಲಿ ಕಲಿಸುವ ಪ್ರಕ್ರಿಯೆ ನಡೆದಿದೆ. ಅಭ್ಯಾಸಗಳಲ್ಲಿ ಚಿತ್ರ ಕೊಡಲಾಗಿದೆ. ಇದರ ಉದ್ದೇಶ ಮಕ್ಕಳು ಚಿತ್ರ ಬಳಸಿಕೊಂಡು ಪದಗಳನ್ನು ಜ್ಞಾಪಿಸಿಕೊಳ್ಳುವುದರ ಮೂಲಕ ಚಿಕ್ಕ ಚಿಕ್ಕ ವಾಕ್ಯಗಳ ಮೂಲಕ ಕಥೆ/ಕವನ ಇಲ್ಲವೇ ಘಟನೆಯನ್ನು ರೂಪಿಸಿ ಕೊಂಡು ಸೃಜನಶೀಲತೆಯ ಹಿನ್ನೆಲೆಯಲ್ಲಿ ಚಟುವಟಿಕೆಯನ್ನು ಮುಗಿಸುವರು ಎಂಬ ಕಾರಣಕ್ಕಾಗಿ ಈ ಯೋಜನೆಗಳನ್ನು ಹಾಕಿಕೊಂಡಿರುವುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಪ್ರತಿ ಪಾಠ/ಪದ್ಯದಲ್ಲಿಯೂ ಭಾಷಾ ಕೌಶಲಗಳನ್ನು ಪರಿಚಯಿಸುವ, ವೃದ್ಧಿಸುವ ಪ್ರಯತ್ನವನ್ನು ಓದು ಮತ್ತು ಕಲಿಕೆಯ ಹಿನ್ನೆಲೆಯಲ್ಲಿ ಹೇಳಿಕೊಡುವ ಯೋಜನೆ ಹಾಕಿ ಕೊಂಡಿದೆ. ಭಾಷಾಸಿದ್ಧಾಂತ ಮತ್ತು ಭಾಷಾವೈಜ್ಞಾನಿಕ ಹಿನ್ನೆಲೆಯಲ್ಲಿ ಸೈದ್ಧಾಂತಿಕ, ತಾತ್ವಿಕ ಚೌಕಟ್ಟಿನಲ್ಲಿ ರಚಿತವಾಗಿದೆ. ಶಾಲಾ ಪಠ್ಯವಾಗಿ ನಿಗದಿಪಡಿಸಿಕೊಂಡಿರುವ ಉದ್ದೇಶದಿಂದ ಕನ್ನಡ ಶಿಷ್ಟ ಭಾಷಾ ರೂಪದೊಂದಿಗೆ ಪ್ರಾದೇಶಿಕ, ಸಾಮಾಜಿಕ, ಸಾಂಸ್ಕೃತಿಕ ಪ್ರಭೇದಗಳೆಲ್ಲವನ್ನು ಗಮನಿಸಿಕೊಂಡು ರಚಿಸಲಾಗಿದೆ. ಭಾಷಾ ಸಂಪ್ರದಾಯದ ಚೌಕಟ್ಟಿನಲ್ಲಿ ಆಧುನಿಕತೆ ಮತ್ತು ದೇಶಿಯತೆಯ ಹಂಬಲದ ಜೊತೆಗೆ ಪ್ರಮಾಣೀಕರಣವನ್ನು ಅನುಲಕ್ಷಿಸಿಕೊಂಡು ಈ ಪಠ್ಯ ರಚಿತವಾಗಿದೆ. ಈ ಪುಸ್ತಕವು ಧ್ವನಿಗುಚ್ಛಗಳ ಬಳಕೆ, ಚಿಕ್ಕ ಚಿಕ್ಕ ಪದಗಳು, ಸರಳ ವಾಕ್ಯಗಳು, ಸರಳವಾದ ಮತ್ತು ವಿಶಿಷ್ಟವಾದ ಗಾದೆ ಮಾತುಗಳು, ಜನಪ್ರಿಯವಾದ ನುಡಿಗಟ್ಟು, ಒಗಟುಗಳು ಪಠ್ಯದ, ಪಾಠದ ಅಥವಾ ಪದ್ಯದ ವಸ್ತು ಭಾಷೆಯ ಶೈಲಿಯ ಸಂದರ್ಭವನ್ನು ಈ ಪುಸ್ತಕ ಖಚಿತಪಡಿಸುವುದು. ಪಠ್ಯದ ಜೊತೆಗೆ ಪ್ರಾಯೋಗಿಕವಾದ ಅಭ್ಯಾಸಕ್ಕಾಗಿ

ಸ್ಥಳಾವಕಾಶವಿದೆ. ಇದರ ಉದ್ದೇಶ ಕನ್ನಡ ಭಾಷೆಯ ಕಲಿಕೆ ಸುಲಭವಷ್ಟೇ ಅಲ್ಲ ಸಮ ಯೋಚಿತವಾಗಿದೆ ಎಂಬುದನ್ನು ಸಾರುವುದಾಗಿದೆ. ಪಠ್ಯದ ಅಭ್ಯಾಸಕ್ಕೂ ಚಟುವಟಿಕೆಗಳ ಹಿನ್ನೆಲೆಗೂ ಮಕ್ಕಳಲ್ಲಿ ಸೃಜನಶೀಲತೆಯನ್ನು ಬೆಳೆಸುವ ಸರಳವಾದ, ನೈಜವಾದ ಮಾದರಿಯ ಅಂಶಗಳನ್ನು ಅಳವಡಿಸಿಕೊಂಡಿರುವ ಅಂಶ ಕಂಡು ಬರುತ್ತದೆ. ಪ್ರಸ್ತುತ ಪಠ್ಯದಲ್ಲಿ ನೀಡಿರುವ ಪಾಠ–ಅಭ್ಯಾಸ ಟಿಪ್ಪಣಿಗಳ ಮಾಹಿತಿಗಳು ಕಡೆಯದೆಂದು ತಿಳಿಯದೆ. ಶಿಕ್ಷಕರು ಭಾಷಾ ಚಟುವಟಿಕೆಗಳನ್ನು ವಿವಿಧ ನೆಲೆಗಳಿಂದ ಅಗತ್ಯ ಮಾಹಿತಿಗಳನ್ನು ಕೊಡುವುದರ ಮೂಲಕ ಶಿಕ್ಷಕರು ಬೋಧಿಸಲು ಅವಕಾಶ ಮಾಡಿಕೊಡುವ ರೀತಿಯಲ್ಲಿಯೂ ಸಹ ಈ ಪಠ್ಯ ರಚಿತವಾಗಿದೆ. ಆದರೆ ಮೇಲಿನ ಎಲ್ಲಾ ಅಂಶಗಳು ಪ್ರಾಯೋಗಿಕವಾಗಿ ಎಷ್ಟರ ಮಟ್ಟಿಗೆ ಸಫಲತೆಯನ್ನು ಪಡೆಯುತ್ತದೆ ಎಂಬುದನ್ನು ಅಧ್ಯಯನ ಮಾಡಿದಾಗ ವೈಫಲ್ಯದ ಅಂಶಗಳು ಬೆಳಕಿಗೆ ಬರುತ್ತವೆ.

ಮಕ್ಕಳಿಗೆ ಈ ಪಠ್ಯದಲ್ಲಿ ಓದಿ–ತಿಳಿ ಎಂಬಲ್ಲಿ ಸರಳ ಅರ್ಥದ ತಿಳುವಳಿಕೆಯನ್ನು ಹಾಗೂ ವಿಭಿನ್ನ ಅರ್ಥಗಳನ್ನು ಪ್ರಾದೇಶಿಕತೆಗೆ ಅನುಗುಣವಾಗಿ ಅರ್ಥದ ಪರಿಕಲ್ಪನೆಯನ್ನು ಪರಿಚಯಿಸುವ ದಾರಿಯನ್ನು ಹಿಡಿದಿರುವ ಅಂಶ ಬೆಳಕಿಗೆ ಬರುತ್ತದೆ. ಇದರ ಜೊತೆಗೆ ಮಕ್ಕಳಿಗೆ ನಾಡಿನ ಸಾಂಸ್ಕೃತಿಕವಾಗಿ ಒಪ್ಪಿತವಾದಂತಹ ರಾಷ್ಟ್ರೀಯ, ಅಂತರಾಷ್ಟ್ರೀಯ ತಿಳುವಳಿಕೆ, ನೈಧಾನಿಕತೆ, ಸಾಹಿತ್ಯ ಪರಿಚಯದ ಉದ್ದೇಶವನ್ನು ಹೊಂದಿದಂತೆ ಕಂಡು ಬರುತ್ತದೆ. ಅಭ್ಯಾಸ ಭಾಗದಲ್ಲಿ ಪಾಠಕ್ಕೆ ಸಂಬಂಧಿಸಿದಂತೆ ಆಲಿಸುವ, ಮಾತನಾಡುವ, ಓದುವ, ಬರೆಯುವ, ಕೌಶಲಗಳನ್ನು ಅನುಲಕ್ಷಿಸಿ ಗ್ರಹಿಕಪ್ರಶ್ನೆ, ತಿಳುವಳಿಕೆಯ ಪ್ರಶ್ನೆಗಳು ಅಭಿವ್ಯಕ್ತಿ ಪ್ರಶ್ನೆಗಳು, ಪ್ರಶಂಸನೀಯ ಪ್ರಶ್ನೆಗಳನ್ನು ಕೊಟ್ಟಿದೆ. ಇದರ ಉದ್ದೇಶ ಮಕ್ಕಳನ್ನು ಪಾಠದ/ಪದ್ಯದ ಅರ್ಥಪೂರ್ಣ ಕಲಿಕೆಗೆ ಪ್ರಯತ್ನಿಸಲು ಇಂತಹ ಪ್ರಶ್ನೆಗಳ ಚೌಕಟ್ಟನ್ನು ಹಾಕಿಕೊಂಡಂತೆ ಕಾಣುತ್ತದೆ.

ಅಭ್ಯಾಸ ಚಟುವಟಿಕೆಗಳಲ್ಲಿ ಪಠ್ಯದ ವಿಷಯಕ್ಕೆ ಸಂಬಂಧಿಸಿದ ಸ್ವ–ಚಟುವಟಿಕೆಯನ್ನು ನಿರೂಪಿಸಲಿಕ್ಕಾಗಿಯೇ ಇಂತಹ ಪ್ರಶ್ನೆಗಳನ್ನು ಕೇಳಲಾಗಿದೆ. ಇದರಿಂದ ಮಕ್ಕಳಿಗೆ ಪಠ್ಯವನ್ನು ಸುಲಭವಾಗಿ ಅರ್ಥಹಿಸಲು ಮತ್ತು ಅದರ ಕಲ್ಪನೆಯನ್ನು ವಿಸ್ತಾರಗೊಳಿಸುವ ಅನುಕೂಲಕ್ಕಾಗಿ ಇಂತಹ ಪ್ರಶ್ನೆಗಳಿಗೆ ಅವಕಾಶ ಮಾಡಿಕೊಟ್ಟಂತಾಗಿದೆ ಎಂಬುದನ್ನು ತಿಳಿಯಬಹುದಾಗಿದೆ. ಆದರೆ ಈ ಮೇಲಿನ ಯೋಜನೆಗಳನ್ನು ಒಪ್ಪುವುದಾದರೆ, ಮನೆ ಮಾತುಳ್ಳ ಮಕ್ಕಳು ಪರಿಸರದಲ್ಲಿ ನೋಡುವ, ಕೇಳುವ ಅಂಶಗಳನ್ನು ಯೋಚಿಸಿಕೊಂಡು ಈ ಪಠ್ಯ ರಚನೆಯಾಗಿದೆ ಎಂದು ಹೇಳಲಾಗುತ್ತಿದೆ. ಆದರೆ ಮಗುವನ್ನು ಮೌಲ್ಯಮಾಪನಕ್ಕೆ ಒಳಪಡಿಸಿದಾಗ ಧ್ವನಿ, ಪದ,ವಾಕ್ಯ ಹಿನ್ನೆಲೆಯಲ್ಲಿ ನೋಡದೆ ವಿಷಯಾಧಾರಿತವಾಗಿ ಮೌಲ್ಯಮಾಪನ ಮಾಡಲಾಗುತ್ತದೆ. ಇಂತಹ ಹಲವಾರು ಪ್ರಶ್ನೆಗಳನ್ನು ಹಾಕಿಕೊಂಡು ಚರ್ಚಿಸುವುದು ಈ ಅಧ್ಯಯಗಳ ಮುಂದಿನ ಮೂರು ಅಧ್ಯಾಯಗಳ ಬಹುಮುಖ್ಯ ಉದ್ದೇಶವಾಗಿದೆ.

ಕರ್ನಾಟಕ ಸರ್ಕಾರ ಐದನೇ ತರಗತಿಯ ಪುಸ್ತಕವನ್ನು ಮೊದಲನೇ ಸೆಮಿಸ್ಟರ್ ಎರಡನೇ ಸೆಮಿಸ್ಟರ್ ಎಂದು ಎರಡು ಪುಸ್ತಕಗಳ ಮೂಲಕ ಕನ್ನಡ ಕಸ್ತೂರಿ-೫ ಎಂದು ರಚನೆ ಮಾಡಿದೆ. ಇಲ್ಲಿಯು ಸಹ ೧೯೮೬ರ ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯ ಅನ್ವಯ ಪಠ್ಯ ರಚನೆಯಾದ ಅಂಶವನ್ನು ಮನಗಾಣಬಹುದು. ಮಗುವಿನ ಮಾನಸಿಕ ಸಾಮರ್ಥ್ಯಕ್ಕೆ ಅನುಗುಣವಾಗಿ ಪಠ್ಯವನ್ನು ರಚಿಸಲಾಗಿದೆ. ಮಗುವಿನ ದೈಹಿಕ ಮತ್ತು ಮಾನಸಿಕ ಅನ್ವಯ ಮೊದಲನೆ ಸೆಮಿಸ್ಟರ್‌ನಲ್ಲಿ ೪ ಪದ್ಯಗಳು, ೪ ಪಾಠಗಳನ್ನು ಕೊಡಲಾಗಿದೆ. ಹಿಂದಿನ ತರಗತಿಗಳಲ್ಲಿನ ನೀತಿಯನ್ನೇ ಅಭ್ಯಾಸ ಚಟುವಟಿಕೆಯಲ್ಲಿ ಅನುಸರಿಸಲಾಗಿದೆ. ಎರಡನೇ ಸೆಮಿಸ್ಟರ್‌ನಲ್ಲಿಯೂ ಸಹ ಇದನ್ನೇ ಅನುಸರಿಸುತ್ತಿದೆ. ಮಗುವಿನ ಭಾಷಾ ಚೌಕಟ್ಟನ್ನು ಒಂದೇ ಅನುಸರಿಸದೇ ಮಗುವಿನ ಸರ್ವತೋಮುಖ ಬೆಳವಣಿಗೆಯ ಕ್ರಮಾನುಗತಿಯನ್ನು ಇಲ್ಲಿ ಅನುಸರಿಸಲಾಗುತ್ತಿದೆ. ಕನ್ನಡಭಾಷಾ ಬಗೆಯ ವಿವಿಧ ಆಯಾಮಗಳನ್ನು ಸರಳ, ಸಂಕ್ಷಿಪ್ತವಾಗಿ ಪರಿಚಯಿಸುವ ದಾರಿಯನ್ನು ಹಿಡಿದಂತೆ ಕಾಣುತ್ತದೆ.

ಮಗುವಿನ ಪರಿಸರದಲ್ಲಿ ಬರುವ ವಿವಿಧ ಬಗೆಯ ಆಯಾಮಗಳನ್ನು ಪರಿಚಯದ ಜೊತೆಗೆ ನಾಡು, ನುಡಿ, ನಾಡಿನಹಬ್ಬಗಳ ತಿಳುವಳಿಕೆ ನೀಡುವ ಅಂಶಗಳನ್ನು ಕಾಣಬಹುದು. ಒಟ್ಟಾರೆಯಾಗಿ ಇಲ್ಲಿರುವ ಪಾಠ,ಪದ್ಯಗಳು, ಕಲಿತ ಅಥವಾ ಬರೆದ ಪಠ್ಯದಲ್ಲಿನ ವಿಷಯಗಳಿಂದ ತಾರ್ಕಿಕವಾಗಿ ನಿರ್ಣಯಿಸಿ ಬರುವಂತಹ ಅಂಶಗಳನ್ನು ಗಮನದಲ್ಲಿರಿಸಿಕೊಂಡಿದೆ. ಮಗುವಿನ ಸರ್ವತೋಮುಖ ಬೆಳವಣಿಗೆಯನ್ನು ಅನುಲಕ್ಷಿಸಿಕೊಂಡು ಸರಳ, ಸ್ಪಷ್ಟವಾದ ವಾಕ್ಯಗಳನ್ನು ಬರೆಯುವ ಮತ್ತು ಉಚ್ಚರಿಸುವ ಪ್ರಕ್ರಿಯೆಗೆ ಒಳಪಟ್ಟಿದೆ ಎಂದು ಹೇಳಬಹುದು. ಸರಳ, ಸೃಜನಶೀಲ ಮನೋಭಾವ, ಸರಳ ವ್ಯಾಕರಣದ ನಿಯಮಗಳನ್ನು ಅರ್ಥಮಾಡಿಸುವ ಮತ್ತು ಅವುಗಳನ್ನು ಬಳಸಿ ಬರೆಯುವ ಕೌಶಲಗಳ ನಿಟ್ಟಿನಲ್ಲಿ ರಚಿತವಾಗಿದೆ ಎಂದು ಹೇಳಬಹುದು. ಹಾಗಾದರೆ ಮಗು ಐದನೇ ತರಗತಿಯನ್ನು ಪಾಸುಮಾಡಿದರು ವರ್ಣಮಾಲೆಯ ಪರಿಚಯದ ಜ್ಞಾನ ಉಚ್ಚಾರಣೆಯ ವಿಧಾನ, ಬರವಣಿಗೆಯ ವಿಧಾನ ಹಾಗೂ ಸರಳ ವಾಕ್ಯವನ್ನು ರಚಿಸುವಲ್ಲಿ ವಿಫಲನಾಗುತ್ತಾನೆ ಎಂಬುದು ಉತ್ತರ ಪತ್ರಿಕೆಗಳ ಮೌಲ್ಯಮಾಪನದಿಂದ ಸ್ಪಷ್ಟವಾಗುತ್ತದೆ. ಮೇಲಿನ ಅಂಶಗಳನ್ನು ಗಮನಿಸಿದರೆ ಚಟುವಟಿಕೆಗಳೆಲ್ಲವು ಭಾಷಾಚಟುವಟಿಕೆ ಹಿನ್ನೆಲೆಯಲ್ಲಿಯೇ ಬರುವಂತವುಗಳಾಗಿವೆ. ಈಗಾಗಲೇ ೧ರಿಂದ ೫ನೇತರಗತಿಯ ಕನ್ನಡ ಪಠ್ಯಗಳ ಸಂಕ್ಷಿಪ್ತ ವಿಶ್ಲೇಷಣೆಯನ್ನು ಮಾಡಿದ್ದೇವೆ. ಇದರ ವಿಫಲತೆಗೆ ಕಾರಣವಾದ ಅಂಶಗಳಾವುವು ಎಂಬುದನ್ನು ಮುಂದೆ ಅಧ್ಯಯನ ಮಾಡಲಾಗಿದೆ.

ಕನ್ನಡ ಕಸ್ತೂರಿ-೭ ಪ್ರಥಮ ಭಾಷೆ ಕನ್ನಡ ಪಠ್ಯ ಪುಸ್ತಕವು ಮಗುವಿನ ಮಾನಸಿಕ, ದೈಹಿಕ ವಿಕಾಸಕ್ಕೆ ಅನುಗುಣವಾಗಿ ಕಲಿಕೆಯ ಕನಿಷ್ಟ ಸಾಮರ್ಥ್ಯಗಳನ್ನು ಕ್ಷೇತ್ರಗಳಿಗನುಸಾರವಾಗಿ ಕೊಡಲಾಗಿದೆ. ಸಾಮಾನ್ಯದಿಂದ ವಿಶಿಷ್ಟತೆಯ ಕಡೆಗೆ ಹೋಗುವಂತಹ ಬೋಧನಾ ವಿಧಾನದ ಮೂಲಕ ಪಠ್ಯಪುಸ್ತಕ ರಚನೆಯಾಗಿದೆ. ಮಕ್ಕಳಿಗೆ ಮಾನವೀಯ ಮೌಲ್ಯಗಳನ್ನು ಬೆಳೆಸಿ

ಲಿಂಗ ಸಮಾನತೆಗೆ ಆದ್ಯತೆ ಕೊಡಲಾಗಿದೆ. ತರಗತಿಯಲ್ಲಿನ ಮಕ್ಕಳು ಸೃಜನಶೀಲತೆಯಿಂದ ಆಸಕ್ತರಾಗಿರುವಂತೆ ಪಠ್ಯದ ಚಟುವಟಿಕೆಗಳನ್ನು ಅಳವಡಿಸಲಾಗಿದೆ.

ಮಕ್ಕಳ ಮುಗ್ಧ ಮನಸಸ್ಸನ್ನು ಪರಿಗಣಿಸಿಕೊಂಡು ಅವರ ವರ್ತನೆಯ ಅನುಸಾರ ಅವಕಾಶ ಕಲ್ಪಿಸಿದಂತೆ ತೋರುತ್ತದೆ. ಇಲ್ಲಿನ ಪ್ರತಿ ಪಾಠ ಪದ್ಯಗಳು ಸ್ವ–ಕಲಿಕೆಯ ಪೂರಕವಾದವುಗಳಾಗಿವೆ. ಕನ್ನಡ ಮಾತೃಭಾಷೆಯುಳ್ಳ ಮಕ್ಕಳನ್ನು ಅನುಲಕ್ಷಿಸಿಕೊಂಡು ಹಿಂದಿನ ತರಗತಿಗಳ ಪಠ್ಯದಂತೆ ಕನ್ನಡದ್ದೇ ಆದಂತಹ ಸರಳ ಪರಿಸರದಲ್ಲಿ ಅಗತ್ಯವಿರುವ ಧ್ವನಿರಚನೆ, ಪದರಚನೆ, ವಾಕ್ಯರಚನೆ ನಾಡು–ನುಡಿ, ನಾಡಹಬ್ಬ, ನಾಡಿನ ಸಂಸ್ಕೃತಿ ಪರಿಚಯಿಸಲು ಪ್ರಯತ್ನಿಸಿದೆ. ಜೊತೆಗೆ ರಾಜ್ಯ ಮತ್ತು ರಾಷ್ಟ್ರೀಯ ತಿಳುವಳಿಕೆ ಹಾಗೂ ಸಾಮಾಜಿಕ ಮೌಲ್ಯಗಳನ್ನು ಹೇಳಿಕೊಡುವಂತಹ ನಿಟ್ಟಿನಲ್ಲಿ ರಚನೆಯಾಗಿರುವ ಅಂಶಗಳನ್ನು ಕಾಣಬಹುದು. ಅಗತ್ಯವಿರುವಂತಹ ಭಾಷಾ ರಚನಾಂಶಗಳನ್ನು ಉದ್ದೀನಪನಗೊಳಿಸುವ ದೃಷ್ಟಿಯಿಂದ ಈ ಪಠ್ಯವನ್ನು ತಾತ್ವಿಕತೆ ಮತ್ತು ಸೈದ್ಧಾಂತಿಕತೆಯ ಚೌಕಟ್ಟಿನಲ್ಲಿ ಪ್ರಾಯೋಗಿಕ ಪ್ರಯತ್ನದ ಮೂಲಕ ಈ ಪಠ್ಯ ರಚನೆಯಾದಂತೆ ಕಾಣುತ್ತದೆ.

ಇಪ್ಪತ್ತೊಂದನೇ ಶತಮಾನದಲ್ಲಿ ಪ್ರಾಥಮಿಕ ಶಿಕ್ಷಣದ ಕ್ರಾಂತಿಗೆ ಒಳಪಟ್ಟು ಪಠ್ಯ ರಚನೆಯಾಗಿದೆ. ಈ ಪುಸ್ತಕ ವೈಜ್ಞಾನಿಕ ಶೈಕ್ಷಣಿಕ ಸಂಶೋಧನಾ ಹಿನ್ನೆಲೆಯಲ್ಲಿ ತಯಾರಿಸಿರುವ ಅಂಶ ಕಂಡು ಬರುತ್ತದೆ. ಕನಿಷ್ಠ ಕಲಿಕೆಯ ಮಟ್ಟಗಳ ಅನ್ವಯ ಉಲ್ಲಾಸದಾಯಕ ಚೈತನ್ಯಕಾರಿ ಕಲಿಕೆ ಪೂರಕವಾಗುವಂತೆ ರಚಿತವಾಗಿದೆ. ಈ ಹಿನ್ನಲೆಯಲ್ಲಿ ರಚನೆಯಾದ ಈ ಪಠ್ಯಪುಸ್ತಕ ಭಾಷೆಯ ಆಧುನೀಕರಣ ಪ್ರಮಾಣಿಕರಣಕ್ಕೆ ಒಳಪಟ್ಟು ಸಮಾಜದ ಬದಲಾವಣೆಗೆ ತಕ್ಕಂತೆ ಪಠ್ಯ ರಚನೆಯಾಗುವ ದಾರಿಯಲ್ಲಿದೆ.

ರಾಜ್ಯದ ಭಾಷಿಕತನವನ್ನು ಕಾಪಾಡಿ, ಆಧುನಿಕತೆಗೆ ಒಳಪಟ್ಟಿದೆ. ಆಧುನಿಕ ಭಾಷಾವಿಜ್ಞಾನ, ಮನೋವಿಜ್ಞಾನದ, ಮತ್ತು ಶೈಕ್ಷಣಿಕ ಹಿನ್ನೆಲೆಯಲ್ಲಿ ರಚನೆಗೊಂಡಿದೆ. ಶಿಕ್ಷಣದ ಸೈದ್ಧಾಂತಿಕ ನೆಲೆಯಿಂದ ಸೂಕ್ತ ಬದಲಾವಣೆಗಳನ್ನು ಮಾಡಿಕೊಂಡಿದೆ. ಮಗುವಿನ ದೈಹಿಕ ಮತ್ತು ಮಾನಸಿಕ ಬೆಳವಣಿಗೆ ಅನುಸಾರ ಹಿಂದಿನ ತರಗತಿಗಳ ಕ್ರಮದಂತೆ ಪಠ್ಯಸಾರ, ಪಠ್ಯ ರಚನಾ ವಿನ್ಯಾಸ, ಅಭ್ಯಾಸ ಮತ್ತು ಭಾಷಾಭ್ಯಾಸ ಚಟುವಟಿಕೆಗಳು ರಚನೆಯಾಗಿವೆ. ಕಲಿಕಾ ಸಾಮರ್ಥ್ಯ ಕೌಶಲಗಳು ಹಾಗೂ ಪ್ರಾದೇಶಿಕತೆ, ಔದ್ಯೋಗಿಕತೆ ಮತ್ತು ಸಾಮಾಜಿಕತೆಯನ್ನು ಕಾಯ್ದುಕೊಂಡಿದೆ. ಕನ್ನಡ ಪ್ರಭೇದದ ಸಮನ್ವಯತೆ, ಸಮತೋಲನದ ನಿಟ್ಟಿನಲ್ಲಿ ರಚನೆಯಾದಂತಹ ಲಕ್ಷಣಗಳು ಕಂಡು ಬರುವಂತಹದ್ದಾಗಿದೆ. ಅಂದರೆ ಪ್ರಾದೇಶಿಕ ಪರ್ಯಾಯ ರೂಪ, ಅರ್ಥ ಹಾಗೂ ವಿವರಗಳನ್ನು ಪಾಠ/ಪದ್ಯದ ಟಿಪ್ಪಣಿಯಲ್ಲಿ ಸಾಂದರ್ಭಿಕವಾಗಿ ಸೃಜನಶೀಲ, ಕ್ರಿಯಾತ್ಮಕ ರೀತಿಯಲ್ಲಿ ಭಾಷಾಭ್ಯಾಸವನ್ನು ಕೊಡಲಾಗಿದೆ. ಇಲ್ಲಿ ವ್ಯಾಕರಣದ ಅಂಕಗಳನ್ನು ಸೂಚನೆ ರೀತಿಯಲ್ಲಿ ನಮೋದಿಸಿದೆ. ಪ್ರಾಯೋಗಿಕ ರೀತಿಯಲ್ಲಿ ಅಭ್ಯಾಸದ

ಕ್ರಮ ನಡೆಯುವಂತೆ ಕಾರ್ಯದ ಯೋಜನೆಗಳು ಕಂಡು ಬರುತ್ತವೆ. ಹಿಂದಿನ ತರಗತಿಗಳ ಕ್ರಮಾನುಗತಿಯನ್ನು ಇಲ್ಲಿಯೂ ಸಹ ಅಭ್ಯಾಸ ಮತ್ತು ಭಾಷಾ ಚಟುವಟಿಕೆಗಳನ್ನು ಬಳಸಿಕೊಳ್ಳಲಾಗಿದೆ. ಪಾಠದ ವಿಷಯಕ್ಕೆ ಸಂಬಂದಿಸಿದ ಸ್ವ ಚಟುವಟಿಕೆಗಳನ್ನು ಕೊಟ್ಟಿದೆ. ಇದರಿಂದ ಮಕ್ಕಳು ಪಾಠಗಳನ್ನು ಸುಲಭವಾಗಿ, ಸರಳವಾಗಿ ಅರ್ಥಹಿಸಲು ಅವುಗಳ ಮೂಲ ಆಶಯವನ್ನು ತಿಳಿಸಲು ಅನುಕೂಲ ರೀತಿಯಲ್ಲಿ ಪಠ್ಯವನ್ನು ರಚಿಸಿಕೊಂಡಿರುವುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಭಾಷಾಭ್ಯಾಸ, ವ್ಯಾಕರಣಕ್ಕೆ ಸಂಬಂಧಿಸಿದಂತೆ ನಿಯಮಾವಳಿಯ ಮೂಲಕ ಭಾಷಾ ರಚನೆಯ ಬಗ್ಗೆ ವಿವರಣಾತ್ಮಕ ಮಾಹಿತಿಯನ್ನು ಮಗುವಿನ ಅವಶ್ಯಕತೆಗೆ ತಕ್ಕಂತೆ ನಮೋದಿಸಿರುವ ಭಾಗದಂತೆ ರಚನೆಯಾಗಿದೆ. ವ್ಯಾಕರಣದ ನಿಯಮಾವಳಿಗಳ ಪ್ರತ್ಯೇಕತೆ ಮಾಡಿದೆ. ಕ್ರಿಯಾತ್ಮಕ ರೀತಿಯಲ್ಲೇ ಭಾಷಾ ನಿಯಮಗಳನ್ನು ಪರಿಚಯಿಸುವ ಪ್ರಯತ್ನ ನಡೆದಿದೆ. ಪ್ರಾಯೋಗಿಕ ಅಭ್ಯಾಸ ಹಾಗೂ ರಚನಾ ಕ್ರಮವನ್ನು ಅನುಸರಿಸಿ ಭಾಷಾ ಶುದ್ಧಾ ಶುದ್ಧತೆಯನ್ನು ಖಚಿತಪಡಿಸಿದೆ. 'ಭಾಷಾ–ಚಟುವಟಿಕೆ' ಮಕ್ಕಳಲ್ಲಿ ಭಾಷಾ ಸೃಜನಶೀಲತೆಯ ಉದ್ದೀಪನಕ್ಕೆ ಆಯಾಮ ನೀಡುವ ಸ್ತರ ಹೊಂದಿದೆ. ಹೊಸ ಹೊಸ ಪದರಚನೆಯ ಬಳಕ ವಿವರಣೆ, ನಿರೂಪಣೆ, ಕುತೂಹಲವಾಗಿ ಭಾಷೆಯ ಕ್ರಮಾನುಗತ ಕಲಿಕೆಗೆ ಆದ್ಯತೆ ನೀಡಿದೆ.

'ಹಿಮಮಣಿ' ಹೆಚ್ಚಿನ ಸಂತಸದಾಯಕ ಓದಿನ ಭಾಗ. ಇದು ಮಕ್ಕಳ ಮನೋವಿಕಾಸಕ್ಕೆ ಅನುವಾಗುವುದು. ಜೊತೆಗೆ ಅರ್ಥಸಹಿತ ಪದಕೋಶ ಖಚಿತ ಅಭ್ಯಾಸಕ್ಕೆ ಪೂರಕವಾಗಿದೆ. ಅಲ್ಲದೆ ಮೌಲಿಕ ಕೂಡ. ಚಿಕ್ಕಚಿಕ್ಕ ವಾಕ್ಯ ಸರಳ ವಿಶಿಷ್ಟ ನುಡಿಗಟ್ಟು ಪದಪುಂಜ, ಜನಪ್ರಿಯ ಗಾದೆ–ಒಗಟು, ಪಠ್ಯವಸ್ತು ವಿಷಯವನ್ನು ಖಚಿತಪಡಿಸುತ್ತದೆ. ಪ್ರಾಯೋಗಿಕ ಅಭ್ಯಾಸಕ್ಕೂ ಪಠ್ಯದಲ್ಲಿ ಸಾಕಷ್ಟು ಅವಕಾಶ ನೀಡಿದೆ ಎಂದು ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷರಾದ ಸಿ.ಎಸ್.ರಾಮಚಂದ್ರ ಅವರು ಅಭಿಪ್ರಾಯ ಪಡುತ್ತಾರೆ.

ಮೇಲಿನ ಮಾತುಗಳನ್ನು ಗಮನದಲ್ಲಿಟ್ಟುಕೊಂಡು ಮಗುವಿಗೆ ಎಲ್ಲಾ ರೀತಿಯ ಅವಕಾಶಗಳನ್ನು ಮಾಡಿಕೊಟ್ಟಿದೆ ಎಂದು ಹೇಳಲಾಗುತ್ತಿದೆ. ಹಾಗಾದರೆ ಮಗು ಏಕೆ ಹ್ರಸ್ವ ಸ್ವರದ ಸಂದರ್ಭದಲ್ಲಿ ದೀರ್ಘಸ್ವರವನ್ನು ಬಳಸುತ್ತದೆ. ಒತ್ತಕ್ಷರಗಳ ತಿಳುವಳಿಕೆಯು ಸಹ ಇರುವುದಿಲ್ಲ. ಲೇಖನ ಚಿಹ್ನೆಯ ಬಳಕೆಯೂ ಸಹ ಗೊತ್ತಿರುವುದಿಲ್ಲ. ಜೊತೆಗೆ ವಾಕ್ಯ ರಚನೆಯ ಸ್ಪಷ್ಟತೆ ಇರುವುದಿಲ್ಲ.

ಈ ರೀತಿಯ ಅಂಶಗಳ ಪ್ರಶ್ನೆಗಳನ್ನು ಹಾಕಿಕೊಂಡು ಚರ್ಚಿಸುವುದು, ವಿಶ್ಲೇಷಣೆಗೆ ಒಳಪಡಿಸುವುದನ್ನು ಈ ಮಹಾಪ್ರಬಂಧದ ಉದ್ದಕ್ಕೂ ಮಾಡಲಾಗಿದೆ.

ಕರ್ನಾಟಕ ಸರ್ಕಾರ ಪ್ರಥಮ ಭಾಷೆ ಕನ್ನಡ ಪಠ್ಯಪುಸ್ತಕ ಕನ್ನಡ ಕಸ್ತೂರಿ ಏಳನೇತರಗತಿ ಪುಸ್ತಕವು ಸಹ ಹಿಂದಿನ ತರಗತಿಗಳ ಪಠ್ಯಗಳಂತೆ ೧೯೮೬ ಹೊಸ ರಾಷ್ಟ್ರೀಯ ಶಿಕ್ಷಣ

ನೀತಿ ಅನ್ವಯ ರಚನೆಯಾಗಿರುವುದು ಸ್ಪಷ್ಟವಾಗುತ್ತದೆ. ಮಗುವಿನ ದೈಹಿಕ ಮತ್ತು ಮಾನಸಿಕ ವಯಸ್ಸಿನ ಅನ್ವಯ ರಚನೆಯಾಗಿದೆ. ಈ ಪಠ್ಯದಲ್ಲಿ ಭಾಷಾ ನಿಯಮಗಳು, ಭಾಷಾ ರಚನೆಯ ಕ್ರಮಗಳನ್ನು ಸಾಮಾನ್ಯದಿಂದ ವಿಶಿಷ್ಟತೆಯ ಕಲಿಕೆಗಾಗಿ ಉದಾಹರಣೆಗಳ ಮೂಲಕ ಚರ್ಚೆಯ ಪ್ರಕ್ರಿಯೆ ನಡೆದಿದೆ. ಮಗುವು ಈ ತರಗತಿಗೆ ಬರುವ ವೇಳೆಗೆ ಸರಳ ವಾಕ್ಯದ ಪರಿಕಲ್ಪನೆ ಬಂದಿರುತ್ತದೆ ಎಂದು ತಿಳಿದು ಪಠ್ಯಕ್ರಮವನ್ನು ರಚಿಸಲಾಗಿರುತ್ತದೆ. ವ್ಯಾಕರಣ, ಛಂದಸ್ಸು, ಹಳಗನ್ನಡದ ಅಕ್ಷರಗಳ ಪರಿಚಯಿಸುವ ಗುರಿಯನ್ನು ಹೊಂದಿದಂತೆ ತೋರುತ್ತದೆ. ಆದ್ದರಿಂದ ಸರಳ ವ್ಯಾಕರಣ ಧ್ವನಿ, ಪದ, ವಾಕ್ಯರಚನೆಯ ಬಗೆಗಳನ್ನು ಹೇಳಿಕೊಡುವ ದಾರಿಯಲ್ಲಿ ನಡೆದಿದೆ. ಭಾಷಾವೈವಿಧ್ಯತೆಯ ತಿಳಿಸುವ ನಿಟ್ಟಿನಲ್ಲಿ ಕನ್ನಡ ಸಾಹಿತ್ಯದ ಮೂಲಕ ಪರಿಚಯಿಸುವ ಕೆಲಸ ಇಲ್ಲಿ ನಡೆದಂತೆ ತೋರುತ್ತದೆ.

ಈ ಪಠ್ಯದಲ್ಲಿ ಹದಿಮೂರು ಪಾಠಗಳು, ಒಂಬತ್ತು ಪದ್ಯಗಳನ್ನು ಕೊಡಲಾಗಿದೆ. ಜೊತೆಗೆ ವಿಸಗತಾರ ಓದಿಗಾಗಿ ಅರ್ಥಸಹಿತ ಪದಕೋಶ ಕೊಡಲಾಗಿದೆ. ಈ ಎಲ್ಲಾ ಪಾಠ, ಪದ್ಯಗಳಲ್ಲಿಯೂ ಭಾಷಾ ಕೌಶಲಗಳ ಮೂಲಕ ಚಟುವಟಿಕೆ ಆಧಾರಿತವಾಗಿ ರಚನೆಯಾದ ಅಂಶಗಳನ್ನು ಕಾಣುತ್ತೇವೆ.

ಮಗುವಿನ ಭಾಷಾ ಬೆಳವಣಿಗೆ ವೃದ್ಧಿಗಾಗಿ ವಚನಗಳು, ಪ್ರತ್ಯಯಗಳು, ಛಂದಸ್ಸು, ವ್ಯಾಕರಣ, ಲಿಂಗದ ಪರಿಚಯದ ಜೊತೆಗೆ ಹಳಗನ್ನಡದ ವರ್ಣಮಾಲೆಯ ಪರಿಚಯ ಹಾಗೂ ಅವುಗಳ ಅರ್ಥ ವ್ಯತ್ಯಾಸದ ಬಗೆಗಳನ್ನು ತಿಳಿಸುವ ಪ್ರಯತ್ನದ ದಾರಿ ನಡೆದಂತೆ ಕಂಡು ಬರುತ್ತದೆ. ಪ್ರತಿ ಪಾಠದ ಪದ್ಯದ ಆಶಯವನ್ನು ಹೇಳುವುದರ ಜೊತೆಗೆ ಕವನದ, ಪಾಠದ ಬರಹಗಾರರನ್ನು ಪರಿಚಯಿಸುವ ಮಾರ್ಗದಲ್ಲಿ ಈ ಪಠ್ಯದ ಚಟುವಟಿಕೆಗಳು ನಡೆದಿದೆ. ಇಲ್ಲಿ ಯೋಜಿಸಿ ಕೊಂಡಿರುವ ಚಟುವಟಿಕೆ ಹಿಂದಿನ ತರಗತಿಗಳಂತೆ ಕೆಳಗಿನ ಪದಗಳನ್ನು ಓದುತ್ತಾ ಗಮನಿಸಿ ಓದಿ–ಅರ್ಥೈಸಿ, ಗಮನಿಸಿ–ತಿಳಿ, ಅಭ್ಯಾಸ, ಅಭ್ಯಾಸ–ಚಟುವಟಿಕೆ, ಭಾಷಾಭ್ಯಾಸ, ಭಾಷಾ–ಚಟುವಟಿಕೆಯಂತಹ ಇತ್ಯಾದಿ ಅಂಶಗಳ ಹಿನ್ನೆಲೆಯಲ್ಲಿ ಭಾಷಾ ರಚನೆಯ ವಿವಿಧ ಅಂಶಗಳನ್ನು ಹೇಳಿಕೊಡುವ ಪ್ರಕ್ರಿಯೆ ನಡೆದಿದೆ.

ಒಟ್ಟಾರೆಯಾಗಿ ಈ ತರಗತಿಯ ಪಠ್ಯವು ಅಭ್ಯಾಸಗಳ ಕ್ರಮದಲ್ಲಿ ಧ್ವನಿರಚನೆ, ಪದರಚನೆ, ವಾಕ್ಯರಚನೆಯ ವಿವಿಧ ಬಗೆಗಳನ್ನು ತಿಳಿಸಲಾಗಿದೆ.

ವಿಗ್ರಹದ ಪದ, ವಿಗ್ರಹದ ವಾಕ್ಯ ಹಾಗೂ ಸಂಧಿ, ಸಮಾಸ ನಿಯಮಗಳನ್ನು ಉದಾಹರಣೆಗಳ ಮೂಲಕ ವಿವರಿಸುವ ಪ್ರಕ್ರಿಯೆ ನಡೆದಿದೆ. ಆದರೆ ಇಲ್ಲಿ ಕನ್ನಡ ಭಾಷಾ ಪಠ್ಯಪುಸ್ತಕದಲ್ಲಿ ಕನ್ನಡ ಭಾಷಾ ಪದಗಳಿಗಿಂತ ಸಂಸ್ಕೃತ ಇಂಗ್ಲೀಷ್ ಪದಗಳನ್ನು ಬಳಸಲಾಗಿದೆ. ಹಾಗಾದರೆ ಈ ಪುಸ್ತಕವನ್ನು ಕನ್ನಡ ಭಾಷೆಯ ಪಠ್ಯಪುಸ್ತಕ ಎನ್ನುವುದಾದರು ಹೇಗೆ ಎಂಬ ಪ್ರಶ್ನೆ ಕಾಡುತ್ತದೆ. ನಾವು ಇದಕ್ಕೆ ಕಾರಣವನ್ನು ಕೇಳಿದರೆ ಆಧುನಿಕ ಸಂದರ್ಭದಲ್ಲಿ

ಕನ್ನಡಕ್ಕೆ ಸ್ವೀಕರಣಗೊಂಡ ಪದಗಳನ್ನು ಬಳಸುತ್ತಿದ್ದೇವೆ ಎಂದು ಹೇಳಿ ಜಾರಿಕೊಳ್ಳಬಹುದು. ಇಲ್ಲಿ ಬಳಸಿದ ಪದಗಳಾದ ಸಂಸ್ಕೃತ ಮತ್ತು ಇಂಗ್ಲೀಶ್ ಪದಗಳಿಗೆ ಪರ್ಯಾಯವಾಗಿ ಕನ್ನಡ ಪದಗಳು ಇವೆ. ಇದ್ದರು ಕನ್ನಡ ಪದಗಳನ್ನು ಬಳಸುತ್ತಿಲ್ಲ ಎಂಬುದು ಈ ಪಠ್ಯಗಳಿಂದ ಮತ್ತು ಸಾಮಾಜಿಕ ಸಂವಹನದಿಂದ ಸ್ಪಷ್ಟವಾಗುತ್ತದೆ. ಇಲ್ಲಿ ಕಲಿಸುವ ವ್ಯಾಕರಣ, ಛಂದಸ್ಸು ಕನ್ನಡದ್ದೇ ಅಥವಾ ಬೇರೆಯ ಭಾಷೆಯದ್ದೇ ಎಂಬ ಪ್ರಶ್ನೆ ಬರುತ್ತದೆ. ಆದರೆ ಈ ಪಠ್ಯಗಳ ವ್ಯಾಕರಣ ಗಮನಿಸಿದಾಗ ಕನ್ನಡದಲ್ಲ ಎಂಬುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಹಾಗಾದರೆ ಕನ್ನಡಕ್ಕೆ ಕನ್ನಡದ್ದೇ ಆದ ವ್ಯಾಕರಣ, ಛಂದಸ್ಸು ಇಲ್ಲವೆ ಇಂತಹ ಹತ್ತಾರು ಪ್ರಶ್ನೆಗಳನ್ನು ಹಾಕಿಕೊಂಡು ಚರ್ಚಿಸುವ ವಿಶ್ಲೇಷಿಸುವ ಉದ್ದೇಶವನ್ನು ನನ್ನ ಅಧ್ಯಯನ ಒಳಗೊಂಡಿದೆ.

ಒಟ್ಟಾರೆಯಾಗಿ ಕನ್ನಡ ಕಿರಿಯ ಮತ್ತು ಹಿರಿಯ ಪ್ರಾಥಮಿಕ ಕನ್ನಡ ಭಾಷಾ ಪಠ್ಯಪುಸ್ತಕಗಳು ಮಗುವಿನ ಭಾಷಾ ಬಳಕೆಗೆ ಹಾಗೂ ಅವನ ಸರ್ವತೋಮುಖ ಬೆಳವಣಿಗೆಗೆ ಪೂರಕರವಾಗಿದೆಯೇ ಅಥವಾ ಕೇವಲ ಬರೆಯುವ ಭಾಷಾ ಕೌಶಲವನ್ನು ತಿಳಿಸುವ ಚಟುವಟಿಕೆಗಳು ಹೆಚ್ಚಾಗಿವೆ. ಈ ಪಠ್ಯಪುಸ್ತಕಗಳ ರಚನೆ ಮಾಡಿದ ಅಧ್ಯಕ್ಷರು ಪಠ್ಯಗಳು ಆಧುನೀಕರಣಕ್ಕೆ ಒಳಪಟ್ಟು ರಚಿಸಲಾಗಿದೆ ಎಂದು ಹೇಳಿದ್ದಾರೆ. ಆಧುನೀಕರಣವೆಂದರೆ ಎಲ್ಲಾ ಪ್ರಾದೇಶಿಕ ಪ್ರದೇಶಗಳನ್ನು ಅನುಲಕ್ಷಿಸಿಕೊಂಡು ರಚನೆ ಮಾಡಿರುವುದಾಗಿ ವಿಶ್ಲೇಷಿಸುತ್ತಾರೆ. ಇಲ್ಲಿ ಬಳಕೆಯಲ್ಲಿರುವ ಪದಗಳ, ವಾಕ್ಯಗಳನ್ನು ಪರಿಚಯಿಸುವ ದೃಷ್ಟಿಯಿಂದ ಆಧುನೀಕರಣ ಎಂದು ಬಳಸಿದಂತೆ ಕಂಡು ಬರುತ್ತದೆ.

ಉದಾ : ೩ನೇ ತರಗತಿಯ ಪಠ್ಯದಲ್ಲಿ ಬರುವ 'ಜೇನು' ಎಂಬ ಪಾಠದಲ್ಲಿ ಗಮನಿಸಿ–ತಿಳಿ ಎಂಬ ಭಾಗದಲ್ಲಿ 'ಹುಚ್ಚೆಳ್ಳು' ಎಂಬ ಪದದ ಅರ್ಥ ಹಾಗೂ ಪ್ರಾದೇಶಿಕತೆಯಲ್ಲಿ ಬಳಕೆಯಾಗುವ ಪದದ ಪರಿಚಯವನ್ನು ಕಾಣುತ್ತೇವೆ. ಹುಚ್ಚೆಳ್ಳು–ಒಂದು ಬಗೆಯ ಎಣ್ಣೆಬೀಜ, ಗುರೆಳ್ಳು, ಮರೆಳ್ಳು, ಕಾರೆಳ್ಳು, ಕುರಸಣಿ ಎಂಬ ರೀತಿಯಲ್ಲಿ ಬಳಕೆಯಾಗುವ ವಿಧಾನವನ್ನು ಹೇಳಿದ್ದಾರೆ. ಆಧುನಿಕರಣದ ಸಂದರ್ಭಕ್ಕೆ ತಕ್ಕಂತೆ ಮಾತನಾಡುವ ರೀತಿಯ ಪದಗಳನ್ನೇ ನೇರವಾಗಿ ಪರಿಚಯಿಸುವ ವಿಧಾನವನ್ನು ಸಹ ಈ ಪಠ್ಯಗಳಲ್ಲಿ ಕಾಣಬಹುದು.

ಉದಾ : ನಾಲ್ಕನೇ ತರಗತಿಯ ಕಲಿ–ನಲಿ ಎಂಬ ಪುಸ್ತಕದ 'ಒಡನಾಟ' ಎಂಬ ಭಾಷಾಭ್ಯಾಸ ಚಟುವಟಿಕೆಯಲ್ಲಿ ಆಡು ಮಾತಿನ ರೂಪ ಮತ್ತು ಗ್ರಾಂಥಿಕ ರೂಪ ತಿಳಿಯಿರಿ ಎಂಬ ಪ್ರಶ್ನೆಯನ್ನು ಕೇಳಲಾಗಿದೆ.

| **ಆಡುಮಾತಿನ ರೂಪ** | – | **ಗ್ರಾಂಥಿಕ ರೂಪ** |
|---|---|---|
| ಇಸಮು | – | ಆಸಾಮಿ (ವ್ಯಕ್ತಿ) |
| ಹತ್ರ | – | ಹತ್ತಿರ |

ಬುಡ ಬ್ಯಾಡಿ – ಬಿಡಬೇಡಿ

ಮಖ – ಮುಖ..............ಎಂಬ ಇತ್ಯಾದಿ ರೀತಿಯ ಚಟುವಟಿಕೆಗಳು ಎಲ್ಲಾ ಪಠ್ಯಗಳಲ್ಲಿಯೂ ಕಾಣುತ್ತೇವೆ. ಇದರ ಉದ್ದೇಶ ಆಡುಮಾತಿನ ಮತ್ತು ಗ್ರಾಂಥಿಕ ರೂಪದ ಪದಗಳ ರಚನೆ ಹಾಗೂ ಧ್ವನಿ ರಚನೆಯಲ್ಲಿ ಬದಲಾವಣೆಯನ್ನು ಕಾಣುತ್ತೇವೆ. ಈ ತರಹದ ಚಟುವಟಿಕೆಗಳು ಹಿಂದಿನ ಪಠ್ಯಗಳಲ್ಲಿ ಕಾಣುವುದು ವಿರಳವಾದ ಸಂಗತಿಯಾಗಿದೆ. ಇದು ಆಧುನಿಕತೆಯ ಭಾಗಕ್ಕೆ ಒಳಪಟ್ಟು ರಚನೆಯಾದಂತೆ ಕಂಡು ಬರುತ್ತದೆ. ಇದರ ಜೊತೆಗೆ ಪಠ್ಯದ ಭಾಗಗಳನ್ನು ಶಿಷ್ಟೀಕರಣಕ್ಕೆ ಒಳಪಡಿಸಲಾಗಿದೆ. ಇದು ಕೂಡ ಆಧುನಿಕತೆಯ ಪ್ರೇರಣೆ ಎಂದು ಹೇಳಬಹುದು. ಶಿಷ್ಟೀಕರಣವೆಂದರೆ ಒಂದು ಪದಕ್ಕೆ ಹಲವಾರು ಅರ್ಥಗಳಿರುತ್ತವೆ. ಜೊತೆಗೆ ಒಂದೇ ಅರ್ಥವುಳ್ಳ ಪದವನ್ನು ಹಲವು ರೀತಿಗಳಲ್ಲಿ ರಚಿಸಬಹುದು. ಉಧಾಹರಣೆಗೆ : 'ಕರಿ' ಎಂಬ ಪದವನ್ನು ಗಮನಿಸಿದರೆ ಗಜ, ಆನೆ, ಕಪ್ಪು ಎಂದು ತಿಳಿಯಬಹುದು. ಈ ಎಲ್ಲಾ ಅರ್ಥಗಳನ್ನು ಒಳಗೊಂಡಂತೆ ಒಂದು ಪದವನ್ನು ಪರಿಚಯಿಸುವ ವಿಧಾನಕ್ಕೆ ಶಿಷ್ಠೀಕರಣ ಎಂದು ಬಳಸಿದಂತೆ ತೋರುತ್ತದೆ.

ಉದಾ : ಕನ್ನಡ ಕಲಿ–ನಲಿ ೧ನೇ ತರಗತಿಯ ಪುಸ್ತಕದಲ್ಲಿ ೨ನೇ ಪಾಠಕ್ಕೆ 'ಆನೆ ಬಂತೊಂದಾನೆ' ಎಂಬ ಶಿರೋನಾಮೆಯನ್ನು ಕೊಡಲಾಗಿದೆ. ಇದನ್ನು 'ಗಜ ಬಂತೊ – ಕರಿಬಂತೊ' ಎಂಬ ಇತ್ಯಾದಿ ಪದಗಳಿಂದ ಶಿರೋನಾಮೆಯನ್ನು ಕೊಡಬಹುದಿತ್ತು. ಆದರೆ 'ಆನೆ' ಎನ್ನುವುದು ಪಠ್ಯದಲ್ಲಿ ಶಿಷ್ಠೀಕರಣಗೊಂಡು ರಚಿತವಾದ ಪದವಾಗಿದೆ. ಇದರ ಜೊತೆಗೆ ಮಗುವಿಗೆ ಸುಲಭತೆ, ಸರಳ ಸಾಮಾನ್ಯವಾದ ಪದಗಳಿಂದ ರಚನೆ ಮಾಡುವ ದೃಷ್ಟಿಯಿಂದ ರಚನೆಯಾಗಿರುವುದು ಪಠ್ಯಗಳ ವಿಶ್ಲೇಷಣೆಗೆ ಒಳಪಡಿಸಿದಾಗ ಸ್ಪಷ್ಟವಾಗುತ್ತದೆ. ಈ ಪದ ಎಲ್ಲಾ ಪ್ರಾದೇಶಿಕ ಭಾಗಗಳಲ್ಲಿಯೂ ಪರಿಚಿತವಾದ ಪದವಾಗಿರುವುದರಿಂದ ಈ ಪದವನ್ನು ಶಿಷ್ಟೀಕರಣಗೊಂಡ ಪದವಾಗಿ ಸ್ವೀಕರಿಸಿ ಪಾಠವನ್ನು ರಚಿಸಿದಂತೆ ಕಂಡು ಬರುತ್ತದೆ. ಇಂತಹ ಅಂಶಗಳನ್ನು ಎಲ್ಲಾ ತರಗತಿಯ ಪಠ್ಯಗಳಲ್ಲಿ ಕಾಣುವುದರಿಂದ ಶಿಷ್ಠೀಕರಣಕ್ಕೆ ಒಳಗಾಗಿ ಪಠ್ಯಗಳು ರಚನೆಯಾದ ಅಂಶವನ್ನು ಕಾಣುತ್ತೇವೆ.

ಈ ಮೇಲಿನ ಎಲ್ಲಾ ತರಗತಿಗಳ ಪಠ್ಯಗಳು ಆಧುನಿಕರಣಗೊಂಡು ರಚಿತವಾಗಿವೆ ಎಂಬ ಹೇಳಿಕೆಯನ್ನು ಕಾಣುತ್ತೇವೆ. ಆದರೆ ಏಕೆ ಮಕ್ಕಳ ಮೌಲ್ಯಮಾಪನ ಗಮನಿಸಿದಾಗ ಈ ಮೇಲಿನ ಅಂಶಗಳು ಸುಧಾರಣೆಯಾಗದೆ ಇರುವುದನ್ನು ಕಾಣುತ್ತೇವೆ. ಇದರ ಅರ್ಥ ಮೇಲಿನ ಅಂಶಗಳೆಲ್ಲವೂ ಸುಧಾರಣೆಯ ಮಟ್ಟದಲ್ಲಿ ರಚಿವಾಗಿವೆ ಎಂಬರ್ಥವಲ್ಲ, ಅಥವಾ ಪರಿಪೂರ್ಣವಾಗಿ ರಚಿತವಾಗಿಲ್ಲ ಎಂದರ್ಥವಲ್ಲ. ಇದಕ್ಕೆ ಪಠ್ಯಕ್ರಮ ದೋಷ ಪೂರಿತವೇ ಅಥವಾ ಬೋಧನೆ, ಬೋಧಕರ ಕಲಿಯುವವರ ಪ್ರಶ್ನಾವಳಿಯಲ್ಲಿನ ತೊಂದರೆಗಳೆ, ಚಿಹ್ನೆಗಳ ಬಳಕೆಯ ವಿಧಾನದ ತೊಂದರೆಗಳೇ ಯಾವ ವಿಧಾನದಲ್ಲಿ ಮಕ್ಕಳು ವಿಫಲರಾಗಿ

ವಿಷಯಾಧಾರಿತವಾಗಿ ಪಠ್ಯದ ಪ್ರಶ್ನೆಗಳಿಗೆ ಉತ್ತರಿಸುತ್ತಾರೆ. ಇಂತಹ ಪ್ರಶ್ನೆಗಳನ್ನು ಹಾಕಿಕೊಂಡು ಚರ್ಚಿಸುವ ಇಲ್ಲಿ ಪ್ರಯತ್ನ ಮಾಡಲಾಗಿದೆ.

## ೪.೨. ಧ್ವನಿರಚನೆಯ ಸ್ವರೂಪ

ಭಾಷೆಯಲ್ಲಿ ಉಚ್ಚಾರಣೆಯ ಅತ್ಯಂತ ಕನಿಷ್ಟತಮ ಘಟಕವನ್ನು ಧ್ವನಿ ಎಂದು ಕರೆಯಲಾಗುತ್ತದೆ. ಅರ್ಥರಹಿತ ಘಟಕವನ್ನು ಧ್ವನಿ ಎಂದು ಗುರುತಿಸಲಾಗಿದೆ. ಪ್ರತಿಯೊಂದು ಭಾಷೆಯಲ್ಲಿ ನಿರ್ದಿಷ್ಟ ಸಂಖ್ಯೆಯ ಧ್ವನಿಗಳು, ನಿರ್ದಿಷ್ಟವಾದ ಕಾರ್ಯಗಳನ್ನು ನಿರ್ವಹಿಸುತ್ತದೆ. ಒಂದೇ ಭಾಷೆಯಲ್ಲಿ ಪ್ರದೇಶ ಮತ್ತು ಸಮಾಜಕ್ಕನುಗುಣವಾಗಿ ಧ್ವನಿಗಳ ಸಂಖ್ಯೆ ಏರು ಪೇರಿನಿಂದ ಕೂಡಿರುತ್ತವೆ. ಇಲ್ಲಿ ಮುಖ್ಯವಾಗಿ ಧ್ವನಿರಚನೆ ಎಂಬ ಪದವನ್ನು ಉದ್ದೇಶ ಪೂರಕವಾಗಿ ಬಳಸಲಾಗಿದೆ. ಭಾಷಾವಿಜ್ಞಾನಿಗಳ ಪ್ರಕಾರ ಅಥವಾ ಭಾಷಾವಿಜ್ಞಾನದ ಪ್ರಕಾರ ಧ್ವನಿಗೆ ಒಂದು ರಚನೆ ಇಲ್ಲ. ಅದೊಂದು ಸಂಕೇತ ಮಾತ್ರ. ಆದರೆ ಪಠ್ಯಪುಸ್ತಕದಲ್ಲಿ ಬಳಸಿರುವ ಧ್ವನಿಗಳು ಬರಹದ ಧ್ವನಿಗಳಾಗಿವೆ. ಅವು ನಿರ್ದಿಷ್ಟ ಸಂಕೇತಗಳಿಂದ ಕೂಡಿರುತ್ತವೆ. ಧ್ವನಿ ಸಂಕೇತ ಮತ್ತು ಲಿಪಿ ಸಂಕೇತಗಳ ಸಂಬಂಧ ಭಾಷೆಯಿಂದ ಭಾಷೆಗೆ ಬೇರೆಯಾಗಿರ ಬಹುದು. ಕೆಲವೊಮ್ಮೆ ಒಂದು ಧ್ವನಿ ಒಂದು ಲಿಪಿಚಿಹ್ನೆ ರೀತಿಯಲ್ಲಿ ಇರಬಹುದು. ಪ್ರಸ್ತುತ ಭಾಗದಲ್ಲಿ ಮಕ್ಕಳಿಗೆ ಧ್ವನಿರಚನೆಯನ್ನು ಪರಿಚಯ ಮಾಡಿಸಲು ಹಲವಾರು ವಿಧಾನಗಳನ್ನು ಅನುಸರಿಸಲಾಗಿದೆ. ಆ ವಿಧಾನಗಳು ಯಾವುವು? ಎಂಬುದನ್ನು ನಿದರ್ಶನದ ಮೂಲಕ ಮುಂದಿನ ಭಾಗದಲ್ಲಿ ಚರ್ಚೆ ಮಾಡಲಾಗಿದೆ.

### ೧. ಕನ್ನಡ ಪಠ್ಯಪುಸ್ತಕಗಳಲ್ಲಿ ವರ್ಣಮಾಲೆಯ ಪರಿಚಯ

ಕನ್ನಡ ಭಾಷೆಯ ರಚನೆಯನ್ನು ಮುಖ್ಯವಾಗಿ ಮೂರು ಸ್ಥರಗಳಿಂದ ವಿವರಿಸ ಬಹುದಾಗಿದೆ. ಸ್ವತಃ ಅರ್ಥವಿಲ್ಲದ ಧ್ವನಿಗಳ ರಚನೆ ಒಂದು ಸ್ತರವಾದರೆ. ಧ್ವನಿಗಳು ಸೇರಿ ಉಂಟಾಗುವ ಅರ್ಥಸಹಿತವಾದ ಪ್ರಕೃತಿ ಪ್ರತ್ಯಗಳು ಸೇರಿ ಉಂಟಾಗುವ ಪದರಚನೆ ಇನ್ನೊಂದು ಸ್ತರ. ಪದ ಮತ್ತು ಪದಗುಚ್ಛಗಳು ಸೇರಿ ವಾಕ್ಯವಾಗುವ ಕ್ರಮ ಮತ್ತೊಂದು ಸ್ತರವಾಗಿದೆ. ಇಲ್ಲಿ ಕನ್ನಡ ಭಾಷಾ ಪಠ್ಯಗಳಲ್ಲಿ ಬಳಕೆಯಾಗಿರುವ ಧ್ವನಿಗಳು–ಅವುಗಳ ಪ್ರಸಾರ ಹಂಚಿಕೆ, ಹೇಗೆ ವಿವಿಧ ಕೌಶಲಗಳಲ್ಲಿ ಬಳಕೆಯಾಗಿದೆ ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಈ ಪಠ್ಯಕ್ರಮಗಳಲ್ಲಿ ಬರಹದ ರೂಪದಲ್ಲಿರುವ ಧ್ವನಿಗಳನ್ನು ಮಾತ್ರ ವಿವರಿಸುವ ಪ್ರಯತ್ನ ಮಾಡಲಾಗಿದೆ. ಕೆಲವೊಮ್ಮೆ ಒಂದು ಧ್ವನಿ ಒಂದು ಲಿಪಿ ಚಿಹ್ನೆ ಎಂಬ ರೂಪದಲ್ಲಿರಬಹುದು. ಕನ್ನಡದ 'ಕಾಡು' ಪದದಲ್ಲಿ ನಾಲ್ಕು ಧ್ವನಿಗಳಿದ್ದು, ಅವು ಪ್ರತಿನಿಧಿಸುವ ನಾಲ್ಕು ಲಿಪಿ ಚಿಹ್ನೆಗಳು ಇರುವುದನ್ನು ಗಮನಿಸಬಹುದು. ಒಂದೇ ಧ್ವನಿಗೆ ಒಂದಕ್ಕಿಂತ ಹೆಚ್ಚು ಲಿಪಿ ಚಿಹ್ನೆಗಳು ಬಳಕೆಯಾಗಬಹುದು. ಇಂಗ್ಲೀಷ್‌ನ 'ಯು' ಎಂಬ ಪದದ ಉಚ್ಚಾರಣೆ ಹಾಗೂ ಲಿಪಿ ರೂಪದ ನಡುವಿನ ವ್ಯತ್ಯಾಸವನ್ನು ಗಮನಿಸಿಬಹುದು.

ಹೀಗೆಯೇ ಭಾಷೆಯಿಂದ ಭಾಷೆಗೆ ಧ್ವನಿ ಮತ್ತು ಲಿಪಿ ಚಿಹ್ನೆ ಬೇರೆ ಬೇರೆಯಾಗಿರುವುದನ್ನು ನೋಡಬಹುದು. ಭಾಷೆಯಿಂದ ಭಾಷೆಗೆ ಧ್ವನಿಗಳ ಸಂಖ್ಯೆಯಲ್ಲಿ ವ್ಯತ್ಯಾಸವಿದೆ. ಒಂದೇ ಭಾಷೆಯಲ್ಲಿ ಪ್ರದೇಶ ಮತ್ತು ಸಮುದಾಯಕ್ಕೆ ಅನುಗುಣವಾಗಿ ಧ್ವನಿಗಳ ಸಂಖ್ಯೆಯಲ್ಲಿ ಅಲ್ಪ ಸ್ವಲ್ಪವಾದ ವ್ಯತ್ಯಾಸ ಹೊಂದಿರಬಹುದು. ಧ್ವನಿಗಳ ಸಂಖ್ಯೆಯು ವಿಷಯವಲ್ಲದೆ ಧ್ವನಿಗಳನ್ನು ಬಳಸುವ ವಿಷಯದಲ್ಲಿಯೂ ಭಾಷೆಗಳು ಬೇರೆಯಾಗುತ್ತವೆ. ಉದಾಹರಣೆಗೆ: ಕನ್ನಡ ಮತ್ತು ಇಂಗ್ಲೀಶ್ ಎರಡು ಭಾಷೆಗಳಲ್ಲಿಯೂ 'ಸ' ವ್ಯಂಜನಾಂತ್ಯ 'ಸ' ಧ್ವನಿ ಇದ್ದರು ಇಂಗ್ಲೀಶನಲ್ಲಿ SPIN, SMALL, SKATE, ಮುಂತಾದ ಪದಗಳಲ್ಲಿರುವಂತೆ ಫ್, ಮ್, ಕ್, ಮೊದಲಾದ ವ್ಯಂಜನಗಳ ಹಿಂದೆ ಬಳಕೆಯಾಗುತ್ತದೆ. ಕನ್ನಡದಲ್ಲಿ ಈ ಕ್ರಿಯೆ ಸಾಧ್ಯವಿಲ್ಲ.

ಒಂದೇ ಭಾಷೆಯ ಎಲ್ಲಾ ಧ್ವನಿಗಳು ಒಂದೇ ರೀತಿಯಲ್ಲಿ ಬಳಕೆಯಾಗುವವು. ಕನ್ನಡದಲ್ಲಿ 'ರ್' 'ಉ' ಪದಾಧಿ, ಸ್ವರಮಧ್ಯ ಹಾಗೂ ವಿವಿಧ ವ್ಯಂಜನಗಳ ಜೊತೆ ಕಾಣಿಸಿಕೊಳ್ಳುವ ಸಾಧ್ಯತೆ ಇದ್ದರೆ 'ళ్' ಣ್, ಗಳಿಗೆ ಈ ಸಾಧ್ಯತೆ ಇಲ್ಲ. ಇಂತಹ ಚರ್ಚೆಗಳನ್ನು ಸೂಕ್ಷ್ಮವಾಗಿ ಗಮಿಸಿದೆ. ಪಠ್ಯ ಪುಸ್ತಕಗಳಲ್ಲಿ ಯಾವ ಧ್ವನಿಗಳು ಯಾವ ಮಾದರಿಯ ಪದಗಳನ್ನು ಪ್ರತಿನಿಧಿಸುತ್ತದೆ. ಯಾವ ಪದಗಳು, ಯಾವ ಮಾದರಿಯ ವಾಕ್ಯಗಳನ್ನು ಪ್ರತಿನಿಧಿಸುತ್ತದೆ. ಯಾವ ವಾಕ್ಯಗಳು ಯಾವ ಮಾದರಿಯ ಪದಕೋಶವನ್ನು ಪ್ರತಿನಿಧಿಸುತ್ತದೆ ಎಂಬುದನ್ನು ಕುತೂಹಲಕಾರಿ ಅಂಶಗಳಿಂದ ಮತ್ತು ಉದಾಹರಣೆಗಳಿಂದ ಚರ್ಚಿಸುವುದಾಗಿದೆ.

ಕನ್ನಡಭಾಷಾ ಪಠ್ಯಪುಸ್ತಕಗಳಲ್ಲಿ ಅಳವಡಿಸಿರುವ ಧ್ವನಿಗಳನ್ನು ಸ್ವರ ಮತ್ತು ವ್ಯಂಜನಗಳೆಂದು ಅನುಕ್ರಮವಾಗಿ ವರ್ಗೀಕರಿಸಿ ವರ್ಣಮಾಲೆ ಎಂಬ ಹೆಸರಿನಲ್ಲಿ ಪಟ್ಟಿಮಾಡಿ ಕೊಡುವ ಪದ್ಧತಿ ಚಾರಿತ್ರಿಕವಾಗಿ ನಡೆದು ಬಂದಿದೆ. ಈ ಪಟ್ಟಿ ವಿದ್ವಾಂಸರ ಅಭಿಪ್ರಾಯದಂತೆ ಸಂಸ್ಕೃತ ವ್ಯಾಕರಣಗಳಲ್ಲಿ ಹಾಕಿಕೊಟ್ಟ ಮಾದರಿಯ ಅನುಕರಣೆಯಾಗಿದೆ. ಆದ್ದರಿಂದ ಈ ವರ್ಣಮಾಲೆಯಲ್ಲಿರುವ ಕನ್ನಡ ಧ್ವನಿಗಳನ್ನು, ಕನ್ನಡದ ಬಳಕೆಯನ್ನು ಸರಿಯಾಗಿ ಪ್ರತಿನಿಧಿಸುತ್ತದೆ ಎಂದು ಖಚಿತವಾಗಿ ಹೇಳುವುದಕ್ಕೆ ಸಾಧ್ಯವಾಗಿಲ್ಲ. ಏಕೆಂದರೆ ಕನ್ನಡ ಭಾಷೆಯಲ್ಲಿ ಬಳಸುವ ಶೇಕಡ ೬೫%ರಷ್ಟು ಭಾಗ ಸಂಸ್ಕೃತ ಪದಗಳ ಮತ್ತು ವಾಕ್ಯಗಳು ಬಳಕೆಯಲ್ಲಿರುವುದರಿಂದ ಅವುಗಳ ಸಂಸ್ಕೃತದ ಉಚ್ಚಾರಣೆಯಂತೆ ಕನ್ನಡದಲ್ಲೂ ಉಚ್ಚಾರಣೆ ಆಗಬೇಕು ಎಂಬ ಒತ್ತಡದ ಪರಂಪರೆ ಕನ್ನಡದ ಮೇಲಿರುವುದರಿಂದ ಬರಹದ ಭಾಷೆ ಮತ್ತು ಆಡುಮಾತಿನ ಭಾಷೆಯ ನಡುವೆ ಅಂತರ ಹೆಚ್ಚಾಗಿದೆ. ಈ ಹಿನ್ನೆಲೆಯಲ್ಲಿ ಕನ್ನಡ ಪಠ್ಯಪುಸ್ತಕ ರಚನೆ, ಧ್ವನಿ, ಪದ, ವಾಕ್ಯ ಮತ್ತು ಪದಕೋಶಗಳಲ್ಲಿ ಸಂಸ್ಕೃತ ಹೆಚ್ಚು ಬಳಕೆಯಲ್ಲಿದೆ. ಎಲ್ಲೆಲ್ಲಿ ಸಂಸ್ಕೃತ ಪದಗಳನ್ನು ಬಳಸಲಾಗಿದೆಯೋ ಅಲ್ಲೆಲ್ಲ ಪರ್ಯಾಯವಾಗಿ ಕನ್ನಡ ಪದಗಳನ್ನು ಅಳವಡಿಸಬಹುದು ಎಂಬುದನ್ನು ನಿದರ್ಶನ ಮೂಲಕ ಚರ್ಚಿಸಲಾಗಿದೆ.

ಉದಾಹರಣೆ : ಧವಳ – ಬಿಳಿ

ಶರ – ಬಾಣ

ನಯನ – ಕಣ್ಣು

ಪಥ – ದಾರಿ

ಜಠರ – ಹೊಟ್ಟೆ

ಖಗ – ಹಕ್ಕಿ

ಷಟ್ – ಆರು

ಅಂಬರ – ಆಕಾಶ

ಉರಗ – ಹಾವು

ಪ್ರಸ್ತುತ ಪ್ರಬಂಧದಲ್ಲಿ ಬಹುಮಟ್ಟಿಗೆ ಕನ್ನಡಿಗರೆಲ್ಲರಿಗೂ ಸ್ವೀಕೃತಕ್ಕಾಗಿ ಅರ್ಹವಾದ ಬೋಧನೆಗೆ ಒಪ್ಪಿತವಾದ, ಒಂದರ್ಥದಲ್ಲಿ ಇದು ಯಾರ ಕನ್ನಡವು–ಅಲ್ಲ ಯಾರ ಮನೆ ಮಾತಿನಲ್ಲೂ ಬಳಕೆಯಾಗುವುದಿಲ್ಲ. ಇಂತಹ ಅಂಶಗಳ ಮಾದರಿಗಳನ್ನು ಇಟ್ಟುಕೊಂಡು ವಿವರಿಸುವ ಪ್ರಯತ್ನ ಮಾಡಲಾಗಿದೆ. ಇದರ ಜೊತೆಗೆ ಮಕ್ಕಳ ಭಾಷೆಯಲ್ಲಿನ ತಪ್ಪುಗಳನ್ನು ತಿದ್ದಿ ಹೇಳುವ ಶಿಕ್ಷಕರ ಪಾತ್ರ, ಭಾಷಾ ಬೋಧನೆ ಮತ್ತು ಭಾಷಾ ಬೋಧನೆಗೆ ಬಳಕೆಯಾಗುವ ಪಾಠೋಪಕರಣಗಳು, ಮಗುವಿನ ಮೌಲ್ಯಮಾಪನದ ಅಂಶಗಳನ್ನು ಚರ್ಚಿಸಲಾಗಿದೆ. ಭಾಷಾ ಶಿಕ್ಷಕರನ್ನು ನೇಮಿಸುವ ಸರ್ಕಾರ ಕನ್ನಡವನ್ನು ಕಲಿಸುವ ಬಗೆಯನ್ನು ಅರಿತ ಶಿಕ್ಷಕರನ್ನು ನೇಮಿಸುತ್ತದೆ. ನೇಮಿಸಿದರೂ ಮಕ್ಕಳು ಕಲಿಸುವ ಕೌಶಲಗಳನ್ನು ಏಕೆ ತಪ್ಪು ಮಾಡುತ್ತಿದ್ದಾರೆ. ಭಾಷಾ ಬೋಧನೆ ಶ್ರವಣೋಪಕರಣಗಳ ಬಳಕೆ ಹೇಗೆ ಮಾಡಿಕೊಳ್ಳಲಾಗುತ್ತದೆ. ಶಿಕ್ಷಕರು ಮಕ್ಕಳನ್ನು ಹೇಗೆ ಗುರುತಿಸುತ್ತಾರೆ. ತಪ್ಪುಗಳನ್ನು ತಿದ್ದುವಲ್ಲಿ ಶಿಕ್ಷಕರು ಹೇಗೆ ಪಾತ್ರವಹಿಸುತ್ತಾರೆ. ಮೌಲ್ಯಮಾಪನದ ಸಂದರ್ಭದಲ್ಲಿ ಶಿಕ್ಷಕರು ಪದ, ಧ್ವನಿನಿಯಮ, ಪದಕೋಶ ವಾಕ್ಯ ರಚನೆಗಳ ಆಧಾರಿವಾಗಿ ಮೌಲ್ಯಮಾಪನ ಮಾಡುತ್ತಾರೆಯೇ ಅಥವಾ ಉತ್ತರಗಳ ಅನುಸಾರವಾಗಿ ಮೌಲ್ಯಮಾಪನ ಮಾಡುತ್ತಾರೆಯೇ ಎಂಬುದನ್ನು ವಿದ್ಯಾರ್ಥಿಗಳು ಮೌಲ್ಯಮಾಪನದ ಉತ್ತರ ಪತ್ರಿಕೆಯನ್ನು ಗಮನಿಸಲಾಗಿದೆ. ಇದು ಯಾವ ಹಂತದಲ್ಲಿ ಮೌಲ್ಯಮಾಪನ ಮಾಡಿದರೆ ಒಳ್ಳೆಯದು ಎಂಬ ಅಂಶಗಳನ್ನು ಚರ್ಚಿಸುವ ಪ್ರಯತ್ನ ಈ ಅಧ್ಯಯನದಲ್ಲಿ ಮಾಡಲಾಗಿದೆ.

ಭಾಷಾ ಶಿಕ್ಷಕರು ಶುದ್ಧವಾಗಿ ಉಚ್ಚರಿಸುವ ಹಾಗೂ ಬರೆಯುವ ಸಾಮರ್ಥ್ಯವನ್ನು ಹೊಂದಿರುವುದು ಅನಿವಾರ್ಯ. 'ಫಲ' ಎಂಬುದಕ್ಕೆ ಬದಲಾಗಿ 'ಪಲ' ಎನ್ನುವುದು, 'ಗೃಹ' ಎನ್ನುವಲ್ಲಿ 'ಗ್ರಹ' 'ಶ್ರುತ' 'ಪ್ರದಾನ' ಕ್ಕೆ ಬದಲು 'ಪ್ರಧಾನ' ಬಳಸುತ್ತಿದ್ದರೆ

ಎಂಥೆಂಥ ತಪ್ಪುಗಳಾಗುತ್ತದೆ ಎಂಬುದನ್ನು ವಿವರಿಸಬೇಕಾಗಿಲ್ಲ. **ಜಿ.ಪಿ.ರಾಜರತ್ನಂ** ಒಮ್ಮೆ **'ಗುರು ಶಿಷ್ಯರ ಸಂಬಂಧ' ಕುರಿತು ಭಾಷಣ ಮಾಡುತ್ತಿದ್ದಾಗ** ಆಡಿದ ಮಾತುಗಳು ಈ ಸಂದರ್ಭದಲ್ಲಿ ನೆನಪಿಗೆ ಬರುತ್ತಿದೆ. ಟ್ಯಾಂಕ್ (Tank) ನಲ್ಲಿ ನೀರಿದ್ದರೆ ನಲ್ಲಿಯಲ್ಲಿ ನೀರು ಬರುತ್ತದೆ. Tank ಖಾಲಿಯಾದಾಗ ! **ಎಂಥ ಕಟು ಸತ್ಯ !** ಇಂಥ ಕೊರತೆಗಳಿಗೆ, ತಪ್ಪುಗಳಿಗೆ ಅವಕಾಶ ಕೊಡದ ರೀತಿಯಲ್ಲಿ ಶಿಕ್ಷಕರು ಬೋಧಿಸಿ, ಪರಿಣಾಮಕಾರಿಯಾಗಿ ಮಕ್ಕಳಲ್ಲಿ ಕಲಿಕೆ ಆಗಬೇಕು ಎಂಬುದು ಶಿಕ್ಷಣ ಚಿಂತಕರ ಅಭಿಪ್ರಾಯವಾಗಿದೆ. ಆದ್ದರಿಂದ ಶಿಕ್ಷಕರು ಸ್ವರಭಾರ (Intornation) ಧ್ವನಿಯಲ್ಲಿ ಏರಿಳಿತ (Modulation) ತಡೆ/ವಿರಾಮ (Pause) ಸೂಕ್ತವೇಗ (Proper speed) ಈ ಅಂಶಗಳಲ್ಲಿ ಏರು ಪೇರಾದರೆ? ಕೆಲವೊಮ್ಮೆ ಅರ್ಥಹೀನವಾಗುತ್ತದೆ. ಉದಾಹರಣೆಗೆ : ಅವನು ನಾಳೆ ರಾತ್ರಿ ಬಸ್ಸಿನಲ್ಲಿ ಒಬ್ಬನೇ ಬೆಂಗಳೂರಿಗೆ ಹೋಗುತ್ತಾನೆ, ಎನ್ನುವಾಗ ಒಂದೊಂದು ಪದದ ಮೇಲೂ ಒತ್ತು (ಸ್ವರಭಾರ) ಕೊಟ್ಟರೆ ಆಗುವ ವ್ಯತ್ಯಾಸ ಕಂಡು ಕೊಳ್ಳಬಹುದು. ಇದನ್ನು ಪಾಲಿಸಿದ ಮಗು ಏನಾಗಬಹುದು, ಏನನ್ನು ತಿಳಿಯಬಹುದು ಎಂಬಂತಹ ಅಂಶಗಳನ್ನು ಚರ್ಚಿಸುವ ಅಂಶಗಳನ್ನು ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಇಂತಹ ಅಂಶಗಳನ್ನು ಗಮನದಲ್ಲಿರಿಸಿ ಈ ಅಧ್ಯಾಯದಲ್ಲಿ ಸೂಕ್ತ ಉದಾಹರಣೆಗಳ ಮೂಲಕ ಚರ್ಚಿಸಲಾಗಿದೆ. (ಕನ್ನಡ ಭಾಷೆಯ ಬಳಕೆ – ಡಾ.ಎಚ್.ಕೆ.ರಾಮನಾಥ್ ಪುಟ–೬)

ಕನ್ನಡದ ಪಠ್ಯಪುಸ್ತಕಗಳಲ್ಲಿ ಬಳಕೆಯಾಗಿರುವ ಸ್ವರ ಮತ್ತು ವ್ಯಂಜನಗಳನ್ನು ಈ ರೀತಿ ವರ್ಗೀಕರಿಸಲಾಗಿದೆ.

**ಸ್ವರಗಳು :** ಅ ಆ ಇ ಈ ಉ ಊ ಋ ಎ ಏ ಐ ಒ ಓ ಔ

**ವ್ಯಂಜಗಳು :** ಕ್ ಖ್ ಗ್ ಘ್ ಙ್

ಚ್ ಛ್ ಜ್ ಝ್ ಞ್

ಟ್ ಠ್ ಡ್ ಢ್ ಣ್

ತ್ ಥ್ ದ್ ಧ್ ನ್

ಪ್ ಫ್ ಬ್ ಭ್ ಮ್

**ಅವರ್ಗೀಯ ವ್ಯಂಜನಗಳು** : ಯ್ ರ್ ಲ್ ವ್ ಶ್ ಷ್ ಸ್ ಹ್ ಳ್

ಮೇಲಿನ ವರ್ಣಮಾಲೆ ಪಟ್ಟಿಯಲ್ಲಿ 'ಋ' ಕಾರವನ್ನು ಒಂದನೇ ತರಗತಿ ಕನ್ನಡ ಪಠ್ಯಪುಸ್ತಕ ರಚನೆ ಸಂದರ್ಭದಲ್ಲಿ ಕೈಬಿಡಲಾಯಿತು. ಇದಕ್ಕೆ ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರು ಸಮರ್ಥನೆ ನೀಡಿದರು. 'ಋ' ಕಾರ ಕನ್ನಡದಲ್ಲಿ ಪ್ರತ್ಯೇಕ

ಸ್ವರವಾಗಿರದೆ, ಸ್ವರ ಯುಕ್ತವಾದ 'ರ' ಕಾರವಾಗಿ ಉಚ್ಚಾರಗೊಳ್ಳುತ್ತದೆ. ಬಹು ಸಂಖ್ಯಾತರಲ್ಲಿ ಈ ಧ್ವನಿ ವೃತ್ತಾಕಾರವಾಗಿ ತುಟಿಗಳಿಂದ ಹೊರಡುವ 'ಉ' ಸ್ವರ ಸಹಿತವಾಗಿ (ರು. ರೂ ಎಂಬಂತೆ) ಉಚ್ಚಾರಗೊಳ್ಳುತ್ತಿದೆ. ಇನ್ನು ಕೆಲವರಲ್ಲಿ ವೃತ್ತವಾಗದ ತುಟಿಗಳಿಂದ ಹೊರಡುವ 'ಉ' ಸ್ವರಗಳಿಂದ ಕೂಡಿರುತ್ತದೆ. ಅಂದರೆ ಉಚ್ಚಾರಣೆಯನ್ನು ಮತ್ತು ಕನ್ನಡದ ಅಕ್ಷರ ರಚನೆಯ ನಿಯಮವನ್ನು ಗಮನದಲ್ಲಿಟ್ಟುಕೊಂಡು 'ಋ' ಕಾರವನ್ನು ಕೈ ಬಿಡಲಾಯಿತು. ಆದರೆ ವಿದ್ವಾಂಸರಲ್ಲಿ 'ಋ' ಕಾರವನ್ನು ಕುರಿತು ಪರ ಮತ್ತು ವಿರೋಧಗಳು ಆರಂಭವಾಯಿತು. ಕೊನೆಯಲ್ಲಿ ಹಿಂದಿನಂತೆ ಪಠ್ಯಪುಸ್ತಕದಲ್ಲಿ 'ಋ' ಕಾರವನ್ನು ಉಳಿಸಿಕೊಳ್ಳಲಾಯಿತು.

ಕನ್ನಡ ಲಿಪಿ ವ್ಯವಸ್ಥೆಯು ವಾಸ್ತವವಾಗಿ ಕನ್ನಡ ಧ್ವನಿ ವ್ಯವಸ್ಥೆಯನ್ನು ಪ್ರತಿನಿಧಿಸುವ ಬದಲು ಸಂಸ್ಕೃತದ ಎಲ್ಲಾ ಪ್ರಮಾಣಿತ ಧ್ವನಿಗಳನ್ನು ಪ್ರತಿನಿಧಿಸುವ ಉದ್ದೇಶವನ್ನು ಹೊಂದಿದೆ. ಕಳೆದ ಶತಮಾನದಲ್ಲಿ ಶಾಲಾ ಶಿಕ್ಷಣದ ಭಾಗವಾಗಿ ಸ್ವರಗಳನ್ನು ಕಲಿಸುವ 'ಋ' ಕಾರ ಮತ್ತು ಅದರ ದೀರ್ಘರೂಪ ಉಪಾಧ್ಮಾನೀಯಗಳು, ಅನುಸ್ವರ ಮತ್ತು ವಿಸರ್ಗಗಳನ್ನು ಕಲಿಸಿಕೊಡುತ್ತಿದ್ದರು. ಆದರೆ ಕಾಲ ಕಳೆದಂತೆ ಕನ್ನಡಿಗರ ಉಚ್ಚಾರಣೆಯಲ್ಲಿ ಈ ಸ್ವರಗಳಿಗೆ ಅರ್ಥವಿಲ್ಲವೆಂಬುದು ಗಮನಕ್ಕೆ ಬಂದಿದೆ. ಇದರಿಂದಾಗಿ ಶಾಲಾ ಪಠ್ಯಗಳಿಂದ ಉಪಧ್ಮಾನೀಯ ಗಳನ್ನು ಮೊದಲು ಕೈ ಬಿಟ್ಟರು ಹೀಗೆಯೇ 'ಋ' ಕಾರವನ್ನು ಚಿಹ್ನೆ ಮತ್ತು ಉಚ್ಚಾರಣೆಗಳ ನೆಲೆಯಲ್ಲಿ ಬಿಟ್ಟು ಬಿಡ ಬೇಕೆಂದು ಚರ್ಚೆ ಮೊದಲಾಯಿತು.

ವಾಸ್ತವವಾಗಿ 'ಋ'ಕಾರವು 'ರ' ಕಾರವನ್ನು ಪ್ರತಿನಿಧಿಸುತ್ತದೆ. ಅವರ್ಗೀಯ ವ್ಯಂಜನವಾದ 'ರ' ಕಾರವು ಕೆಲವು ಪರಿಸರಗಳಲ್ಲಿ ಅಕ್ಷರ ಕೇಂದ್ರವಾಗುವ ಸಾಧ್ಯತೆಗಳಿವೆ. ಅಕ್ಷರ ಕೇಂದ್ರಗಳು ಸಾಮಾನ್ಯವಾಗಿ ಸ್ವರಗಳು, ಈ ಅಕ್ಷರ ಕೇಂದ್ರಗಳಾಗಿ ಬಂದಾಗ ಅವುಗಳ ವ್ಯಂಜನಗಳಾಗಿದ್ದರೂ ಅವುಗಳಿಗೆ ಸ್ವರತ್ವ ಒದಗುತ್ತದೆ. ಹೀಗಾಗಿ 'ರ' ವ್ಯಂಜನದ ಬದಲು ಅದರ ಸ್ವರ ರೂಪವಾಗಿ ಅಥವಾ ಅಕ್ಷರ ಕೇಂದ್ರವಾಗಿ 'ಋ' ಕಾರವನ್ನು ಸಂಸ್ಕೃತದಲ್ಲಿ ಬಳಸುವ ಪದ್ಧತಿ ಇದೆ. ಇದು ಸರ್ವಥಾ ಕನ್ನಡಕ್ಕೆ ಅನ್ವಯಿಸುವ ವಿಚಾರವಿಲ್ಲ. ಏಕೆಂದರೆ ಕನ್ನಡದಲ್ಲಿ ಎಲ್ಲಿಯೂ ವ್ಯಂಜನವು ಅಕ್ಷರ ಕೇಂದ್ರವಾಗಲಾರದು. 'ರ' ಕಾರವನ್ನು ಹೇಗೆ ಬರೆದರೂ ಅದರ ವ್ಯಂಜನ ಗುಣವನ್ನು ಮಾತ್ರ ಕಾಯ್ದುಕೊಳ್ಳುತ್ತದೆ. ಈ ಅಂಶ ಸಂಪ್ರದಾಯವಾದಿಗಳಿಗೆ ಒಪ್ಪಿಗೆಯಾಗಲಿಲ್ಲ. ಶಾಲಾ ಪಠ್ಯಗಳಿಂದ 'ಋ' ಕಾರ ಚಿಹ್ನೆಯನ್ನು ಕೈಬಿಡುವ ಪ್ರಸ್ತಾಪ ಕೆರಳಿಸಿತು. ಸರ್ಕಾರ ಯಥಾಸ್ಥಿತಿಯನ್ನು ಮುಂದುವರಿಸಿಕೊಂಡು ಹೋಗುವ ಎಂದಿನ ಆಲೋಚನೆಯ ಫಲವಾಗಿದೆಯೇ. 'ಋ' ಕಾರ ಅದಿರುವ ಜಾಗದಲ್ಲಿ ಉಳಿದುಕೊಂಡಿದೆ. (ಕನ್ನಡ ಜಗತ್ತು ಅರ್ಧಶತಮಾನ – ಡಾ.ಕೆ.ವಿ.ಎನ್. ಪುಟ ೧೬೪.)

ಡಿ.ಎನ್.ಶಂಕರ ಭಟ್ ರು 'ಋ' ಕಾರದ ಬಗ್ಗೆ ಈ ಕೆಳಗಿನ ಅಂಶಗಳ ಮೂಲಕ ಚರ್ಚಿಸುತ್ತಾರೆ. 'ಋ' ಕಾರ ಒಂದು ಸ್ವರಾಕ್ಷರವಾಗಿ ಕನ್ನಡ ಬರಹದಲ್ಲಿ ಸೇರಿಕೊಂಡಿದೆ.

ಇದು ಸಂಸ್ಕೃತದಲ್ಲಿ ಒಂದು ಸ್ವರವಾಗಿ ಬಳಕೆಯಾಗುತ್ತಿದ್ದಿರಬೇಕು. (ಇದಕ್ಕೆ ಸಂಸ್ಕೃತದಲ್ಲಿ 'ೠ' ಎಂಬ ದೀರ್ಘ ರೂಪವು ಇದೆ.) ಆದರೆ ಕನ್ನಡಿಗರು ಇದನ್ನು 'ರು' ಇಲ್ಲವೇ 'ರಿ' ಎಂಬುದಾಗಿ 'ರ' ಕಾರಕ್ಕೆ 'ಉ' ಕಾರ ಇಲ್ಲವೇ 'ಇ' ಕಾರವನ್ನು ಸೇರಿಸಿ (ಅಥವಾ ಒಂದು ವಿಶಿಷ್ಟವಾದ 'ಉ' ಕಾರವನ್ನು-ಎಂದರೆ ತುಟಿಯನ್ನು ಅಗಲಿಸಿ ಉಚ್ಚರಿಸುವ 'ಉ' ಕಾರವನ್ನು ಸೇರಿಸಿ) ಉಚ್ಚರಿಸುತ್ತಾರೆ. ಆದರೆ ಈ ರೀತಿ 'ಋ' ಕಾರಕ್ಕೆ ವಿಶಿಷ್ಟ ಉಚ್ಚಾರಣೆಯನ್ನು ಕೊಡುವವರೂ ಕೃತಿ ಮತ್ತು ಕ್ರುದ್ಧ ಎಂಬಂತಹ ಪದಗಳ ಮೊದಲ ಅಕ್ಷರದಲ್ಲಿ ಕಾಣಿಸುವಂತಹ ವ್ಯತ್ಯಾಸವನ್ನು ಸಾಮಾನ್ಯವಾಗಿ ತಮ್ಮ ಉಚ್ಚಾರಣೆಯಲ್ಲಿ ಕಾಣಿಸುವುದಿಲ್ಲ. ಅಧ್ಯಯನದ ಸಂದರ್ಭದಲ್ಲಿ ತಿಳಿದ ಹಾಗೆ ಯಾರೂ (ಸಂಸ್ಕೃತ ಪಂಡಿತರೂ) 'ಋ' ಕಾರವನ್ನು ಒಂದು ಸ್ವರವಾಗಿ ಉಚ್ಚರಿಸುವುದಿಲ್ಲ.

ಆಡುಗನ್ನಡದಲ್ಲಿ ಬರುವ 'ಬತ್ರ್, ಹ್ವಾತ್ರ್' ಮೊದಲಾದ ಕೆಲವು ಪದಗಳಲ್ಲಿ 'ಋ' ಕಾರದ ಉಚ್ಚಾರಣೆ ಇದೆ ಎಂದು ಕೆಲವರು ಭಾವಿಸುತ್ತಾರೆ. ಆದರೆ ನಿಜಕ್ಕೂ ಇಲ್ಲಿ 'ರ' ಕಾರವನ್ನು ಮೇಲೆ ವಿವರಿಸಿದಂತೆ ತುಟಿ ಅಗಲಿಸಿದ 'ಉ' ಕಾರ ಉಚ್ಚಾರಣೆಯಲ್ಲಿದೆ. 'ಋ' ಎಂಬ ಸ್ವರದ ಉಚ್ಚಾರಣೆಯಿಲ್ಲ. ಸಂಸ್ಕೃತದ ಕೃತಿ ಪದವನ್ನು ಇಲ್ಲಿ ಪರಿಶೀಲಿಸಬಹುದು. ಈ ಪದದ ಉಚ್ಚಾರಣೆಯಲ್ಲಿ 'ಋ' ಸ್ವರ ಬಂದಿದೆ ಎಂದು ಹೇಳಬೇಕಾದರೆ 'ಕ' ಕಾರ ಮತ್ತು 'ತ' ಕಾರಗಳ ನಡುವೆ 'ರ' ಕಾರ ಮಾತ್ರ ಇರಬೇಕು. ಆ ಪದ ಎರಡು ಅಕ್ಷರ (Syllable)ಗಳಿಂದ ಕೂಡಿರಬೇಕು. ಕನ್ನಡಿಗರ (ಮತ್ತು ಸಂಸ್ಕೃತ ಪಂಡಿತ) ಉಚ್ಚಾರಣೆಯಲ್ಲಿ ಈ ಪದ ಎರಡು ಅಕ್ಷರಗಳಿಂದ ಕೂಡಿರುತ್ತದೆ ಏನೋ ನಿಜ. ಆದರೆ 'ಕ' ಕಾರ ಮತ್ತು 'ತ' ಕಾರಗಳ ನಡುವೆ 'ರ' ಕಾರದೊಂದಿಗೆ ಒಂದು ಸ್ವರವೂ (ದುಂಡಗಿನ 'ಉ' ಕಾರ ಇಲ್ಲವೇ ತುಟಿ ಅಗಲಿಸಿದ 'ಉ' ಕಾರ) ಬಂದಿರುತ್ತದೆ.

ಸಂಸ್ಕೃತದಲ್ಲಿ ಮೇಲೆ ವಿವರಿಸಿದಂತೆ 'ಋ' ಸ್ವರ ಉಚ್ಚಾರಣೆಯಲ್ಲಿತ್ತು ಎಂಬುದಕ್ಕೆ ಅದರ ವೈಯಾಕರಣಿಗಳು ಕೊಡುವ 'ಋ' ಕಾರದ ವರ್ಣನೆ ಮತ್ತು ಸೇರಿಕೆ (ಸಂಧಿಯ) ನಿಯಮಗಳನ್ನು ಆಧಾರವಾಗಿ ಕೊಡಬಹುದು. ನಮ್ಮ ಉಚ್ಚಾರಣೆಯನ್ನು ಅನುಸರಿಸಿ ಸಂಸ್ಕೃತದ ಎರವಲುಗಳಲ್ಲಿ ಕಾಣಿಸುವ 'ಋ' ಕಾರವನ್ನು ಈ ರೀತಿ 'ರು' ಇಲ್ಲವೆ 'ರಿ' ಎಂಬುದಾಗಿ ಬರೆಯಲು ಸಾಧ್ಯವಿದೆಯಾದ ಕಾರಣ, ಆ ಅಕ್ಷರವನ್ನು ಮತ್ತು ಅದರ ವಿಶಿಷ್ಟ ಚಿಹ್ನೆ (ಲ ಎಂಬುದನ್ನು) ಕನ್ನಡದ ಹೊಸ ಬರಹದಲ್ಲಿ ಬಳಸಬೇಕಾಗುವುದಿಲ್ಲ. (ಕನ್ನಡ ಬರಹವನ್ನು ಸರಿಪಡಿಸೋಣ! ಡಿ.ಎನ್.ಶಂಕರಭಟ್-ಪುಟ ೧೦೦-೧೦೧.)

ಉಚ್ಚಾರಣೆಯ ದೃಷ್ಟಿಯಿಂದ ಕನ್ನಡ ಧ್ವನಿಗಳ ಬಗೆಗೆ ಕೆಲವು ಮಾತುಗಳನ್ನು ಚರ್ಚೆ ಮಾಡಬೇಕಾಗಿದೆ. ಇದಕ್ಕೆ ಹಿನ್ನೆಲೆಯಾಗಿ ಧ್ವನಿಗಳ ಹುಟ್ಟು ಮತ್ತು ಕ್ರಮ ಕುರಿತಂತೆ ಕೆಲವು ವಿಷಯಗಳನ್ನು ಗಮನಿಸುವುದು ಅವಶ್ಯಕವಾಗಿದೆ. ಭಾಷೆಯಲ್ಲಿ ಬಳಸುವ ಎಲ್ಲಾ ಧ್ವನಿಗಳು

ಕಂಠದ ಮೇಲ್ಭಾಗದಲ್ಲಿರುವ ಧ್ವನಿ ಪೆಟ್ಟಿಗೆಯಿಂದ ತುಟಿಗಳ ಹೊರಗಿನ ಬಾಯಿಯ ಬೇರೆ ಬೇರೆ ಭಾಗಗಳು ಹಾಗು ನಾಸಿಕ ದ್ವಾರಗಳಿಂದ ಹುಟ್ಟುತ್ತವೆ. ಕನ್ನಡ ಧ್ವನಿಗಳೆಲ್ಲವು ನಾವು ಹೊರಬಿಡುವ ಗಾಳಿಯಿಂದ ಹುಟ್ಟುವವಾಗಿವೆ. ಶ್ವಾಸನಾಳದ ಮೂಲಕ ನಿರಂತರವಾಗಿ ಹೊರಬರುವ ಶ್ವಾಸದ ಗಾಳಿ ಒದಗಿಸುವ ಕೆಲಸ ಪುಪ್ಪಸಗಳದ್ದು. ಮೇಲ್ಮುಖವಾಗಿ ಹೊರಬರುವ ಶ್ವಾಸದ ಗಾಳಿ ಕಂಠದ ಮೇಲ್ಭಾಗದಲ್ಲಿರುವ ಧ್ವನಿಪೆಟ್ಟಿಗೆಯ ಮೂಲಕ ಹಾದು ಮೇಲಕ್ಕೆ ಬರಬೇಕು. ಧ್ವನಿಗಳ ಉತ್ಪತ್ತಿಯ ದೃಷ್ಟಿಯಿಂದ ಧ್ವನಿಪೆಟ್ಟಿಗೆ ಒಂದು ಮಹತ್ವವಾದ ಅಂಗವಾಗಿದೆ. ಧ್ವನಿ ಪೆಟ್ಟಿಗೆಯೊಳಗೆ ಎರಡು ಘೋಷ ಪಟಲಗಳ ಮಧ್ಯೆ < 'ಅ' ಕಾರದಲ್ಲಿ ತೆರೆದು ಕೊಂಡಿದ್ದು, ಈ ತೂತಿನ ಮೂಲಕ ಗಾಳಿ ಮೇಲಕ್ಕೆ ಬರುತ್ತದೆ. ಇದು ಸಾಮಾನ್ಯ ಉಸಿರಾಟದಲ್ಲಿನ ಸ್ಥಿತಿ. ಈ ಸ್ಥಿತಿಯಲ್ಲಿ ಶ್ವಾಸದ ಗಾಳಿಯನ್ನು ಒತ್ತಡದಿಂದ ಹೊರಕ್ಕೆ ಬಿಟ್ಟಾಗಲು ಗಾಳಿ ನಿರಂತರವಾಗಿ ಹೊರಬರುತ್ತಿರುವುದರಿಂದ ಘೋಷ ಪಟಲದ ಭಾಗದಲ್ಲಿ ಯಾವುದೇ ನಾದ ಉಂಟಾಗದು. ಇಲ್ಲಿ ನಾದ ಉಂಟಾಗದಿದ್ದರೂ ಹೊರ ಬರುವ ಗಾಳಿಗೆ ಮುಂದಕ್ಕೆ ತುಟಿ ಹೊರಗಿನ ಬೇರೆ ಬೇರೆ ಸ್ಥಾನಗಳಲ್ಲಿ ಆಡಚಣೆಗಳನ್ನೊಡ್ಡಿ ಕ್. ಸ್. ಪ್. ಮುಂತಾದ ವಿವಿಧ ಧ್ವನಿಗಳು ಹುಟುತ್ತವೆ. ಹೀಗೆ ಘೋಷ ತಂತುಗಳು ಸಾಮಾನ್ಯ ಸ್ಥಿತಿಯಲ್ಲಿರುವಾಗ ಅವುಗಳ ಮೂಲಕ ಹೊರ ಬಂದ ಗಾಳಿಯನ್ನು ಉಪಯೋಗಿಸಿಕೊಂಡು ಹುಟ್ಟುವ ಧ್ವನಿಗಳೇ ಅಘೋಷ ಧ್ವನಿಗಳು. ಘೋಷಪಟಲಗಳು ಉಸಿರಾಟದ ಅನುಕೂಲಕ್ಕಾಗಿ ಸಾಮಾನ್ಯವಾಗಿ ತೆರೆದುಕೊಂಡಿದ್ದರು ಅವುಗಳ ಹಿಂಭಾಗವನ್ನು ಹತ್ತಿರ ತಂದು ಪಟಲಗಳ ಮಧ್ಯದ ಉದ್ದವಾದ ತೂತನ್ನು ಬೇಕಾದ ಪ್ರಮಾಣದಲ್ಲಿ ಕಿರುದು ಗೊಳಿಸುವ ಅಥವಾ ಸಂಪೂರ್ಣವಾಗಿ ಮುಚ್ಚುವ ವ್ಯವಸ್ಥೆಯೂ ಇದೆ. ಇದು ನಮ್ಮ ಇಚ್ಚೆಯಂತೆ ನಡೆಯುವ ಕಾರ್ಯ. ಘೋಷ ಪಟಲಗಳು ತೀರ ಹತ್ತಿರ ಬಂದು ಸ್ವಲ್ಪವೇ ತೆರೆದಿದ್ದಾಗ ಆಗುವ ಅವು ಒಂದು ನಿರ್ದಿಷ್ಟ ಹದದಲ್ಲಿ ಇದ್ದಾಗ ಕಿರಿದಾದ ತೂತಿನ ಮೂಲಕ ಮೇಲಕ್ಕೆ ಹೊರಗೆ ಒತ್ತಡದಿಂದ ಬರುವ ಗಾಳಿ ಘೋಷ ಪಟಲಗಳನ್ನು ವೇಗವಾಗಿ ಕಂಪಿಸುವಂತೆ ಮಾಡುತ್ತದೆ. ಈ ಕಂಪನದಿಂದಾಗಿ ಒಂದು ಬಗೆಯ ನಾದ ಉಂಟಾಗುತ್ತದೆ. ಘೋಷ ಪಟಲಗಳ ಕಂಪನದಿಂದ ಆದ ನಾದವೇ ಘೋಷ ನಾದ ಉಂಟಾಗಲು ಘೋಷ ಪಟಲಗಳು ಹತ್ತಿರ ಬರಬಹುದು. ಅವು ಒಂದು ನಿರ್ದಿಷ್ಟ ಹದದಲ್ಲಿರುವುದು ಮುಖ್ಯ. ಹದ ಎಂಬುದಕ್ಕೆ ವಿವರಣೆಯಾಗಿ ಒಂದು ಹೋಲಿಕೆಯನ್ನು ಕೊಡಬಹುದು. ಒಂದು ರಬ್ಬರ್ ಬ್ಯಾಂಡನ ತುಣುಕೊಂದನ್ನು ಹದ ಸಹಜವಾಗಿ ಇರುವಷ್ಟೆ ಉದ್ದವಾಗಿ ಅಗಲಿಸಿ ಹಿಡಿದು ಅದನ್ನು ಮಧ್ಯಭಾಗದಲ್ಲಿ ಒಂದು ಬೆರಳಿನಿಂದ ಮೀಟಿ ನೋಡಿ. ಯಾವುದೇ ಧ್ವನಿಯು ಉಂಟಾಗದು. ರಬ್ಬರ್ ಬ್ಯಾಂಡನ್ನು ಕ್ರಮೇಣ ಹೆಚ್ಚು ಉದ್ದವಾಗಿ ಎಳೆಯುತ್ತಾ ಅದನ್ನು ಮೊದಲಿನಂತೆ ಮೀಟುತ್ತಾ ಬನ್ನಿ. ಯಾವುದೇ ಒಂದು ನಿರ್ದಿಷ್ಟವಾದ ಉದ್ದಕ್ಕೆ ಅದನ್ನು ಎಳೆದು ಮೀಟಿದಾಗ

ಧ್ವನಿಹುಟ್ಟಲು ಪ್ರಾರಂಭವಾಗುತ್ತದೆ. ಹೀಗೆ ರಬ್ಬರ್ ಬ್ಯಾಂಡ್ ಧ್ವನಿ ಹುಟ್ಟಿಸಲು ಸಾಧ್ಯವಾದ ವೇಗದಷ್ಟು ಕಂಪನಗೊಳ್ಳಲು ಸ್ಥಿತಿ ಅಥವಾ ಹದದಲ್ಲಿದೆ ಎಂದರ್ಥ. ರಬ್ಬರ್ ಬೆಂಡನ್ನು ಇನ್ನೂ ಉದ್ದ ಎಳೆದಾಗಲೂ ನಾದ ಉಂಟಾಗುತ್ತದೆ. ಆದರೆ ನಾದದ ಗುಣ ಬೇರೆಯಾಗುತ್ತದೆ.

ಇದಕ್ಕೆ ಕಾರಣ ರಬ್ಬರ್ ಬ್ಯಾಂಡ್ ಉದ್ದವಾದಷ್ಟು ಅದನ್ನು ಮೀಟಿದಾಗ ಆಗುವ ಕಂಪನ, ವೇಗ ಹೆಚ್ಚಾಗುವುದು. ಘೋಷ ಪಟಲಗಳ ಉದ್ದವನ್ನು ಹೀಗೆಯೇ ಹೆಚ್ಚು ಕಡಿಮೆ ಗೊಳಿಸುವುದು ಅಸಾಧ್ಯವಾದರೂ ಅವುಗಳ ಹದವನ್ನು ಬದಲಿಸಿ ಅವು ಕಂಪನಗೊಳ್ಳುವಂತೆ ಮಾಡುವುದು ಸಾಧ್ಯ. ಘೋಷ ಪಟಲಗಳಲ್ಲಿ ಉಂಟಾದ ನಾದದಿಂದ ಕೂಡಿದ ಗಾಳಿಯನ್ನು ಮತ್ತೆ ಬಾಯಿಯ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಆಕಾರಕ್ಕೆ ತಿರುಗಿಸಿ ಅಥವಾ ಅಡಚಣೆಗೊಳಪಡಿಸಿ ವಿವಿಧ ಧ್ವನಿಗಳನ್ನು ಹುಟ್ಟಿಸ ಬಹುದು. ಹೀಗೆ ಹುಟ್ಟಿದ ಧ್ವನಿಗಳು ಘೋಷ ಧ್ವನಿಗಳು. ಕನ್ನಡದ ವರ್ಣಮಾಲೆಯಲ್ಲಿಯ ವರ್ಗೀಯ ವ್ಯಂಜನಗಳಲ್ಲಿ ಒಂದು ಮತ್ತು ಮೂರನೆ ವ್ಯಂಜಗಳು ಹಾಗೂ ಷ್, ಶ್, ಸ್. ಈ ಮೂರು ವ್ಯಂಜನಗಳು ಅಘೋಷ ಧ್ವನಿಗಳಾಗಿ ಉಚ್ಚಾರಗೊಳ್ಳತ್ತವೆ. ಧ್ವನಿಗಳಿಗೆ ಸಂಬಂದಿಸಿದ ಅಘೋಷ ಮತ್ತು ಘೋಷ ಎಂಬ ಮಹತ್ವವಾದ ವ್ಯತ್ಯಾಸ ಒಂದು ಧ್ವನಿ ಪೆಟ್ಟಿಗೆಯಲ್ಲಿಯ ಘೋಷ ಪಟಲಗಳಿಂದಲೇ ನಿರ್ಧರಿತವಾಗುತ್ತದೆ.

ತಮಗೆ ತಾವೇ ಸ್ವಯಂ ಪೂರ್ಣವಾದ ಸ್ವತಂತ್ರ ಉಚ್ಚಾರಕ್ಕೆ ಯೋಗ್ಯವಾದ ವರ್ಣಗಳೇ ಸ್ವರಗಳು, 'ಅ' ದಿಂದ 'ಔ' ವರೆಗಿನ ಹದಿಮೂರು ಸ್ವರಗಳನ್ನು ಹ್ರಸ್ವಸ್ವರ ಮತ್ತು ದೀರ್ಘಸ್ವರ ಎಂದು ವರ್ಗೀಕರಿಸಬಹುದು.

ತಮ್ಮ ಉಚ್ಚಾರಣೆಗೆ ಒಂದು ಮಾತ್ರೆಯ (ಮಾತ್ರೆ = ಒಂದು ಚಿಟಿಕೆ ಹೊಡೆಯುವಷ್ಟು ಅಥವಾ ಒಂದು ಬಾರಿ ಕಣ್ಣು ರೆಪ್ಪೆ ಮಿಟಿಕಿಸುವಷ್ಟು ಕಾಲಾವಧಿ) ಕಾಲವನ್ನು ತೆಗೆದುಕೊಳ್ಳುವ ಸ್ವರಗಳನ್ನು ಹ್ರಸ್ವಸ್ವರಗಳೆಂದು ಕರೆಯುವರು.

ಉದಾ : ಅ, ಇ, ಉ, ಋ, ಎ, ಒ.

ತಮ್ಮ ಉಚ್ಚಾರಣೆ ಎರಡು ಮಾತ್ರೆಯ ಕಾಲವನ್ನು ತೆರೆದುಕೊಳ್ಳುವ ಸ್ವರಗಳನ್ನು ದೀರ್ಘಸ್ವರಗಳೆಂದು ಕರೆಯುವರು.

ಉದಾ : ಆ, ಈ, ಊ, ಏ, ಓ

ಎರಡು ಬೇರೆ ಬೇರೆ ಸ್ವರಗಳ ಸಂಯೋಗದಿಂದ ಉಂಟಾಗುವ ಸ್ವರಗಳನ್ನು ಸಂಧ್ಯಾಕ್ಷರ ಎಂದು ಕರೆಯುವರು.

ಉದಾ : ಅ + ಇ + ಐ ಅ + ಉ = ಔ

ಸ್ವರಗಳ ಸಹಾಯದಿಂದ ಉಚ್ಚಾರಣೆಯಾಗುವ ವರ್ಣಗಳೇ ವ್ಯಂಜನಗಳು. ಕನ್ನಡದಲ್ಲಿ ಮೂವತ್ತನಾಲ್ಕು ವ್ಯಂಜನಗಳಿವೆ. ಇವನ್ನು ವರ್ಗೀಯ ಮತ್ತು ಅವರ್ಗೀಯ ವ್ಯಂಜನಗಳು ಎಂದು ಎರಡು ಗುಂಪು ಮಾಡಬಹುದು. ವರ್ಗೀಯ ವ್ಯಂಜನದಲ್ಲಿ ಮೂರು ವಿಧ, ಅಲ್ಪಪ್ರಾಣ, ಮಹಾಪ್ರಾಣ ಮತ್ತು ಅನುನಾಸಿಕ.

| ವರ್ಗ | ಅಲ್ಪಪ್ರಾಣ | ಮಹಾಪ್ರಾಣ | ಅಲ್ಪಪ್ರಾಣ | ಮಹಾಪ್ರಾಣ | ಅನುನಾಸಿಕ | ಒಟ್ಟು ಅಕ್ಷರ |
|---|---|---|---|---|---|---|
| ಕ್ | ಕ್ | ಖ್ | ಗ್ | ಘ್ | ಙ್ | ೫ |
| ಚ್ | ಚ್ | ಛ್ | ಜ್ | ಝ್ | ಞ್ | ೫ |
| ಟ್ | ಟ್ | ಠ್ | ಡ್ | ಢ್ | ಣ್ | ೫ |
| ತ್ | ತ್ | ಥ್ | ದ್ | ಧ್ | ನ್ | ೫ |
| ಪ್ | ಪ | ಫ್ | ಬ್ | ಭ್ | ಮ್ | ೫ |
| **ಒಟ್ಟು** | ೫ | ೫ | ೫ | ೫ | ೫ | ೨೫ |

ಕಡಿಮೆ ಉಸಿರಿನಿಂದ ಉಚ್ಚರಿಸುವ ವರ್ಣಗಳೇ ಅಲ್ಪಪ್ರಾಣಗಳು

ಉದಾಹರಣೆಗೆ : ಕ್, ಚ್, ಟ್, ತ್, ಪ್,

ಗ್, ಜ್, ಡ್, ದ್, ಬ್

ಹೆಚ್ಚು ಉಸಿರಿನಿಂದ ಉಚ್ಚರಿಸುವ ವರ್ಣಗಳು.

ಉದಾ : ಖ್, ಛ್, ಠ್, ಥ್, ಫ್

ಘ, ಝ, ಢ್, ಧ್, ಭ್

**ಅನುನಾಸಿಕ** : ಮೂಗು ಮತ್ತು ಬಾಯಿಯ ಸಹಯೋಗದಿಂದ ಉಚ್ಚಾರವಾಗುವ ವರ್ಣಗಳೇ ಅನುನಾಸಿಕಗಳು.

ಉದಾ : ಙ್, ಞ್, ಣ್, ನ್, ಮ್.

**ಅವರ್ಗೀಯ ವ್ಯಂಜನ** : ಖಚಿತವಾಗಿ ವರ್ಗೀಕರಿಸಲಾಗದ ವರ್ಣಗಳ ಗುಂಪು, ಅಂದರೆ ವರ್ಣೋತ್ಪತ್ತಿಯ ದೃಷ್ಟಿಯಿಂದ ಒಂದು ಕಡೆ ಸೇರುವ ವರ್ಣಗಳು.

ಉದಾ : ಯ್, ರ್, ಲ್, ವ್, ಶ್, ಷ್, ಸ್, ಹ್, ಳ್,

**ಯೋಗವಾಹಕಗಳು** : ಯಾವುದಾದರೊಂದು ಅಕ್ಷರ ಸಂಬಂಧವಿಲ್ಲದೆ ಉಚ್ಚರಿಸಲಾಗದ ವರ್ಣಗಳನ್ನು ಯೋಗವಾಹಗಳು ಎಂದು ಕರೆಯುವರು. ಇವು ಎರಡು. ೦ ಇದು

ಅನುಸ್ವಾರ ಇದನ್ನು ಬಿಂದು ಎಂತಲೂ ಕರೆಯುತ್ತಾರೆ. ಸಂಸ್ಕೃತದಿಂದ ಕನ್ನಡಕ್ಕೆ ಬಂದಿರುವ ಪದಗಳಲ್ಲಿ ಮಾತ್ರ ವಿಸರ್ಗ(ಃ)ವನ್ನು ಕಾಣುತ್ತೇವೆ.

### ೨. ಕನ್ನಡ ಭಾಷಾ ಪಠ್ಯ ಪುಸ್ತಕಗಳಲ್ಲಿನ ಧ್ವನಿ ವ್ಯವಸ್ಥೆ

ಒಂದನೇ ತರಗತಿಯ ಪಠ್ಯಪುಸ್ತಕದಲ್ಲಿ ಮೊದಲಿಗೆ ಠಣ್! ಠಣ್! ಠಣ್! ಎಂಬ ಪದ್ಯದಿಂದ ಪರಿಚಯಿಸಲಾಗಿದೆ. ಇದರ ಉದ್ದೇಶ ಮಕ್ಕಳು ಉಚ್ಚಾರಣೆಯನ್ನು ಆಲಿಸಿಕೊಂಡು, ಉಚ್ಚರಿಸುವ ವಿಧಾನವನ್ನು ಕಲಿಯುವರು ಎಂಬ ಕಾರಣಕ್ಕಾಗಿ ಈ ತರಹದ ಪಠ್ಯವನ್ನು ಕೊಟ್ಟಂತೆ ಕಂಡು ಬರುತ್ತದೆ. ಈ ರೀತಿಯಾಗಿ ಇಲ್ಲಿನ ಪಾಠ ಪದ್ಯಗಳು ಭಾಷಾ ಕೌಶಲಗಳಾದ ಆಲಿಸುವ, ಮಾತನಾಡುವ, ಓದುವ, ಬರೆಯುವ ಕೌಶಲಗಳಿಗೆ ಅನುಗುಣ ವಾಗಿಯೇ ಪಾಠಗಳು ಪದ್ಯಗಳು ರಚನೆಯಾಗಿವೆ. ಇಲ್ಲಿನ ಅಭ್ಯಾಸ ಮತ್ತು ಭಾಷಾಭ್ಯಾಸ ಚಟುವಟಿಕೆಗಳು ಸಹ ಈ ಹಿನ್ನೆಲೆಯಲ್ಲಿ ರಚನೆಯಾದಂತೆ ತೋರುತ್ತದೆ.

ಈ ತರಗತಿಯ ಪಠ್ಯದಲ್ಲಿ ಧ್ವನಿರಚನೆಯ ವಿಕಾಸಕ್ಕಾಗಿ ಕೊಟ್ಟಿರುವ ಈ ಪದಗಳನ್ನು ಹೇಳಿಸಿ ಎಂಬ ಭಾಷಾ ಚಟುವಟಿಕೆಗಳಲ್ಲಿ ಬಲ, ಬಹಳ, ಮಗ, ಆಗ, ಜಾಣ, ಸುಲಭ, ಕೋಲು, ಒಗ್ಗಟ್ಟು, ಸಾಧ್ಯ, ಬಿಸಿ, ಚೆಂದ, ಪದಗಳನ್ನು ಕೊಡಲಾಗಿದೆ. ಇದರ ಉದ್ದೇಶದ ಮೂಲಕ ನಡೆದ ಕನ್ನಡದ ಸರಳಾಕ್ಷರ, ಗುಣಿತಾಕ್ಷರ ಮತ್ತು ಒತ್ತಕ್ಷರವನ್ನು ಪರಿಚಯಿಸುವ ಉದ್ದೇಶವನ್ನು ಹೊಂದಿದೆ. ಜೊತೆಗೆ ಎರಡು ಅಕ್ಷರ ಮತ್ತು ಮೂರಾಕ್ಷರ ರಚನೆಯ ಬೋಧನೆಯನ್ನು ಅಳವಡಿಸಲಾಗಿದೆ. ಹಾಗೆಯೇ ಬೆಲೆ–ಬೆಳೆ ಆಟ–ಓಟ ಅಂದ–ಚಂದ ಕಲೆ–ಕಳೆ, ಮಾವು–ಬೇವು ಬೆಳಕು–ತೊಳಕು ಮುಂತಾದ ರಚನೆಗಳು ಪ್ರಾಸಪದ ಸೂಚಕವಾಗಿ ಬಳಕೆಯಲ್ಲಿದ್ದರೂ ಕನ್ನಡ ಭಾಷೆಯಲ್ಲಿ ಎರಡು ಪ್ರತ್ಯೇಕ ಧ್ವನಿಮಾಗಳಾಗಿಯೂ ಬಳಕೆಯಲ್ಲಿ ರುವುದು ಗಮನಿಸುವಂತಹ ಅಂಶ. ಮಕ್ಕಳಿಗೆ ಕನ್ನಡ ಭಾಷೆಯ ಸಹಜವಾದ ಉಚ್ಚಾರಣೆಯನ್ನು ಕಲಿಸುವುದಕ್ಕೋಸ್ಕರ ಅಕ್ಕಿ–ಅಣ್ಣ, ಹಕ್ಕಿ–ಹಣ್ಣು, ಮುಖ–ಹಣ, ಧನ, ಛಲ, ಭಾರ, ಮಣ, ಧನ, ಫಲ, ಭತ್ತ, ಮನೆ, ಆರು ಮುಂತಾದ ಎರಡು ಅಕ್ಷರ ರಚನೆಯ ಪದಗಳನ್ನು ನೀಡಲಾಗಿದೆ. ಕಾರಣ ಶೈಕ್ಷಣಿಕವಾಗಿ ಶಾಲೆಯ ಆವರಣದಲ್ಲಿ ಕನ್ನಡ ಭಾಷೆಯನ್ನು ಒಂದು ನಿರ್ದಿಷ್ಟ ಸಾಮಾಜಿಕ ವರ್ಗದ ಮಕ್ಕಳು ಕನ್ನಡ ಭಾಷೆಯನ್ನು ಕಲಿಯುತ್ತಿರುತ್ತವೆ. ಈ ರೀತಿ ಕಲಿಯುವಾಗ ತಮ್ಮ ತಮ್ಮ ಸಾಮಾಜಿಕ ಪರಿಸರದಲ್ಲಿ ಬಳಕೆಯಲ್ಲಿರುವ ಕನ್ನಡ ಭಾಷೆಯ ಉಚ್ಚಾರಣೆಯನ್ನು ಶಾಲೆಯ ಆವರಣದಲ್ಲಿ ಮಾಡುತ್ತಿರುತ್ತವೆ. ಅಂತಹ ಉಚ್ಚಾರಣೆಗೂ ಔಪಚಾರಿಕ ನೆಲೆಯಲ್ಲಿ ಕನ್ನಡ ಭಾಷೆಯ ಉಚ್ಚಾರಣೆಗೂ ನಡುವೆ ಅಂತರವಿರುವುದನ್ನು ಮೇಲಿನ ಪದಗಳು ಸ್ಪಷ್ಟ ಪಡಿಸುತ್ತವೆ. ಮಕ್ಕಳಿಗೆ ಧ್ವನಿಗಳಿಗೆ ಅನುಗುಣವಾಗಿ ಅರ್ಥವನ್ನು ಗ್ರಹಿಸಿ ಆ ಧ್ವನಿಗೆ ತಕ್ಕಂತೆ ಪದಗಳನ್ನು ನಿರೀಕ್ಷಿಸುವ ವಿಧಾನವೇ ಕೊಟ್ಟಿರುವ ಧ್ವನಿತ ಪದವನ್ನು ಅರ್ಥ ಧ್ವನಿ ಪೂರ್ಣವಾಗಿ ಹೇಳಿಸಿ ಎಂಬ ಪ್ರಶ್ನೆಯಲ್ಲಿ ಅಡಗಿದೆ. ಅಂದರೆ

ಕರ–ಕರ ಧ್ವನಿಯನ್ನು ಕೇಳಿದ ತಕ್ಷಣ 'ಕಪ್ಪೆ' ಎಂದು ಉತ್ತರವನ್ನು ನಿರೀಕ್ಷಿಸಬಹುದಾಗಿದೆ. ಅದೇ ರೀತಿಯಾಗಿ ಬುಸು ಬುಸು ಎಂಬ ಧ್ವನಿಯಿಂದ 'ಹಾವು' ಎಂದು, ಕಾ ಕಾ ಎಂಬ ಧ್ವನಿಯಿಂದ 'ಕಾಗೆ' ಎಂದು, ಗುಯ್ ಗುಯ್ ಎಂಬ ಧ್ವನಿಯಿಂದ– 'ಸೊಳ್ಳೆ' ಎಂದು 'ಜುಳುಜುಳು' ಎಂಬ ಶಬ್ದದ ಧ್ವನಿಯಿಂದ ನೀರು ಎಂದು, ಜಲಿ ಜಲಿ ಎಂಬ ಶಬ್ದದಿಂದ 'ತುಪ್ಪ' ಇತ್ಯಾದಿ ಇಂತಹ ಪದಗಳು ಸಹ ಧ್ವನಿಗೂ ಮತ್ತು ಅರ್ಥಕ್ಕೂ ನಡುವಿರುವ ಸಂಬಂಧವನ್ನು ಕುರಿತು ಕಲಿಸುವುದಾಗಿದೆ. ನಂತರ

ಧಪಾ ಧಪಾ ಧಪ್ ದಪಾ

ಥಕ ಥಕ

ಬೀಸಿ ಬೀಸಿ

ಚಿಂವ್ ಚಿಂವ್

ಹೋಯ್ ಹೋಯ್ ಹೋಯ್

ಜೈ ಜೈ ಜೈ ಎಂಬ ಪ್ರತಿ ಧ್ವನಿತ ಪದಗಳನ್ನು ಕೊಟ್ಟು ಹೇಳಿಸಿ ಎಂದು ಭಾಷಾ ಚಟುವಟಿಕೆಯಲ್ಲಿ ಕೇಳಲಾಗಿದೆ. ಇಲ್ಲಿ ಮಕ್ಕಳು ಮಹಾಪ್ರಾಣದ ಧ್ವನಿಯ ಮುಂದೆ ದೀರ್ಘಸ್ವರ ಬಂದರೆ, ಅಥವಾ ಮಹಾಪ್ರಾಣದ ಮುಂದೆ ವ್ಯಂಜನಾ ಧ್ವನಿಮಾಗಳು ಬಂದರೆ, ಇಲ್ಲವೇ ಅನುಸ್ವಾರ, ಸಂಧ್ಯಾಕ್ಷರಗಳು ಬಂದಾಗ ಧ್ವನಿಗಳಲ್ಲಿನ ವ್ಯತ್ಯಾಸವನ್ನು ತಿಳಿಸುವ ಮತ್ತು ಕಲಿಸುವ ದೃಷ್ಟಿಯಿಂದ ಈ ಚಟುವಟಿಕೆಗಳು ಕೊಟ್ಟಿರುವ ಅಂಶ ಸ್ಪಷ್ಟವಾಗುತ್ತದೆ. ಕೆಲವೊಂದು ಸಂದರ್ಭದಲ್ಲಿ ಗೆರೆ ಎಳೆದಿರುವ ಅಕ್ಷರ ಗುರುತಿಸಿ ಸ್ಪಷ್ಟವಾಗಿ ಉಚ್ಚರಿಸಲು ಹೇಳಲಾಗುತ್ತದೆ.

ಉದಾ : ಜನ, ವನ, ಮರ, ಬಸವ, ನಗರ, ಮರ, ಗಗನ, ದಸರ, ಅವಸರ, ದವಸ ಇತ್ಯಾದಿ ಶಬ್ದಗಳನ್ನು ಕೊಡಲಾಗಿದೆ. ಇಲ್ಲಿ ಸರಳವಾದ ಧ್ವನಿಮಾಗಳನ್ನು ಹೇಳಿಕೊಡುವ ನಿಟ್ಟಿನಲ್ಲಿ ಈ ತರಹದ ಪ್ರಶ್ನೆಗಳನ್ನು ಕೇಳಿದಂತೆ ಕಂಡುಬರುತ್ತದೆ. ಈ ಮೇಲಿನ ವಿಧಾನವನ್ನು ಅನುಸರಿಸಿ ದೀರ್ಘಸ್ವರದ ಉಚ್ಚಾರಣೆಯನ್ನು ಹೇಳಿಕೊಡಲು ಸೂಚಿಸಿದಂತಿದೆ.

ಉದಾ : ಊಟ, ಆಟ, ಪಾಠ ಇತ್ಯಾದಿ

ಪಾಠಾನುಕ್ರಮಣಿಕೆಯಲ್ಲಿ ರೇಖಾಭ್ಯಾಸ–೧, ರೇಖಾಭ್ಯಾಸ–೨, ಪದ ಓದು–ಅಕ್ಷರ ಕಲಿ, ಮೂಲಾಕ್ಷರ ಪರಿಚಯ, ಅಕ್ಷರ ಗುರುತಿಸು, ಪದ ಓದು, ಗುಣಿತಾಕ್ಷರ ಪರಿಚಯ, ಒತ್ತಕ್ಷರ ಪರಿಚಯ ಇತ್ಯಾದಿಗಳನ್ನು ಕೊಡಲಾಗಿದೆ. ಈ ಮೇಲಿನ ಎಲ್ಲಾ ಪಾಠಗಳು ಧ್ವನಿರಚನೆಗೆ ಸಂಬಂಧಿಸಿದಂತೆ ವರ್ಣಮಾಲೆಯ ಪರಿಚಯ ಮಾಡಿಕೊಡುವ ಉದ್ದೇಶವನ್ನು ಹೊಂದಿದಂತೆ ತೋರುತ್ತದೆ. ರೇಖಾಭ್ಯಾಸ–೧ ಮತ್ತು ೨ರಲ್ಲಿ ಬರಹಕ್ಕೆ ಪೂರಕವಾಗಿ ಚಟುವಟಿಕೆಯಾಗಿದೆ. ಚಿತ್ರಗಳ ಮೂಲಕ ಮಕ್ಕಳು ಕ್ರಮಾನುಗತಿಯಲ್ಲಿ ಅಕ್ಷರಭ್ಯಾಸವನ್ನು ರೇಖಾಭ್ಯಾಸದ ಮೂಲಕ ತಿಳಿದುಕೊಳ್ಳುವರು.

ಉದಾಹರಣೆಗೆ : ------------------------------------------------

ಇತ್ಯಾದಿಗಳನ್ನು ಚಿತ್ರದ ಮೂಲಕ ಅಕ್ಷರ ರಚನೆಗಳ ವಿನ್ಯಾಸದ ಕ್ರಮವನ್ನು ಕಾಣುತ್ತೇವೆ. ಪದ ಓದು-ಅಕ್ಷರ ಕಲಿ ಎಂಬಲ್ಲಿಯೂ ಸಹ ಚಿತ್ರದ ಮೂಲಕ ಅಕ್ಷರದ ಪರಿಚಯ ನಡೆದಿದೆ. ಉದಾಹರಣೆಗೆ: ರ, ಗ, ಸ, ದ, ಅ, ಎಂಬ ವರ್ಣಗಳನ್ನು ಪರಿಚಯಿಸುವಾಗ 'ರ' ವರ್ಣಕ್ಕೆ ರಸ ಹಾಕುತ್ತಿರುವ ಚಿತ್ರ 'ಗ' ಕ್ಕೆ ಗರಗಸದ ಚಿತ್ರ 'ಸ'ಕ್ಕೆ ಸರದ ಚಿತ್ರ 'ದ'ಕ್ಕೆ ದಸರಾ ಚಿತ್ರ 'ಅ'ಕ್ಕೆ ಅರದ ಚಿತ್ರ ಕೊಡಲಾಗಿದೆ. ಇಲ್ಲಿ ಕ್ರಮವಾಗಿ ಎರಡು, ನಾಲ್ಕು, ಎರಡು, ಮೂರು, ಎರಡು ಅಕ್ಷರ ರಚನೆ ಮತ್ತು ಸರಳ ಪದದ ಮೂಲಕ ಅಕ್ಷರ ಮೂಲಕ ಅಕ್ಷರಭ್ಯಾಸ ನಡೆದಿದೆ. ಅಭ್ಯಾಸ ಚಟುವಟಿಕೆಯಲ್ಲಿಯೂ ಇದನ್ನೇ ಕಾಣಬಹುದು. ಅಂದರೆ ಅಕ್ಷರಗಳ ರಚನೆಯ ಕ್ರಮಾನುಗತಿಯ ಮೂಲಕ ಹೇಳದ ಅಕ್ಷರಗಳ ರಚನೆಯು ಹೇಗೆ ಬರುತ್ತದೆಯೋ ಆ ರೀತಿಯಲ್ಲಿ ಹೇಳುತ್ತಾ ಹೋಗಲಾಗಿದೆ.

ಈ ರೀತಿಯಾಗಿ ಹೇಳಿ ಚಿತ್ರದ ಮೂಲಕ, ಪದದ ಮೂಲಕ ಅಕ್ಷರ ರಚನೆಯ ವಿನ್ಯಾಸ ಕ್ರಮವನ್ನು ಹೇಳಿ ನಂತರದಲ್ಲಿ ಮೂಲಾಕ್ಷರಗಳ ಪರಿಚಯವನ್ನು ಹೇಳಿಕೊಡುವ ಕ್ರಮವನ್ನು ಕಾಣುತ್ತೇವೆ. ಗುಣಿತಾಕ್ಷರದ ಪರಿಚಯಕ್ಕಾಗಿ ವ್ಯಂಜನ ಮತ್ತು ಸೇರುವ ಸ್ವರ, ಸ್ವರ ಸಂಕೇತಗಳು, ಇವುಗಳಿಂದಾದ ಗುಣಿತಾಕ್ಷರಗಳನ್ನು ಕೊಡಲಾಗಿದೆ. ಇದನ್ನು ಅನುಸರಿಸಿ ಮಕ್ಕಳು ಗುಣಿತಾಕ್ಷರಗಳನ್ನು ಸ್ಪಷ್ಟವಾಗಿ ಉಚ್ಚರಿಸಿ ಗುಂಡಾಗಿ ನಕಲು ಮಾಡಲು ಹೇಳಲಾಗಿದೆ. ಇಲ್ಲಿಯೂ ಕೂಡ ಗುಣಿತಾಕ್ಷರದ ರಚನೆಯ ಕ್ರಮವನ್ನು ಹೇಳಿಕೊಡಲಾಗುತ್ತದೆ.

ಈ ಪಠ್ಯದಲ್ಲಿ ವಿಶೇಷ ಪಾಠವೆಂದು ಒತ್ತಕ್ಷರದ ಪರಿಚಯವನ್ನು ಮಾಡಿಕೊಡಲಾಗುತ್ತದೆ. ಇಲ್ಲಿ ನೇರವಾಗಿ ವರ್ಗೀಯ ಅವರ್ಗೀಯ ವ್ಯಂಜನ ಹಾಗೂ ಅವುಗಳ ಒತ್ತಕ್ಷರಗಳನ್ನು ಕೊಡಲಾಗಿದೆ. ಅಭ್ಯಾಸದಲ್ಲಿ ನೇರ ಮೂಲಾಕ್ಷರ, ಮೂಲಾಕ್ಷರ, ಭಿನ್ನರೂಪದ ಒತ್ತಕ್ಷರಗಳನ್ನು ಅಭ್ಯಾಸ ಮಾಡಿಸುವ ಅಂದರೆ ಒತ್ತಕ್ಷರದ ರಚನೆಯನ್ನು ಚಟುವಟಿಕೆ ಆಧಾರಿತವಾಗಿ ಕೊಡಲಾಗಿದೆ.

ಉದಾಹರಣೆಗೆ : ಕೆಳಗಿನ ಪದಗಳನ್ನು ಹೇಳಿಸಿ ಬರೆಯಿರಿ ಎಂದು ಕೇಳಲಾಗಿದೆ. ಇಲ್ಲಿ ಕುದುರೆ, ಸವಾರಿ, ಹೆಣ್ಣು, ಕಲ್ಲು, ನಾಚಿಕೆ, ಹೊಡೆ, ಕಡಿಸು, ತೋಟ, ಇನಾಮು ಎಂಬ ಇತ್ಯಾದಿ ಪದಗಳನ್ನು ಕೊಡಲಾಗಿದೆ. ಇದರ ಉದ್ದೇಶ ಗುಣಿತಾಕ್ಷರ ಮತ್ತು ಒತ್ತಕ್ಷರದ ರಚನೆಯ ಕ್ರಮವನ್ನು ಹೇಳಿಕೊಡುವುದಾಗಿದೆ.

ಎರಡನೇ ತರಗತಿಯಲ್ಲಿನ ಕನ್ನಡ ಕಲಿ-ನಲಿ ಎಂಬಲ್ಲಿಯೂ ಸಹ ಧ್ವನಿರಚನೆಗೆ ಸಂಬಂಧಿಸಿದಂತೆ ಚಟುವಟಿಕೆಗಳನ್ನು ಕಾಣಬಹುದಾಗಿದೆ. ವಿರಳ ಅಕ್ಷರಗಳನ್ನು ಓದಿ ಎಂದು ಕೇಳಲಾಗಿದೆ.

ಉದಾ : ಔ, ಖ, ಗ, ಘ, ಜ, ಛ

ಝ, ಞ, ಠ, ಢ, ಫ, ಐ

ಅಂದರೆ ಈ ಧ್ವನಿಗಳಿಂದ ಪದಗಳು ರಚನೆಯಾಗುವುದು ಕಡಿಮೆ. ಬಂದರು ಹೆಚ್ಚಾಗಿ ಪದದ ಆದಿಭಾಗದಲ್ಲಿ ಬರುತ್ತವೆ. ಆದ್ದರಿಂದ ಇವುಗಳನ್ನು ವಿರಳ ಅಕ್ಷರಗಳೆಂದು ಪರಿಚಯಿಸಿದಂತೆ ಕಾಣುತ್ತದೆ. ನಂತರ ಕೆಲವು ಭಾಷಾ ಚಟುವಟಿಕೆಗಳಲ್ಲಿ ಕೆಳಗಿನ ಪದಗಳಿಗೆ ಆದಿ-ಅಂತ್ಯದಲ್ಲಿ ಅಕ್ಷರಸೇರಿಸಿ ಹೊಸ ಪದ ರಚಿಸಿ ಎಂದು ಕೇಳಲಾಗಿದೆ.

**ಉದಾಹರಣೆಗೆ** :




ಇದರ ಉದ್ದೇಶ 'ಕ' ಎಂಬ ಧ್ವನಿಯಿಂದ ಎಷ್ಟು ಪದಗಳನ್ನು ರಚನೆ ಮಾಡಬಹುದು ಎಂಬುದು ತಿಳಿದು ಬರುತ್ತದೆ. ಹಾಗೆಯೇ 'ಕ' ಎಂಬ ಧ್ವನಿಯಿಂದ ಪದದ ಕೊನೆಗೆ ಸೇರಿಸಿದರೆ ಬೇರೆ ಪದಗಳನ್ನು ನಿರ್ಮಾಣ ಮಾಡಬಹುದು ಎಂಬ ಸಂದೇಶವನ್ನು ಈ ಮಾದರಿ ಚಟುವಟಿಕೆಯಿಂದ ತಿಳಿಯಬಹುದಾಗಿದೆ.

ಶಾಧು – ಸಾಧು

ಮಧ್ಯೆ – ಮದ್ಯೆ

ಧೀರ – ದೀರ

ಛೀಮಾರಿ – ಚೀಮಾರಿ

ಸಂತೋಸ – ಸಂತೋಷ

ಸಂಬ್ರಮ – ಸಂಭ್ರಮ............ ಇತ್ಯಾದಿ ರೂಪಗಳನ್ನು ಭಾಷಾಭ್ಯಾಸ ಚಟುವಟಿಕೆಯಲ್ಲಿ ಕೊಡಲಾಗಿದೆ. ಇವುಗಳಿಗೆ ಸರಿಯಾದ ರೂಪವನ್ನು ಬರೆಯಿರಿ ಎಂದು ಕೇಳಲಾಗಿದೆ.

ಈ ತರಹದ ಪ್ರಶ್ನೆಗಳ ಮುಖ್ಯ ಉದ್ದೇಶ. ಬರಹದ ಕನ್ನಡ ಹಾಗೂ ಮಾತನಾಡುವ ಕನ್ನಡದಲ್ಲಿ ಆಗುವ ಧ್ವನಿ ವ್ಯತ್ಯಾಸಗಳನ್ನು ತಿಳಿಸಿಕೊಡುವ ಉದ್ದೇಶವನ್ನು ಕಾಣುತ್ತೇವೆ. ಮುಂದುವರಿದಂತೆ ಕೆಲವು ಭಾಷಾಚಟುವಟಿಕೆಯ ಸಂದರ್ಭದಲ್ಲಿ ಅಕ್ಷರಗಳನ್ನು ಸರಿಯಾಗಿ ಜೋಡಿಸಿ ಪದ ಬರೆಯಿರಿ ಎಂಬ ಪ್ರಶ್ನೆಗಳನ್ನು ಕೇಳಲಾಗಿದೆ.

ಉದಾಹರಣೆಗೆ : ಅಣ್ಯರ –

ಸಮಂಭ್ರ –

ಒಡಡಿನಾ –

ನಗುಡು –

ಇದರಿಂದ ತರಗತಿಯಲ್ಲಿನ ಮಕ್ಕಳು ತಮ್ಮ ಪರಿಸರದಲ್ಲಿ ಬರುವ ಪದಗಳನ್ನು ಬಳಸುವಾಗ ಒತ್ತಕ್ಷರ, ವಿಸರ್ಗ, ಬಿಂದು, ದೀರ್ಘಾಕ್ಷರಗಳನ್ನು ಪದರಚನೆ ಮಾಡುವಾಗ

ಬಳಸುವ ವಿಧಾನವನ್ನು ಪರಿಚಯಿಸುವುದಾಗಿದೆ. ನಂತರ ಧ್ವನಿರಚನೆಯ ತಿಳುವಳಿಕೆಗಾಗಿ ಪ್ರಾಸ ಪದಗಳನ್ನು ಕೊಡಲಾಗಿದೆ.

ಉದಾಹರಣೆಗೆ : ಸುತ್ತಲು–ಎತ್ತಲು, ಕುಣಿಯಲಿ–ತಣಿಯಲಿ, ಅಕ್ಕರೆ – ಸಕ್ಕರೆ, ಅಂದ–ಚೆಂದ, ಮರದಲಿ–ಮರೆಯಲಿ ಇತ್ಯಾದಿ ಇದರಿಂದ ಮಕ್ಕಳು ಉಚ್ಚಾರಣೆಗಳಲ್ಲಿ ಪ್ರಾಸಬದ್ಧವಾಗಿ ಒಂದೇ ಆದರು, ಅರ್ಥದ ವ್ಯತ್ಯಾಸವಾಗುವದನ್ನು ತಿಳಿಸಲು ಈ ತರಹದ ಪ್ರಶ್ನೆಗಳನ್ನು ಕೇಳಿದಂತೆ ತೋರುತ್ತದೆ. ಇದರಿಂದ ಮಕ್ಕಳು ಒಂದೇ ರೀತಿಯ ಧ್ವನಿಮಾಗಳಿಂದ ಹಲವು ಪದಗಳನ್ನು ರಚಿಸಲು ಸಮರ್ಥರಾಗುವರು ಎಂಬುದು ತಿಳಿದು ಬರುತ್ತದೆ.

ಅ, ಆ, ಇ, ಈ, ಉ, ಊ, ಎ, ಒ ಎಂಬ ಅಕ್ಷರಗಳಿಂದ ಪದಗಳನ್ನು ಪಟ್ಟಿ ಮಾಡಲು ಕೇಳಲಾಗಿದೆ. ಇದರ ಉದ್ದೇಶ ಈ ಧ್ವನಿಗಳ ಏರಿಳಿತಗಳನ್ನು ಅಭ್ಯಾಸ ಮಾಡಿಸುವುದಾಗಿದೆ. ಹಾಗೆಯೇ ಈ ಅಕ್ಷರಗಳಿಂದ ಎಷ್ಟು ರೀತಿಯ ಧ್ವನಿ ಗುಚ್ಚಗಳ ಮೂಲಕ ಪದ ರಚನೆಯನ್ನು ಕಲಿಯುವಲ್ಲಿ ಸಮರ್ಥರಾಗುತ್ತಾರೆ ಎಂಬುದು ತಿಳಿದು ಬರುವುದು. ಅಭ್ಯಾಸ ಚಟುವಟಿಕೆಯಲ್ಲಿ ಪದ್ಯದ ಸಾಲುಗಳನ್ನು ಕಂಠಪಾಠ ಮಾಡಿ ಎಂದು ಕೇಳಲಾಗಿದೆ. ಇಲ್ಲವೇ ಈ ಪದ್ಯವನ್ನು ಹೇಳಿಸಿ ಎಂಬ ಪ್ರಶ್ನೆಯನ್ನು ಕೊಡಲಾಗಿದೆ.

**ಉದಾ : ಪುಟಾಣಿ ಪಾಪ**

ನಮ್ಮನೆ ದೀಪ

ನಗುತಲಿ ನಿಂತಿರೆ

ದೇವರ ರೂಪ

ಪುಟಾಣಿ ಕೂಸು

ನೋಡಲು ಲೇಸು

ಕಿಲ ಕಿಲ ನಕ್ಕರೆ

ಕಣ್ಣಿಗೆ ಸೊಗಸು................... ಕವಿತಾ ಕೃಷ್ಣ.

ಈ ವಿಧಾನದಿಂದ ಮಕ್ಕಳು ಹ್ರಸ್ವಸ್ವರ ದೀರ್ಘಸ್ವರ, ವ್ಯಂಜನ ಒತ್ತಕ್ಷರ, ಸಂಧ್ಯಾಕ್ಷರ, ಸಂಯುಕ್ತಾಕ್ಷರ, ಗುಣಿತಾಕ್ಷರಣಗಳ ಉಚ್ಚಾರಣೆಗಳನ್ನು ಹೇಳಿಕೊಡುವ ಸಲುವಾಗಿ ಇಂತಹ ಪ್ರಶ್ನೆಗಳನ್ನು ಕೊಡಲಾಗಿದೆ.

ಗುಡು ಗುಡು

ಗಡ ಗಡ

ಡಬ ಡಬ

ಧೋ ಧೋ................... ಎಂಬ ಪದಗಳನ್ನು ಕೊಟ್ಟು ಇವನ್ನು ಹೇಳಿಸಿ ಎಂದು ಕೇಳಲಾಗಿದೆ. ಇದರ ಉದ್ದೇಶ ಪ್ರಾಥಮಿಕವಾಗಿ ಮಕ್ಕಳು ತಮ್ಮ ಪರಿಸರದಲ್ಲಿ ಕೇಳುವ ಶಬ್ದಗಳನ್ನು, ಉಚ್ಚಾರಣೆಯನ್ನು ಮಕ್ಕಳಿಗೆ ಹೇಳಿಕೊಡುವ ಪ್ರಕ್ರಿಯೆ ಇಲ್ಲಿ ನಡೆದಿದೆ.

ಮೂರನೇ ತರಗತಿಯ ಪಠ್ಯದಲ್ಲಿ ಧ್ವನಿರಚನೆಯನ್ನು ಭಾಷಾ ಕೌಶಲಗಳ ಹಿನ್ನೆಲೆಯಲ್ಲಿ ಹೇಳಿ ಕೊಡುವುದನ್ನು ಕಾಣುತ್ತೇವೆ. ಹಿಂದಿನ ತರಗತಿಗಳಲ್ಲಿ ಕಲಿತ ಧ್ವನಿರಚನೆಯನ್ನು ಮೊದಲು ಪುನರಾವಲೋಕಿಸಲಾಗಿದೆ. ಹೊಸ ಹೊಸ ಬಗೆಯ ಧ್ವನಿರಚನೆಯ ಅಂಶಗಳನ್ನು ಪಾಠ, ಪದ್ಯದಲ್ಲಿ ಬರುವ ಅಕ್ಷರ, ಪದ ವಾಕ್ಯಗಳ ಬಗ್ಗೆ ಪ್ರಶ್ನೆಗಳನ್ನು ಕೇಳಲಾಗಿದೆ. ಉದಾಹರಣೆಯಾಗಿ ಹೇಳುವುದಾದರೆ 'ದಯಾವಂತ ರಾಜಕುಮಾರ' ಎಂಬ ಪಾಠದ ಭಾಷಾ-ಚಟುವಟಿಕೆಯಲ್ಲಿ ಕಾಣಬಹುದು. ಪಾಠದಲ್ಲಿ ಬರುವ 'ಅ' ಅಕ್ಷರ ಮತ್ತು 'ಕ' ಗುಣಿತಾಕ್ಷರದಿಂದ ಪ್ರಾರಂಭವಾಗುವ ಪದಗಳನ್ನು ಪಟ್ಟಿಮಾಡಿ ಎಂದು ಕೇಳಲಾಗಿದೆ. ಇದರಿಂದ ಮಕ್ಕಳು 'ಅ' ಮತ್ತು 'ಕ' ವರ್ಣಗಳ ಪದ ಬಳಕೆಯಾದವುಗಳನ್ನು ಪಟ್ಟಿ ಮಾಡುವರು. ಅಲ್ಲದೆ ಈ ವರ್ಣಗಳ ಪದ ರಚಿಸಿ ಉಚ್ಚರಿಸುವಲ್ಲಿ ಸಮರ್ಥರಾಗುವವರು ಎಂದು ಹೇಳಬಹುದು. ಸರಿಯಾದ ರಚನಾ ರೂಪವನ್ನು ಬರೆದು ಸ್ಪಷ್ಟವಾಗಿ ಉಚ್ಚರಿಸಿ ಎಂದು ಕೇಳಲಾಗಿದೆ.

**ಮಾದರಿ :** ಸಬ್ದ – ಶಬ್ದ

ಸಂಕರ –

ಎಸರು –

ಇವಲು –

ವಿಲಾಸ –

ಇತ್ಯಾದಿ ಪದಗಳನ್ನು ಕೊಡಲಾಗಿದೆ. ಈ ವಿಧಾನದಿಂದ ಮಕ್ಕಳು ಸರಿಯಾದ ಬರವಣಿಗೆಯ ರೂಪದ ಸ್ವರಗಳನ್ನು ಬಳಸುವ ವಿಧಾನ. ಜೊತೆಗೆ ಸ್ಪಷ್ಟ ಉಚ್ಚಾರಣೆಯ ಕ್ರಮಗವನ್ನು ತಿಳಿಯುತ್ತಾರೆ ಎಂದು ಹೇಳಬಹುದು. ಇವುಗಳಿಗೆ ಶಿಷ್ಟರೂಪಗಳನ್ನು ಬರೆಯಿರಿ ಎಂದು ಕೇಳಲಾಗಿದೆ.

**ಉದಾ : ಮಾದರಿ : ಭಲೋ – ಚೆನ್ನಾಗಿ**

ಬಾಳ –

ಆಯ್ತು –

ಸಿಕ್ತು –

ದಿನಾಲು –

ಇತ್ಯಾದಿ ಪದಗಳನ್ನು ಕೊಡಲಾಗಿದೆ. ಇದರಿಂದ ಮಕ್ಕಳು ಮಾತನಾಡುವ ಸಂದರ್ಭ ಮತ್ತು ಬರೆಯುವ ಸಂದರ್ಭದಲ್ಲಿ ವರ್ಣಮಾಲೆಗಳ ವ್ಯತ್ಯಾಸವಾಗುವುದನ್ನು ತಿಳಿದು. ಬರವಣಿಗೆ ರೂಪ, ಶಿಷ್ಟರೂಪವೆಂದು ತಿಳಿಯುತ್ತಾರೆ.

ಅರಡಿದ – ಹರಡಿದ

ಭಂಟರು – ಬಂಟರು

ಅದ್ದಿನ – ಹದ್ದಿನ

ಖಳೆದು – ಕಳೆದು

ಭಾನಿನ – ಬಾನಿನ

ಹಿರುಳು – ಇರುಳು ............... ಎಂಬ ಇತ್ಯಾದಿ ಪದಗಳನ್ನು ಭಾಷಾ ಚಟುವಟಿಕೆಯಲ್ಲಿ ಕೊಟ್ಟು ಧ್ವನಿ ವ್ಯತ್ಯಾಸ ಗುರುತಿಸಿ ಹೇಳಿ ಎಂದು ಕೇಳಲಾಗಿದೆ. ಇದರಿಂದ ಅಲ್ಪಪ್ರಾಣ, ಮಹಾಪ್ರಾಣಕ್ಷರಗಳ ಉಚ್ಚಾರಣೆ ಮತ್ತು ಅಕ್ಷರ ಹುಟ್ಟುವ ಬಗೆಯನ್ನು ತಿಳಿಸಲು ಈ ತರಹದ ಪ್ರಶ್ನೆಯನ್ನು ಕೇಳಿ, ಅಭ್ಯಾಸ ಮಾಡಿಸಿದಂತೆ ತೋರುತ್ತದೆ. ಅನುಕರಣ ಶಬ್ದಗಳನ್ನು ಕೊಟ್ಟು ಇವುಗಳನ್ನು ಗಮನಿಸಿ ಹೇಳಿ ಎಂದು ಕೇಳಲಾಗಿದೆ. ಇದರಿಂದ ಮಕ್ಕಳು ಅನುಕರಣ ಶಬ್ದಗಳು ಪಾಠ/ಪದ್ಯದಲ್ಲಿ ಬಂದರೆ ಉಚ್ಚರಿಸುವ ಮತ್ತು ಬರೆಯುವುದನ್ನು ಕಲಿಯುವರು. ಕೆಲವೊಂದು ಸಂದರ್ಭದಲ್ಲಿ ಕೊಟ್ಟಿರುವ ಪದಗಳ ಸರಿಯಾದ ರೂಪವನ್ನು ಬರೆಯಿರಿ ಎಂಬ ಪ್ರಶ್ನೆಯನ್ನು ಕೇಳಲಾಗಿದೆ.

ಉದಾಹರಣೆಗೆ : ಹಾಗಸ, ಅಗ್ಗ, ಉಡುಕಿದರು, ಒರಗಡೆ, ಭಾವಿ, ಯಿರುಳು, ಹೇರಿಸಿ, ರಬಸ ಎಂಬ ಪದಗಳನ್ನು ಕೊಡಲಾಗಿದೆ. ಇದರ ಉದ್ದೇಶ ಮಕ್ಕಳು ಹ್ರಸ್ವಸ್ವರ, ದೀರ್ಘಸ್ವರ ವರ್ಣಗಳನ್ನು ಸಂದರ್ಭಕ್ಕೆ ತಕ್ಕಂತೆ ಅರ್ಥಕ್ಕೆ ಚ್ಯುತಿಬಾರದ ರೀತಿಯಲ್ಲಿ ಧ್ವನಿಮಾಗಳನ್ನು ಶಿಷ್ಟಭಾಷೆಯಲ್ಲಿ ಬಳಸಬೇಕು ಎಂಬುದನ್ನು ತಿಳಿಸಿ ಕೊಡುವುದಾಗಿದೆ. ನಂತರ ಓದಿ–ಗಮನಿಸಿ ಅರ್ಥ ತಿಳಿಯಿರಿ ಎಂದು ಹೇಳಲಾಗಿದೆ. ಉದಾಹರಣೆಗೆ : ಆರಿಸು–ಹಾರಿಸು, ಒಂದನೆ–ವಂದನೆ, ದನ–ಧನ, ಪ್ರದಾನ– ಪ್ರಧಾನ, ಸ್ಥಳ–ತಳ ಇಲ್ಲಿ ಉಚ್ಚರಿಸುವ ವಿಧಾನವನ್ನು ಹೇಳುತ್ತಾ ಈ ಪದಗಳಲ್ಲಿನ ಅರ್ಥವ್ಯತ್ಯಾಸವನ್ನು ತಿಳಿಸುವ ಉದ್ದೇಶವನ್ನು ಹೊಂದಿದೆ. ಜೊತೆಗೆ ಕೊಟ್ಟಿರುವ ಪದಗಳನ್ನು ತಪ್ಪಿಲ್ಲದೆ ಓದಿ ಗುಂಡಾಗಿ ನಕಲು ಮಾಡಿ ಎಂದು ಕೇಳಲಾಗಿದೆ. ಉದಾಹರಣೆ : ನಿಸರ್ಗ ನಿರ್ಮಿತ, ದುಷ್ಟ ಪುಷ್ಪ, ಶುಶ್ರೂಷೆ ಸಿದ್ಧಾರ್ಥ, ಕ್ರೂರತನ, ಆಸ್ಥಾನ, ಇತ್ಯಾದಿ ಪದಗಳನ್ನು ಕೊಡಲಾಗಿದೆ. ಇದರಿಂದ

ಮಕ್ಕಳು ಒತ್ತಕ್ಷರಗಳನ್ನು ಬಳಸುವ ಹಾಗೂ ಪರಿಚಯಿಸುವ ನಿಟ್ಟಿನಲ್ಲಿ ಈ ರೀತಿಯ ಪ್ರಶ್ನೆಗಳನ್ನು ಕೇಳಿದಂತೆ ಕಂಡು ಬರುತ್ತದೆ. ಆದರೆ ಮಗುವಿಗೆ ಈ ಪದಗಳು ಸಂವಹನ ಸಂದರ್ಭದಲ್ಲಿ ಹೆಚ್ಚಾಗಿ ಬಳಕೆಯಾಗುವುದಿಲ್ಲ.

ಒಟ್ಟಾರೆಯಾಗಿ ಧ್ವನಿರಚನೆಯನ್ನು ಹಿಂದಿನ ತರಗತಿಯಲ್ಲಿ ಅನುಸರಿಸಿದ ವಿಧಾನವನ್ನೇ ಹೇಳಲಾಗಿದೆ. ತರಗತಿಯ ಅನುಸಾರವಾಗಿ ಹಿಂದಿನ ತರಗತಿಗಳಿಗಿಂತ ದೀರ್ಘವಾಗಿದ್ದು, ಸರಳತೆಯಿಂದ ಕ್ಲಿಷ್ಟತೆಯ ಕಡೆಗೆ ಕೊಂಡುಯ್ಯುವ ಪ್ರಯತ್ನವನ್ನು ಮಾಡಲಾಗಿದೆ.

ಕನ್ನಡ ಕಲಿ-ನಲಿ ಪಠ್ಯಪುಸ್ತಕದಲ್ಲಿ ಧ್ವನಿರಚನೆಗೆ ಸಂಬಂಧಿಸಿದಂತೆ ಹಲವಾರು ಚಟುವಟಿಕೆಗಳನ್ನು ಕೊಡಲಾಗಿದೆ. ಹಿಂದಿನ ತರಗತಿಯಲ್ಲಿ ಕಲಿಸಿದ ಧ್ವನಿರಚನೆಯ ವ್ಯವಸ್ಥೆಯನ್ನು ಪುನರಾವಲೋಕಿಸಿ ಹೊಸ ಹೊಸ ಮಾದರಿಯಲ್ಲಿ ಧ್ವನಿರಚನೆಯನ್ನು ಹೇಳಿಕೊಡುವ ವಿಧಾನವನ್ನು ಕಾಣುತ್ತೇವೆ. ಹಿಂಧಿನ ತರಗತಿಗಳಲ್ಲಿ ಒಂದು ವರ್ಣದ ಧ್ವನಿ ಪರಿಚಯ ಹಾಗೂ ಸರಳವಾದ ಎರಡು ಮೂರು ವರ್ಣಗಳ ಪರಿಚಯವನ್ನು ಮಾಡಿಕೊಡಲಾಗಿದೆ. ಇಲ್ಲಿಯೂ ಅದನ್ನೇ ಅನುಸರಿಸಿ ಜೊತೆಗೆ ನಾಲ್ಕು ಐದು ಅಕ್ಷರಗಳ ಮಾದರಿಯನ್ನು ಹೇಳಿ ಕೊಡುವುದನ್ನು ಕಾಣುತ್ತೇವೆ.

ಜೊತೆಗೆ ಒತ್ತಕ್ಷರದ ಸಂಯುಕ್ತಾಕ್ಷರ, ಸಂಧ್ಯಾಕ್ಷರ, ಅನುನಾಸಿಕ ಜ್ಞಾನವನ್ನು ಸರಳವಾದ ರೀತಿಯಲ್ಲಿ ಕಲಿಸುವ ಪ್ರಯತ್ನಗಳನ್ನು ನೋಡಬಹುದು. ಉದಾಹರಣೆಯಾಗಿ

ಬಳೆ – ಬಲೆ

ನಾಳೆ – ನಾಲೆ

ಓಲೆ – ಬಲೆ

ಹೆಮ್ಮೆ – ಎಮ್ಮೆ

ಚಿನ್ನ – ಚಿಣ ಇತ್ಯಾದಿಗಳನ್ನು ಕೊಟ್ಟು ಸ್ಪಷ್ಟವಾಗಿ ಧ್ವನಿ ಉಚ್ಚಾರ ಮಾಡಿ, ಓದಿ, ಅರ್ಥವ್ಯತ್ಯಾಸ ತಿಳಿಸಿ ಎಂದು ಕೊಡಲಾಗಿದೆ. ಇದರಿಂದ ಮಕ್ಕಳು ಧ್ವನಿ ಸ್ಪಷ್ಟತೆಗೆ ಅಭ್ಯಾಸ ಮಾಡಿ ಇವುಗಳಲ್ಲಿನ ಅರ್ಥ ವ್ಯತ್ಯಾಸ ತಿಳಿದು ಅಭ್ಯಾಸ ಮಾಡಿ ಇವುಗಳಲ್ಲಿನ ಅರ್ಥವ್ಯತ್ಯಾಸ ತಿಳಿದುಕೊಳ್ಳುವರು. ಇದಕ್ಕೆ ಪೂರಕವಾಗಿರುವಂತೆಯೇ ಕೊಟ್ಟಿರುವ ಪದಗಳ ಸರಿಯಾದ ರಚನಾ ರೂಪ ಬರೆದು ಸ್ಪಷ್ಟವಾಗಿ ಉತ್ತರಿಸಿ ಎಂದು ಪ್ರಶ್ನೆ ಮಾಡಲಾಗಿದೆ.

ಉದಾಹರಣೆ : ರಥ್ನ – ವ್ಯತ್ಯಾಸ

ವಿಶಾಂತಿ – ಪೂಜರಿ

ಕೇಮ – ಮನುಷ

ಆಶ್ಚರ – ಸಂತೋಷ ......... ಇತ್ಯಾದಿ ಪದಗಳನ್ನು ಕೊಡಲಾಗಿದೆ. ಇದರ ಉದ್ದೇಶ ಮಗುವಿಗೆ ಸ್ಪಷ್ಟ ಧ್ವನಿ ರಚನೆಯ ಮೂಲಕ ಅರ್ಥಕ್ಕೆ ಚ್ಯುತಿ ಬರದ ರೀತಿಯಲ್ಲಿ ಪದ ರಚಿಸುವ ಉದ್ದೇಶ ಹೊಂದಿದೆ. ಇದರಿಂದ ಮಕ್ಕಳು ಸಮಯ ಸಂದರ್ಭಕ್ಕೆ ಅನುಗುಣವಾಗಿ ಧ್ವನಿ ಬಳಸುವ, ಉಚ್ಚರಿಸಿ ಪ್ರಯೋಗಿಸುವ ವಿಧಾನ ಗಳನ್ನು ಕಲಿಯುವರು. ಮುಂದುವರಿದಂತೆ ಕೊಟ್ಟಿರುವ ಪದವನ್ನು ಗುಂಡಾಗಿ ನಕಲು ಮಾಡಿ–ಓದಿ ಎಂದು ಪ್ರಶ್ನೆ ಮಾಡಲಾಗಿದೆ.

ಉದಾಹರಣೆ : ಪ್ರತಿನಿತ್ಯ –

ಸೂರ್ಯೋದಯ –

ಅಗ್ಗಿಸ್ಟಿಕೆ –

ಪಕ್ಕ ದೂರು –

ವರ್ತನೆ –

ಇತ್ಯಾದಿ ಪದಗಳನ್ನು ಕೊಡಲಾಗಿದೆ. ಇದರಿಂದ ತರಗತಿಯ ವಿದ್ಯಾರ್ಥಿಗಳು ಮೂರು, ನಾಲ್ಕು, ಐದು ವರ್ಣಗಳ ಜೊತೆ ಜೊತೆಯಾಗಿ ಬರುವ ಸಜಾತಿ, ವಿಜಾತಿ ಒತ್ತಕ್ಷರಗಳು, ವ್ಯಂಜನಗಳನ್ನು ಬಳಸಿಕೊಂಡು ಉಚ್ಚರಿಸುವ ಮತ್ತು ಬರೆಯುವ ಕೌಶಲಗಳನ್ನು ವೃದ್ಧಿಸಿಕೊಳ್ಳುವರು. ಕೊಟ್ಟಿರುವ ಸಜಾತಿ ಮತ್ತು ವಿಜಾತಿ ಸಂಯುಕ್ತಾಕ್ಷರ ಪದಗಳನ್ನು ವಿಂಗಡಿಸಿ ಬರೆಯಿರಿ ಎಂದು ಕೇಳಲಾಗಿದೆ. ಉದಾಹರಣೆಗೆ : ರೂಪದರ್ಶಿ, ಮನಸ್ಸು, ಸಂದರ್ಭ, ಪತ್ರಕರ್ತ, ಹೆಮ್ಮೆಪಡು, ಅಗ್ನಿಪರೀಕ್ಷೆ, ತಪ್ಪಿಸಿಕೊ, ಇಪ್ಪತ್ತು, ತೀರ್ಮಾನಿಸು, ಕರ್ತವ್ಯ, ಸಮಯ ಪ್ರಜ್ಞೆ ಇತ್ಯಾದಿ ಇಂತಹ ಚಟುವಟಿಕೆಗಳಿಂದ ಮಕ್ಕಳು ಸಜಾತಿ ಮತ್ತು ವಿಜಾತಿ ಸಂಯುಕ್ತಾಕ್ಷರಗಳನ್ನು ರಚನೆ ಮಾಡುವ ವಿಧಾನವನ್ನು ತಿಳಿಯುವರು. ಕೆಲವೊಂದು ಭಾಷಾ ಚಟುವಟಿಕೆಗಳಲ್ಲಿ ಕೊಟ್ಟಿರುವ ಅಕ್ಷರ ಚೌಕದಲ್ಲಿ ಹಕ್ಕಿಗಳ ಹೆಸರುಗಳಿವೆ. ಅವುಗಳನ್ನು ಕಂಡು ಹಿಡಿದು ಪಟ್ಟಿಮಾಡಿ ಎಂದು ಕೇಳಲಾಗಿದೆ.

**ಉದಾಹರಣೆಗೆ** :

| ರ | ಬಾ | ನ | ಗಿ | ಪಾ | ಮೈ | ನಾ |
|---|---|---|---|---|---|---|
| ಲಾ | ತು | ಕೋ | ಳಿ | ರಿ | ಯಾ | ಗು |
| ವ | ಕೋ | ಗಿ | ಲೆ | ವಾ | ಹ | ಬ್ಬ |
| ಕ್ಕಿ | ಳಿ | ಡು | ನ | ಳ | ದ್ದು | ಚ್ಚೆ |
| ಹಂ | ಗು | ಗ | ಕಾ | ಗೆ | ಬ | ಕ |
| ಸ | ಬ್ಬಿ | ಗೂ | ಬೆ | ನ | ವಿ | ಲು |

ಇದರಿಂದ ಮಕ್ಕಳು ಹಕ್ಕಿಗಳ ಹೆಸರಿನಲ್ಲಿ ಬರುವ ಧ್ವನಿಗಳನ್ನು ತಿಳಿಯುವರು. ಜೊತೆಗೆ ಯಾವ ಹಕ್ಕಿಗಳ ಹೆಸರಿಗೆ ಒತ್ತಕ್ಷರಗಳನ್ನು ದೀರ್ಘಗಳನ್ನು ಬಳಕೆ ಮಾಡಿ ರಚಿಸಬೇಕು ಎಂಬುದನ್ನು ತಿಳಿಯುವರು. ಅಕ್ಷರಗಳ ರಚನೆಯನ್ನು, ಬಳಸುವ ವಿಧಾನವನ್ನು ಹೇಳಿ ಕೊಡುವ ಸಲುವಾಗಿ 'ಮಗಳಿಗೊಂದು ಪತ್ರ' ಎಂಬ ಪಾಠದ ಭಾಷಾ-ಚಟುವಟಿಕೆಯಲ್ಲಿ ನಿಮ್ಮ ಅಕ್ಷರಗಳು ಸ್ಫುಟವಾಗಿ ಮತ್ತು ಅಂದವಾಗಿರಲು ಕೊಟ್ಟಿರುವ ಚಟುವಟಿಕೆಗಳನ್ನು ಮಾಡಿ ಎಂದು ಹೇಳಲಾಗಿದೆ.

**ಉದಾಹರಣೆಗೆ :**

* ಅಕ್ಷರದ ತಳಭಾಗ ಪೂರ್ಣವಾಗಿ ಕೆಳಗಿನ ಸಾಲಿನ ಮೇಲಿರಲಿ.
* ಅಕ್ಷರದ ಮೇಲ್ಭಾಗ ಅಥವಾ ತಲೆಕಟ್ಟು ಮೇಲಿನ ಸಾಲಿನಲ್ಲಿರಲಿ.
* ಅಕ್ಷರದಿಂದ ಅಕ್ಷರಕ್ಕೆ ಸಮ ದೂರವಿರಲಿ.
* ಪದದಿಂದ ಪದಕ್ಕೆ ಸ್ವಲ್ಪ ಜಾಗ ಬಿಡಿ. ಅದು ಅರ್ಥ ಪೂರ್ಣವಾಗಿರಲಿ.
* ಅಕ್ಷರಗಳ ಒತ್ತು ಸಾಲಿನಿಂದ ಕೆಳಕ್ಕೆ ಇರಲಿ.
* ಏತ್ವ, ಕೊಂಬು, ದೀರ್ಘ ಇತ್ಯಾದಿಗಳನ್ನು ಒಂದಕ್ಕೊಂದು ಸೇರಿಸ ಬೇಡಿ.
* ಲೇಖನ ಚಿಹ್ನೆಗಳನ್ನು ಸ್ಪಷ್ಟವಾಗಿ ಆಕಾರಕ್ಕೆ ತಕ್ಕಷ್ಟೇ ಬಳಸಿ.

ಈ ಮೇಲಿನ ಅಂಶಗಳನ್ನು ಎರಡು ಸಾಲು ಇರುವ ಕಾಪಿ ಪುಸ್ತಕದಲ್ಲಿ ಬರೆಯುವ ವಿಧಾನದಲ್ಲಿ ಇವುಗಳನ್ನು ಅನುಸರಿಸಿ ಎಂದು ಹೇಳಲಾಗಿದೆ. ಇದರಿಂದ ಮಕ್ಕಳು ಅಕ್ಷರಗಳ ರಚನೆಯ ನಿಯಮಗಳನ್ನು ಸ್ಪಷ್ಟವಾಗಿ ಅರಿತು ಅನುಸರಿಸುತ್ತಾರೆ.

ಧ್ವನಿರಚನೆ ದೃಷ್ಟಿಯಿಂದ ಕನ್ನಡ ಕಸ್ತೂರಿ-೫ನೇ ಪುಸ್ತಕವು ಹಿಂದಿನ ತರಗತಿಗಳಲ್ಲಿ ಕಲಿತ ವಿಷಯಗಳನ್ನು ಪುನರಾವರ್ತಿಸಿ ಹೊಸ ಹೊಸ ವಿಧಾನದ ಸೃಜನಶೀಲ ಪ್ರಶ್ನೆಗಳನ್ನು ಕೇಳುವುದರ ಮೂಲಕ ಧ್ವನಿರಚನೆಯ ಕಲಿಕೆಯ ವಿಧಾನವನ್ನು ಹೇಳಿಕೊಡಲಾಗುತ್ತದೆ. ಅಲ್ಲಿ ಬಿಡಿ ಬಿಡಿ ಭಾಗಗಳೋಪಾದಿಯಲ್ಲಿ ಧ್ವನಿ ರಚನೆಯನ್ನು ಕಲಿತರೆ ಇಲ್ಲಿ ಧ್ವನಿರಚನೆಯ ಸಮಗ್ರ ತಿಳುವಳಿಕೆಯ ಕಲಿಕೆಗೆ ಸೃಜನ ಶೀಲ ಚಟುವಟಿಕೆಗಳನ್ನು ನಡೆಸಲು ವ್ಯವಸ್ಥೆ ಮಾಡಿಸಿದಂತೆ ತೋರುತ್ತದೆ.

ಪಂಜೆ ಮಂಗೇಶರಾಯರು ಬರೆದಿರುವ 'ಕನ್ನಡ' ಎಂಬ ಪದ್ಯದ ಅಭ್ಯಾಸದಲ್ಲಿ ಬರುವ, ಭಾಷಾಭ್ಯಾಸ ಎಂಬ ಚಟುವಟಿಕೆಯಲ್ಲಿ ಕೆಳಗಿನವುಗಳನ್ನು ಓದಿ, ಉಚ್ಚರಿಸುವಾಗ ಧ್ವನಿಯನ್ನು ಗಮನಿಸಿರಿ ಎಂಬ ಪ್ರಶ್ನೆಯನ್ನು ಕೇಳಲಾಗಿದೆ.

ಕನ್ನಡ ವರ್ಣಮಾಲೆ :

ಸ್ವರಗಳು :

ಅ ಇ ಉ ಋ ಎ ಒ } (ಹ್ರಸ್ವಸ್ವರ)

ಆ ಈ ಊ ಏ ಓ } (ದೀರ್ಘಸ್ವರ)

ಐ ಔ (ಸಂಧ್ಯಾಕ್ಷರ)

ಯೋಗವಾಹಕಗಳು :

ಂ (ಅಂ) } (ಅನುಸ್ವರ)

ಃ (ಅಃ) } (ವಿಸರ್ಗ)

ವ್ಯಂಜನಗಳು :

ಕ ಖ ಗ ಘ ಙ

ಚ ಛ ಜ ಝ ಞ

ಟ ಠ ಡ ಢ ಣ } (ವರ್ಗೀಯ ವ್ಯಂಜನ)

ತ ಥ ದ ಧ ನ

ಪ ಫ ಬ ಭ ಮ

ಯ ರ ಲ ವ ಶ ಷ ಸ ಹ ಳ } (ಅವರ್ಗೀಯ ವ್ಯಂಜನ)

ಈ ರೀತಿಯಲ್ಲಿ ಪರಿಚಯಿಸಿ ನಂತರ ವರ್ಣಮಾಲೆಯಲ್ಲಿರುವ ಅಕ್ಷರಗಳನ್ನು ಎಣಿಸಿ ಬರೆಯಿರಿ ---------ವರ್ಣಮಾಲೆಯ ಅಕ್ಷರಗಳನ್ನು ಎಷ್ಟು ಗುಂಪುಗಳಾಗಿ ವಿಂಗಡಿಸಿದ್ದಾರೆ? .............. ವರ್ಗೀಯ ವ್ಯಂಜನಗಳು ಯಾವುವು ? ಅವರ್ಗೀಯ ವ್ಯಂಜನಗಳು ಯಾವುವು? ಎಂಬ ಪ್ರಶ್ನೆಗಳನ್ನು ಕೇಳಿ ಮಕ್ಕಳಿಗೆ ಧ್ವನಿರಚನೆ ಮತ್ತು ಉಚ್ಚಾರಣೆಯನ್ನು ಸಮಗ್ರ ರೀತಿಯಲ್ಲಿ ಪುನರಾವರ್ತಿಸುವಂತಹ ಸೃಜನಶೀಲತೆಯ ಅಂಶವನ್ನು ಕಾಣಬಹುದು. ಇದರಿಂದ ಮಕ್ಕಳು ಧ್ವನಿ ರಚನೆಯ ವಿಧಾನವನ್ನು ಸಂಕ್ಷಿಪ್ತವಾಗಿ ಗ್ರಹಿಸುವರು.

ಧ್ವನಿರಚನೆಯ ವ್ಯತ್ಯಾಸದ ತಿಳುವಳಿಕೆಗಾಗಿ ಕೆಲವೊಂದು ಭಾಷಾ ಚಟುವಟಿಕೆಯಲ್ಲಿ ಕೊಟ್ಟಿರುವ ಜೋಡಿ ಅಕ್ಷರ/ಪದಗಳನ್ನು ಸ್ಪಷ್ಟವಾಗಿ ಉಚ್ಚಾರ ಮಾಡಿ ಧ್ವನಿ ವ್ಯತ್ಯಾಸ ತಿಳಿಯಿರಿ ಎಂದು ಪ್ರಶ್ನೆಯನ್ನು ಕೇಳಲಾಗಿದೆ.

ಉದಾಹರಣೆಗೆ :

ಅ – ಹ    ಅಣಕ – ಹಣತೆ

ಎ – ಯ    ಎರಡು – ಯಮ

ಒ – ವ    ಒನಕೆ – ವರ

ನ – ಣ    ಅನ್ನ – ಅಣ್ಣ

ಲ – ಳ    ಕಲಕಲ – ಬಳ ಬಳ

ಶ–ಷ–ಸ    ಶಶಿ – ಷರಬತ್ತು – ಸಕ್ಕರೆ

ಟ – ಠ    ಟಗರು – ಠಕ್ಕೆ

ಇದರಿಂದ ಮಕ್ಕಳು ಒಂದು ವರ್ಣದ ಅಥವಾ ಒಂದು ಪದದಲ್ಲಿ ಬರುವ ಧ್ವನಿಗಳನ್ನು ತಿಳಿದು. ಅದರಿಂದ ಅಕ್ಷರದಿಂದ ಅಕ್ಷರಕ್ಕೆ ಪದದಿಂದ ಪದಕ್ಕೆ ಧ್ವನಿ ವ್ಯತ್ಯಾಸವಾಗುವ ಬಗೆಯನ್ನು, ಜೊತೆಗೆ ಅರ್ಥ ವ್ಯತ್ಯಾಸವಾಗುವುದನ್ನು ತಿಳಿಯುವರು. ಸ್ವ ಮೌಲ್ಯಮಾಪನ ಭಾಷಾ ಚಟುವಟಿಕೆಯಲ್ಲಿ ಮೂಗನ್ನು ಗಟ್ಟಿಯಾಗಿ ಮುಚ್ಚಿ – ಙ, ಞ, ಣ, ನ, ಮ, ಉಚ್ಚರಿಸಿ. ಒಬ್ಬರು –ಕ, ಚ, ಟ, ತ, ಪ ಎಂದರೆ ಇನ್ನೊಬ್ಬರು ವೇಗವಾಗಿ ಗ, ಜ, ಡ, ದ, ಬ, ಎನ್ನಲಿ ಮಹಾಪ್ರಾಣಗಳಾದ – ಖ, ಛ, ಠ, ಥ, ಫ ಎಂದರೆ ಇನ್ನೊಬ್ಬರು ವೇಗವಾಗಿ ಘ, ಝ, ಢ, ಧ, ಭ, ಎನ್ನಲಿ ಇದರ ಉದ್ದೇಶ ಮಕ್ಕಳಿಗೆ ಅನುನಾಸಿಕ ಮತ್ತು ಅಲ್ಪಪ್ರಾಣ ಮಹಾಪ್ರಾಣ ಅಕ್ಷರಗಳ ಉಗಮ ಸ್ಥಾನವನ್ನು ಉಚ್ಚಾರಣೆಯ ಮೂಲಕ ತಿಳಿಸುವುದಾಗಿದೆ.

ತರ ತರ (ವಿಧ ವಿಧ) ಥರ ಥರ (ನಡುಗುವಿಕೆ)

ದನ (ಆಕಳು) ಧನ (ಹಣ)

ಪಲ (ಮಾಂಸ) ಫಲ (ಹಣ್ಣು)

ಇದರಿಂದ ಮಗು ಧ್ವನಿ ವ್ಯತ್ಯಾಸ ಹಾಗೂ ಅರ್ಥ ವ್ಯತ್ಯಾಸವಾಗುವುದನ್ನು ತಿಳಿಯುತ್ತದೆ. ಇದರಿಂದ ಮಗು ಸರಿಯಾದ ಕ್ರಮದಲ್ಲಿ ಮಹಾಪ್ರಾಣ ಬಳಕೆ ಮಾಡುವ ವಿಧಾನವನ್ನು ಕಲಿಯುತ್ತದೆ. ಭಾಷಾಭ್ಯಾಸ ಚಟುವಟಿಕೆಯಲ್ಲಿ ಧ್ವನಿ ಪ್ರಯೋಗವನ್ನು ಸರಿಪಡಿಸಿ ಹೇಳಿ ಎಂದು ಕೇಳಿರುವುದುಂಟು.

**ಉದಾಹರಣೆಗೆ :**

೧. ಹಣ್ಣಿನ ಅಂಗಡಿಯಲ್ಲಿ ಥರಥರದ ಹಣ್ಣುಗಳನ್ನು ನೋಡುತ್ತೇವೆ.

೨. ಮುಳುಬಾಗಿಲಲ್ಲಿ ವರ್ಷಕ್ಕೊಮ್ಮೆ ಧನದ ಜಾತ್ರೆ ನಡೆಯುತ್ತದೆ.

೩. ಕಮಲೆಯ ಭಾವ ಊರಿನಿಂದ ಬಂದರು.

೪. ಹನುಮ ಸಮುದ್ರ ಧಾಟಿ ಲಂಕೆಗೆ ಹೋದನು.

ಈ ವಿಧಾನದಿಂದ ವಿದ್ಯಾರ್ಥಿಗಳು ವಾಕ್ಯದಲ್ಲಿ ಧ್ವನಿ ವ್ಯತ್ಯಾಸದ ಪದಗಳು ರಚನೆಯಾದರೆ ವಾಕ್ಯದಲ್ಲಿ ಅರ್ಥವ್ಯತ್ಯಾಸವಾಗುತ್ತದೆ ಎಂಬುದನ್ನು ತಿಳಿಯುತ್ತಾರೆ. ಧ್ವನಿ ಪ್ರಯೋಗವನ್ನು ಸರಿಯಾಗಿ ವಾಕ್ಯದಲ್ಲಿ ರಚಿಸುವುದನ್ನು ಗ್ರಹಿಸುವರು. ಭಾಷಾ ಸಂಪತ್ತು, ಭಾಷಾಭ್ಯಾಸ ಚಟುವಟಿಕೆಯಲ್ಲಿ ಅಕ್ಷರ ಪ್ರಕ್ರಿಯೆಯನ್ನು ಗಮನಿಸಿ ಎಂಬ ಪ್ರಶ್ನೆಗಳನ್ನು ಕೇಳಲಾಗಿದೆ. ಇದರಿಂದ ಮಕ್ಕಳು ಹ್ರಸ್ವಸ್ವರ, ದೀರ್ಘಸ್ವರ, ಗುಣಿತಾಕ್ಷರ, ಸಂಧ್ಯಾಕ್ಷರಗಳು, ಒತ್ತಕ್ಷರ, ಅನುಸ್ವರ, ವಿಸರ್ಗ ಇತ್ಯಾದಿ ಅಕ್ಷರಗಳು ಯಾವ ಯಾವ ಧ್ವನಿಮಾಗಳಿಂದ ಕೂಡಿ ರಚನೆಯಾಗುತ್ತವೆ ಎಂಬುದನ್ನು ತಿಳಿಸುವುದಾಗಿದೆ. ಜೊತೆಗೆ ಮಕ್ಕಳು ವ್ಯಂಜನಾಕ್ಷರಕ್ಕೆ ಸ್ವರ ಸೇರಿದಾಗ ಆಗುವ ಅಕ್ಷರಗಳ ಪ್ರಕ್ರಿಯೆ ಗುಣಿತಾಕ್ಷರಗಳು ಎಂಬುದನ್ನು ತಿಳಿಯುವರು.

ಉದಾ : ಕ್ + ಅ > ಕ    ಕ್ + ಏ > ಕೇ

ಕ್ + ಆ > ಕಾ    ಕ್ + ಐ > ಕೈ

ಕ್ + ಇ > ಕಿ    ಕ್ + ಒ > ಕೊ

ಕ್ + ಈ > ಕೀ    ಕ್ + ಓ > ಕೋ

ಕ್ + ಉ > ಕು    ಕ್ + ಔ > ಕೌ

ಕ್ + ಊ > ಕೂ    ಕ್ + ಂ > ಕಂ

ಕ್ + ಋ > ಕೃ    ಕ್ + ಃ > ಕಃ

ಕ್ + ಎ > ಕೆ

ಈ ರೀತಿಯಾಗಿ ಅಕ್ಷರ ರಚನೆಯ ಪ್ರಕ್ರಿಯೆಯನ್ನು ತಿಳಿಯುವರು. ಇದರ ಜೊತೆಗೆ ಒತ್ತಕ್ಷರ ಸಂಯುಕ್ತಾಕ್ಷರ, ವಿಜಾತಿ ಸಂಯುಕ್ತಾಕ್ಷರಗಳ ರಚನೆಯ ಅಭ್ಯಾಸಕ್ಕೆ ಆದ್ಯತೆ ನೀಡಿರುವುದನ್ನು ಈ ತರಗತಿಯಲ್ಲಿ ಕಾಣುತ್ತೇವೆ.

ಉದಾ : ಅಕ್ಕ, ಹಗ್ಗ, ಅಚ್ಚು, ಅಜ್ಜ, ಇತ್ಯಾದಿ

**ವಿಜಾತಿ ಸಂಯುಕ್ತಾಕ್ಷರ :** ರಕ್ತ, ಚಕ್ರ, ಅಕ್ಷಯ ಇತ್ಯಾದಿಗಳನ್ನು ಪದಗಳ ಮೂಲಕ ಕಲಿಸುವ ಪ್ರಕ್ರಿಯೆ ನಡೆದಿದೆ. ಈ ಸಂಕ್ಷಿಪ್ತ ಪರಿಚಯದ ನಂತರ ಮಾದರಿಯಲ್ಲಿ ಸೂಚಿಸಿರುವಂತೆ ಪದದ ಗುಣಿತಾಕ್ಷರಗಳನ್ನು ಬಿಡಿಸಿ ಬರೆಯಿರಿ ಎಂದು ಕೇಳಿರುವುದುಂಟು.

ಉದಾಹರಣೆಗೆ :

ಮಾದರಿ : ದೀಪಾವಳಿ ದ್+ಈ-ಪ್+ಆ-ವ್+ಅ-ಳ್+ಇ > ದೀಪಾವಳಿ.

ಬಿಡುಗಡೆ -

ಮೊದಲ -

ಸಹಾಯ -

ಕುಲುಮೆ - .................. ಇತ್ಯಾದಿ ಇದರಿಂದ ಮಕ್ಕಳು ಒಂದು ಪದದಿಂದ ಹೊರಡುವ ಧ್ವನಿಮಾ ಗುಚ್ಚದ ಎಳೆ ಎಳೆಯ ಬಿಡಿ ಭಾಗಗಳನ್ನು ತಿಳಿದು ಪದರಚನೆಯ ಧ್ವನಿಮಾನಗಳನ್ನು ಅರ್ಥೈಸಿಕೊಳ್ಳುವವರು. ಇದನ್ನು ಎಷ್ಟರ ಮಟ್ಟಿಗೆ ಗ್ರಹಿಸಿದ್ದಾರೆ ಎಂದು ಮೌಲ್ಯಮಾಪನಕ್ಕೆ ಒಳಪಡಿಸಲು ಗುಣಿತಾಕ್ಷರ ಕೂಡಿಸಿ ಬರೆಯಿರಿ ಎಂದು ಕೇಳಲಾಗಿದೆ.

**ಉದಾಹರಣೆಗೆ** : ಅ - ವ್ + ಅ - ನ್ + ಉ

ತ್ + ಆ - ಲ್ + ಲ್ + ಊ + ಕ್ + ಅ ಇತ್ಯಾದಿ.

ಈ ವಿಧಾನದಿಂದ ವಿದ್ಯಾರ್ಥಿಗಳು ಧ್ವನಿಗುಚ್ಚಗಳ ಸಹಾಯದಿಂದ ಪದರಚನೆ ಮಾಡುವುದನ್ನು ಕಲಿಯುತ್ತಾರೆ.

* ಹಾವು ಹರಿಯುವಾಗ ಸರಸರ ಶಬ್ದ ಉಂಟಾಗುತ್ತದೆ.

* ಮಳೆ ಜೋರಾಗಿ ಬರುವಾಗ --------- ಶಬ್ದ

* ನದಿಯ ನೀರು ಶಾಂತವಾಗಿ ಹರಿಯುವಾಗ --------- ಶಬ್ದ

* ರೈಲು ಓಡುವಾಗ --------- ಶಬ್ದ ಎಂದು ಇತ್ಯಾದಿ ವಾಕ್ಯಗಳನ್ನು ಕೊಡಲಾಗಿದೆ. ಸನ್ನಿವೇಶಕ್ಕೆ ತಕ್ಕ ಧ್ವನಿ ಬರೆಯಿರಿ ಎಂದು ಕೇಳಿದ್ದಾರೆ. ಇದರಿಂದ ತಮ್ಮ ಪರಿಸರದಲ್ಲಿ ಗ್ರಹಿಸಿದ ಧ್ವನಿಗಳ ಶಬ್ದ ಮತ್ತು ಬರಹದ ರೂಪದಲ್ಲಿ ಕಲಿತ ಧ್ವನಿಮಾಗಳನ್ನು ಗ್ರಹಿಕೆಗೆ ತಂದು ಬರೆಸುವ ವಿಧಾನವನ್ನು ಹೇಳಿಕೊಡಲಾಗುತ್ತದೆ.

ಮುಂದುವರಿದಂತೆ ಭಾಷಾಭ್ಯಾಸ ಚಟುವಟಿಕೆಯಲ್ಲಿ ವ್ಯಾಕರಣದ ನಿಯಮಗಳನ್ನು ಉದಾಹರಣೆಗಳ ಮೂಲಕ ಹೇಳಿಕೊಡುವುದನ್ನು ಕಾಣುತ್ತೇವೆ. ಜೊತೆಗೆ ಹಳೆಗನ್ನಡದ ಧ್ವನಿರಚನೆಯ ಪದಗಳು ಹೊಸಗನ್ನಡದಲ್ಲಿ ಯಾವ ಧ್ವನಿಮಾಗಳಾಗುತ್ತವೆ. ಎಂಬುದನ್ನು ಹೇಳಿ ಕೊಡವುದನ್ನು ನೋಡುಬಹುದು. ಉದಾಹರಣೆಗೆ ಕೊಟ್ಟಿರುವ ಪದಗಳನ್ನು ಗಮನಿಸಿ ಎಂದು ಕೇಳಿದ್ದಾರೆ.

| ಹಳಗನ್ನಡ | ಹೊಸಗನ್ನಡ |
| --- | --- |
| ಪೆಣ್ಣು | ಹೆಣ್ಣು |
| ಪೆರ್ಮೆ | ಹೆಮ್ಮೆ |
| ಪೆತ್ತವರು | ಹೆತ್ತವರು |
| ಪಾಲ್ಗಡಲು | ಹಾಲ್ಗಡಲು |
| ಪೆರ್ಚು | ಹೆಚ್ಚು |
| ಪೆಸರು | ಹೆಸರು |

ಇದರ ಉದ್ದೇಶ ಕಾಲದಿಂದ ಕಾಲಕ್ಕೆ ಇದ್ದ ಧ್ವನಿ ರಚನೆಗಳನ್ನು ಹಾಗೂ ಬದಲಾದ ಧ್ವನಿ ರಚನೆಗಳು ಹೇಳಿಕೊಡುವ ಸಲುವಾಗಿ ಇಂತಹ ಪ್ರಶ್ನೆಗಳನ್ನು ಕೇಳಿದಂತೆ ಕಂಡು ಬರುತ್ತದೆ.

ಕನ್ನಡ ಕಸ್ತೂರಿ–೬ನೇ ತರಗತಿಯ ಪುಸ್ತಕವು ಧ್ವನಿ ರಚನೆಗೆ ಸಂಬಂಧಿಸಿದಂತೆ ಮಕ್ಕಳ ವಯಸ್ಸಿಗನುಗುಣವಾಗಿ ಸಂಧಿಯ ನಿಯಮ ಕಲಿಸಲಾಗುತ್ತದೆ. ವಿಗ್ರಹ ಪದದಲ್ಲಿ ಆಗುವ ಧ್ವನಿ ವ್ಯತ್ಯಾಸವನ್ನು ಪ್ರಯೋಗದ ಮೂಲಕ ಹಂತ ಹಂತವಾಗಿ ಹೇಳುವುದನ್ನು ಕಾಣುತ್ತೇವೆ. ಹೊಸ ಹೊಸ ವಿಧಗಳ ಮೂಲಕ ಧ್ವನಿ ರಚನೆಯನ್ನು ಚಿಕ್ಕ ಚಿಕ್ಕ ಭಾಗಗಳಾಗಿ, ಹಂತ ಹಂತವಾಗಿ ಕಲಿಸುವ ವಿಧಾನವನ್ನು ಹಿಂದಿನ ತರಗತಿಯಲ್ಲಿರುವಂತೆ ಅಳವಡಿಸಿ ಕೊಳ್ಳಲಾಗಿದೆ. ವಿಷಯದ ವಿಸ್ತರಣೆ ಮಾತ್ರ ತರಗತಿಗನುಗುಣವಾಗಿ ನಡೆದಿದೆ. ಹಿಂದಿನ ತರಗತಿಗಳಿಗಿಂತ ಧ್ವನಿರಚನೆಗೆ ಸಂಬಂಧಿಸಿದಂತೆ ಈ ತರಗತಿಯಲ್ಲಿ ವಿಶೇಷವಾಗಿ ಹೊಸದೇನು ಕಂಡು ಬರುವುದಿಲ್ಲ. ಧ್ವನಿ ರಚನೆಯ ವಿಶ್ಲೇಷಣೆಯನ್ನು ಉದಾಹರಣೆಗಳ ಮೂಲಕ ವಿಸ್ತರಿಸಲಾಗಿದೆ. ವರ್ಣಮಾಲೆಯ ಹುಟ್ಟುವ ಕ್ರಮವನ್ನು ವಿಶ್ಲೇಷಿಸುತ್ತಾ ವರ್ಣಮಾಲೆಯ ವಿವಿಧ ಹಂತಗಳನ್ನು ಒಂದು ವಾಕ್ಯದಲ್ಲಿ ಉತ್ತರಿಸುವ ಪ್ರಶ್ನೆಯೋಪಾದಿಯಲ್ಲಿ ಧ್ವನಿರಚನೆ ಹೇಳಿಕೊಡುವುದನ್ನು ಇಲ್ಲಿ ಕಾಣುತ್ತೇವೆ.

**ಉದಾಹರಣೆಗೆ :**

* ಕನ್ನಡ ವರ್ಣಮಾಲೆಯಲ್ಲಿರುವ ಅಕ್ಷರಗಳೆಷ್ಟು ?
* ಹ್ರಸ್ವ ಸ್ವರಗಳನ್ನು ಬರೆಯಿರಿ ?
* ದೀರ್ಘ ಸ್ವರಗಳನ್ನು ಬರೆಯಿರಿ ?
* ಮಹಾಪ್ರಾಣಾಕ್ಷರಗಳನ್ನು ಗಟ್ಟಿಯಾಗಿ ಹೇಳಿ ?

* ಇವನು ಸ್ಪಷ್ಟವಾಗಿ ಉಚ್ಚರಿಸಿ ? ಎಂದು ಪ್ರಶ್ನೆಗಳನ್ನು ಕೇಳಲಾಗಿದೆ. ಅಂದರೆ ಮಕ್ಕಳು ಈಗಾಗಲೇ ಧ್ವನಿರಚನೆಗೆ ಸಂಬಂಧಿಸಿದಂತೆ ಸಮಗ್ರವಾಗಿ ತಿಳಿದಿರುತ್ತಾರೆ ಎಂಬ ಕಾರಣಕ್ಕಾಗಿ ಒಂದು ಅಥವಾ ಎರಡು ವರ್ಣಗಳ ಬಗ್ಗೆ ಪ್ರಶ್ನೆಗಳನ್ನು ಕೇಳದೇ ವರ್ಣಗಳ ವಿವಿಧ ವಿಧಗಳನ್ನು ಬರೆಯಲು ಕೇಳಲಾಗಿದೆ. ಕಾರಣ ಈಗಾಗಲೇ ಮಕ್ಕಳು ಹಿರಿಯ ಪ್ರಾಥಮಿಕ ತರಗತಿಯಲ್ಲಿ ಇರುವುದರಿಂದ ಸಮಗ್ರವಾದ ವಿಸ್ತರಣೀಯವಾದ ಪ್ರಶ್ನೆಗಳನ್ನು ಕೇಳಿದಂತೆ ತೋರುತ್ತದೆ.

ಧ್ವನಿರಚನೆಯನ್ನು ವ್ಯಾಕರಣದ ನಿಯಮಗಳ ಮೂಲಕ ಪರಿಚಯಿಸುವುದಕ್ಕಾಗಿ ಕೆಲವೊಂದು ಪ್ರಶ್ನೆಗಳನ್ನು ಈ ರೀತಿಯಾಗಿ ಕೇಳಲಾಗಿದೆ. ಉದಾಹರಣೆಗೆ ಕೊಟ್ಟಿರುವ ಪದರಚನೆ ಗಮನಿಸಿ ಓದಿ ರಚನೆಯಾದ ಪದ ಏನನ್ನು ಸಂಕೇತಿಸುತ್ತದೆ ತಿಳಿಯಿರಿ.

ಮೂಲಧಾತು + ಪ್ರತ್ಯಯ > ಪದರಚನೆ

ಮಾಡು + ಇಸು > ಮಾಡಿಸು

ಕೇಳು + ಇಸು > ಕೇಳಿಸು

ಓಡು + ಇಡು > ಓಡಿಸು

ಇದರ ಉದ್ದೇಶ ವಿದ್ಯಾರ್ಥಿಗಳಿಗೆ ಮೂಲಧಾತುಗಳಿಗೆ 'ಇಸು' ಎಂಬ ಪ್ರತ್ಯಯದ ಧ್ವನಿ ಸೇರಿದಾಗ ಯಾವರೀತಿಯಲ್ಲಿ ಧ್ವನಿ ವ್ಯತ್ಯಾಸವಾಗುತ್ತದೆ ಎಂಬುದನ್ನು ತಿಳಿಯುತ್ತಾರೆ. ಪೋಲೀಸ್, ಇನ್‌ಸೆಕ್ಟರ್, ಕೂಟರ್, ಪೋಲೀಸ್ ಟೇಷನ್, ಸೀಫ್ರ, ಆಸ್ವಾಷನ್ ಬಾಗಿಲು ಇತ್ಯಾದಿ ಪದಗಳನ್ನು ಕೊಟ್ಟು ಈ ಪದಗಳನ್ನು ಸರಿಪಡಿಸಿ ಸ್ಪಷ್ಟವಾಗಿ ಉಚ್ಚರಿಸಿ ಎಂಬ ಪ್ರಶ್ನೆಗಳನ್ನು ಕೇಳಲಾಗಿದೆ. ಇದರ ಉದ್ದೇಶ ಅನ್ಯ ಭಾಷೆಯಿಂದ ಬಂದು ಕನ್ನಡದಲ್ಲಿ ಸ್ವೀಕರಣಗೊಂಡ ಪದಗಳಿವೆ. ಅವುಗಳು ಧ್ವನಿರಚನೆ ಪದದಲ್ಲಿ ಹೇಗೆ ಸೇರುತ್ತದೆ ಎಂಬುದನ್ನು ಹೇಳಿ ಕೊಡುವುದಕ್ಕಾಗಿ ಈ ರೀತಿಯ ಪ್ರಶ್ನೆಗಳನ್ನು ನಿರೀಕ್ಷಿಸಿದಂತೆ ಕಾಣುತ್ತದೆ.

ಸಂಗೀತ + ಅಭ್ಯಾಸ > ಸಂಗೀತಾಭ್ಯಾಸ

ಜಗತ್ತಿನ + ಆದ್ಯಂತ > ಜಗತ್ತಿನಾದ್ಯಾಂತ

ಸಿಂಹ + ಆಸನ > ಸಿಂಹಾಸನ

ಹರಿ + ಈಶ್ವರ > ಹರೀಶ್ವರ

ಕವಿ + ಇಂದ್ರ > ಕವೀಂದ್ರ

ಗುರು + ಉಪದೇಶ > ಗುರೂಪದೇಶ ಎಂಬ ಇತ್ಯಾದಿ ಪದಗಳನ್ನು ಕೊಟ್ಟು, ಪದರಚನೆ ಗಮನಿಸಿ ಓದಿ. ರಚನಾ ರೂಪದಲ್ಲಿನ ವ್ಯತ್ಯಾಸ ಬರೆಯಿರಿ ಎಂದು

ಕೇಳಲಾಗಿದೆ. ಇಲ್ಲಿ ಪೂರ್ವ ಪದದ ಕೊನೆಯ ಅಕ್ಷರ ಮತ್ತು ಉತ್ತರ ಪದದ ಮೊದಲ ಅಕ್ಷರ ಸಮಗ್ರ ಪದವಾಗಿ ರಚನೆಯಾದಾಗ ಅಕ್ಷರ ರಚನೆಯಲ್ಲಿ ಧ್ವನಿಗಳು ಹೇಗೆ ವ್ಯತ್ಯಾಸ ವಾಗುತ್ತದೆ ಎಂಬುದನ್ನು ತಿಳಿಸುವುದಾಗಿದೆ. ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಕೊಟ್ಟಿರುವ ವಾಕ್ಯಗಳನ್ನು ಗ್ರಾಂಥಿಕ ರೂಪದಲ್ಲಿ ಬರೆಯಿರಿ ಎಂದು ಕೇಳಲಾಗಿದೆ.

ಉದಾ : * ಬರ್ರಿ ಬಾಯಾರ ಬರ್ರೀ ... ಚೂಡಾ ತಿಂದು ಚಾ ಕುಡೀರೆಲ

* ಅಮ್ಮಾವ್ರ ರೊಟ್ಟಿ ಕಾಳು ತಿನ್ರೀ, ಕೆನಿಮೊಸರು ಐತ್ರೀ.

ವಿದ್ಯಾರ್ಥಿಗಳು ಇದರಿಂದ ಆಡು ಭಾಷೆಯಲ್ಲಿನ ವಾಕ್ಯಗಳಲ್ಲಿ ಧ್ವನಿರಚನೆಯಾಗಿರುವುದನ್ನು ಗ್ರಹಿಸುವರು ಹಾಗೂ ಈ ವಾಕ್ಯಗಳು ಗ್ರಾಂಥಿಕ ರೂಪದಲ್ಲಿ ಬರೆದಾಗ ಧ್ವನಿಗಳು ಆಡುಭಾಷೆ ಯಿಂದ ಗ್ರಾಂಥಿಕ ಭಾಷೆಯಲ್ಲಿ ರಚನೆಯಾಗಿರುತ್ತವೆ ಎಂಬುದನ್ನು ತಿಳಿಯುತ್ತಾರೆ.

ಒಟ್ಟಾರೆಯಾಗಿ ಧ್ವನಿರಚನೆಗೆ ಸಂಬಂಧಿಸಿದಂತೆ ಈ ತರಗತಿಯಲ್ಲಿ ಧ್ವನಿರಚನೆ ನಿಯಮಗಳನ್ನು ಉದಾಹರಣೆಗಳ ಮೂಲಕ ಪರಿಚಯಿಸಿ ಕಲಿಸುವ ನಿಟ್ಟಿನಲ್ಲಿ ನಡೆದಿರುವುದು ಕಂಡು ಬರುತ್ತದೆ. ವ್ಯಾಕರಣದ ವಿವಿಧ ಭಾಗಗಳ ನಿಯಮಗಳನ್ನು ಪರಿಚಯಿಸಿ ಈ ನಿಯಮದಡಿಯಲ್ಲಿ ಧ್ವನಿರಚನೆ ಹೇಗೆ ಆಗುತ್ತದೆ ಮತ್ತು ಏಕೆ ಆಗುತ್ತವೆ ಎಂಬುದನ್ನು ಸರಳತೆಯ ವಿಧಾನದಿಂದ ಸಂಕೀರ್ಣದ ರೂಪಗಳಲ್ಲಿ ತಿಳಿಸುವ ಪ್ರಯತ್ನಗಳು ನಡೆದಿರುವುದನ್ನು ಕಾಣುತ್ತೇವೆ. ಸಂಧಿಗಳು ಪ್ರತ್ಯಯಗಳ ಸಂದರ್ಭದಲ್ಲಿ ಧ್ವನಿ ರಚನೆಗಳು ಹೇಗೆ ಬದಲಾಗುತ್ತವೆ ಎಂಬುದನ್ನು ವಿಶ್ಲೇಸಿಸುವ ಪ್ರಯತ್ನಗಳು ಈ ಪಠ್ಯದಲ್ಲಿ ನಡೆದಿರುವುದು ಗಮನಾರ್ಹ ಸಂಗತಿ.

ಕನ್ನಡ ಕಸ್ತೂರಿ–೭ನೇ ತರಗತಿಯ ಪುಸ್ತಕವು ಧ್ವನಿರಚನೆಗೆ ಸಂಬಂಧಿಸಿದಂತೆ ವಿಶಾಲಾರ್ಥದಲ್ಲಿ ಬಳಕೆಯಾಗಿದೆ. ಇಲ್ಲಿ ನೇರವಾಗಿ ಧ್ವನಿರಚನೆಗೆ ಸಂಬಂಧಿಸಿದಂತೆ ಪ್ರಶ್ನೆಗಳನ್ನು ಕೇಳದೆ, ಧ್ವನಿ ರಚನೆಯಾದಾಗ ಯಾವ ನಿಯಮವನ್ನು ಅನುಸರಿಸುತ್ತಾರೆ ಎಂಬುದನ್ನು ಉದಾಹರಣೆಯ ಮೂಲಕ ಹೇಳಿ ಕೊಡಲಾಗುತ್ತದೆ. ಇಲ್ಲಿ ಉದಾಹರಣೆಗಿಂತ ಹೊಸದಾಗಿ ಈ ಪಠ್ಯದಲ್ಲಿ ಧ್ವನಿ ರಚನೆಯಲ್ಲಿ ಆಗುವ ಅರ್ಥವ್ಯತ್ಯಾಸ, ಧ್ವನಿ ವ್ಯತ್ಯಾಸವನ್ನು, ನಿಯಮದ ಮೂಲಕ ಹೇಳಿ ಕೊಡುವ ಪ್ರಯತ್ನಗಳು ನಡೆದಿರುವುದನ್ನು ಕಾಣುತ್ತೇವೆ. ಹಿಂದಿನ ತರಗತಿಯಲ್ಲಿ ಕಲಿತ ಧ್ವನಿರಚನೆಯ ಪ್ರಶ್ನೆಗಳನ್ನು ಕೇಳುತ್ತಾ ಪುನರಾವರ್ತಿಸಿದಂತೆ ಕಂಡು ಬಂದರು ಇಲ್ಲಿಯ ಉದಾಹರಣೆಗಳು ಮಾತ್ರ ಸುಲಭವಾಗಿರದೆ ತರಗತಿಯ ವಿದ್ಯಾರ್ಥಿಗಳ ಸಾಮರ್ಥ್ಯಕ್ಕೆ ಅನುಗುಣವಾಗಿ ರಚಿಸಲಾಗಿದೆ.

ಉದಾಹರಣೆಗೆ : ಕನ್ನಡ ವರ್ಣಮಾಲೆಯಲ್ಲಿ ಒಟ್ಟು ಅಕ್ಷರಗಳೆಷ್ಟು ? ಇವುಗಳಲ್ಲಿ ಹ್ರಸ್ವ, ದೀರ್ಘಸ್ವರಗಳನ್ನು ಗುರುತಿಸಿ ಬರೆಯಿರಿ? ಮಹಾಪ್ರಾಣ ಅಕ್ಷರಗಳನ್ನು ಆರಿಸಿ ಬರೆಯಿರಿ? ವರ್ಗೀಯ ಅಕ್ಷರಗಳ ಗುಂಪನ್ನು ಬೇರೆ ಮಾಡಿ ? ಶ, ಷ, ಸ. ಉಚ್ಚಾರ

ವ್ಯತ್ಯಾಸ ಗುರುತಿಸುವ ಮೂರು ಮೂರು ಪದಗಳನ್ನು ಬರೆಯಿರಿ ಎಂದು ಕೇಳಲಾಗಿದೆ. ಇಲ್ಲಿ ಮೊದಲು ಅಕ್ಷರಗಳನ್ನು ಕೊಡಲಾಗಿದೆ. ನಂತರ ಈ ಮೇಲಿನ ಪ್ರಶ್ನೆಗಳನ್ನು ಕೇಳಲಾಗಿದೆ. ಇದರ ಉದ್ದೇಶ ಸಮಗ್ರ ಕನ್ನಡ ವರ್ಣಮಾಲೆಯ ಬಗ್ಗೆ ತಿಳಿದಿರುತ್ತಾರೆ. ಆದ್ದರಿಂದ ಇಲ್ಲಿ ಸಮಗ್ರವಾದ ವರ್ಣಗಳನ್ನು ಕೊಟ್ಟು ಆರಿಸಿ ಬರೆಯುವ ಪ್ರಶ್ನೆಗಳನ್ನು ಕೇಳಲಾಗಿದೆ. ವಿದ್ಯಾರ್ಥಿಗಳು ಇದರಿಂದ ಅಕ್ಷರಗಳ ವಿಂಗಡನೆಯನ್ನು ತಿಳಿದು ವಿಭಾಗಿಸುವರು ಹಾಗು ವಿಂಗಡನೆಯನ್ನು ಸ್ಪಷ್ಟವಾಗಿ ತಿಳಿದು ಧ್ವನಿಗಳು ಅಕ್ಷರದಿಂದ ಅಕ್ಷರಕ್ಕೆ ಹೇಗೆ ಬದಲಾಗಿರುತ್ತದೆ ಮತ್ತು ಪಲ್ಲಟಗೊಳ್ಳುತ್ತವೆ ಎಂಬುದನ್ನು ಉದಾಹರಣೆಗಳ ಮೂಲಕ ತಿಳಿಸಲು ಪ್ರಯತ್ನಿಸಿದಂತೆ ತೋರುತ್ತದೆ.

ಬಾದಷಹ, ದುಸಾಧ್ಯ, ಅಂತಹಕರಣ, ದುಂಧುಬಿ, ಔದರ್ಯ, ದೊಡ್ಡಸ್ತನ ಎಂಬ ಪದಗಳನ್ನು ಕೊಟ್ಟು ಕೊಟ್ಟಿರುವ ಪದಗಳನ್ನು ಸರಿಪಡಿಸಿ ಬರೆಯಿರಿ ಎಂದು ಕೇಳಲಾಗಿದೆ. ಈ ಪ್ರಶ್ನೆಯು ಎಲ್ಲಾ ತರಗತಿಯಲ್ಲಿಯೂ ಕಂಡು ಬಂದರು ಇಲ್ಲಿ ಮಾತ್ರ ವಿಶೇಷವಾಗಿ ಕ್ಲಿಷ್ಟ ಪದಗಳನ್ನು ಕೊಟ್ಟು ಸರಿ ಪಡಿಸಲು ಕೇಳಲಾಗಿದೆ. ಭಾಷಾ–ಚಟುವಟಿಕೆಯಲ್ಲಿ ಇದನ್ನು ಗಮನಿಸಿ : ಹೇಗೆ ಓದಿದರೂ ಅರ್ಥಪೂರ್ಣ ಪದವಾಗುತ್ತದೆ ಎಂಬುದನ್ನು ಕೇಳಿರುವುದುಂಟು.

**ಉದಾಹರಣೆಗೆ** :

| | | |
|---|---|---|
| ಕಿ | ಟ | ಕಿ |
| ಟ | ಗ | ರು |
| ಕಿ | ರು | ಬ |

ಇದರ ಉದ್ದೇಶ ಕ, ಗ, ಟ, ಎಂಬ ಧ್ವನಿಗಳಿಂದ ಸರಳ ಪದಗಳ ರಚನೆ ತಿಳಿಯುತ್ತಾರೆ. ಅಲ್ಲದೆ ಈ ವರ್ಣಗಳು ಪದದ ಆದಿ, ಮಧ್ಯ, ಅಂತ್ಯದಲ್ಲಿ ಬಂದರು ಕೆಲವು ಪದಗಳ ಅರ್ಥ ಹಾಗೆ ಉಳಿಯುವುದನ್ನು ತಿಳಿಯುವರು. ಜೊತೆಗೆ ಕೊಟ್ಟ ವರ್ಣಗಳು ಎಲ್ಲಾ ಹಂತದಲ್ಲಿ ಅದೇ ಅರ್ಥವನ್ನು ಕೊಡಲಾರವು ಎಂಬುದನ್ನು ಸಹ ಅರ್ಥಮಾಡಿಕೊಳ್ಳುವರು.

ಅಕ್ಷರ ಬಂಧವನ್ನು ಬಳಸಿ ಅನುಕರಣಾ ಅವ್ಯಯಗಳನ್ನು ರೂಪಿಸಿ ಎಂದು ಕೇಳಲಾಗಿದೆ. ಇದರಿಂದ ವಿದ್ಯಾರ್ಥಿಗಳು ಅನುಕರಣಾ ಅವ್ಯಯದಲ್ಲಿ ಬರುವ ಅಕ್ಷರಗಳನ್ನು ತಿಳಿದು ರಚನೆಗೆ ಮುಂದಾಗುವರು.

**ಉದಾಹರಣೆಗೆ : ಮಾದರಿ – ಪಟಪಟ**

| | | | | |
|---|---|---|---|---|
| ಪ | ಥ | ಜ | ಲ | ಮು |
| ಡ | ಟ | ವಿ | ನು | ಚ |
| ಳ | ಚು | ಕ | ರ | ಬ |
| ದ | ತ | ಝು | ಗ | ಸ |

ಈ ತರಗತಿಯ ಪುಸ್ತಕವು ಹಿರಿಯ ಪ್ರಾಥಮಿಕ ಹಂತದ ಕೊನೆಯ ಕನ್ನಡಭಾಷಾ ಪಠ್ಯಪುಸ್ತಕವಾಗಿರುವುದರಿಂದ ತರಗತಿಯ ಮಕ್ಕಳ ಬುದ್ಧಿಮಟ್ಟಕ್ಕೆ ಅನುಗುಣವಾಗಿ ಧ್ವನಿ ರಚನೆಯನ್ನು ಹೇಳಿಕೊಡುವ ಮತ್ತು ಪರಿಚಯಿಸುವುದನ್ನು ಕಾಣುತ್ತೇವೆ. ಧ್ವನಿ ನಿಯಮಗಳನ್ನು ಹೇಳುವುದಕ್ಕಾಗಿ ಸಂಧಿಗಳ ವಿವಿಧ ವಿಂಗಡಣೆಯನ್ನು ಮತ್ತು ಸಂಧಿಯ ರಚನೆಯ ಕ್ರಮವನ್ನು ಹಂತ ಹಂತವಾಗಿ ಈ ಪಠ್ಯದಲ್ಲಿ ಹೇಳಿಕೊಡುವ ಪ್ರಕ್ರಿಯೆ ನಡೆದು ಬಂದಿರು ವುದನ್ನು ಕಾಣುತ್ತೇವೆ. ಮೊದಲು ಕನ್ನಡ ಸಂಧಿಗಳು ಮತ್ತು ನಿಯಮಗಳನ್ನು ಉದಾಹರಣೆಯ ಮೂಲಕ, ಪದ ವಿಗ್ರಹದ ರೂಪವನ್ನು ಕೊಡಲಾಗಿದೆ. ನಂತರ ಸಂಧಿಯ ನಿಯಮದಲ್ಲಿ ಧ್ವನಿಗಳು ಹೇಗೆ ಬದಲಾವಣೆಯನ್ನು ಹೊಂದುತ್ತಿವೆ ಎಂಬುದನ್ನು ಹೇಳಲಾಗಿದೆ. ಸರಳ ರೀತಿಯ ಕ್ರಮವನ್ನು ಅನುಸರಿಸಿ ಹೇಳಿಕೊಡುವುದನ್ನು ಕಾಣಬಹುದು. ಅಲ್ಲದೆ ಹಳಗನ್ನಡ, ನಡುಗನ್ನಡ ಹಾಗೂ ಹೊಸಗನ್ನಡದ ಕೆಲವು ವರ್ಣಮಾಲೆಗಳಲ್ಲಿ ವ್ಯತ್ಯಾಸವಾದ ಬಗೆಯನ್ನು ಹೇಳಿ ಕೊಡುವುದನ್ನು ಕಾಣುತ್ತೇವೆ. ಛಂದಸ್ಸು, ವ್ಯಾಕರಣವನ್ನು ಹೇಳಿ, ಛಂದಸ್ಸಿನಲ್ಲಿ ಅಕ್ಷರದ ಬೆಲೆ ನಿರ್ಧಾರದ ಕ್ರಮವನ್ನು ಪರಿಚಯಿಸುವದನ್ನು ಈ ಪಠ್ಯದಲ್ಲಿ ಕಾಣುತ್ತೇವೆ.

**೩. ಆಧುನಿಕ ಚಿಂತಕರ ಅಭಿಪ್ರಾಯಗಳ ವಿಶ್ಲೇಷಣೆ**

ಹಿಂದಿನ ತಲೆಮಾರಿನ ಜನತೆಯನ್ನು ಅನೌಪಚಾರಿಕವಾಗಿ ಮಾತನಾಡುವಾಗಲು ಪ್ರಸ್ತಾವತ್ವೇನ ಸೊಗಸಾದ ಸೂಕ್ತಿಗಳನ್ನು ಸುಭಾಷಿತಗಳನ್ನು, ಪ್ರಾಚೀನ ಕಾಲದ ಕೃತಿಗಳನ್ನು ಸಹಜ ಸುಲಭ ರೀತಿಯಲ್ಲಿ, ಸಂದರ್ಭ ಶುದ್ಧಿಯಿಂದ ಹೇಳುವುದನ್ನು ನಾನು ಸಾಮಾನ್ಯರಲ್ಲಿ ಬಾಲಕನಾಗಿದ್ದಾಗ ಕೇಳಿದ್ದೇನೆ. ಇಂದಿಗೂ ಅಲ್ಲಲ್ಲಿ ಸಭೆ ಸಮಾರಂಭಗಳಲ್ಲಿ ಇಂತಹ ಮಾತುಗಳು ಕೇಳಿ ಬರುತ್ತಿರುತ್ತವೆ. ಇದನ್ನು ಅನುಭವಿಸಿ ಆನಂದಿಸಿದ್ದೇನೆ. ಆದರೆ ಇತ್ತೀಚಿನ ದಿನಮಾನಗಳಲ್ಲಿ ಇಂತಹ ಸನ್ನಿವೇಶಗಳು ವೇದಿಕೆಯ ಸಮಾರಂಭಗಳು ಕಡಿಮೆಯಾಗುತ್ತಿವೆ ಎಂಬುದನ್ನು ಅರಿತಿದ್ದೇವೆ. ಜೊತೆಗೆ ವಿದ್ವಾಂಸರು ಸಹ ಕಡಿಮೆಯಾಗುತ್ತಿರುವುದು ವಿಷಾದನೀಯ ಸಂಗತಿ ಎಂದು ಹೇಳಬಹುದು. ಇದಕ್ಕೆಲ್ಲಾ ಕಾರಣವಾದರೂ ಏನು, ಪ್ರಾಥಮಿಕ ಶಿಕ್ಷಣಕ್ಕಾಗಿ ಸರ್ಕಾರ ಹಣವನ್ನು ವ್ಯಯ ಮಾಡುತ್ತಿರುವುದು ಸತ್ಯವಾದ ಸಂಗತಿ. ಕನ್ನಡವನ್ನು ಉಳಿಸಿ, ಬೆಳಸಿ ಎಂಬ ಮಾತುಗಳು ಕೇಳಿಬರುತ್ತಿರುವುದು ಸತ್ಯ. ಹಾಗಾದರೆ ಏಕೆ ಇಂದು ನಮಗೆ ಮೇಲಿನ ಅಂಶಗಳು ಬಳಕೆಯಾಗುತ್ತಿಲ್ಲ. ಬಳಕೆಯಾದರು ಅವುಗಳ ಉಚ್ಚಾರಣೆಯ ಸಂದರ್ಭಗಳು ಸರಿಯಾಗಿ ತಿಳಿಯುತ್ತಿಲ್ಲವೆ. ಹಾಗಾದರೆ ಏಕೆ ತಿಳಿಯುತ್ತಿಲ್ಲ. ಅಂತಹ ಸನ್ನಿವೇಶ ಉಳ್ಳ ಪ್ರಾಥಮಿಕ ಶಿಕ್ಷಣವಿಲ್ಲವೆ, ಪಠ್ಯಕ್ರಮದ ಕೊರತೆಯೇ? ಬೋಧನೆಯ ಕೊರತೆಯೇ? ಅಥವಾ ಶಿಕ್ಷಕರ ಕೊರತೆಯೇ ಎಂಬುದನ್ನು ಮನಗಾಣ ಬೇಕಿದೆ. ಹೀಗೆಂದ ಮಾತ್ರಕ್ಕೆ ಬಾಲ್ಯ ಮತ್ತು ಪ್ರೌಢಾವಸ್ಥೆಯನ್ನು ಕೇವಲ ಧ್ವನಿ ತಿಳುವಳಿಕೆಗೆ ನೀಡಬೇಕೆಂದರ್ಥವಲ್ಲ. ಕೌಮಾರ್ಯ, ತಾರುಣ್ಯಗಳಲ್ಲಾದರೂ ಜೀವನ ದೀಪಕ್ಕೆ ತೈಲ ಪ್ರಾಯವಾದ ಮಹಾಕೃತಿಗಳು ದಾರ್ಶನಿಕರ ನುಡಿಗಳು ಕಾಲದಿಂದ ಕಾಲಕ್ಕೆ ಹುಟ್ಟುತ್ತಿರುತ್ತವೆ. ಅಂತಹ ನುಡಿಗಳನ್ನು

ಕೃತಿಗಳನ್ನು ಕಂಠಪಾಠ ಮಾಡಬೇಕಾದದ್ದು ಅತ್ಯಂತ ಅಪೇಕ್ಷಿತ ಮತ್ತು ಎಲ್ಲರಿಗೂ ಅನಿವಾರ್ಯ ಕೂಡ. ಅಲ್ಲದೆ ಸತ್ಕಾವ್ಯದ ರಸಸ್ಫೋರಕ ಸಂದರ್ಭಗಳನ್ನು ಸಾಕ್ಷಾತ್ ಕವಿ ಸೂಕ್ತಿಗಳನ್ನು ನೆನಪಿನಲ್ಲಿಡುವುದು ತುಂಬಾ ಒಳಿತು. ಅದರಲ್ಲು ಮುಖ್ಯವಾಗಿ ಶಿಕ್ಷಕರಲ್ಲಿರುವುದು ಬಹಳ ಮುಖ್ಯ. ಈ ಬಗೆಯ ವ್ಯವಸಾಯಕ್ಕೆ ಪೂರಕವೆನಿಸುವಂತೆ **ಕನ್ನಡದ ರತ್ನ ಡಾ॥ ಜಿ.ಪಿ.ರಾಜರತ್ನಂ ಅವರು ಹೇಳುತ್ತಿದ್ದ ಮಾತು ಸ್ಮರಣೀಯ.** ಅವರು ಹೇಳುವ ಹಾಗೆ ಪ್ರತಿಯೊಬ್ಬ ಕನ್ನಡ ಅಧ್ಯಾಪಕನೂ ಕನಿಷ್ಠ ಇನ್ನೂರು ಶ್ಲೋಕಗಳನ್ನು, ಪದ್ಯಗಳನ್ನು ಕಂಠಗತವಾಗಿಸಿಕೊಳ್ಳಬೇಕೆಂದು ತಾಕೀತು ಮಾಡುತ್ತಿದ್ದರು. ಅಂದರೆ ಈ ಮೇಲಿನ ಹೇಳಿಕೆಯನ್ನು ನೋಡಿದರೆ ಅಥವಾ ಇವರ ಪ್ರಾಥಮಿಕ ಶಿಕ್ಷಣ ಕ್ರಮವನ್ನು ಗಮನಿಸಿದರೆ ಕಂಠಪಾಠಕ್ಕೆ ಯುಕ್ತ ಸ್ಥಾನವಿತ್ತೆಂದು ಸ್ಪಷ್ಟವಾಗುತ್ತದೆ.

ಆದರೆ ಇತ್ತೀಚಿನ ವರ್ಷಗಳಲ್ಲಿ ಕಂಠಕ್ಕೆ ಸಂಬಂಧಿಸಿದ ಪಾಠ ಪದ್ಧತಿಯನ್ನು ತುಂಬ ತಿರಸ್ಕಾರದಿಂದ ಕಂಡಿರುವುದು ಸರ್ವವೇದ್ಯ. ಇಂದಿನ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆಯನ್ನು ಗಮನಿಸಿದರೆ ಕಂಠಕ್ಕೆ ಪಾಠದಲ್ಲಿ ಪ್ರಾಶಸ್ತ್ಯವನ್ನು ಕೊಡದೇ, ಕುರುಡಾದ ಬಾಯಿಪಾಠದ ವ್ಯವಸ್ಥೆಯ ಪಥ್ಯವನ್ನು ಕಾಣುತ್ತೇವೆ.

**ಡಾ.ಆರ್.ಗಣೇಶ್ ಭಾಷಾಭೃಂಗದ ಬೆನ್ನೇರಿ** ..........ಎಂಬ ಕೃತಿಯಲ್ಲಿ ಭಾಷಾ-ಸಾಹಿತ್ಯ ಕುರಿತ ವಿವೇಚನೆಗಳು, ಸಂಬಂಧಿಸಿದ ಲೇಖನಗಳು ಇದರಲ್ಲಿವೆ. ಧ್ವನಿಪೂರ್ಣ ಪ್ರಾಥಮಿಕ ಪಠ್ಯಕ್ರಮ ಎಂಬ ಲೇಖನದಲ್ಲಿ ಮಕ್ಕಳಲ್ಲಿ ಧ್ವನಿಪೂರ್ಣ ಕೊರತೆಯು ಪ್ರಾಥಮಿಕ ಶಿಕ್ಷಣದ ವಿಧಾನಕ್ಕಿಂತಲೂ ಅದರ ಪಠ್ಯಕ್ರಮವೇ ಆಗಿದೆ ಎಂದರೆ ತಪ್ಪಲ್ಲ. ಇದು ವಿಶೇಷತಃ **ಭಾಷಾ ಬೋಧನೆಗೆ ಸಂಬಂಧಿಸಿದ** ಪಠ್ಯಕ್ರಮಕ್ಕೆ ಹೆಚ್ಚು ಅನ್ವಯಿಸುತ್ತದೆ. ಏಕೆಂದರೆ ಭಾಷೆಯನ್ನಿಂದು ಒಂದು ಸ್ವಯಂ ಪೂರ್ಣ ಮೌಲ್ಯವಾಗಿ ಬೋಧಿಸದೆ, ಬರಿ ಸಂವಹನಕ್ಕೊಂದು ಸಾಧನೆವೆಂಬಂತೆ, ಅದೂ ತೀರಾ ಒರಟಾದ ಸ್ಥೂಲ ರೀತಿಯಲ್ಲಿ ಬೋಧಿಸುವ ಚಾಳಿ ಬಂದಿದೆ. ಹೀಗಾಗಿ ಭಾಷೆಯ ಆತ್ಮಮೌಲ್ಯದ ಅಂಗಗಳಾದ ವ್ಯಾಕರಣಾಂಶಗಳೂ ಕಲಾತ್ಮಕ ಸ್ವರೂಪದ ಕಾವ್ಯಾಂಶಗಳೂ ಲಕ್ಷಣಾ ಮೂಲದ ಗಾದೆ-ನುಡಿಗಟ್ಟುಗಳೂ ನವೀನ ಪಠ್ಯಕ್ರಮದಲ್ಲಿ ಅವಜ್ಞೆಗೊಳಗಾಗಿವೆ. ಕಂಠ ಪಾಠದ ಪ್ರಾಶಸ್ತ್ಯ ಇಲ್ಲವೇ ಹೆಚ್ಚಾಗಿ ಸಲ್ಲುವ ಕಾರಣ ಆಶ್ರಯವೇ ಅಳಿದ ಮೇಲೆ ಆಶ್ರಿತವಿನ್ನಂತು ನಿಂತೀತು? ಇಂದು ಕೇವಲ ಬಾಯಿ ಪಾಠವಾದೀತೆ ಹೊರತು ಕಂಠಕ್ಕೆ ಪಾಠವಾಗುವುದಿಲ್ಲ ಎಂಬ ಅಭಿಪ್ರಾಯವನ್ನು ಮಂಡಿಸುತ್ತಾರೆ. ಜೊತೆಗೆ ಒಂದು ಮಾತಿನಲ್ಲಿ ಹೇಳುವುದಾದರೆ, 'ಕಂಠಪಾಠವು ಧ್ವನಿಪೂರ್ಣ ಸಾಹಿತ್ಯವಿರುವ ಪಠ್ಯಕ್ರಮಕ್ಕೆ ಅತ್ಯಾವಶ್ಯಕ ಇಂದಿನ ಪಠ್ಯಕ್ರಮದಲ್ಲಿ ಅಸಹ್ಯವಾದ ವಾಚ್ಯವೃತ್ತಿಯಾಗಿದೆಯಲ್ಲಿಲ್ಲ ಇದೇ ನಮ್ಮ ದುರಂತ ಎಂದು ವಿಶ್ಲೇಷಿಸುತ್ತಾರೆ'. **(ಪುಟ ಸಂಖ್ಯೆ ೪೩.)**

ಕರ್ನಾಟಕ ಸರ್ಕಾರ ಮುದ್ರಿಸಿ ಪ್ರಕಟಿಸಿದ ಪ್ರಾಥಮಿಕ ಶಿಕ್ಷಣದ ಕನ್ನಡಭಾಷಾ ಪಠ್ಯಪುಸ್ತಕಗಳೆಲ್ಲವು ಭಾಷೆಯ ರಚನೆಯನ್ನು ಭಾಷಾ ಕಲಿಕೆ ಎಂಬ ಹೆಸರಿನಲ್ಲಿ

ತಿಳಿಸಿಕೊಡುವಂತಹ ಉದ್ದೇಶವೇ ಹೆಚ್ಚಾಗಿ ಕಂಡು ಬರುತ್ತದೆ. ಅಭ್ಯಾಸಗಳಲ್ಲಿ ವರ್ಣಮಾಲೆಯ ರಚನೆಯ ಕ್ರಮ. ಒತ್ತಕ್ಷರಗಳು, ದೀರ್ಘ, ಹ್ರಸ್ವ ಸ್ವರಗಳ ರಚನೆಯ ವಿಧಾನವನ್ನು ಪೂರ್ವ ಪ್ರಾಥಮಿಕ ಹಂತದಲ್ಲಿದ್ದರೆ. ಹಿರಿಯ ಪ್ರಾಥಮಿಕ ಹಂತದಲ್ಲಿ ಸಂಧಿ ರಚನೆ, ಸಮಾಸ ರಚನೆ, ವಾಕ್ಯದ ಭಾಗಗಳು ಎಂಬ ಇತ್ಯಾದಿ ಬಗೆಗಳ ರಚನೆಯ ದೃಷ್ಟಿಯನ್ನು ಇಟ್ಟುಕೊಂಡು ರಚಿಸಲಾಗಿದೆ. ಅಲ್ಪಪ್ರಾಣ, ಮಹಾಪ್ರಾಣ, ದೀರ್ಘ ಹ್ರಸ್ವಸ್ವರಗಳನ್ನು ಹೇಗೆ ಉಚ್ಚರಿಸಬೇಕು. ಮಕ್ಕಳಿಗೆ ಉಚ್ಚಾರಣೆಯ ಅಂಶಗಳ ಕಡೆಗೆ ಗಮನ ಕೊಡದೆ ನೇರವಾಗಿ ವರ್ಣಮಾಲೆಯ ರಚನೆಯನ್ನು ರೂಪ ಸಾಮ್ಯತೆಯ ಆಧಾರದ ಮೇಲೆ ಕಲಿಸುವ ಪ್ರಕ್ರಿಯೆ ನಡೆದಿದೆ. ಇಂತಹ ಪಠ್ಯ ಕ್ರಮದ ರಚನೆಗೆ ಶಿಫಾರಸ್ಸಿನ ಹೊಣೆಯನ್ನು ಒತ್ತುಕೊಳ್ಳುವವರು ಯಾರು? ಡಿ.ಎಸ್.ಇ.ಆರ್.ಟಿ. ನಿರ್ದೇಶಕರ ಜವಾಬ್ದಾರಿಯೇ? ಪಠ್ಯಪುಸ್ತಕ ನಿರ್ದೇಶನ ಮಂಡಳಿಯ ಅಧ್ಯಕ್ಷರೆ? ಅಥವಾ ಸದಸ್ಯರು ಹೊಣೆಗಾರರೇ? ಮನೋವಿಜ್ಞಾನಿಗಳ ಶಿಫಾರಸ್ಸಿನ ವೈಫಲ್ಯವೇ? ಶಿಕ್ಷಣ ತಜ್ಞರ ಅಥವಾ ಭಾಷಾ ತಜ್ಞರ ವೈಫಲ್ಯವೇ? ಇದಕ್ಕಿಂತ ಮಿಗಿಲಾಗಿ ಕಲಿಸುವ ಶಿಕ್ಷಕರ ತೊಂದರೆಗಳೇ? ಕಲಿಯುವವರ ಆಸಕ್ತಿ ಕೊರತೆಯೇ? ಏಕೆ ಇಂದಿನ ಮಕ್ಕಳು ಶೈಕ್ಷಣಿಕವಾಗಿ ಔಪಚಾರಿಕ ನೆಲೆಯಲ್ಲಿ ಉನ್ನತ ಮಟ್ಟದ ಶಿಕ್ಷಣ ತಲುಪಿದರು ಧ್ವನಿಗಳು ಹುಟ್ಟುವ ಬಗೆಯನ್ನು ಸರಿಯಾಗಿ ತಿಳಿದಿರುವುದಿಲ್ಲ. ಅಂದರೆ ಪ್ರಾಥಮಿಕ ಪಠ್ಯಕ್ರಮದಲ್ಲಿಯೇ ಇದರ ಸಮಸ್ಯೆಗಳಿವೆ ಎಂಬರ್ಥವನ್ನು ಮಾಡಿಕೊಳ್ಳಬೇಕಿದೆ. ಇದನ್ನು ಸರಿಪಡಿಸುವ ಅನುಕ್ರಮಣಿಕೆ ಪೂರ್ವ ಪ್ರಾಥಮಿಕ ಹಂತದಲ್ಲಿ ಆದರೆ ಮಾತ್ರ ಸುಧಾರಣೆಗಳು ಸಾಧ್ಯ ಎಂಬುದು ಇಂದಿನ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯನ್ನು ಅಧ್ಯಯನ ಮಾಡಿದಾಗ ಸ್ಪಷ್ಟವಾಗುತ್ತದೆ. ನಾವು ಕೇವಲ ರಚನೆಯ ದೃಷ್ಟಿಯಿಂದ ಮಾತ್ರ ಪಠ್ಯಗಳ ರಚನೆ ಮುಂದುವರಿದಿದೆ. ಉಚ್ಚಾರಣೆಯ ಸ್ಪಷ್ಟತೆಯನ್ನು ಕಳೆದುಕೊಳ್ಳುವುದರಲ್ಲಿ ಅನುಮಾನವೇ ಇಲ್ಲ. ಆಧುನಿಕತೆ ಎಂದು ಹೇಳಿಕೊಳ್ಳುತ್ತಿರುವ ನಾವು ಎಲ್ಲವನ್ನು ಆಧುನಿಕತೆಗೆ ಬೆನ್ನತ್ತಿ ಹೋಗುವುದಕ್ಕಿಂತ ಈ ಪಠ್ಯಗಳಿಂದ ಮಕ್ಕಳು ಕನ್ನಡ ವರ್ಣಮಾಲೆಯ ಉಚ್ಚಾರಣೆಯನ್ನು ಹೇಗೆ ಮತ್ತು ಎಷ್ಟನ್ನು ಕಲಿಯುತ್ತಾರೆ ಎಂಬುದು ಮುಖ್ಯ. ಆಧುನಿಕತೆ ಎಂಬ ಪದವನ್ನೇ ಇಟ್ಟುಕೊಳ್ಳೋಣ. ಈ ಪದವನ್ನು ಎಷ್ಟು ಜನ ಶಿಕ್ಷಕ ಶಿಕ್ಷಕಿಯರು ಸರಿಯಾಗಿ ಉಚ್ಚರಿಸುತ್ತಾರೆ ಎಂಬುದನ್ನು ಅರಿಯಬೇಕಾಗಿದೆ. ಇದು ನನ್ನ ಕುತೂಹಲ ಕೂಡ. ನಾನು ಕೇಳಿದ ಶಿಕ್ಷಕರ ಉಚ್ಚಾರಣೆಯು ಬಹುತೇಕವಾಗಿ ಆಧುನಿಕತೆಯನ್ನು 'ಅದುನಿಕತೆ' ಎಂದು ಉಚ್ಚರಿಸುವವರನ್ನು ಕಂಡಿದ್ದೇನೆ. ಅದರಲ್ಲಿ ಮುಖ್ಯವಾಗಿ ಈ ತಪ್ಪುಗಳನ್ನು ಮಾಡುವವರು ಇತ್ತೀಚೆಗೆ ಶಿಕ್ಷಕರ ವೃತ್ತಿಗೆ ತೊಡಗಿದವರು. ಇದು ಇವರ ಪ್ರಾಥಮಿಕ ಶಿಕ್ಷಣದಲ್ಲಿನ ದೋಷವೋ ಅಥವಾ ಕಲಿಯುವಿಕೆ ಯಲ್ಲಿನ ಸಮಸ್ಯೆಯೋ ಎಂದು ಪಠ್ಯಕ್ರಮದ ರಚನೆಯ ಮಂಡಳಿಯು ತಿಳಿಯುವುದು ಅತ್ಯಾವಶ್ಯಕ. ಉಚ್ಚಾರಣೆಗೆ ಸಂಬಂಧಿಸಿದಂತೆ ಎಷ್ಟನ್ನು ಹೇಳುತ್ತೇವೆ ಎನ್ನುವುದಕ್ಕಿಂತ ಏನನ್ನು ಹೇಳಿಕೊಡುತ್ತಿದ್ದೇವೆ ಎಂದು ತಿಳಿಯಬೇಕಿದೆ. ಮಗು ಈ ಪಠ್ಯಕ್ರಮದಿಂದ ಏನನ್ನು ಉಚ್ಚಾರಣೆಗೆ ಸಂಬಂಧಿಸಿದಂತೆ ಕಲಿಯುತ್ತಿದೆ ಮತ್ತು ಕಲಿತಿದೆ ಎಂದು ತಿಳಿದುಕೊಳ್ಳಬೇಕಿದೆ. ಪಠ್ಯಕ್ರಮಗಳು

ಉಚ್ಚಾರಣೆಯ ಸಂಬಂಧಿಸಿದಂತೆ ಬದಲಾವಣೆಯನ್ನು, ಮಾರ್ಪಾಡುಗಳನ್ನು ಮಾಡುವ ಮುಖಾಂತರ ಪಠ್ಯಗಳು ಪುನರ್ ರಚನೆಯಾಗಬೇಕು ಎಂಬುದು ಇಂದಿನ ಕನ್ನಡಭಾಷಾ ಪಠ್ಯಗಳನ್ನು ಮತ್ತು ಶಿಕ್ಷಕ ವಿದ್ಯಾರ್ಥಿಗಳನ್ನು ಗಮನಿಸಿದಾಗ ಸ್ಪಷ್ಟವಾಗುತ್ತದೆ.

ಒಂದು ಕಾಲಕ್ಕೆ ಕಲಿಸುವ ಭಾಷಾ ವರ್ಣಮಾಲೆಯಿಂದ ಪಾಠ ಪ್ರಾರಂಭವಾಗುತ್ತಿತ್ತು. ಭಾಷಾ ಬೋಧನೆಯಲ್ಲೂ ಆಧುನಿಕ ಸಂಶೋಧನೆಗಳು ನಡೆದು ಆಡುಮಾತಿನಲ್ಲೇ ಭಾಷಾ ಬೋಧನೆ ನಡೆಯಬೇಕೆಂಬುದು ಈಗ ಹೆಚ್ಚು ಸ್ವೀಕೃತವಾಗಿದೆ. ಇದಕ್ಕೆ ಕಾರಣ ಆಧುನಿಕ ಶಿಕ್ಷಣ ತಜ್ಞರ, ಮನೋವಿಜ್ಞಾನಿಗಳ, ಭಾಷಾ ತಜ್ಞರ ಒಲವುಗಳೇ ಎಂದು ಹೇಳಬಹುದು. ಆದರೆ ಪಠ್ಯಗಳಲ್ಲಿ ಇದನ್ನು ಪರಿಪೂರ್ಣವಾಗಿ ತರುವ ಪ್ರಯತ್ನಗಳು ವಿಫಲವಾಗಿರುವುದನ್ನು ಕಾಣುತ್ತೇವೆ. ಜೊತೆಗೆ ಈ ತರಹದ ತಿಳುವಳಿಕೆಗಳನ್ನು ನೀಡಲು ರಚಿತವಾಗಿರುವ ಪಠ್ಯಗಳು ಕೆಲವೊಮ್ಮೆ ಗೊಂದಲಗಳನ್ನು ಸೃಷ್ಟಿಸುತ್ತವೆ. ಹೇಗೆಂದರೆ ಕನ್ನಡ ಕಸ್ತೂರಿ ಐದನೇ ತರಗತಿಯ 'ತಲ್ಲಣಿಸದಿರು ಕಂಡ್ಯ' ಎಂಬ ಪದವನ್ನು, ಅಭ್ಯಾಸ ಚಟುವಟಿಕೆಯಲ್ಲಿ **(ಪುಟ೫೬)** ರುಪಾಯಿ ಎಂಬ ಪದವನ್ನು ಆಡುಮಾತಿನಂತೆ ಬಳಕೆಯಾಗಿದೆ. ಆದರೆ ಈ ಪದ್ಯದಲ್ಲಿ ಎಲ್ಲಿಯೂ ಈ ಪದ ಬಳಕೆಯಾಗಿಲ್ಲ, ಮಗು ಗ್ರಹಿಸಿ ಇದನ್ನೇ ಬರವಣಿಗೆಯಲ್ಲಿ ಬಳಕೆ ಮಾಡಿದರೆ ಬರವಣಿಗೆ ದೋಷವೆಂದು ತಿಳಿದು ಮೌಲ್ಯಮಾಪನ ಮಾಡುವ ಶಿಕ್ಷಕರು ತಪ್ಪೆಂದು ಗ್ರಹಿಸುವ ಸಾಧ್ಯತೆಗಳು ಹೆಚ್ಚಾಗಿರುತ್ತವೆ. ಅದಕ್ಕಾಗಿ ಮಗುವಿಗೆ ಮೊದಲು ಬರವಣಿಗೆ ಭಾಷೆ, ಮಾತನಾಡುವ ಭಾಷೆ ಎಂದು ಬೇರ್ಪಡಿಸಿ ಹೇಳುವುದು ಉಚಿತವೆನಿಸುವುದಿಲ್ಲ. ಆದ್ದರಿಂದ ಇಂತಹ ಪದಗಳ ಧ್ವನಿಗಳ ವಾಕ್ಯಗಳನ್ನು ಕೊಡುವ ಪಠ್ಯಪುಸ್ತಕ ಸಮಿತಿ ಪಠ್ಯರಚನೆ ಕೊಡುವಾಗ ಸ್ಪಷ್ಟೀಕರಣ ಕೊಡುವುದು ಬಹಳ ಮುಖ್ಯವೆನಿಸುತ್ತದೆ.

೧ನೇ ತರಗತಿಯ ಮೊದಲ ಪದ್ಯ ಠಣ್! ಠಣ್! ಠಣ! ಎಂಬ ಪದ್ಯವನ್ನು ಕೊಡಲಾಗಿದೆ. ಈ ಪದ್ಯ ಕೊಟ್ಟಿರುವ ಉದ್ದೇಶ ಧ್ವನಿಯ ಬಗ್ಗೆ ತಿಳುವಳಿಕೆಯನ್ನು ನೀಡಲು ಕೊಟ್ಟಿರುವಂತೆ ಕಂಡು ಬರುತ್ತದೆ. ಮಗು ಈಗ ತಾನೆ ಮನೆಯ ಪರಿಸರವನ್ನು ಬಿಟ್ಟು ಶಾಲೆಯ ಪರಿಸರದ ಆವರಣಕ್ಕೆ ಬಂದಿದೆ. ಪ್ರಾರಂಭದಲ್ಲಿಯೇ ಇಂತಹ ಧ್ವನಿ ರಚನೆಯನ್ನು ಕೊಡುವ ಅವಶ್ಯಕತೆಯಾದರೂ ಏನೂ? ಎಂಬ ಪ್ರಶ್ನೆಯನ್ನು ಹಾಕಿಕೊಳ್ಳಬೇಕಾಗಿದೆ. ಠಣ್! ಠಣ್! ಠಣ! ಎಂಬ ಪದಗಳ ಬಳಕೆ ಇಲ್ಲಿ ಆಗಿದೆ. 'ಠ' ಎಂಬ ವರ್ಣ ಮತ್ತು ಣ್ ಣ ಗಳ ಉಚ್ಚಾರಣೆ ಮಗುವಿನಲ್ಲಿ ಅಂದರೆ ಮನೆಯ ಪರಿಸರದಲ್ಲಿ ದಿನಕ್ಕೆ ಎಷ್ಟು ಬಾರಿ ಬಳಸುತ್ತಿದೆ ಎಂಬುದನ್ನು ತಿಳಿದು ಕೊಡುವುದು ಅವಶ್ಯಕವೆನಿಸುತ್ತದೆ. ಏಕೆಂದರೆ 'ಠ' ಎಂಬ ಮಹಾಪ್ರಾಣಕ್ಷರ ಜೊತೆಗೆ 'ಣ್' ವ್ಯಂಜನ ಸೇರಿಸಿ ಪದ ರಚನೆಯಾಗಿರುವುದರಿಂದ ಮಗು ಉಚ್ಚರಿಸಲು ಬಾರದೆ, **ಟಣ್** ಎಂದು ಬಳಕೆ ಮಾಡುವ ಸಾಧ್ಯತೆಗಳು ಹೆಚ್ಚಾಗಿರುತ್ತವೆ. ಅದಕ್ಕಾಗಿ ಇಲ್ಲಿ ಸರಳವಾದ ಪದ್ಯದ ಅವಶ್ಯಕತೆ ಕಾಣುತ್ತದೆ. ಇದೇ ಪದ್ಯದಲ್ಲಿಯೇ ತಕಾ! ತಕ್ಕ್! ತಕ್ಕ! ಎಂಬುದನ್ನು ಕ್ರಮವಾಗಿ ಕೊಡಲಾಗಿದೆ. ದೀರ್ಘಕ್ಷರ ನಂತರ ಎರಡು ಬಾರಿ

ಒತ್ತಕ್ಷರದ ಪದ ಬಳಕೆಯಾಗಿದೆ. ಇದರಿಂದ ಮಗು ಸರಳವಾಗಿ ಉಚ್ಚರಿಸುವುದು ಕಷ್ಟವೇ ಎಂದರೆ ತಪ್ಪಾಗಲಾರದು. ಪದಪಾಠ ೮ರಲ್ಲಿ ಪದ ಓದು ಅಕ್ಷರ ಕಲಿ ಎಂಬಲ್ಲಿ 'ರ ಗ ಸ ದ ಅ' ಎಂಬ ಅಕ್ಷರ ಜೊತೆಗೆ ಈ ವರ್ಣಕ್ಕೆ ಸಂಬಂಧಿಸಿದ ಪದವನ್ನು ಕೊಡಲಾಗಿದೆ. ಇಲ್ಲಿ ರೂಪ ಸಾಮ್ಯತೆಯ ದೃಷ್ಟಿಯನ್ನು ಇಟ್ಟುಕೊಂಡು ರಚಿಸಲಾಗಿದೆ. ಮಗು 'ರ' ವರ್ಣ ಕಲಿತ ಮೇಲೆ 'ಗ' ರಚನೆ ಮಾಡುವುದು ಸುಲಭವಾದರೂ, ಮಗು ಹುಟ್ಟಿದಾಗ ಮೊದಲು 'ಅ' ವರ್ಣವನ್ನು ಕಲಿಯುತ್ತಾದರೂ 'ರ' ವರ್ಣವಲ್ಲ. ಅಕ್ಷರ ರಚನೆಯ ದೃಷ್ಟಿಯಿಂದ ಈ ಪಾಠ ಉಪಯುಕ್ತವಾಗಬಲ್ಲದೇ ಹೊರತು ಬೇರೆ ಯಾವುದಕ್ಕೂ ಅಲ್ಲ. ಅ, ಆ, ಇ, ಈ .................. ರಚನೆಯ ದೃಷ್ಟಿಯಲ್ಲಿ ಭಿನ್ನ ಭಿನ್ನವಾಗಿದ್ದರೂ ಉಚ್ಚಾರಣೆಯ ದೃಷ್ಟಿಯಲ್ಲಿ ಕ್ರಮಾನುಗತಿಯಲ್ಲಿ ಕಲಿಯುತ್ತೇವೆ ಆಧುನಿಕ ಸಂದರ್ಭಕ್ಕೆ ಒಳಪಟ್ಟು ಈ ಬದಲಾವಣೆಗಳನ್ನು ತರಲಾಗಿದೆ. ಆದರೆ ಮಗುವಿಗೆ ಏನನ್ನೂ ಕ್ರಮಾನುಗತಿಯಿಂದ ಹೇಳಿ ಕೊಡುವುದು ಕಷ್ಟವಾಗುತ್ತದೆ. ಜೊತೆಗೆ ನಾವು ರಚನೆಯ ವಿಧಾನವನ್ನು ಮಾತ್ರ ಹೇಳಿದಂತಾಗುತ್ತದೆ. 'ಅ' ವರ್ಣ ಕಲಿತ ಮಗುವಿಗೆ 'ಆ' ಕಲಿಯುವುದು ಕಷ್ಟವಾಗುದಿಲ್ಲ. ಆದ್ದರಿಂದ ಮೊದಲು ಸರಳ ಸ್ವರದಿಂದ ಪ್ರಾರಂಭವಾದರೆ ಒಳ್ಳೆಯದು ಎಂದೆನಿಸುತ್ತದೆ. ಏಕೆಂದರೆ ಮಗು ಹೆಚ್ಚಾಗಿ ಸ್ವರಗಳನ್ನು ಬಳಸುತ್ತಿರುತ್ತದೆ. ಇದರಿಂದ ಸರಳತೆಯಿಂದ ವಿಶಿಷ್ಠತೆಯ ಕಡೆಗೆ ಕೊಂಡೊಯ್ಯಲು ಸಹಾಯಕ. ಇದರ ಜೊತೆಗೆ ಮಗು ತನ್ನ ಕುಟುಂಬದ ಪರಿಸರದಲ್ಲಿ ಸಂಬಂಧವಾಚಕ ಶಬ್ದಗಳಾದ ಅಕ್ಕ, ಅಣ್ಣ, ತಂಗಿ, ಅಜ್ಜ, ಅವ್ವ, ಅಬ್ಬೆ, ಅಜ್ಜಿ, ಅತ್ತೆ ಇತ್ಯಾದಿಯನ್ನು ಕಲಿತು ಉಚ್ಚರಿಸುತ್ತದೆ. ಆದ್ದರಿಂದ ಮಗುವಿಗೆ ಯಾವ ವಿಧಾನದಿಂದ  ಕಲಿಸಿದರೆ ಸೂಕ್ತ ಎಂಬು ದನ್ನು ತಿಳಿಯಬೇಕಾಗಿದೆ. ಅಲ್ಲದೆ ರ, ಗ, ಸ, ದ, ಅ,  ಓದುವಾಗ ಇಲ್ಲಿ ಧ್ವನ್ಯಾಂಗಗಳು ಹೊಂದುವುದಿಲ್ಲ. ಶಿಕ್ಷಕರು ರ, ಗ, ಸ, ದ, ಅ, ಎಂದು ಓದುವಾಗ 'ರಾ ಗಾ ಸಾ ದ ಅ' ಎಂದು ಓದುವ ಶಿಕ್ಷಕರು ಉಂಟು. ಆದ್ದರಿಂದ 'ಅ' ವರ್ಣಗಳಿಂದ ಪಾಠಗಳು ಪ್ರಾರಂಭವಾಗುವುದು ಸೂಕ್ತವೆನಿಸುತ್ತದೆ. ಇದು ವೈಜ್ಞಾನಿಕವಾಗಿ ಸತ್ಯವೆಂದಿನಿಸುತ್ತದೆ. ಏಕೆಂದರೆ ಹುಟ್ಟಿದ ತಕ್ಷಣ ಮಗು 'ಅವ್ವ' ಎನ್ನುವ ವರ್ಣದ ಬಳಕೆಯಾಗುತ್ತದೆ. ಈ ಧ್ವನಿಗಳನ್ನು ಮಗು ಅಳುವುದರಲ್ಲಿಯೂ ಕಾಣುತ್ತೇವೆ. ಇದರ ಬಗ್ಗೆ ಸಧೃಡ ನಿಲುವು ತೆಗೆದುಕೊಳ್ಳುವುದು ಸೂಕ್ತ. ಈ ತರಹದ ರೂಪ ಸಾಮ್ಯತೆಯ ಪದ್ಧತಿ ಈ ಪಠ್ಯದುದ್ದಕ್ಕೂ ನಡೆದಿದೆ.

ಗುಣಿತಾಕ್ಷರ ಪರಿಚಯ ಸಹ ರಚನೆಯ ಹಿನ್ನೆಲೆಯಲ್ಲಿ ಹೇಳಿ ಕೊಡುವ ಪ್ರಯತ್ನ ನಡೆದಿದೆ. ಉಚ್ಚಾರಣೆಯ ವಿಧಾನಕ್ಕೆ ಆದ್ಯತೆ ನೀಡಿಲ್ಲ. ಮಗು ಸ್ವರ ಸಂಕೇತಗಳಾದ

---------------------------------------------------------------

ರಚನೆಯನ್ನು ಕಲಿಯುವ ಯೋಜನೆ ಇದೆ ಉಚ್ಚಾರಣೆ ಎಲ್ಲಿಯೂ ಅವಕಾಶವಿಲ್ಲ.

ಈ ಸಂಕೇತಗಳ ಹೆಸರಿನ ಸ್ಪಷ್ಟತೆ ತಿಳಿಸುವ ಪ್ರಯತ್ನಗಳು ಈ ಪ್ರಾಥಮಿಕ ಪಠ್ಯಕ್ರಮಗಳಲ್ಲಿ ಎಲ್ಲಿಯೂ ನಡೆದಿಲ್ಲ. ಈ ದೋಷದಿಂದಲೇ ಪಠ್ಯಗಳ ಬರವಣಿಗೆಯಲ್ಲಿ, ಓದುವಲ್ಲಿ,

ಒತ್ತಕ್ಷರ, ದೀರ್ಘಾಕ್ಷರ, ಸ್ವರ, ವ್ಯಂಜನಗಳಲ್ಲಿ ಸ್ಪಷ್ಟವಾಗಿ ಉಚ್ಚರಿಸುವವರನ್ನು, ಬರೆಯುವವರನ್ನು ಕಾಣುವುದು ವಿರಳವಾಗುತ್ತಿದೆ. ಇಲ್ಲಿ ಕುರುಡು ಕಂಠಪಾಠದ ವ್ಯವಸ್ಥೆ ನಡೆದಿದೆಯೇ ಹೊರತು ಅರ್ಥಪೂರ್ಣವಾದ ಕಂಠಕ್ಕೆ ಪಾಠದ ವ್ಯವಸ್ಥೆಯು ದೂರ ಉಳಿದಿದೆ. ಮಗುವಿಗೆ ಏನನ್ನು ಹೇಳಿಕೊಡುತ್ತಿದ್ದೇವೆ ಎನ್ನುವುದಕ್ಕಿಂತ ಏನನ್ನು ' ಕಲಿಯಲು ಪ್ರೇರಣೆ ನೀಡಲಾಗಿದೆ ಎಂಬುದು ಮುಖ್ಯ.

ಎರಡನೇ ತರಗತಿಯ ಪಠ್ಯದಲ್ಲಿ ಪುಟ ೪೩ರಲ್ಲಿ ವಿರಳ ಅಕ್ಷರಗಳನ್ನು ಓದಿ ಎಂದು ಭಾಷಾ–ಚಟುವಟಿಕೆಯಲ್ಲಿ ಕೇಳಲಾಗಿದೆ. ಮಗುವಿಗೆ ಮೊದಲು 'ವಿರಳ' ಎಂಬ ಪದದ ಅರ್ಥವಾದರೂ ಏನು ? ಈಗಾಗಲೇ ಈ ಪದವನ್ನು ಅರಿತಿದೆಯೇ ಎಂಬುದು ಮುಖ್ಯ. ಮಗುವಿಗೆ ಈ ಹಂತದಲ್ಲಿ ಅಕ್ಷರಗಳ ಉಚ್ಚಾರಣೆ ಮತ್ತು ಅವುಗಳ ರಚನೆಯ ಕ್ರಮವನ್ನು ಮೊದಲು ತಿಳಿಸಬೇಕು. ಇಂತಹ ಪ್ರಶ್ನೆಗಳು ೫ನೇ ತರಗತಿಯ ಮೇಲ್ಪಟ್ಟು ಇದ್ದರೆ ಒಳ್ಳೆಯದು. ಮೊದಲು ಮಗುವಿಗೆ ಕನ್ನಡದ ಎಲ್ಲಾ ವರ್ಣಗಳ ಪರಿಚಯವು ಉಚ್ಚಾರಣೆ ಮತ್ತು ಬರವಣಿಗೆಯ ಮುಖಾಂತರವಾದರೆ ಆಲಿಸುವ ಮತ್ತು ಓದುವ, ಕೌಶಲಗಳು ವೃದ್ಧಿಯಾಗುತ್ತವೆ. ಅದಕ್ಕಾಗಿ ಮೊದಲು ಪರಿಪೂರ್ಣವಾದ ಕನ್ನಡ ವರ್ಣಮಾಲೆಯ ಪರಿಚಯ ಅವಶ್ಯಕ. ಎಂಬುದು ಈ ಅಧ್ಯಯನದಿಂದ ತಿಳಿದು ಬರುತ್ತದೆ.

ಮಕ್ಕಳಿಗೆ ಒಂದು ವರ್ಷ ತುಂಬುವುದರೊಳಗೆ ದೊಡ್ಡವರು ಹೇಗೆ, ಬೇರೆ ಬೇರೆ ಅರ್ಥಗಳನ್ನು ಧ್ವನಿಸಲು ಶಬ್ದಗಳನ್ನು ಬಳಸುತ್ತಾರೆಂಬುದರ ಬಗ್ಗೆ ಸಾಕಷ್ಟು ತಿಳುವಳಿಕೆ ಇರುತ್ತದೆ. ಆದರೆ ತಾವೇ ಸ್ವತಃ ಆ ಶಬ್ದಗಳನ್ನು ಉತ್ಪಾದಿಸುವಲ್ಲಿ ಹಿಂದೆ ಬೀಳುತ್ತಾರೆ.

ಒಂದು ವರ್ಷ ತುಂಬಿದ ಕೆಲವು ಮಕ್ಕಳು ವ್ಯಾಪಕವಾಗಿ ಸ್ವರ ಮತ್ತು ವ್ಯಂಜನಗಳನ್ನು ಒಳಗೊಂಡಿರುವ ಪದಗಳನ್ನು ಗುರುತಿಸುತ್ತವೆ. ತಾವೇ ಪದಗಳನ್ನು ಉಚ್ಚರಿಸುವಾಗ ಅವುಗಳ ಸಾಮರ್ಥ್ಯ, ಕೇವಲ ಒಂದು ಅಥವಾ ಎರಡು ವ್ಯಂಜನಗಳು ಮತ್ತು ಒಂದು ಸ್ವರವನ್ನು ಒಳಗೊಂಡಿರುವ ಪದಗಳಿಗೆ ಸೀಮಿತವಾಗಿರುತ್ತದೆ. ಸಾಮಾನ್ಯವಾಗಿ ಹದಿಮೂರು ತಿಂಗಳ ಮಗುವಿಗೆ (B) (D) ಮತ್ತು (N) ಧ್ವನಿಗಳನ್ನು ಮಾತ್ರ ಉಚ್ಚರಿಸಲು ಸಾಧ್ಯವಾಗುತ್ತದೆ. ಈ ಧ್ವನಿಗಳನ್ನು ಮಾತ್ರ ಉಚ್ಚರಿಸಲು ಸಾಧ್ಯವಾಗುತ್ತದೆ. ಈ ಧ್ವನಿಗಳನ್ನೇ ಅನೇಕ ವಿವಿಧ ಪದಗಳನ್ನು ಉಚ್ಚರಿಸಲು ಉಪಯೋಗಿಸುತ್ತದೆ. ಉದಾಹರಣೆಗೆ (ಬಾ) ಎನ್ನುವ ಶಬ್ದವನ್ನು 'ಬಾ' ಎಂದು ಕರೆಯಲು ನನಗೆ ಬೇಡ ಎನ್ನಲು ಹೊರಗೆ ಹೋಗೋಣ ಬಾ ಎನ್ನಲು ಉಪಯೋಗಿಸಬಹುದು.

ಹದಿನೈದು ತಿಂಗಳು ತುಂಬುವ ಹೊತ್ತಿಗೆ (M) (P) ಮತ್ತು (V) ಧ್ವನಿಗಳು ಮಗುವಿನ ಶಬ್ದ ಭಂಡಾರದೊಳಗೆ ಸೇರಿಕೊಳ್ಳುತ್ತವೆ. ಅದರೊಂದಿಗೆ ಮಗುವಿಗೆ ಹೆಚ್ಚು ಹೆಚ್ಚು ಪದಗಳನ್ನು ಗುರುತಿಸಲು, ಉಚ್ಚರಿಸಲು ಸಾಧ್ಯವಾಗುತ್ತದೆ. ಆದ್ದರಿಂದ ಶಾಲೆಗೆ

ಸೇರಿದ ಪ್ರಾರಂಭದ ದಿನಗಳಲ್ಲಿ ಮಗುವಿಗೆ ಇಂತಹ ಪದಗಳು ಪಠ್ಯಗಳಲ್ಲಿ ರಚನೆಯಾಗಬೇಕು. 'ಎರಡು ವರ್ಷ ತುಂಬುವ ಹೊತ್ತಿಗೆ ಮಗು ಸಾಕಷ್ಟು ಸ್ವರ ಮತ್ತು ವ್ಯಂಜನಗಳನ್ನು ಉಪಯೋಗಿಸಲು ಕಲಿತಿರುತ್ತದೆ. ಸುಮಾರು ಇನ್ನೂರು ಪದಗಳನ್ನು, ಅರ್ಥವಾಗುವ ರೀತಿಯಲ್ಲಿ ಉಚ್ಚರಿಸುವ ಸಾಮರ್ಥ್ಯ ಹೊಂದಿರುತ್ತದೆ.' ಎಂದು **ಡಾ.ಕೆ.ವಿ.ನಾರಾಯಣರವರು ಕಲಿಕೆಯ ವಿವಿಧ ಹಂತಗಳು ಎಂಬ ಲೇಖನದಲ್ಲಿ ಹೇಳುತ್ತಾರೆ.**

ಪಠ್ಯಗಳಲ್ಲಿ ಮಕ್ಕಳ ಧ್ವನಿ ಬೆಳೆವಣಿಗೆಯ ಬಗ್ಗೆ ಯಾವ ಹಿನ್ನೆಲೆಯೂ ಇಲ್ಲದೆ ಸ್ಪಷ್ಟವಾದ ರೀತಿಯಲ್ಲಿ ರಚನೆಯ ಕೊರತೆಗಳು ಕಂಡು ಬರುತ್ತವೆ. ಈ ಪಠ್ಯಗಳಲ್ಲಿ ಮೊದಲು ಸ್ವರಗಳ ಜ್ಞಾನ ಸ್ಪಷ್ಟವಾಗ ಬೇಕು ಮತ್ತು ಪುನರಾವರ್ತನೆಯಾಗಿರಬೇಕು. ಮೊದಲ ಎರಡು ತರಗತಿಗಳಲ್ಲಿ ಸ್ವರಗಳು ಏಕ ಪ್ರಕಾರವಾಗಿ ಹೆಚ್ಚಾಗುತ್ತಾ ಹೋಗಬೇಕು. ಇದು ಉಚ್ಚಾರಣೆಗೆ ಸಹಾಯಕವಾಗಿರಬೇಕು. ಮೂರನೇ ತರಗತಿ ತಲುಪುವ ವೇಳೆಗೆ ಸ್ವರಗಳ ಉಚ್ಚಾರಣೆ ಜೊತೆಗೆ ವ್ಯಂಜನಗಳಿಗೆ ಸ್ಪಷ್ಟತೆ ನೀಡುವ ಕಾರ್ಯವಾಗಬೇಕು.

ಯಾಕೊಬ್ಸನ್ (೧೯೬೮) ರವರ ಪ್ರಕಾರ, ಧ್ವನಿಗಳ ಬೆಳವಣಿಗೆ ಎಲ್ಲಾ ಭಾಷಾ ಪರಿಸರಗಳಲ್ಲೂ ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿರುತ್ತದೆ. ಮಕ್ಕಳು ಸಾಮಾನ್ಯವಾಗಿ, ಎಲ್ಲಾ ಭಾಷೆಗಳಲ್ಲೂ ಕಂಡು ಬರುವ ಧ್ವನಿಗಳನ್ನು ಮೊದಲು ಉಚ್ಚರಿಸುತ್ತವೆ. ಒಂದು ಭಾಷೆಯಲ್ಲಿ ಮಾತ್ರ ಕಾಣುವ ವಿಶಿಷ್ಟ ಧ್ವನಿಗಳನ್ನು ತಡವಾಗಿ ಉಚ್ಚರಿಸುತ್ತವೆ. ಮಕ್ಕಳ ಉಚ್ಚಾರಣೆಯಲ್ಲಿ ಸಾರ್ವತ್ರಿಕವಾಗಿ ಕಂಡು ಬಂದಿರುವ ಅಂಶವೇನೆಂದರೆ, ಮಕ್ಕಳು ಮೊದಲು ಸ್ವರಗಳನ್ನು ಉಚ್ಚರಿಸುತ್ತವೆ ಆನಂತರ ವ್ಯಂಜನಗಳು (M) (P) ಮತ್ತು (B) ಕಾಣಿಸಿಕೊಳ್ಳುತ್ತವೆ ಎಂದು ಕೆ.ವಿ.ಎನ್. ಅಭಿಪ್ರಾಯ ಪಡುತ್ತಾರೆ. **(ಭಾಷಾ ವಿಶ್ವಕೋಶ-ಪುಟ-೨೩೫)**

ಈ ಮೇಲಿನ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಹೇಳುವುದಾದರೆ ಸ್ವರದ ತಿಳುವಳಿಕೆ ಮೊದಲಾಗುತ್ತದೆ ಎಂದಾಯಿತು. ಆದ್ದರಿಂದ ಪ್ರಾಥಮಿಕ ಕನ್ನಡ ಪಠ್ಯಗಳಲ್ಲಿ ಧ್ವನಿಗೆ ಸಂಬಂಧಿಸಿದಂತೆ ಪಾಠ. ಪದ್ಯ ಅಭ್ಯಾಸ ಚಟುವಟಿಕೆಗಳು ಸ್ವರಗಳಿಂದ ಪ್ರಾರಂಭವಾಗುವುದು ಸೂಕ್ತವೆನಿಸುತ್ತದೆ.

ಡಾ.ಕೆ.ವಿ.ನಾರಾಯಣರವರು ಶಾಲಾ ಪಠ್ಯಪುಸ್ತಕಗಳನ್ನು ನೋಡಿದರೆ ಭಾಷಾ ಕಲಿಕೆಯಲ್ಲಿ, ಭಾಷೆಯ ರಚನೆಯನ್ನು ತಿಳಿಸಿಕೊಡುವ ಉದ್ದೇಶವೇ ಮೇಲುಗೈ ಪಡೆದಿರುವುದು ಗೊತ್ತಾಗುತ್ತದೆ. ಎಂದಿದ್ದಾರೆ. ಅಭ್ಯಾಸಗಳಲ್ಲಿ ಸಂಧಿ ರಚನೆ, ಸಮಾಸದ ರಚನೆ ವಾಕ್ಯದ ಭಾಗಗಳು, ಬಗೆಗಳು ಇತ್ಯಾದಿಗಳನ್ನು ವಿಶ್ಲೇಷಕ ವಿಧಾನದಲ್ಲಿ ತಿಳಿಯಲು ಪ್ರೇರೇಪಿಸುವ ಮಾಹಿತಿ ಇರುತ್ತದೆ. ಸಂಧಿ, ಸಮಾಸಗಳ ಹೆಸರು ಅವುಗಳ ರಾಚನಿಕ ನಿಯಮಗಳನ್ನು ಕಲಿಸಿಕೊಡುವ ಯತ್ನ ಮುಖ್ಯವಾಗುತ್ತದೆ. ವಿದ್ಯಾರ್ಥಿಗಳು ಭಾಷೆಯ ಪ್ರಮಾಣರೂಪಗಳನ್ನು ಬರೆಯಲು, ಓದಲು, ಕಲಿಯುತ್ತಿರುವಾಗಲೇ ಆ ರಚನೆಗಳನ್ನು ಚರ್ಚಿಸುವ ಪರಿಭಾಷೆಯೊಂದನ್ನು

ಕಲಿಯುವುದು ಅವಶ್ಯವಾಗಿದೆ. ಈ ರಚನೆಯ ಕಲಿಕೆಯಲ್ಲಿ ಭಾಷೆಯನ್ನು ಇಡಿಯಿಂದ ಬಿಡಿಯಾಗಿ ಒಡೆದು ತೋರಿಸಿಕೊಡುವುದು ಮುಖ್ಯವಾಗಿರುತ್ತದೆ. ಭಾಷೆಯ ರೂಪಗಳನ್ನು ಕಟ್ಟುವುದನ್ನು ಕಲಿಸುವ ಪ್ರಯತ್ನಕ್ಕಿಂತ ಕಟ್ಟಿದ ರೂಪಗಳನ್ನು ಚಿಕ್ಕ ಚಿಕ್ಕ ಘಟಕಗಳನ್ನಾಗಿ ವಿಭಜಿಸಿ ನೋಡುವುದನ್ನು ಕಲಿಸುವುದಕ್ಕೆ ಒತ್ತು ಹೆಚ್ಚಾಗಿರುತ್ತದೆ ಎಂದು ಅಭಿಪ್ರಾಯಪಡುತ್ತಾರೆ.

ಶಾಲಾ ಭಾಷಾ ಕಲಿಕೆಯ ಪಠ್ಯಗಳನ್ನು ಮತ್ತು ಕಲಿಕೆಯ ವಿಧಾನವನ್ನು ಟೀಕಿಸುವ ಚಿಂತನಾ ಕ್ರಮವೂ ಬೆಳೆದಿದೆ. ಇಂಥ ಕಲಿಕೆಗಳು ಬಳಕೆಯ ಭಾಷೆಯ ವೈವಿಧ್ಯಗಳನ್ನು ತಿಳಿಸಿ ಕೊಡುವುದಿಲ್ಲವೆಂಬುದು ಟೀಕೆಯ ಮುಖ್ಯ ತಿರುಳನ್ನು ನೋಡುತ್ತೇವೆ. ಅದರಲ್ಲೂ ಆಡು 'ಮಾತಿನ ವಿವಿಧ ಬಗೆಗಳು ನಿತ್ಯದ ಹಲವಾರು ಪ್ರಸಂಗಗಳಲ್ಲಿ ಹೇಗೆ ರೂಪ ತಾಳುತ್ತವೆ. ಅಂಥ ರೂಪಗಳನ್ನು ಬಳಸುವ ಸಾಮರ್ಥ್ಯವನ್ನು ಹೇಗೆ ಗಳಿಸಿಕೊಳ್ಳುವುದು ಎಂಬಿವೇ ಪ್ರಶ್ನೆಗಳಿಗೆ ಉತ್ತರ ನೀಡಲು ಮೇಲಿನ ಕಲಿಕೆಯ ವಿಧಾನ ಅಶಕ್ತವಾಗಿದೆ. ಆದ್ದರಿಂದ ಇಂದಿನ ಕನ್ನಡ ಭಾಷಾ ಪಠ್ಯಗಳು ವಿದ್ಯಾರ್ಥಿಗಳಿಗೆ ಭಾಷಾ ಕಲಿಕೆಯ ಕ್ರಮದಲ್ಲಿ ಬಳಕೆಯ ಬಗೆಗಳನ್ನು ತಿಳಿಯಲು ಆ ಕುರಿತು ಸಾಮರ್ಥ್ಯವನ್ನು ಪಡೆಯಲು ಸಾಧ್ಯವಾಗುವುದಿಲ್ಲ ಎಂಬುದನ್ನು ಕಾಣಬಹುದು.

ಈ ಕೊರತೆಯನ್ನು ನಿವಾರಿಸಲು ಭಾಷಾ ಬಳಕೆಯನ್ನು ಆಧರಿಸಿದ ಕಲಿಕೆಯ ವಿಧಾನವನ್ನು ರೂಪಿಸಿಕೊಂಡು ಅದನ್ನು ಶಾಲೆಗಳಲ್ಲಿ ಜಾರಿಗೆ ನೀಡುವ ಪ್ರಯತ್ನಗಳು ನಿಯಮದಡಿಯಲ್ಲಿ ಜಾರಿಗೆ ಬಂದಿವೆ. ಆದರೆ ಕಾರ್ಯಗತದ ಪ್ರಯತ್ನದಲ್ಲಿ ಪಠ್ಯಗಳ ರಚನೆಯ ವ್ಯವಸ್ಥೆಯಲ್ಲಿ ವಿಫಲವಾಗಿದೆ. ದಿನ ನಿತ್ಯದ ಹಲವಾರು ಪ್ರಸಂಗಗಳಲ್ಲಿ ಬಳಕೆಯಾಗುವ ಭಾಷಾ ಮಾದರಿಗಳು ಕಲಿಕೆಗೆ ನೆರವಾಗುವ ಪಠ್ಯಗಳಾಗಬೇಕು. ಅವುಗಳನ್ನು ಬಳಸಿ ವಿದ್ಯಾರ್ಥಿಗಳು ಭಾಷಾ ವೈವಿಧ್ಯತೆಗಳ ಪರಿಚಯ ಪಡೆಯುತ್ತಾರೆ. ಜೊತೆಗೆ ಅಂಥ ಪ್ರಸಂಗಗಳಲ್ಲಿ ಭಾಷೆಯನ್ನು ತಕ್ಕಂತೆ ಬಳಸಲು ಕಲಿಯುತ್ತಾರೆ. ಈ ಕಲಿಕೆಯಿಂದಾಗಿ ಅವರ ಭಾಷಾ ಸಾಮರ್ಥ್ಯ ಹೆಚ್ಚು ಸಮಗ್ರವಾಗುತ್ತದೆ.

ಶಾಲೆಯ ಭಾಷಾ ಕಲಿಕೆಯಲ್ಲಿ ಬರುವ ಒಂದು ಮುಖ್ಯ ಅಂಗವೆಂದರೆ ಓದುವುದನ್ನು ಕಲಿಸುವುದು ಆಗಿದೆ. ಹಾಗಾದರೆ ಓದುವುದು ಎಂದರೇನು? ಎಂಬ ಪ್ರಶ್ನೆ ನಮ್ಮಲ್ಲಿ ಮನನ ಮಾಡಿಕೊಳ್ಳಬೇಕಾಗಿದೆ. ನಮ್ಮ ತಿಳುವಳಿಕೆಯ ಪ್ರಕಾರ ಲಿಪಿ ರೂಪದಲ್ಲಿ ಸಂಕೇತೀಕರಣ ಗೊಂಡ ಮಾತನ್ನು ವಿಸಂಕೇತಿಸಿ ಮರಳಿ ಪಡೆಯುವುದರ ಕುರಿತು ಹೇಳುವುದನ್ನು ಓದು ಎನ್ನಬಹುದು. ಇದೊಂದು ಭಾಷಾ ಕೌಶಲ, ಶಾಲೆಗಳಲ್ಲಿ ಸಾಮಾನ್ಯವಾಗಿ ಓದುವ ಅಭ್ಯಾಸವನ್ನು ಪರಿಚಯಿಸಲು ಅಥವಾ ಓದುವುದನ್ನು ಕಲಿಸಲು ಮೊದಲು ಮಾಡಿದಾಗ ಬರವಣಿಗೆಯ ಸಂಕೇತಗಳನ್ನು ಲಿಪಿಗಳನ್ನು ಪರಿಚಯ ಮಾಡಿಕೊಡುತ್ತಾರೆ. ಆನಂತರ ಲಿಪಿ ಸಂಯೋಜನೆಯ ನಿಯಮಗಳನ್ನು ಕಲಿಯುವ ರೀತಿಯಲ್ಲಿ ಪಠ್ಯಗಳನ್ನು ರಚನೆ ಮಾಡಲಾಗಿದೆ. ಈ ಸಂಯೋಜಿತ

ರೂಪದಿಂದ ಉಚ್ಚಾರಣೆಯನ್ನು ಅರಿಯುವ ನಿಯಮಗಳನ್ನು ಕಲಿಯ ಬೇಕಾಗುತ್ತದೆ. ಮೇಲು ನೋಟಕ್ಕೆ ಇದು ಸರಳವಾದ, ಸಾಮಾನ್ಯವಾದ ಅಂಶವೆಂದು ಕಂಡು ಬಂದರೂ ವಾಸ್ತವವಾಗಿ ಹಾಗಿಲ್ಲ. ಕನ್ನಡದ ನಿದರ್ಶನವೊಂದನ್ನು ಗಮನಿಸಿ, ಕನ್ನಡ ಲಿಪಿ ಸಂಯೋಜನೆ ಎಡದಿಂದ (ಓದುವವರ) ಬಲಕ್ಕೆ ಸಾಗುತ್ತದೆ. ಬಹುಮಟ್ಟಿಗೆ ರೇಖಾತ್ಮಕ. ಆದರೆ ಮಕ್ಕಳಿಗೆ ಲಿಪಿಕರಣದಿಂದ ಉಚ್ಚಾರಣೆಯನ್ನು ಗ್ರಹಿಸುವ ನಿಯಮವನ್ನು ತಿಳಿಯದ ಹೊರತು 'ಓದುವುದು' ಕ್ರಮಬದ್ಧವಾಗುವುದಿಲ್ಲ. 'ಸತ್ಯ' ಎಂಬ ಪದವನ್ನು ಓದುವುದು ಹೇಗೆ? 'ತ' ಲಿಪಿಯೊಡನೆ 'ಯ' ಕಾರದ ಒತ್ತಕ್ಷರದ ಲಿಪಿಯಿದೆ. ನಿಯಮ ತಿಳಿಯದೆ ಕಣ್ಣಿನ ಅಂದಾಜಿನಿಂದ ಓದಿದರೆ 'ತ' ಕಾರವನ್ನು ಪೂರ್ಣವಾಗಿ ಉಚ್ಚರಿಸಿ ಅನಂತರ 'ಯ್' (ವ್ಯಂಜನರೂಪ)ವನ್ನು ಹೇಳಬೇಕು. (ಸತಯ್) ಆದರೆ ಸಂಯೋಜನೆಯಿಂದ ವಿಸಂಕೇತಿಸುವ ನಿಯಮದಂತೆ ಒತ್ತಕ್ಷರಗಳಿದ್ದಾಗ ಪೂರ್ಣವಾಗಿ ಬರೆದಿರುವ ವ್ಯಂಜನವನ್ನು ಕೇವಲ ವ್ಯಂಜನವನ್ನಾಗಿ ಉಚ್ಚರಿಸಬೇಕು. ಅನಂತರ ಅದರೊಡನೆ ಸಂಯೋಜಿಸಿರುವ ಸ್ವರ ಭಾಗವನ್ನು ಕೆಳಗೆ 'ಅರೆಯಾಗಿ' ಬರೆದಿರುವ ವ್ಯಂಜನದೊಡನೆ ಸಂಯೋಜಿಸಬೇಕು. ಇದು ಕನ್ನಡ ಓದಿನಲ್ಲಿ ಹಾಕಿಕೊಂಡ ಒಂದು ನಿಯಮ. ನಮಗೆ ಚೆನ್ನಾಗಿ ಬಳಕೆಯಾಗಿರುವುದರಿಂದ ಓದುವ ಈ ನಿಯಮ ಸರಳವೆಂಬತೆ ತೋರುತ್ತದೆ. ಆದರೆ ಕಲಿಯುವ ಮಗುವಿಗೆ ಇದು ಕಠಿಣ ನಿಯಮ. ಏಕೆಂದರೆ 'ಸತ್ಯ' ಎಂಬ ಪದದಲ್ಲಿ ಎಷ್ಟು ಧ್ವನಿಗಳಿವೆ ಎಂಬ ಪರಿಕಲ್ಪನೆ ಮೂಡಿಸುವಂತಹ ಕನ್ನಡ ಭಾಷಾ ಪಠ್ಯಗಳಲ್ಲಿ ಕಾಣುವುದು ವಿರಳ. ಕಂಡರು ಸಹ ಅವುಗಳು ಉಚ್ಚಾರಣೆಯ ತಿಳುವಳಿಕೆಯಲ್ಲಿ ಸ್ಪಷ್ಟತೆಯನ್ನು ನೀಡುವ ವಿಧಾನಗಳಿಲ್ಲ. ಅಷ್ಟೇ ಏಕೆ ಇಂತಹ ಪದಗಳ ಧ್ವನಿಗಳ ಬಗ್ಗೆ ಶಿಕ್ಷಕರಿಗೆ ಅರಿವಿಲ್ಲದಿರುವುದನ್ನು ಕಾಣುತ್ತೇವೆ. ಈ ಅಂಶ ಪ್ರಾಥಮಿಕ ಹಂತದಲ್ಲಿ ಬಹಳ ಮುಖ್ಯ. ಎಲ್ಲಿಯವರೆಗೆ ಗುಣಿತಾಕ್ಷರಗಳ ತಿಳುವಳಿಕೆ, ಒತ್ತಕ್ಷರಗಳ ಬಗ್ಗೆ ಸರಿಯಾದ ಕ್ರಮದಲ್ಲಿ ಉಚ್ಚಾರಣೆ ಮತ್ತು ಬರವಣಿಗೆಗೆ ವ್ಯವಸ್ಥೆ ಆಗುವುದಿಲ್ಲವೋ ಅಲ್ಲಿಯವರೆಗೆ ಕನ್ನಡ ಧ್ವನಿಗಳ ಬಗ್ಗೆ ಸರಿಯಾದ ತಿಳುವಳಿಕೆ ಬರುವುದಿಲ್ಲ. ಆದ್ದರಿಂದ ಇವುಗಳನ್ನು ಪಠ್ಯಗಳಲ್ಲಿ ಅಳವಡಿಸುವ ಕ್ರಮಗಳು ಸುಧಾರಣೆಯಾಗಬೇಕಿದೆ ಎಂಬುದು ಪ್ರಾಥಮಿಕ ಹಂತದ ಕನ್ನಡಭಾಷಾ ಪಠ್ಯಗಳನ್ನು ಅವಲೋಕಿಸಿ, ವಿಶ್ಲೇಷಣೆಗೊಳ ಪಡಿಸಿದಾಗ ಸ್ಪಷ್ಟವಾಗುತ್ತದೆ.

ಕನ್ನಡಭಾಷಾ ಪಠ್ಯಗಳಲ್ಲಿ ಕಟ್ಟುನಿಟ್ಟಾಗಿ ಕನ್ನಡದ ಪ್ರಮಾಣೀಕರಣದ ಭಾಷೆಯನ್ನು ಬಳಸಿಕೊಂಡು ಬಂದಿರುವ ಜಾಯಮಾನದ ಅಂಶಗಳನ್ನು ಇಂದಿನ ಪಠ್ಯಗಳಲ್ಲಿ ಕಾಣುತ್ತೇವೆ. ಅಂದರೆ ಪಠ್ಯಗಳಲ್ಲಿ ಸಂಸ್ಕೃತ ಜನ್ಯ ಪದಗಳನ್ನು ಅವುಗಳ ಮೂಲರೂಪದಲ್ಲೇ ಬಳಸಿಕೊಂಡಿ ರುವುದು ಸ್ಪಷ್ಟವಾಗುತ್ತದೆ. ತದ್ಭವಗಳನ್ನು ತೀರ ಅನಿವಾರ್ಯವಾಗದ ಹೊರತು ಬಳಕೆಯಿಂದ ದೂರವಿರುತ್ತದೆ. ಒಂದು ವೇಳೆ ಹಾಗೆ ತದ್ಭವಗಳನ್ನು ಬಳಸಿದರೂ ಅವುಗಳಿಗೆ ಮೂಲವಾದ ಪದಗಳಿಗೆ ಇರುವ ಅರ್ಥಕ್ಕಿಂತ ಬೇರೆಯದೇ ಆದ ಅರ್ಥದಲ್ಲಿ ಬಳಸುತ್ತದೆ. ಇಂತಹ

ಕಡೆಗಳಲ್ಲಿ ಸಾಮಾನ್ಯವಾಗಿ ತದ್ಭವಗಳಿಗೆ ಸಂಕುಚಿತ ಇಲ್ಲವೇ ಹೀನಾರ್ಥ ಇರುತ್ತದೆ. ಧ್ವನಿ ರಚನೆಯಲ್ಲೂ ಸಂಸ್ಕೃತದ ಧ್ವನಿ ರಚನೆಯನ್ನು ಯಥಾವತ್ತಾಗಿ ಬಳಸಿಕೊಳ್ಳುತ್ತದೆ. ಸಂಧಿ ನಿಯಮಗಳಲ್ಲೂ ಸಂಸ್ಕೃತದ ಸಂಧಿಗಳ ನಿಯಮಗಳನ್ನು ಅನುಸರಿಸುತ್ತದೆ. 'ಕನ್ನಡ ಮತ್ತು ಸಂಸ್ಕೃತ ಪದಗಳನ್ನು ಸೇರಿಸಿ ಸಂಧಿ ಮಾಡುವಾಗ ಈ ಸಂಸ್ಕೃತ ಸಂಧಿಯ ನಿಯಮದ ಅನುಸರಣೆ ಎದ್ದು ಕಾಣುತ್ತದೆ. ಈ ಭಾಷೆಯ ಬಗೆಯಲ್ಲಿ ಉಪಭಾಷಿಕ ಪದಗಳಿಗೆ ಮತ್ತು ಧ್ವನಿಗಳಿಗೆ ಅವಕಾಶ ಕಡಿಮೆ' ಎಂದು ಡಾ. ಕೆ.ವಿ. ನಾರಾಯಣರವರ **(ಕನ್ನಡ ಜಗತ್ತು : ಅರ್ಧ ಶತಮಾನ, ಪುಟ –೧೫೧ ರಲ್ಲಿ)** ಅಭಿಪ್ರಾಯ ಪಡುತ್ತಾರೆ.

ಸ್ಥೂಲವಾಗಿ ಈ ಲಕ್ಷಣಗಳನ್ನು ಕನ್ನಡದ ಪ್ರಮಾಣ ಭಾಷೆಯನ್ನು ವಿವಿಧ ವಿಷಯ ಪಠ್ಯಗಳಲ್ಲಿ ಬಳಸುವ ಜೊತೆಗೆ ಭಾಷಾ ಬಳಕೆಯಲ್ಲೂ ಬಳಸುವ ಪ್ರಯತ್ನಗಳು ನಡೆದಿದೆ. ಅಂದರೆ ಕನ್ನಡಭಾಷಾ ವಿಷಯದ ಪಠ್ಯ ಪುಸ್ತಕಗಳಲ್ಲೂ ಇದೇ ಬಗೆಯ ಪ್ರಮಾಣ ಕನ್ನಡವನ್ನು ವಿದ್ಯಾರ್ಥಿಗಳಿಗೆ ಕಲಿಸುವ ಉದ್ದೇಶದಿಂದ ಬಳಸಿಕೊಳ್ಳುವುದನ್ನು ಗಮನಿಸಬಹುದು. ಏಕೀಕರಣದ ಅನಂತರದ ಕೆಲವು ಸಮಯ ಕಳೆದ ಮೇಲಿನ ವರ್ಷಗಳಲ್ಲಿ ಒಂದು ಮುಖ್ಯ ಬದಲಾವಣೆ ಯಾಗಿರುವುದನ್ನು ಕಾಣುತ್ತೇವೆ. ಈ ಬಗೆಯ ಅಂಶ ಭಾಷಾ ಪಠ್ಯ ಪುಸ್ತಕಗಳಲ್ಲಿ ಕಾಣತೊಡಗುತ್ತದೆ. ಅದೇನೆಂದರೆ ಇಡೀ ಪಠ್ಯ ಪುಸ್ತಕದಲ್ಲಿ ಪ್ರಾಸಂಗಿಕವಾಗಿ ಕೆಲವು ಪಾಠಗಳನ್ನು ಪ್ರಾದೇಶಿಕ ಧ್ವನಿಗಳನ್ನೇ ಅಳವಡಿಸಿಕೊಂಡು ಆ ಪ್ರಾದೇಶಿಕ ಕನ್ನಡ ಪ್ರಭೇದಗಳಲ್ಲಿ ನೀಡುವುದು. ಇದಕ್ಕಾಗಿ ಹಲವು ತಂತ್ರಗಳನ್ನು ಬಳಸಿದ್ದನ್ನು ಕಾಣುತ್ತೇವೆ. ಬೇರೆ ಬೇರೆ ಭಾಷಾ ಪ್ರದೇಶದ ಪಾತ್ರಗಳು ಬರುವಂತಹ ಪ್ರಸಂಗಗಳನ್ನು ಕಲ್ಪಿಸಿಕೊಳ್ಳುವುದು ಅಂತಹ ಒಂದು ತಂತ್ರ, ಈ ಪಾಠಗಳಲ್ಲಿ ನಿರೂಪಣೆಯ ಪ್ರಮಾಣ ಕನ್ನಡದಲ್ಲಿದ್ದರೂ ಪಾತ್ರಗಳು ತಮ್ಮ ಮಾತುಗಳನ್ನು ತಮ್ಮ ಪ್ರದೇಶದ ಕನ್ನಡದಲ್ಲಿ ಆಡುತ್ತವೆ. ಇದಲ್ಲದೆ ಮತ್ತೆ ಕೆಲವೊಮ್ಮೆ ಇಡೀ ಪಾಠವನ್ನೇ ಪ್ರಾದೇಶಿಕ ಬಗೆಯಲ್ಲಿ ನಿರೂಪಿಸುವ ಪ್ರಯತ್ನಗಳು ನಡೆದಿವೆ. ಆದರೆ ಇದರಲ್ಲಿ ಸಂಪೂರ್ಣವಾಗಿ ಯಶಸ್ಸನ್ನು ಕಂಡಿಲ್ಲ ಎಂಬುದು ಈ ಪಠ್ಯಗಳ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಕನ್ನಡ ಜಾಯಮಾನದಲ್ಲಿ ಬರುವ ಭಾಷಾ ಧ್ವನಿಗಳ ಸ್ವರೂಪದ ಬಗೆಗೆ ಸಾಕಷ್ಟು ವಿವರವಾದ ಅಧ್ಯಯನಗಳು ನಡೆದಿದೆ. ಕಳೆದ ಹತ್ತಾರು ವರ್ಷಗಳಿಂದಲೂ ಈ ಧ್ವನಿಗಳ ಸಮೂಹಕ್ಕೆ ಕೆಲವು ಹೊಸ ಧ್ವನಿಗಳು ಬಂದು ಸೇರಿವೆ. ಕನ್ನಡದಲ್ಲಿ ಇದ್ದ ಧ್ವನಿಗಳು ತಮ್ಮ ಚಹರೆಯನ್ನು ಅಷ್ಟಿಷ್ಟು ಬದಲಾವಣೆ ಮಾಡಿಕೊಂಡಿವೆ. ಮತ್ತೆ ಕೆಲವು ಧ್ವನಿಗಳು ಉಚ್ಚಾರಣೆ ಯಿಂದ ಮರೆಯಾಗುವ ಲಕ್ಷಣವನ್ನು ತೋರಿಸುತ್ತಿವೆ. ಆದರೆ ಪಠ್ಯಗಳಲ್ಲಿ ಮಾತ್ರ ಹಿಂದಿನ ಕ್ರಮದ ಧ್ವನಿಗಳ ಉಚ್ಚಾರಣೆಯ ಅಂಶಗಳನ್ನು ಹೇಳಿಕೊಡುವ ಪರಿಪಾಠವಿದೆ. ಅವುಗಳು ಉಚ್ಚಾರಣೆಯಲ್ಲಿ ಬದಲಾವಣೆಯಾಗಿದ್ದರೂ ಪಠ್ಯಗಳಲ್ಲಿ ಮಾತ್ರ ಹಾಗೆಯೇ ಮುಂದುವರಿದಿ ರುವುದನ್ನು ಕಾಣುತ್ತೇವೆ. ಆದ್ದರಿಂದ ಕನ್ನಡಭಾಷಾ ಪಠ್ಯಗಳಲ್ಲಿನ ಧ್ವನಿರಚನೆ ಕ್ರಮವನ್ನು,

ಹೇಳಿಕೊಡುವ ಅಭ್ಯಾಸಗಳನ್ನು, ಅಭ್ಯಾಸ ಚಟುವಟಿಕೆಗಳನ್ನು ಪರಾಮರ್ಶಿಸಿ ಕಾಲಕ್ಕೆ ತಕ್ಕಂತೆ ಧ್ವನಿಗಳ ಬಳಕೆಯಂತೆ ಪಠ್ಯಗಳ ರಚನೆಯಾಗವುದು ಸೂಕ್ತವೆನಿಸುತ್ತದೆ. ಆದ್ದರಿಂದ ಧ್ವನಿರಚನೆಗೆ ಸಂಬಂಧಿಸಿದಂತೆ ಪಠ್ಯಗಳು ಪುನಾರಚನೆಯನ್ನು ಕಾಣುವುದು ಅವಶ್ಯಕವೆಂಬುದು ಈ ಪಠ್ಯಗಳಿಂದ ತಿಳಿದು ಬರುತ್ತದೆ.

ಕಳೆದ ಐವತ್ತು ವರ್ಷಗಳ ಕನ್ನಡದ ಇತಿಹಾಸದಲ್ಲಿ ಭಾಷಾ ಧ್ವನಿಗಳ ಸ್ವರೂಪದ ಬಗೆಗೆ ಸಾಕಷ್ಟು ಸಂಶೋಧನೆಯ ಪ್ರಯತ್ನಗಳು ನಡೆದಿವೆ. ಜೊತೆಗೆ ಕನ್ನಡಕ್ಕೆ ಧ್ವನಿ ಸಮೂಹಕ್ಕೆ ಕೆಲವು ಹೊಸದಾದ ಧ್ವನಿಗಳು ಬಂದು ಸೇರಿರುವುದನ್ನು ಕಾಣುತ್ತೇವೆ. ಕನ್ನಡದಲ್ಲಿ ಇದ್ದ ಧ್ವನಿಗಳು ಕಾಲದಿಂದ ಕಾಲಕ್ಕೆ ತಮ್ಮ ಚಹರೆಯನ್ನು ಅಷ್ಟಷ್ಟು ಬದಲಾವಣೆ ಮಾಡಿಕೊಂಡಿವೆ. ಮತ್ತೆ ಕೆಲವು ಧ್ವನಿಗಳು ಉಚ್ಚಾರಣೆಯಿಂದ ಮರೆಯಾಗಿವೆ ಹಾಗೂ ಮರೆಯಾಗುವ ಲಕ್ಷಣವನ್ನು ಸಹ ತೋರಿಸುತ್ತಿವೆ.

ಒಂದು ಕಾಲಕ್ಕೆ ಸಂಸ್ಕೃತದ ಪ್ರಭಾವದಿಂದ ಕನ್ನಡಕ್ಕೆ ಬಂದು ಸೇರಿದ ಪದಗಳು ಸಹಸ್ರಾರು, ಅವುಗಳನ್ನು ಇಂದಿಗೂ ಪೋಷಿಸುತ್ತಾ ಬಂದಿದ್ದೇವೆ. ಜೊತೆಗೆ ಕನ್ನಡಭಾಷಾ ಪಠ್ಯಗಳಲ್ಲಿ ಯಥಾವತ್ತಾಗಿ ಬಳಸಿ ಕನ್ನಡ ಭಾಷಾ ಪಠ್ಯ ಪುಸ್ತಕವೆಂದು ಹೇಳುತ್ತಿರುವುದು ವಿಷಾದನೀಯ ಎಂದೆನಿಸುತ್ತದೆ. ಇದರ ಜೊತೆಗೆ ಬ್ರಿಟೀಶರ ಆಡಳಿತದ ಸಂದರ್ಭದಲ್ಲಿ ಸೇರಿವೆ. ಅವರು ಶಿಕ್ಷಣದಲ್ಲಿ ರೂಪಿಸಿದ ನಿಯಮಗಳಿಂದಾಗಿ, ಜಾಗತೀಕರಣ, ಆಧುನೀಕರಣ ದಿಂದಾಗಿ ಇಂಗ್ಲೀಶ್‌ನ ಅನೇಕ ಪದಗಳು ಕನ್ನಡಕ್ಕೆ ಬಂದು ಸೇರಿವೆ. ಈ ಪದಗಳಿಗೆ ಕನ್ನಡ ಪದಗಳಿದ್ದರೂ ಕನ್ನಡ ಭಾಷಾ ಪಠ್ಯಗಳಲ್ಲಿ ಇಂಗ್ಲೀಶ್ ಪದವನ್ನು ಕನ್ನಡ ಲಿಪಿಯಲ್ಲಿ ಕೊಡಲಾಗಿದೆ. ಇದರಿಂದ ಪ್ರೇರಿತವಾದ ಪದಗಳನ್ನು ಕನ್ನಡ ಏಕ ಭಾಷಿಕರು ತಮ್ಮ ಉಚ್ಚಾರಣೆಗಳಿಗೆ ಹೊಂದಿಸಿಕೊಂಡು ಬಳಸುವ ಪರಿಪಾಠ ನಮ್ಮಲ್ಲಿ ಈಗ ಬಂದು ಬಿಟ್ಟಿದೆ. ಹೀಗಾದಾಗ ಕನ್ನಡದ ಮೂಲ ಧ್ವನಿಗಳಲ್ಲೇ ಈ ಧ್ವನಿಗಳು ಬಳಕೆಯಾಗುವುದು ಸಹಜ. ಕಾರಣ ನಮ್ಮ ಆಧುನೀಕರಣ ಮತ್ತು ಜಾಗತೀಕರಣದ ಸಂದರ್ಭ ನಮ್ಮನ್ನು ಅಲ್ಲಿಗೆ ತಂದು ನಿಲ್ಲಿಸಿದೆ. ಈ ತುಳಿತಕ್ಕೆ ಒಳಪಟ್ಟು ರಚಿತವಾದ ಪ್ರಾಥಮಿಕ ಕನ್ನಡಭಾಷಾ ಪಠ್ಯಗಳೆಲ್ಲವು ಸಂಸ್ಕೃತ, ಪರ್ಶಿಯನ್, ಇಂಗ್ಲೀಶ್ ಪದಗಳನ್ನು ಯಥಾವತ್ತಾಗಿ ನಕಲು ಮಾಡಿದವುಗಳಾಗಿವೆ. ಅಷ್ಟೇ ಏಕೆ? ನಿಯಮಗಳೆಲ್ಲವು ಈ ಭಾಷೆಗಳ ತುಳಿತಕ್ಕೆ ಒಳಪಟ್ಟ ರಚನೆಗಳಾಗಿವೆ.

ಕನ್ನಡ ಭಾಷೆಗೆ ಅದರದೇ ಆದ ಬಾಹ್ಯ ಜನ್ಯ ಲಿಪಿ ವ್ಯವಸ್ಥೆಯೊಂದು ಬಳಕೆಯಲ್ಲಿದೆ. ಈ ಲಿಪಿ ವ್ಯವಸ್ಥೆಯನ್ನು ಸುಮಾರು ಒಂದೂವರೆ ಸಾವಿರ ವರ್ಷದ ಅವಧಿಯಲ್ಲಿ ಹಲವು ಪರಿವರ್ತನೆಯನ್ನು ಕಂಡಿದ್ದೇವೆ. ಎಲ್ಲಕ್ಕಿಂತ ಮುಖ್ಯವಾದುದೆಂದರೆ ಸಂಸ್ಕೃತ ಭಾಷೆಯ ಪದಗಳನ್ನು, ವ್ಯಾಕರಣಾಂಶಗಳನ್ನು ಕನ್ನಡದಲ್ಲಿ ಬರೆಯಲು ಅನುಕೂಲವಾಗುವಂತೆ ಕನ್ನಡ ಲಿಪಿ ವ್ಯವಸ್ಥೆಯನ್ನು ಬದಲಾವಣೆ ಮಾಡಿಕೊಂಡಿದ್ದೇವೆ. ಇದನ್ನೇ ಇಂದಿನವರೆಗೂ ಕನ್ನಡ ಭಾಷೆಯ ಪಠ್ಯಗಳಲ್ಲಿ ಬಳಸುವ ವಿಧಾನವನ್ನು ಕಾಣುತ್ತೇವೆ. ಪ್ರಾಚೀನ ಕಾಲದ ಕನ್ನಡ

ಭಾಷೆಯ ಪರಂಪರೆಯನ್ನು ಗಮನಿಸಿದರೆ, ಕನ್ನಡಕ್ಕೆ ಅನಗತ್ಯವಾದ ಲಿಪಿ ಚಿಹ್ನೆಗಳನ್ನು ಮೂಲ ಕನ್ನಡ ಲಿಪಿ ವ್ಯವಸ್ಥೆಗೆ ಹೊಂದಿಸಲಾಗಿತ್ತು. ಈ ಕ್ರಮದಿಂದಾಗಿ ಸಂಸ್ಕೃತ ಪಠ್ಯಗಳನ್ನು ಕನ್ನಡದಲ್ಲಿ ಬರೆಯುವುದು ಸುಲಭವಾಯಿತು. ಇದು ದಿನಗಳೆದಂತೆ ಕನ್ನಡದ ಬರವಣಿಗೆಯು ಹೆಚ್ಚು ಹೆಚ್ಚು ಸಂಸ್ಕೃತಮಯವಾಗಲು ಒಂದು ಕಾರಣವನ್ನು ಒದಗಿಸಿಕೊಟ್ಟಂತೆ ತೋರುತ್ತದೆ. ಈ ಕನ್ನಡ ಲಿಪಿ ವ್ಯವಸ್ಥೆಯನ್ನು ಆಧುನೀಕರಿಸಲು ಕೆಲವು ಪ್ರಯತ್ನಗಳು ನಡೆದವು. ಆದರೆ ಈ ಎಲ್ಲಾ ಪ್ರಯತ್ನಗಳು ಕನ್ನಡ ಲಿಪಿಗೆ ಮಾದರಿಯಾಗಿವೆ ಮತ್ತು ದಾಖಲೆಯ ಪುಸ್ತಕವನ್ನು ಸೇರಿವೆ ಮತ್ತು ಸೇರುತ್ತಿವೆ.

ಬಿ.ಎಂ.ಶ್ರೀಕಂಠಯ್ಯನವರು ಕನ್ನಡ ಲಿಪಿಯನ್ನು ಸುಧಾರಿಸಲು ಮುಂದಾದರು. ಇದು ಏಕೀಕರಣ ಪೂರ್ವಕಾಲದ ಪ್ರಯತ್ನವೇ ಎಂದು ಹೇಳಬಹುದು. ಬಿ.ಎಂ.ಶ್ರೀ ಯವರಿಗೆ ಇಂಗ್ಲೀಶ್ ಮತ್ತು ತಮಿಳಿನ ಧ್ವನ್ಯಾತ್ಮಕ ಲಿಪಿಯ ಮಾದರಿ ಅನುಕೂಲಕರವಾಗಿ ಕಂಡಿತು. ಈ ಕಾರಣದಿಂದಾಗಿ ವ್ಯಂಜನ ಮತ್ತು ಸ್ವರಗಳನ್ನು, ವ್ಯಂಜನ ದ್ವಿತ್ವಗಳನ್ನು ಬೇರ್ಪಡಿಸಿ ಒತ್ತಕ್ಷರಗಳಿಲ್ಲದಂತೆ ಬರೆಯುವ ರೇಖಾತ್ಮಕ ಬರವಣಿಗೆಯನ್ನು ಬಳಸಲು ಸಲಹೆ ಮಾಡಿದರು. ಆದರೆ ಈ ಪ್ರಯತ್ನ ದಾಖಲೆಯ ಪುಸ್ತಕವನ್ನು ಸೇರಿತೇ ಹೊರತು ಸಮಾಜದಲ್ಲಿ ಲಿಪಿ ಸುಧಾರಣೆಯಾಗಲಿಲ್ಲ. ಈ ಪ್ರಯತ್ನದ ನಂತರ ಕನ್ನಡದ ಲಿಪಿ ಸುಧಾರಣೆಯು ಮುಂದೆಯೂ ಕೂಡಾ ಬೇರೊಂದು ರೀತಿಯಲ್ಲಿ ಮುಂದುವರೆದಿದೆ ಎಂದು ಹೇಳಬಹುದು. ಅದರಂತೆ ಹೊಸ ಮಾದರಿ ಅಕ್ಷರ ವಿನ್ಯಾಸಗಳನ್ನು ರೂಪಿಸುವತ್ತ ಪ್ರಯತ್ನಗಳು ನಡೆದಿದೆ.

ಸಾಮಾನ್ಯವಾಗಿ ನಮ್ಮ ಕನ್ನಡ ಭಾಷಾ ಪಠ್ಯಗಳು ಲಿಪಿ ವ್ಯವಸ್ಥೆಯ ಸುಧಾರಣೆಯು ಬರೆಯುವವರನ್ನು ಉದ್ದೇಶಿಸಿಲ್ಲ ಓದುಗರನ್ನು ಗಮನಿಸುತ್ತಿದೆ ಎಂಬಂತೆ ತೋರುತ್ತಿದೆ. ಬರೆಯುವವರ ಆಪ್ತ ಸಂಪರ್ಕಗಳಲ್ಲಿ ಹೊರತುಪಡಿಸಿದರೆ, ಬಹುಮಟ್ಟಿಗೆ ತಮ್ಮ ಬರವಣಿಗೆ ಯನ್ನು ಸಾರ್ವಜನಿಕ ಬಳಕೆಗಾಗಿ ಒಪ್ಪಿಸುವವರು ಹಾಗೆ ಮಾಡುವಾಗ ಕೈ ಬರಹದ ರೂಪದಲ್ಲಿ ಯಾರು ಒದಗಿಸುವುದಿಲ್ಲ. ಸ್ವಲ್ಪ ಗಮನಿಸಿ ಅದನ್ನು ಮುದ್ರಿತ ರೂಪಕ್ಕೆ ಪರಿವರ್ತಿಸುತ್ತಾರೆ. ಆದ್ದರಿಂದ ಇಲ್ಲಿಯು ಲಿಪಿ ಸುಧಾರಣೆ ಓದುಗರನ್ನು ಗಮನದಲ್ಲಿ ಇರಿಸಿಕೊಂಡಿದೆ ಎನ್ನಬಹುದು.

ಈ ಭಾಷಾ ಪಠ್ಯಗಳಲ್ಲಿ ಆಧುನೀಕರಣ ಭಾಷೆಯ ಎಲ್ಲಾ ಹಂತಗಳಲ್ಲೂ ಕಾಣಿಸಿ ಕೊಳ್ಳುತ್ತದೆ. ಕನ್ನಡ ಧ್ವನಿ ರಚನೆಯನ್ನೇ ಪರಿಗಣಿಸಿದರೆ ಕನ್ನಡದಲ್ಲಿ ಈವರೆಗೆ ಇರದಿದ್ದ ಎಷ್ಟೋ ಧ್ವನಿಗಳು ಈಗ ಕನ್ನಡದ ಧ್ವನಿ ಮೊತ್ತದಲ್ಲಿ ಸೇರಿಕೊಂಡಿವೆ. ಉದಾಹರಣೆಗೆ ಇಂಗ್ಲೀಶಿನಿಂದ ನಾವು ಎರವಲು ಪಡೆದ ಎರಡು ದಂತ್ಯ ಘರ್ಷ ಮತ್ತು ಘೋಷಧ್ವನಿಗಳು, ಕನ್ನಡದ 'ಸ'ಕಾರದ ಘೋಷರೂಪ. ಜೂ ಪದದಲ್ಲಿ ಈ ಧ್ವನಿಯನ್ನು ಉಚ್ಚರಿಸುತ್ತೇವೆ. ಹಾಗೆಯೇ ದ್ವಯೋಷ್ಠ್ಯ ಅಘೋಷ ಘರ್ಷಧ್ವನಿ' ಇದು ಇಂಗ್ಲೀಶಿನ 'ಫಿ' 'ಕಾಫಿ' ಮುಂತಾದ

ಪದಗಳಲ್ಲಿ ಉಚ್ಚಾರಣೆಗೊಳ್ಳುತ್ತಿದೆ. ಈ ಎರಡು ಧ್ವನಿಗಳಲ್ಲದೇ ಮತ್ತೆ ಕೆಲವು ಧ್ವನಿಗಳನ್ನು ನಮ್ಮ ಉಚ್ಚಾರಣೆಗೆ ಅನುಗುಣವಾಗಿ ಬದಲಾಯಿಸಿಕೊಂಡು ಬಳಸುತ್ತಿದ್ದೇವೆ. ಧ್ವನಿಗಳ ನೆಲೆಯಲ್ಲಿ ಆಧುನೀಕರಣ ಇದ್ದ ಧ್ವನಿಗಳನ್ನು ಈಗಿರುವ ಉಚ್ಚಾರಣಾ ವಿಧಾನಗಳಿಗಿಂತ ಬೇರೆ ರೀತಿಯಲ್ಲಿ ಉಚ್ಚರಿಸಿ ಅದನ್ನು ಆಧುನೀಕರಿಸಿಕೊಳ್ಳಲು ಯತ್ನಿಸುವುದುಂಟು. ಕನ್ನಡದ ಮೂರ್ಧನ್ಯ ಧ್ವನಿಗಳನ್ನು ಈಗ ವರ್ತ್ಸ್ಯ ಧ್ವನಿಗಳನ್ನು ನಾವು ಉಚ್ಚರಿಸುತ್ತಿದ್ದೇವೆ. ಟ, ಠ, ಡ, ಢ, ಣ ಮತ್ತು ಷ ಎಂಬ ಧ್ವನಿಗಳನ್ನು ನಾವು ಉಚ್ಚರಿಸುತ್ತಿರುವ ವಿಧಾನವನ್ನು ಎಚ್ಚರದಿಂದ ಗಮನಿಸಿದರೆ ಈ ಉಚ್ಚಾರಣೆಯ ಸ್ಥಾನಪಲ್ಲಟ ಗೊತ್ತಾಗುತ್ತದೆ. ಇಂಗ್ಲೀಶ್ ಶಿಕ್ಷಣವನ್ನು ಪಡೆದವರಲ್ಲಿ ಈ ಬದಲಾವಣೆಗಳು ಎದ್ದು ಕಾಣುತ್ತವೆ. ಈ ಮಾತನ್ನು ಏಕೆ ವಿವರಿಸಲಾಗುತ್ತಿದೆ ಎಂದರೆ ಕನ್ನಡದ ಬಹುತೇಕ ಜನರು ಇಂಗ್ಲೀಶ್ ಶಿಕ್ಷಣದ ಬಗ್ಗೆ ಮಾರು ಹೋಗಿದ್ದಾರೆ. ಅದರ ಪ್ರಭಾವ ಶಿಕ್ಷಣದ ಸಂಸ್ಥೆಗಳಿಗೂ ಬಿದ್ದಿರುವುದು ನಮಗೆಲ್ಲ ತಿಳಿದ ವಿಷಯ. ಈ ಎಲ್ಲಾ ಅಂಶಗಳು ಭಾಷೆಯ (ಭಾಷೆಯನ್ನು ಕಲಿಸುವ) ಮೇಲೆ ಪ್ರಭಾವ ಬೀರಿದೆ. ಅದರ ತಿಳುವಳಿಕೆಯ ವಿವರ ವಿದ್ಯಾರ್ಥಿಗಳಿಗೆ ಮತ್ತು ಕಲಿಸುವ ಶಿಕ್ಷಕರಿಗೆ ಆಗಬೇಕಿದೆ. ಅಲ್ಲದೇ ಶಿಕ್ಷಕರ ಕೈಪಿಡಿ ಸ್ಪಷ್ಟವಾಗಿ ಬದಲಾವಣೆ ಹೊಂದಿದ ಬಗೆಗೆ ತಿಳುವಳಿಕೆಗಾಗಿ ನೀಡಬೇಕಿದೆ. ಧ್ವನಿರಚನೆ ಮತ್ತು ಬೇರೆ ಭಾಷೆಯ ಪ್ರಭಾವದ ಅಂಶಗಳಿಂದ ಧ್ವನಿರಚನೆ ಬದಲಾವಣೆಯ ವಿವರ ಇಂದಿನ ಕನ್ನಡ ಭಾಷಾ ಪಠ್ಯಗಳಲ್ಲಿ ನಡೆಯಬೇಕಿದೆ.

ಧ್ವನಿ ಉಚ್ಚಾರಣೆ ಮತ್ತು ಧ್ವನಿ ತಿಳುವಳಿಕೆಗಳಲ್ಲದೆ ಧ್ವನಿ ಲೇಖನ ಮತ್ತು ಮುದ್ರಣ ವಿಧಾನದಲ್ಲೂ ಹಲವು ಬದಲಾವಣೆಗಳು ನಡೆಯುತ್ತಿವೆ. ಮುಖ್ಯವಾಗಿ ಅಕ್ಷರ ವಿನ್ಯಾಸದಲ್ಲಿ ಹಲವು ರೀತಿಯ ಬದಲಾವಣೆಗಳು ಕಾಣತೊಡಗಿವೆ. ಮುದ್ರಣ ಬೆರಳಚ್ಚುಗಳೇ ಮುಖ್ಯವಾಗಿದ್ದ ಕಾಲದಿಂದ ಗಣಕ ಅವಧಿಗೆ ನಾವೆಲ್ಲರು ದಾಟಿ ಬಂದಿದ್ದೇವೆ. ಇದರ ಪರಿಣಾಮವಾಗಿ ಶತಮಾನಗಳಿಂದಲೂ ಒಪ್ಪಿಕೊಂಡು ಬಂದಿದ್ದ ಬರವಣಿಗೆಯ ಸ್ವರೂಪ ಬದಲಾಗತೊಡಗಿದೆ. ಏಕೆಂದರೆ ಮುದ್ರಣ ಮತ್ತು ಬೆರಳಚ್ಚಿನಲ್ಲಿ ಹೊಸ ಬಗೆಯ ಅಕ್ಷರ ವಿನ್ಯಾಸ ಮಾಡುವುದು ಮತ್ತು ಜಾರಿಗೆ ತರುವುದು ಅಷ್ಟು ಸುಲಭದ ಮಾತಲ್ಲ. ಇದರ ಬದಲಾವಣೆ ಪ್ರಾಥಮಿಕ ಪಠ್ಯಗಳಿಂದಲೇ ನಡೆಯಬೇಕಾಗಿದೆ. ಹಾಗಿದ್ದಾಗ ಮಾತ್ರ ಕನ್ನಡ ಬರವಣಿಗೆ ವಿಧಾನ, ಧ್ವನಿರಚನೆ, ಉಚ್ಚಾರಣೆಯ ವಿಧಾನದ ಹೊಸ ಹೊಸ ನೆಲೆಗಳನ್ನು ಪರಿಚಯಿಸಿದಂತಾಗುತ್ತದೆ.

**ಡಾ. ಕೆ.ವಿ. ನಾರಾಯಣರವರು ಕನ್ನಡ ಜಗತ್ತು : ಅರ್ಧಶತಮಾನ ಪುಟ.೧೬೨ರಲ್ಲಿ** ಕನ್ನಡದ ಬರವಣಿಗೆಯಲ್ಲಿರುವ ಎರಡು ಅಘೋಷ ಘರ್ಷಗಳಾದ 'ಶ' ಮತ್ತು 'ಷ'ಗಳ ನಡುವೆ ಉಚ್ಚಾರಣೆಯಲ್ಲಿ ವ್ಯತ್ಯಾಸ ಇಲ್ಲದಂತೆ ಮಾಡಿದೆ. ಬಹುಪಾಲು ಶಿಕ್ಷಿತರಾದ ಕನ್ನಡಿಗರು ಈ ಎರಡು ಲಿಪಿಗಳನ್ನು ಬರವಣಿಗೆಯಲ್ಲಿ ಬೇರೆ ಬೇರೆಯಾಗಿ ಇರಿಸಿಕೊಂಡರೂ

ಉಚ್ಚಾರಣೆಯಲ್ಲಿ ಯಾವ ವ್ಯತ್ಯಾಸವನ್ನು ಮಾಡುತ್ತಿಲ್ಲ ಎನ್ನುತ್ತಾರೆ. ಈ ಮಾತನ್ನು ಗಮನಿಸಿದರೆ ಸತ್ಯಕ್ಕೆ ಸಮೀಪವಾದುದು ಎಂದು ಹೇಳಬಹುದು. ಇಂದಿನ ಶಿಕ್ಷಕರೆಲ್ಲರು ಇದರ ವ್ಯತ್ಯಾಸ ತಿಳಿಯುವ ಅಗತ್ಯತೆ ಬಹಳ ಇದೆ. ಉಚ್ಚಾರಣೆಯನ್ನು ತಿಳಿಯದೆ ಎಷ್ಟೋ ವಿದ್ಯಾರ್ಥಿಮಿತ್ರರು 'ಷ' ಮತ್ತು 'ಶ' ಕಾರದ ಶಬ್ದಗಳು ಬಂದಾಗ 'ಷಣ್ಮುಕ' 'ಷ' ನ ಅಥವಾ 'ಶಂಕು' 'ಶ' ನ ಎಂದು ಪ್ರಶ್ನೆ ಕೇಳುವುದನ್ನು ಕಾಣುತ್ತೇವೆ. ಇದು ಉಚ್ಚಾರಣೆಯಲ್ಲಿನ ವ್ಯತ್ಯಾಸದ ಕೊರತೆ ಎಂಬುದಕ್ಕೆ ಇದೊಂದು ಸ್ಪಷ್ಟ ನಿದರ್ಶನವೆಂದು ಹೇಳಬಹುದು. ಅದಕ್ಕಾಗಿ ಕನ್ನಡ ವರ್ಣಮಾಲೆಯ ಉಚ್ಚಾರಣೆಯ ವ್ಯತ್ಯಾಸವನ್ನು ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಅರಿಯಲು ಕನ್ನಡ ಪಠ್ಯಗಳಲ್ಲಿ ಇವುಗಳ ಉಚ್ಚಾರಣೆ ವ್ಯತ್ಯಾಸದ ತಿಳುವಳಿಕೆಗೆ ಆದ್ಯತೆ ನೀಡುವುದು ಬಹಳ ಮುಖ್ಯವೆನಿಸುತ್ತದೆ.

ಇತ್ತೀಚಿನ ದಿನಮಾನಗಳಲ್ಲಿ ಕನ್ನಡ ಮಾತಿನಲ್ಲಿ ಆಗುತ್ತಿರುವ ಒಂದು ಬದಲಾವಣೆಯ ಸಾಧ್ಯತೆಯ ಬಗೆಗೆ ಭಾಷಾ ಶಾಸ್ತ್ರಜ್ಞರು ಗಮನ ಸೆಳೆದಿದ್ದಾರೆ. ಇದರಲ್ಲಿ ಸ್ವತಃ ನಾನು ಭಾಗವಹಿಸಿದ ಕಾರ್ಯಗಾರವೇ ಸಾಕ್ಷಿ. **'೨೦೦೮ರ ಕೊನೆಯ ಭಾಗದ ಮೈಸೂರಿನ ಭಾರತೀಯ ಭಾಷಾ ಸಂಸ್ಥಾನದವರು' ಸಮಕಾಲೀನ ವ್ಯಾಕರಣದ** ಬಗ್ಗೆ ಕಾರ್ಯಗಾರವನ್ನು ಏರ್ಪಡಿಸಿದ್ದರು. ಅದರಲ್ಲಿ ಈ ವಿಷಯದ ಬಗ್ಗೆ ಚರ್ಚೆ ನಡೆಯಿತು. ಅದೇನೆಂದರೆ ಎರಡು ಸ್ವರಗಳ ನಡುವೆ ಬರುವ ಘೋಷ ಮಹಾಪ್ರಾಣ ಸ್ಪರ್ಶಗಳು ಘರ್ಷತ್ವನ್ನು ಪಡೆದುಕೊಳ್ಳುತ್ತವೆ ಎಂಬುದು ಇದು ಕನ್ನಡದಲ್ಲಿ ಕೆಲವು ಪ್ರಸಂಗಗಳಲ್ಲಿ ಬಹು ಹಿಂದಿನಿಂದಲೂ ಬಳಕೆಯಿಲ್ಲದಂತೆ ತೋರುತ್ತದೆ. ಸಂಧಿಕಾರ್ಯ ನಡೆಯುವಾಗ ಉತ್ತರ ಪದದ ಆದಿಯಲ್ಲಿ ಪ, ಬ, ಮ ವರ್ಗದ ಧ್ವನಿಗಳಿದ್ದರೆ ಅವು 'ವ' ಕಾರವಾಗಿ ಬದಲಾಗುತ್ತಿದ್ದವು. ಉತ್ತರ ಪದದ ಆದಿಯ ಪ, ಬ, ಮ ಧ್ವನಿಗಳು ಸಂಧಿಯಾದ ಪದದಲ್ಲಿ 'ವ' ಕಾರವಾಗಿಯೇ ಕಾಣಿಸಿಕೊಳ್ಳುತ್ತವೆ. ಮೊದಲಿದ್ದ ಧ್ವನಿಗಳು ಸ್ಪರ್ಶಗಳಾದರೆ ಫಲಿತ ಧ್ವನಿಯು ಘರ್ಷವಾಗಿದೆ. ಇದು ನಡುಗನ್ನಡದ ವೇಳೆಗಾಗಲೇ ಕಂಡು ಬಂದಿದ್ದ ಬದಲಾವಣೆ. ಈಗ ಅಂತಹುದೆ ಪರಿವರ್ತನೆ ದಂತ್ಯ ಧ್ವನಿಗಳಲ್ಲಿ ಕಾಣಿಸಿಕೊಳ್ಳಲು ಆರಂಭಿಸಿದೆ. ಅದರಲ್ಲೂ ಎರಡು ಸ್ವರಗಳ ನಡುವೆ ಬರುವ 'ದ' ಕಾರ, ತನ್ನ ಮೂಲ ಸ್ಪರ್ಶ ಗುಣವನ್ನು ಕಳೆದುಕೊಂಡು ಘರ್ಷತ್ವವನ್ನು ಪಡೆದುಕೊಳ್ಳುತ್ತಿದೆ. ಕನ್ನಡದಲ್ಲಿ ಘೋಷ, ಘರ್ಷ ವ್ಯಂಜನವೊಂದು ಇಲ್ಲ. ಆದ್ದರಿಂದ ಬರವಣಿಗೆಯಲ್ಲಿ ಈ ಧ್ವನಿಯನ್ನು ಮಹಾಪ್ರಾಣ ಬೇರೆ ಎಂದು ಗುರುತಿಸುತ್ತಿದ್ದಾರೆ. ಇದು ಮೇಲು ನೋಟಕ್ಕೆ ಬರವಣಿಗೆಯ ದೋಷವೆಂಬಂತೆ ತೋರುತ್ತದೆ. ಉದಾಹರಣೆಗೆ : 'ವಿದ್ಯಾರ್ಥಿ' ಪದವನ್ನು 'ವಿಧ್ಯಾರ್ಥಿ' ಎಂದು ಬರೆಯುವುದು 'ಉದಾರ' ಪದವನ್ನು 'ಉಧಾರ' ಎಂದು ಬರೆಯುವುದು. ಆದರೆ ಇದು ಬರವಣಿಗೆಯ ದೋಷವಾಗಿರುವುದಕ್ಕಿಂತ ಹೆಚ್ಚಾಗಿ ಕನ್ನಡಿಗರ ಉಚ್ಚಾರಣೆಯಲ್ಲಿ ಆಗುತ್ತಿರುವ ಒಂದು ಪರಿವರ್ತನೆಯನ್ನು ಸೂಚಿಸುವಂತಿದೆ, ಎಂದು ಕಾರ್ಯಗಾರದಲ್ಲಿ ಡಾ. ಕೆ.ವಿ. ನಾರಾಯಣರವರು ಅಭಿಪ್ರಾಯಪಟ್ಟರು. ಇದನ್ನು ಇಲ್ಲಿ ಹೇಳುವ ಉದ್ದೇಶ

ನಾವು ಬರವಣಿಗೆಯನ್ನು ಆದರಿಸಿ ಇದು ತಪ್ಪು ಎಂದು ಹೇಳುತ್ತೇವೆ. ಇದನ್ನು ಮೌಲ್ಯಮಾಪನದ ಸಂದರ್ಭದಲ್ಲಿ ಕಾಣುತ್ತೇವೆ. ಆದರೆ ಕನ್ನಡದಲ್ಲಿ ಆದ ಉಚ್ಚಾರಣೆಯಲ್ಲಿನ ಬದಲಾವಣೆಯನ್ನು ಗಮನಿಸಿದರೆ ಇದಕ್ಕೆ ಕಾರಣಗಳೇನು? ಎಂಬುದನ್ನು ಗುರುತಿಸದೇ ಪಠ್ಯಗಳಲ್ಲಿರುವಂತೆ ಬರೆದರೆ ಮಾತ್ರ ಅಂಕಗಳನ್ನು ಕೊಡುತ್ತೇವೆ. ಇಂತಹ ಬದಲಾದ ಪರಿಸರದ ವ್ಯವಸ್ಥೆಗೆ ಅನುಗುಣವಾಗಿ ಮೌಲ್ಯಮಾಪನ ಅಗತ್ಯವೆನಿಸುತ್ತದೆ. ಜೊತೆಗೆ ಬೇರೆ ಭಾಷೆಯ ಪ್ರಭಾವದಿಂದ ಉಚ್ಚಾರಣೆಗಳು ಬದಲಾಗುತ್ತವೆ ಎಂಬುದನ್ನು ಶಿಕ್ಷಕರು ತಿಳಿದು ವಿದ್ಯಾರ್ಥಿಗಳಿಗೆ ಇದರ ಬಗ್ಗೆ ಅವರ ಸಾಮರ್ಥ್ಯಕ್ಕೆ ಅನುಗುಣವಾಗಿ ಹೇಳಿಕೊಡುವ ಅಗತ್ಯತೆ ಇದೆ ಎಂದೆನಿಸುತ್ತದೆ.

ಇಂತಹದೇ ಇನ್ನೊಂದು ಬದಲಾವಣೆ ಸ್ವರಗಳ ನಡುವೆ ಬರುವ 'ಪ' ಕಾರದಲ್ಲಿಯೂ ಕಾಣಿಸಿಕೊಳ್ಳುತ್ತಿದೆ. ಅದರಲ್ಲೂ 'ಪ'ಕಾರ ಪದದಲ್ಲಿ ಮೊದಲು ಸ್ವರದ ನಂತರ ಬರುತ್ತಿದ್ದರೆ ಆ ಧ್ವನಿಯ ಅಘೋಷ ಘರ್ಷಧ್ವನಿಯಾಗಿ ಉಚ್ಚಾರಣೆಯಾಗುವ ಸಂದರ್ಭ ಕಂಡು ಬರುತ್ತದೆ. 'ಅಪಘಾತ' 'ವಿಪತ್ತು' 'ವಿಫಲ' ಮುಂತಾದ ಪದಗಳಲ್ಲಿ 'ಪ' ಕಾರವನ್ನು ಕನ್ನಡಿಗರು ಉಚ್ಚರಿಸುತ್ತಿರುವುದನ್ನು ಎಚ್ಚರಿಕೆಯಿಂದ ಗಮನಿಸಿದರೆ ಈ ಸ್ಪರ್ಶವು ಘರ್ಷ ಧ್ವನಿಯಾಗುತ್ತಿರುವ ಪರಿಸ್ಥಿತಿಯನ್ನು ಗ್ರಹಿಸುವುದು ಸಾಧ್ಯ. ಇಂತಹ ಸೂಕ್ಷ್ಮವಾದ ಬದಲಾವಣೆಯನ್ನು ಪ್ರಾಥಮಿಕ ಶಿಕ್ಷಣದ ಶಿಕ್ಷಕರು ಅರಿತಾಗ ಮಾತ್ರ ಕನ್ನಡ ಭಾಷೆಯ ಬದಲಾವಣೆಯಲ್ಲಿ ಉಚ್ಚಾರಣೆಯನ್ನು ಗುರುತಿಸಬಹುದು. ಇದರಿಂದ ಮಕ್ಕಳಿಗೆ ಉಚ್ಚಾರಣೆ ಯಲ್ಲಿ ಸ್ಪಷ್ಟ ತಿಳುವಳಿಕೆ ಮೂಡಿಸಲು ಸಾಧ್ಯ. ಆದ್ದರಿಂದ ಈ ಬದಲಾವಣೆಯ ಅಂಶಗಳನ್ನು ಪಠ್ಯಗಳ ವಿಷಯದಲ್ಲಿ ಅಳವಡಿಸಿಕೊಳ್ಳುವುದು ಬಹಳ ಮುಖ್ಯವೆನಿಸುತ್ತದೆ.

೨೧ನೇ ಶತಮಾನದ ಆಧುನಿಕತೆ ಮತ್ತು ಜಾಗತೀಕರಣದ ಸಂದರ್ಭದಲ್ಲಿ ಧ್ವನಿಯ ಉಚ್ಚಾರಣೆ ಮತ್ತು ಚಿಹ್ನೆಯ ಬಗೆಗೆ ಈಚೆಗೆ ಒಂದು ವಾಗ್ವದವೇ ನಡೆಯುತ್ತಿರುವುದನ್ನು ಗಮನಿಸಬಹುದು. ಇದರಲ್ಲಿ ಮುಖ್ಯವಾಗಿ 'ಋ' ಕಾರದ ಚಿಹ್ನೆಯ ಬಗೆಗೆ ಕುರಿತ ವಿಚಾರ ದಲ್ಲೂ ಹೆಚ್ಚು ಚರ್ಚಿತವಾಗುತ್ತಿದೆ. ಮೇಲೆ ಹೇಳಿದಂತೆ ಆಧುನಿಕತೆ ಮತ್ತು ಜಾಗತೀಕರಣದ ಸಂದರ್ಭದಲ್ಲು ಕನ್ನಡದ ಲಿಪಿ ವ್ಯವಸ್ಥೆಯು ವಾಸ್ತವವಾಗಿ ಕನ್ನಡದ ಧ್ವನಿ ವ್ಯವಸ್ಥೆಯನ್ನು ಪ್ರತಿನಿಧಿಸುವ ಬದಲು ಸಂಸ್ಕೃತದ ಎಲ್ಲಾ ಪ್ರಮಾಣಿತ ಧ್ವನಿಗಳನ್ನು ಪ್ರತಿನಿಧಿಸುವ ಉದ್ದೇಶವನ್ನು ಇಂದಿನ ಕನ್ನಡ ಭಾಷಾ ಪಠ್ಯ ಪುಸ್ತಕಗಳೆಲ್ಲವು ಹೊಂದಿವೆ ಎಂಬುದನ್ನು ಮೊದಲು ಮನಗಾಣಬೇಕಿದೆ.

ಕಳೆದ ೫೦ ವರ್ಷದ ಇತಿಹಾಸದಲ್ಲಿ ಶಾಲಾ ಶಿಕ್ಷಣದ ಕನ್ನಡ ಭಾಷಾ ಪಠ್ಯ ಪುಸ್ತಕಗಳು ಸ್ವರಗಳನ್ನು ಕಲಿಸುವಾಗ 'ಋ' ಕಾರ ಮತ್ತು ಅದರ ದೀರ್ಘರೂಪ ಉಪಧ್ಮಾನೀಯ ಗಳು, ಅನುಸ್ವರ ಮತ್ತು ವಿಸರ್ಗಗಳನ್ನು ಕಲಿಸಿ ಕೊಡುತ್ತಿದ್ದರು. ಆದರೆ ಕಾಲಕಳೆದಂತೆ

ಕನ್ನಡಿಗರಿಗೆ ಉಚ್ಚಾರಣೆಯಲ್ಲಿ ಈ ಸ್ವರಗಳಿಗೆ ಅರ್ಥವಿಲ್ಲ ಎಂಬುದು ಗಮನಕ್ಕೆ ಬಂದಿದೆ. ಇದರಿಂದಾಗಿ ಶಾಲಾ ಭಾಷಾ ಪಠ್ಯಗಳಲ್ಲಿ ಉಪಧ್ಮಾನೀಯಗಳನ್ನು ಮೊದಲು ಕೈ ಬಿಟ್ಟರು. ಹೀಗಾಗಿಯೇ 'ಋ' ಕಾರ ಚಿಹ್ನೆ ಮತ್ತು ಉಚ್ಚಾರಣೆಗಳ ನೆಲೆಯಲ್ಲಿ ಬಿಟ್ಟು ಬಿಡಬೇಕೆಂದು ಚರ್ಚೆ ನಡೆಯಿತು.

'ವಾಸ್ತವವಾಗಿ 'ಋ' ಕಾರವು 'ರ' ಕಾರವನ್ನು ಪ್ರತಿ ನಿಧಿಸುತ್ತದೆ'. ಎಂದು **ಡಾ.ಕೆ.ವಿ.ನಾರಾಯಣರವರು ಕನ್ನಡ ಜಗತ್ತು : ಅರ್ಧಶತಮಾನದಲ್ಲಿ ಅಭಿಪ್ರಾಯ ಪಟ್ಟಿದ್ದಾರೆ. (ಪುಟ–೧೬೪)** ಇಂದಿನ ಮಕ್ಕಳಿಗೆ 'ಋಷಿ' ಎಂಬ ಶಬ್ದವನ್ನು ಬರೆಯಲು ಹೇಳಿದಾಗ ಬಹುತೇಕ ಕಿರಿಯ ಪ್ರಾಥಮಿಕ ಮಕ್ಕಳು ರುಶಿ ಅಥವಾ ರುಷಿ ಎಂದು ಬರೆಯುತ್ತಾರೆ. ಇದಕ್ಕೆ ಪ್ರಮುಖ ಕಾರಣ ಮಕ್ಕಳು 'ಋ'ಕಾರದ ಧ್ವನಿ ಉಚ್ಚಾರಣೆಗೂ 'ರು' ಕಾರದ ಧ್ವನಿ ಉಚ್ಚಾರಣೆಗೂ ವ್ಯತ್ಯಾಸವನ್ನು ತಿಳಿದಿರುವುದಿಲ್ಲ. 'ಋ'ಕಾರದ ಬಳಕೆಯು ವಿರಳವಾಗಿರು ವುದರಿಂದ ಅವುಗಳಲ್ಲಿ ವ್ಯತ್ಯಾಸ ತಿಳಿಯಲಾಗದೆ ಮಕ್ಕಳಿಗೆ 'ಋ' 'ರು' ವರ್ಣಗಳ ಗೊಂದಲ ಹೀಗೆಯೆ ಮುಂದುವರಿಯುತ್ತಿರುವುದರಿಂದ ಈ ಎರಡು ಉಚ್ಚಾರಣೆಯ ಸ್ಪಷ್ಟ ತಿಳುವಳಿಕೆ ಮೊದಲು ಶಿಕ್ಷಕರಿಗೆ ತಿಳಿಸುವ ವ್ಯವಸ್ಥೆ ನಡೆಯಬೇಕಿದೆ. ನಂತರ ಕನ್ನಡ ಭಾಷೆಯ ವರ್ಣಮಾಲೆಯ ಪರಿಚಯ ಮಾಡಿಕೊಳ್ಳುವ ಮಕ್ಕಳಿಗೆ ತಿಳಿಸಿ ಕೊಡುವುದು ಅಗತ್ಯತೆ ಇದೆ ಎಂಬುದು ಪ್ರಾಥಮಿಕ ಹಂತದ ಕನ್ನಡಭಾಷಾ ಪಠ್ಯಗಳಿಂದ ಸ್ಪಷ್ಟವಾಗುತ್ತದೆ.

ಮೇಲೆ ಹೇಳಿದಂತೆ 'ಋ'ಕಾರವು 'ರ' ಕಾರವನ್ನು ಪ್ರತಿನಿಧಿಸುತ್ತದೆ. ಅವರ್ಗೀಯ ವ್ಯಂಜನವಾದ 'ರ' ಕಾರವು ಕೆಲವು ಪರಿಸರಗಳಲ್ಲಿ ಅಕ್ಷರ ಕೇಂದ್ರವಾಗುವ ಸಾಧ್ಯತೆಗಳಿವೆ. ಅಕ್ಷರ ಕೇಂದ್ರಗಳು ಸಾಮಾನ್ಯವಾಗಿ ಸ್ವರಗಳು. ಈ ಅಕ್ಷರ ಕೇಂದ್ರಗಳಾಗಿ ಬಂದಾಗ ಸ್ವರಗಳ ವ್ಯಂಜನಗಳಾಗಿದ್ದರೂ ಅವುಗಳಿಗೆ ಸ್ವರತ್ವ ಒದಗುತ್ತದೆ. ಹೀಗಾಗಿ 'ರ' ವ್ಯಂಜನದ ಬದಲು ಅದರ ಸ್ವರ ರೂಪವಾಗಿ ಅಥವಾ ಅಕ್ಷರ ಕೇಂದ್ರವಾಗಿ 'ಋ'ಕಾರವನ್ನು ಸಂಸ್ಕೃತದಲ್ಲಿ ಬಳಸುವ ಪದ್ಧತಿ ಇದೆ. ಇದು ಸರ್ವಥಾ ಕನ್ನಡಕ್ಕೆ ಅನ್ವಯಿಸುವ ವಿಚಾರವಲ್ಲ. ಏಕೆಂದರೆ ಕನ್ನಡದಲ್ಲಿ ಎಲ್ಲಿಯೂ ವ್ಯಂಜನ ಅಕ್ಷರ ಕೇಂದ್ರವಾಗಲಾರದು. 'ರ' ಕಾರವನ್ನು ಹೇಗೆ ಬೇಕಾದರೂ ಅದರ ವ್ಯಂಜನ ಗುಣವನ್ನು ಮಾತ್ರ ಕಾಯ್ದುಕೊಳ್ಳುತ್ತದೆ. ಈ ಅಂಶ ಸಂಪ್ರದಾಯವಾದಿಗಳಿಗೆ ಒಪ್ಪಿಗೆಯಾಗಲಿಲ್ಲ. 'ಋ' ಕಾರವನ್ನು ಶಾಲಾ ಪಠ್ಯಗಳಲ್ಲಿ ಬಿಡುವ ಪ್ರಸ್ತಾಪ ಇವರನ್ನು ಕೆರಳಿಸಿತು. ಎಂದಿನಂತೆ ಸರ್ಕಾರ ಯಥಾಸ್ಥಿತಿಯನ್ನು ಮುಂದುವರಿಸಿಕೊಂಡು ಹೋಗಲು ತೀರ್ಮಾನಿಸಲಾಯಿತು. ಇದರ ಆಲೋಚನೆಯ ಫಲವಾಗಿ 'ಋ'ಕಾರ ಅದಿರುವ ಜಾಗದಲ್ಲಿ ಉಳಿದುಕೊಂಡಿದೆ. ನಮ್ಮ ಕನ್ನಡಭಾಷಾ ಪಠ್ಯಗಳಲ್ಲಿ ಇಂತಹ ವರ್ಣಗಳ ಕೆಲವು ಸಮಸ್ಯೆಗಳು ಮತ್ತು ಬಳಕೆಯಲ್ಲಿ ಇಲ್ಲದವುಗಳನ್ನು ಕಲಿಯುವ ಪರಿಪಾಠ ಇಂದಿಗೂ ನಡೆಯುತ್ತಲೇ ಇದೆ. ಆದರೆ ಹೇಳುವುದು ಮಾತ್ರ ಕನ್ನಡಭಾಷಾ ಪಠ್ಯಪುಸ್ತಕಗಳೆಲ್ಲವು ಆಧುನೀಕರಣ, ಪ್ರಾಮಾಣೀಕರಣಕ್ಕೆ ಒಳಪಟ್ಟು ರಚಿತವಾಗಿವೆ ಹಾಗೂ ವಾಸ್ತವಿಕತೆಯನ್ನು

ಗಮನಿಸಲಾಗಿದೆ ಎಂದು ಹೇಳಲಾಗುತ್ತಿದೆ. ಕನ್ನಡದಲ್ಲಿ ಇದರ ಬಳಕೆಗಳು ಇಲ್ಲವೆಂದರು ಇದನ್ನು ಕಲಿಸಲು ಬಳಸುವುದು ಎಷ್ಟೊಂದು ಸಮಂಜಸ ಎಂಬುದನ್ನು ಕನ್ನಡ ಭಾಷಾ ಪಠ್ಯಪುಸ್ತಕಗಳ ರಚನಾ ಸಮಿತಿಯ ಅಧ್ಯಕ್ಷರು, ಸದಸ್ಯರು ಹಾಗು ಪಠ್ಯಪುಸ್ತಕ ನಿರ್ದೇಶನಾಲಯವು ಚಿಂತಿಸಬೇಕಾಗಿದೆ. ಇಂತಹ ಅಂಶಗಳನ್ನು ಅರಿತು ಹೊಸ ಹೊಸ ಯೋಚನೆಗಳು ಕನ್ನಡ ಭಾಷಾ ಪಠ್ಯಗಳಲ್ಲಿ ಮೂಡಿ ಬರಬೇಕಾಗಿರುವುದು ಮುಖ್ಯವೆನಿಸುತ್ತದೆ. ಇಲ್ಲವಾದಲ್ಲಿ ಮಕ್ಕಳು ತಮ್ಮ ಪರಿಸರದಲ್ಲಿ ಬಳಸುವ ಪದಗಳಲ್ಲಿನ ವರ್ಣಗಳಿಗಿಂತ ಬಳಸದೇ ಇರುವ ಸಂಸ್ಕೃತದ ವರ್ಣಗಳನ್ನು ಕಲಿಯುವ ಮತ್ತು ಕಲಿಸುವ ಪರಿಪಾಠ ನಡೆಯುತ್ತಲೇ ಇರುತ್ತದೆ. ಈ ಎಲ್ಲಾ ಅಂಶಗಳು ಪಠ್ಯಕ್ರಮದ ವಿಶ್ಲೇಷಣೆಯಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ಪರಿಸರದಲ್ಲಿ ಬಳಸುವ ಮತ್ತು ಕನ್ನಡದಲ್ಲಿರುವ ವರ್ಣಮಾಲೆಗಳ ಉಚ್ಚಾರಣೆ ಮತ್ತು ಬರಹವನ್ನು ಕಲಿಸುವುದರ ಬಗ್ಗೆ ಗಂಭೀರವಾದ ನಿರ್ಣಯಕ್ಕೆ ಬರಬೇಕಾಗಿದೆ. ಸಂಪ್ರದಾಯವಾದಿಗಳು, ಭಾಷಾಶಾಸ್ತ್ರಜ್ಞರು, ಭಾಷಾವಿಜ್ಞಾನಿಗಳು ಉತ್ತಮವಾದ ನಿರ್ಣಯಕ್ಕೆ ಬಂದು ಕನ್ನಡಭಾಷಾ ಪಠ್ಯ ಪುಸ್ತಕಗಳನ್ನು ರಚನೆ ಮಾಡುವುದು ಸೂಕ್ತವಾದುದು ಎಂದೆನಿಸುತ್ತದೆ. ಇಲ್ಲವಾದಲ್ಲಿ ಕಲಿಯುವ ಮಗು, ಸಮಾಜದಲ್ಲಿ ಬಳಕೆ ಇಲ್ಲದ ಕನ್ನಡವಲ್ಲದ ವರ್ಣಗಳನ್ನು ಅನಾವಶ್ಯಕವಾಗಿ ಕಲಿಯುವ ಗೋಜಿಗೆ ಹೋಗಿ ಗೊಂದಲಗಳಿಂದ ಬಳಲುವಂತಾಗುತ್ತದೆ. ಈ ರೀತಿಯ ಕಲಿಕೆ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಲ್ಲಿ ಹಾಗೆಯೇ ಮುಂದುವರೆದುಕೊಂಡು ಬರುತ್ತಿದೆ ಎಂದು ಹೇಳಬಹುದು.

ಡಿ.ಎನ್. ಶಂಕರ ಭಟ್ ಅವರು ಭಾಷೆಯ ಬಗೆಗೆ ನೀವೇನು ಬಲ್ಲಿರಿ ? ಎಂಬ ಪುಸ್ತಕರದಲ್ಲಿ 'ಋ' ಕಾರದ ಅಳಿವು-ಉಳಿವು ಎಂಬ ಲೇಖನದಲ್ಲಿ ಈ ರೀತಿಯಾಗಿ ಅಭಿಪ್ರಾಯ ಪಡುತ್ತಾರೆ. 'ಕನ್ನಡದ ಪಠ್ಯ ಪುಸ್ತಕಗಳಲ್ಲಿ 'ಋ' ಎಂಬ ಅಕ್ಷರವನ್ನು ಬಳಸುವ ಬದಲು 'ರು' ಎಂಬುದನ್ನೇ ಬಳಸುವ ಮೂಲಕ ಋಷಿ, ಕೃಷ್ಣ, ಮೃಗ ಮೊದಲಾದ ಪದಗಳನ್ನು ರುಷಿ, ಕ್ರುಷ್ಣ, ಮ್ರುಗ ಮುಂತಾಗಿ ಬಳಸಿ, ಕನ್ನಡ ಲಿಪಿಯನ್ನು ಕಲಿಯಬೇಕಾಗಿರುವ ಮಕ್ಕಳ ಹೊರೆಯನ್ನು ಕಡಿಮೆ ಮಾಡಬಹುದೆಂದು ಪಠ್ಯಪುಸ್ತಕ ಸಮಿತಿಯವರು ಒಂದು ನಿರ್ಧಾರಕ್ಕೆ ಬಂದಿದ್ದರು. ಆದರೆ ಈ ನಿರ್ಧಾರವನ್ನು ಹಲವು ಮಂದಿಗಣ್ಯರ ವಿರೋಧದಿಂದಾಗಿ ಕೈ ಬಿಡಬೇಕಾಯಿತು ಎನ್ನುತ್ತಾರೆ.' (ಪುಟ. ೯೩) ಈ 'ಋ' ಕಾರದ ಬಗ್ಗೆ ಅಂದರೆ ಇದನ್ನು ಪಠ್ಯದಲ್ಲಿ ಸೇರಿಸುವ ಅಥವಾ ಬಿಡುವ ಬಗ್ಗೆ ದಿನಪತ್ರಿಕೆ, ವಾರಪತ್ರಿಕೆ ಮತ್ತು ಮಾಸಿಕಪತ್ರಿಕೆಯಲ್ಲಿ ಚರ್ಚೆಗಳು ನಡೆದವು. (ಅವುಗಳ ವಿವರವನ್ನು ಅಧ್ಯಾಯ-೨ರಲ್ಲಿ ಸಂಕ್ಷಿಪ್ತವಾಗಿ ವಿವರಿಸಿದೆ.) ಕೊನೆಗೆ ಸರ್ಕಾರ ಗಣ್ಯರ ಮಾತನ್ನು ಪರಿಗಣಿಸಿ ಪಠ್ಯದಲ್ಲಿ 'ಋ' ವರ್ಣವನ್ನು ಉಳಿಸಿಕೊಳ್ಳಲಾಯಿತು. ಆದರೆ ರಚನೆಯ ದೃಷ್ಟಿಯಿಂದ ಮಾತ್ರ ಇದನ್ನು ಮಕ್ಕಳು ಕುರುಡು ಪಾಠದಂತೆ ಕಲಿಯುತ್ತಿದ್ದಾರೆ. ಉಚ್ಚಾರಣೆಯ ದೃಷ್ಟಿಯಿಂದ ಇದರ ಕಲಿಕೆಯಾಗುತ್ತಿಲ್ಲವೆಂಬುದು ವಿಷಾದನೀಯ ಸಂಗತಿಯಾಗಿದೆ.

ಡಿ.ಎನ್.ಶಂಕರ ಭಟ್ ಅವರ 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಎಂಬ ಪುಸ್ತಕದಲ್ಲಿ ಬರುವ ಸೇರಿಕೆಯ ನಿಯಮಗಳು ಎಂಬ ಲೇಖನದಲ್ಲಿ ವರ್ಣಗಳ ಬಗ್ಗೆ ಈ ರೀತಿ ಅಭಿಪ್ರಾಯ ಪಡುತ್ತಾರೆ. 'ಸಂಸ್ಕೃತ ವೈಯಾಕರಣಿಗಳು ಸಿದ್ಧಪಡಿಸಿರುವ ವರ್ಣಗಳ ಪಟ್ಟಿಯನ್ನು ಅತ್ಯಂತ ವೈಜ್ಞಾನಿಕವಾದ ಪಟ್ಟಿ' ಎಂಬುದಾಗಿ ಹೆಚ್ಚಿನವರೂ ಹೇಳುತ್ತಾರೆ. ಆದರೆ ಹೇಗೆ ಇದು ವೈಜ್ಞಾನಿಕ ಎಂಬುದನ್ನು ಯಾರೂ ಸರಿಯಾಗಿ ವಿವೇಚಿಸಿದ ಹಾಗಿಲ್ಲ' ಎಂದು ಹೇಳಿದ್ದಾರೆ.

ಸಂಸ್ಕೃತದ ವ್ಯಂಜನಗಳಲ್ಲಿ ವರ್ಗೀಯ ವ್ಯಂಜನಗಳನ್ನು (ಸ್ಪರ್ಶ ಮತ್ತು ಅನುನಾಸಿಕ ಗಳನ್ನು) ಅವುಗಳ ಉಚ್ಛಾರಣೆಯ ಆಧಾರದ ಮೇಲೆ ಪಟ್ಟಿ ಮಾಡಲಾಗಿದೆ ಆದಕಾರಣ ವೈಜ್ಞಾನಿಕತೆ ಕಾಣಿಸುತ್ತದೆ. ಆದರೆ ಅವರ್ಗೀಯ ವ್ಯಂಜನಗಳನ್ನಾಗಲಿ ಇಲ್ಲವೇ ಸ್ವರಗಳನ್ನಾಗಲಿ ಈ ರೀತಿ ಅವುಗಳ ಉಚ್ಚಾರಣೆಯ ಆಧಾರದ ಮೇಲೆ ಪಟ್ಟಿ ಮಾಡಲಾಗಿದೆ. ಆದ ಕಾರಣ ನಿಜಕ್ಕೂ ಸಂಸ್ಕೃತ ವೈಯಾಕರಣಿಗಳು ಈ ಪಟ್ಟಿಯನ್ನು ಸಂಸ್ಕೃತದ ಸೇರಿಕೆಯ ನಿಯಮಗಳನ್ನು ಸೂತ್ರರೂಪದಲ್ಲಿ ಸೂಚಿಸಲು ಸಾಧ್ಯವಾಗುವ ಹಾಗೆ ತಯಾರಿಸಿಕೊಂಡಿದ್ದಾರೆ.

'ಕನ್ನಡ ಭಾಷಾ ಪಠ್ಯಗಳಲ್ಲಿ ಕಾಣುವ ವರ್ಣ ಮಾಲೆಗಳೆಲ್ಲವನ್ನು ಕನ್ನಡದ ವೈಯಾಕರಣಿ ಗಳು ಭಾಷಾಶಾಸ್ತ್ರಜ್ಞರು ಈ ಪಟ್ಟಿಯನ್ನು ಸಂಸ್ಕೃತದಿಂದ ಹಾಗೆಯೇ ಎತ್ತಿಕೊಂಡಿದ್ದಾರೆ. ಆದರೆ ಅದು ಕನ್ನಡದ ಸೇರಿಕೆಯ ನಿಯಮಗಳನ್ನು ವಿವರಿಸುವಲ್ಲಿ ಸ್ವಲ್ಪವೂ ಅನುಕೂಲವಾಗಿಲ್ಲ. ಹಾಗಾಗಿ ಕನ್ನಡ ಮಟ್ಟಿಗಂತೂ ಅದು ನಿಜಕ್ಕೂ 'ವೈಜ್ಞಾನಿಕ' ವಲ್ಲ ಎಂಬಂತೆ ತೊರುತ್ತದೆ. ಎಂಬುದು ಭಟ್ ಅವರ ಅಭಿಪ್ರಾಯವಾಗಿದೆ.'

'ಕನ್ನಡಭಾಷೆಯಲ್ಲಿ ಕಲಿಯುವ ಮತ್ತು ಕಲಿಸುವ ಸ್ವರಗಳು ಕನ್ನಡ ಮತ್ತು ಸಂಸ್ಕೃತದ ವರ್ಣಗಳಾಗಿವೆ. ಸಂಸ್ಕೃತದ ವೈಯಾಕರಣಿಗಳು ಸ್ವರಗಳನ್ನು ಅ, ಇ, ಉ, ಋ, ಲೃ, ಏ, ಓ, ಐ, ಔ ಎಂಬುದಾಗಿ ಪಟ್ಟಿ ಮಾಡಿದ್ದಾರೆ. ಪಾಣಿನಿಯ ವ್ಯಾಕರಣದಲ್ಲಿ ಬಳಕೆಯಾಗುವ ಅಇಉಣ್, ಋಲೃಕ್, ಏಓಙ್, ಐಔಚ್ ಎಂಬ ಮಾಹೇಶ್ವರ ಸೂತ್ರಗಳಲ್ಲಿ ಈ ಪಟ್ಟಿಯ ಮೂಲವನ್ನು ಕಾಣಬಹುದು. ಮೇಲೆ ಸೂಚಿಸಿದ ಹಾಗೆ ಸ್ವರಗಳ ಈ ಅನುಕ್ರಮಕ್ಕೆ ಸಂಸ್ಕೃತ ವ್ಯಾಕರಣದಲ್ಲಿ ಬೇರೆಯೇ ಒಂದು ಉದ್ದೇಶವಿದೆ. ಸಂಸ್ಕೃತದ ಸೇರಿಕೆ ನಿಯಮಗಳನ್ನು ಸೂತ್ರ ಬದ್ಧ ರೂಪದಲ್ಲಿ ಹೇಳಲು ಇದು ಸಹಾಯಕವಾಗುತ್ತದೆ. **ಉದಾಹರಣೆಗಾಗಿ** ; ಸಂಸ್ಕೃತದಲ್ಲಿ ಅ, ಇ ಮತ್ತು ಉ ಸ್ವರಗಳು (ಮತ್ತು 'ಋ' ಲೃ ಎಂಬುವುಗಳು ಕೂಡ) ಗಿಡ್ಡ (ಹ್ರಸ್ವ) ಮತ್ತು ಉದ್ದ (ದೀರ್ಘ) ಎಂಬ ಎರಡು ರೂಪಗಳಲ್ಲಿ ಬರಬಲ್ಲವು. ಸವರ್ಣದೀರ್ಘ ಎಂಬ ಸೇರಿಕೆಯ ನಿಯಮವೂ ಈ ಸ್ವರಗಳನ್ನು ಮಾತ್ರ ಬಾಧಿಸುತ್ತದೆ. ಹಾಗಾಗಿ ಅವನೆಲ್ಲ ಒಟ್ಟಾಗಿ ಪಟ್ಟಿಯಲ್ಲಿ ಕನ್ನಡ ವರ್ಣಮಾಲೆಯಂತೆ ಕನ್ನಡಭಾಷಾ ಪಠ್ಯಗಳಲ್ಲಿ ಕೊಡಲಾಗಿದೆ. ಜೊತೆಗೆ ಸಂಧಿಯ ನಿಯಮಗಳಲ್ಲೂ 'ಏ' ಕಾರ 'ಓ' ಕಾರಗಳು

ಮತ್ತು 'ಐ' ಕಾರ 'ಔ' ಕಾರಗಳು ಸ್ವರಗಳಿಗಿಂತ ಭಿನ್ನವಾಗಿ ಕಾಣಿಸಿಕೊಳ್ಳುತ್ತವೆ. ಹಾಗಾಗಿ ಈ ಸ್ವರಗಳನ್ನು ಪಟ್ಟಿಯಲ್ಲಿ ಉಳಿದವುಗಳಿಗಿಂತ ಬೇರಾಗಿ ಹೇಳಿರುವುದು ಸಂಸ್ಕೃತ ಸೇರಿಕೆಯ ನಿಯಮಗಳನ್ನು ವಿವರಿಸುವಲ್ಲಿ ಸಹಾಯಕವಾಗುತ್ತದೆ ಎಂದು ಡಿ.ಎನ್.ಶಂಕರ ಭಟ್ ಅವರು 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಎಂಬ ಪುಸ್ತಕದಲ್ಲಿ (ಪುಟ-೪೩) ವಿವರಿದ್ದಾರೆ.'

ಡಾ.ಕೆ.ವಿ.ನಾರಾಯಣರವರು ಧ್ವನಿಯಲ್ಲಿ ವ್ಯತ್ಯಾಸಗಳು ಮತ್ತು ಸಂಸ್ಕೃತ ವರ್ಣಗಳು ಕನ್ನಡದ ಬಳಕೆಯಲ್ಲಿ ಎಂಬುದನ್ನು ಹೇಳಿದ್ದಾರೆ. ಭಟ್ರು ಸಹ ಇದೇ ಮಾತುಗಳಿಗೆ ಮನ್ನಣೆ ನೀಡಿ ಅದಕ್ಕೆ ಪುರಾವೆ ಕೊಡುವುದನ್ನು ಕಾಣುತ್ತೇವೆ. ಈ ಕನ್ನಡದ ಭಾಷೆಯ ಜಾಯಮಾನವನ್ನು ನೋಡಿದರೆ ಇದು ಸತ್ಯವೆಂದು ಒಪ್ಪಿಕೊಳ್ಳಬಹುದು. ಮಕ್ಕಳಿಗೆ ಕನ್ನಡ ಕಲಿಸುವ ದೃಷ್ಟಿಯಿಂದ ಮತ್ತು ಕನ್ನಡದ ವಿಶ್ಲೇಷಣೆಯನ್ನು ಅರಿಯಲು ಇದೊಂದು ಒಳ್ಳೆಯ ಚಿಂತನೆ ಎಂದು ಹೇಳಬಹುದು. ಆದರೆ ಕನ್ನಡದ ಗಣ್ಯ ಶ್ರೇಷ್ಠರು ಒಪ್ಪದೆ ಮಕ್ಕಳು ಇಂದಿಗೂ ಕನ್ನಡ ಭಾಷಾ ಪಠ್ಯಗಳಲ್ಲಿ ಸಂಸ್ಕೃತ ಭಾಷೆಯ ವರ್ಣಗಳನ್ನು ಕಲಿಯುತ್ತಿರುವುದು ವಿಷಾದನೀಯ ಸಂಗತಿಯಾಗಿದೆ. ಆದ್ದರಿಂದ ಕನ್ನಡ ಭಾಷೆಯ ಗಣ್ಯಶ್ರೇಷ್ಠರು ಮತ್ತು ಕನ್ನಡ ಭಾಷಾ ಪಠ್ಯಗಳ ರಚನಾ ಸಮಿತಿಯವರು ಕಾಲ ಬದಲಾದಂತೆ ಧ್ವನಿ ವ್ಯತ್ಯಾಸಗಳನ್ನು ಮತ್ತು ಆಧುನಿಕ ಚಿಂತಕರ ಅಭಿಪ್ರಾಯಗಳನ್ನು ಪಠ್ಯಪುಸ್ತಕ ರಚನೆ ಮಾಡುವಾಗ ಪರಿಗಣಿಸುವುದು ಬಹಳ ಮುಖ್ಯವೆನಿಸುತ್ತದೆ. ಕನ್ನಡದಲ್ಲಿ ಬಳಕೆಯಲ್ಲಿರುವ ವರ್ಣಗಳ ರಚನೆ ಮತ್ತು ಉಚ್ಚಾರಣೆಗಳನ್ನು ಮಕ್ಕಳಿಗೆ ಕಲಿಸುವುದು ಸೂಕ್ತವಾದುದು ಎಂಬಂತೆ ತೋರುತ್ತದೆ. ಇಲ್ಲವಾದಲ್ಲಿ ಮಕ್ಕಳಿಗೆ ಧ್ವನಿ ವ್ಯವಸ್ಥೆಗೆ ಸಂಬಂಧಿಸಿದಂತೆ ಗೊಂದಲಗಳು ಹಾಗೆಯೇ ಮುಂದುವರಿದು ಸ್ಪಷ್ಟವಾದ ಕಲಿಕೆಗೆ ವಿಳಂಬವಾಗುತ್ತಿದೆ ಎಂಬುದನ್ನು ನಾವೆಲ್ಲ ಮನಗಾಣಬೇಕಿದೆ.

ಇತ್ತೀಚಿನ ದಿನಮಾನಗಳಲ್ಲಿ 'ಲಿಪಿ' ಕ್ರಾಂತಿ ನಡೆಯುತ್ತಿರುವುದು ನಮಗೆಲ್ಲ ತಿಳಿದ ಸಂಗತಿ. ಇದರ ಉದ್ದೇಶ ಕನ್ನಡದಲ್ಲಿ ಒಟ್ಟು ಐವತ್ತು ಅಕ್ಷರಗಳನ್ನು ಬಳಸುತ್ತಿದ್ದೇವೆ. ಇದರಲ್ಲಿ ಸಂಸ್ಕೃತದ ಅಕ್ಷರಗಳಿವೆ ಎಂದು ಆಧುನಿಕ ಚಿಂತಕರವಾದವಾಗಿದೆ. ಕನ್ನಡವಲ್ಲದ ವರ್ಣಗಳನ್ನು ಕನ್ನಡ ಬರಹವನ್ನು ಕಲಿಸುವುದು ಮತ್ತು ಬಳಸುವ ಕೆಲಸ ಹೆಚ್ಚಿನ ಕನ್ನಡಿಗರಿಗೂ ಬಹಳ ಕಷ್ಟವಾದುದೆಂದು ತೋರುತ್ತದೆ ಎಂಬುದು ಇವರ ನಿಲುವು. 'ನಿಜಕ್ಕೂ ಕನ್ನಡದವೇ ಆದ ಪದಗಳನ್ನು ಬರೆಯುವುದಕ್ಕೆ ಒಟ್ಟು ಮೂವತ್ಮೂರು ಅಕ್ಷರಗಳು ಸಾಕು' ಎಂದು ಡಿ.ಎನ್.ಶಂಕರ ಭಟ್ಟರು 'ಕನ್ನಡ ಬರಹವನ್ನು ಸರಿಪಡಿಸೋಣ'! ಎಂಬ ಪುಸ್ತಕದಲ್ಲಿ (ಪುಟ.೨೧) ವಿವರಿಸುತ್ತಾರೆ.

ಈ ಹೆಚ್ಚಿನ ಅಕ್ಷರಗಳನ್ನೆಲ್ಲ ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳನ್ನು ಸಂಸ್ಕೃತ ಬರಹಗಳಲ್ಲಿರುವ ಹಾಗೆಯೇ ಬರೆಯುವುದಕ್ಕಾಗಿ ಬಳಸುತ್ತಿದ್ದೇವೆ. ಉದಾಹರಣೆಗಾಗಿ

ಮಹಾಪ್ರಾಣಾಕ್ಷರಗಳೂ (ಖ ಛ ಠ ಥ ಫ ಮತ್ತು ಘ ಝ ಢ ಧ ಭ ಗಳು) ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳಲ್ಲಿ (ಸುಖ ; ವ್ಯಥೆ, ಪರಿಚ್ಛೇದ ವಿಘ್ನೇಶ್ವರ, ಪ್ರಧಾನ, ವಿಫಲ, ಭಯಂಕರ ಮೊದಲಾದವುಗಳಲ್ಲಿ) ಮಾತ್ರವೇ ಬಳಕೆಯಾಗುತ್ತದೆಯಲ್ಲದೆ ಕನ್ನಡದವೇ ಆದ ಪದಗಳಲ್ಲಿ ಬರುವುದಿಲ್ಲ. ಇದಲ್ಲದೆ ಈ ಅಕ್ಷರಗಳಿರುವ ಪದಗಳನ್ನು ಉಚ್ಚರಿಸುವಾಗ ಹೆಚ್ಚಿನವಾರೂ ಅವನ್ನು ಅಲ್ಪಪ್ರಾಣಾಕ್ಷರಗಳಾಗಿಯೇ (ಕ ಚ ಟ ತ ಪ ಮತ್ತು ಗ ಜ ಡ ದ ಬ ಗಳೆಂದುದಾಗಿಯೇ) ಉಚ್ಚರಿಸುತ್ತಾರೆ. 'ಗ್ರಂಥಾಲಯ' ಎಂಬ ಪದ ಹೆಚ್ಚಿನವರ ಉಚ್ಚಾರಣೆಯಲ್ಲೂ 'ಗ್ರಂತಾಲಯ' ಎಂದಾಗುತ್ತದೆ. 'ವಿಧಾನಸಭೆ' ಎಂಬುದು 'ವಿದಾನಸಬೆ' ಎಂದಾಗುತ್ತದೆ.

ಕನ್ನಡ ಬರಹಗಳಲ್ಲಿ ಬಳಕೆಯಾಗುವ ಋ 'ಕಾರ' 'ಷ' ಕಾರ ಐ–ಔಗಳು, ವಿಸರ್ಗ ಮೊದಲಾದವುಗಳಿಗೂ ಮಹಾಪ್ರಾಣಾಕ್ಷರಗಳ ಹಾಗೆ ಉಚ್ಚಾರಣೆಯಲ್ಲಿ ಸ್ಥಾನವಿಲ್ಲ. 'ಋ' ಕಾರ ಉಚ್ಚಾರಣೆಯಲ್ಲಿ 'ರು' ಎಂದಾಗುತ್ತದೆ. (ಕೃತಿ–ಕ್ರುತಿ, ಋಷಿ–ರುಶಿ), 'ಷ' ಕಾರ 'ಶ' ಕಾರವಾಗುತ್ತದೆ. (ವಿಷ–ವಿಶ ಐ ಔ ಗಳು–ಅಯ್–ಔ ಗಳಾಗುತ್ತವೆ) ಮತ್ತು ವಿಸರ್ಗ 'ಹ' ಕಾರವಾಗುತ್ತದೆ. (ಬಹುಶಃ–ಬಹುಶಹ), ಇಲ್ಲವೇ ಮುಂದಿನ ವ್ಯಂಜನದೊಂದಿಗೆ ಸೇರಿ ಒತ್ತಕ್ಷರವಾಗುತ್ತದೆ. (ದುಖಃ–ದುಕ್ಕ)

ಈ ರೀತಿಯಾಗಿ ಬರಹದ ಕನ್ನಡ ಮತ್ತು ಉಚ್ಚಾರಣೆಯ ಕನ್ನಡವನ್ನು ಗಮನಿಸಿದಾಗ ಉಚ್ಚಾರಣೆಯಲ್ಲಿ ಅದನ್ನು ಕಲಿಯುವ ಕೆಲಸ ವಿದ್ಯಾರ್ಥಿ ಮಿತ್ರರಿಗೂ ಹಾಗೂ ವಯಸ್ಕರಿಗೂ ಕಠಿಣ ಮಾತಿನಲ್ಲಿಲ್ಲದ ಇಂತಹ ರೂಪಗಳನ್ನು ಬರಹದಲ್ಲಿ ಮಾಡುವುದು ಎಷ್ಟು ಸಮಂಜಸ. ಇವೆರೆಡು ಒಂದೇ ರೂಪವನ್ನು ಪಡೆಯಬೇಕು. ಯಾಕೆಂದರೆ ಮಾತಿನ ಚಟುವಟಿಕೆಯ ಮೂಲಕ ನಾವು ಯಾವುದನ್ನು ತಿಳಿಸಲು ಹೊರಟಿರುತ್ತೇವೆಯೋ ಅದನ್ನೇ ಬರಹ ತಿಳಿಸಬೇಕಾಗಿದೆ. ರೂಪದಲ್ಲಿ, ಮಾತಿನಲ್ಲಿ ಮತ್ತು ಬರಹದಲ್ಲಿ ಸಾಮ್ಯತೆಯನ್ನು ತರಲು ಇವೆರಡೂ ಒಂದೇ ರೀತಿಯಾಗುವುದು ಒಳ್ಳೆಯ ಅಭಿಪ್ರಾಯವೆಂದೆನಿಸುತ್ತದೆ. ಇಲ್ಲವಾದಲ್ಲಿ ಅವುಗಳ ಬಳಕೆ ನಮಗೆ ಬೇಕು ಎನ್ನುವುದಾದರೆ ಬರಹದಲ್ಲಿರುವ ಕ್ರಮ ಉಚ್ಚಾರಣೆಯಲ್ಲೂ ಬರುವಂತಹ ವಿಧಾನ ಪಠ್ಯಗಳಲ್ಲಿ ಮತ್ತು ಸಮಾಜದ ಜನತೆಗೆ ತಿಳಿಸಿ ಹೇಳಿಕೊಡಬೇಕಾಗುತ್ತದೆ. ಇದು ಕಷ್ಟಕರ ಎಕೆಂದರೆ ಇಂದು ಆಧುನಿಕತೆ ಮತ್ತು ಜಾಗತೀಕರಣದ ಸಂದರ್ಭದಲ್ಲಿ ಈ ಉಚ್ಚಾರಣೆಗಳನ್ನು ತೊಡಗಿಸಿಕೊಳ್ಳುವುದು ಎಂದರೆ ಅಸಾಧ್ಯವಾದ ಮಾತು. ತೊಡಗಿಸಿಕೊಂಡರು ಕನ್ನಡದ ಜಾಯಮಾನದಲ್ಲಿ ಆ ಅಕ್ಷರಗಳು ಕನ್ನಡ ಪದಗಳಲ್ಲಿ ವಿರಳ. ಆಗ ನಾವೆಲ್ಲರೂ ಉಚ್ಚಾರಣೆಗೆ ತಕ್ಕಂತೆ ಅಂತಹ ಪದಗಳನ್ನು ಕಟ್ಟುವುದು ಮುಖ್ಯವಾಗುತ್ತದೆ. ಇಲ್ಲವಾದಲ್ಲಿ ಉಚ್ಚಾರಣೆ ಮತ್ತು ಬರಹದಲ್ಲಿ ಎರಡು ಕ್ರಮಗಳು ಒಂದೆಡೆಯಾದರು (ಔಪಚಾರಿಕ ಶಿಕ್ಷಣ ನೆಲೆಯಲ್ಲಿ) ಸಮಾಜದಲ್ಲಿನ ವಾತಾವರಣಕ್ಕೆ ಬಂದಾಗ ಅವುಗಳು ಬೇರೆ ಎಂಬುದನ್ನು ಅರಿಯುತ್ತಾರೆ. ಅದಕ್ಕಾಗಿ ಈ ಸಂದರ್ಭದ ಮತ್ತು ಸಮಾಜದ ವ್ಯವಸ್ಥೆಯನ್ನು ಗಮನಿಸಿದರೆ ಈ ವರ್ಣಮಾಲೆಗಳನ್ನು ಬಿಡುವುದು ಉಚಿತವೆನಿಸುತ್ತದೆ.

ಈ ಮೇಲಿನ ವಿವರಣೆಯಂತೆ ಕನ್ನಡ ಬರಹಗಳಲ್ಲಿ ಬಳಕೆಯಾಗುವ ಸಂಸ್ಕೃತ ಪದಗಳನ್ನೆಲ್ಲ ನಮ್ಮ ಉಚ್ಚಾರಣೆಗನುಸಾರವಾಗಿ ಬರೆಯಲು ಪ್ರಾರಂಭಿಸಿದಲ್ಲಿ ಕನ್ನಡ ಬರಹಕ್ಕೆ ಬೇಕಾಗುವ ಅಕ್ಷರಗಳ ಸಂಖ್ಯೆ ಬಹಳಷ್ಟು ಕಡಿಮೆಯಾಗಬಲ್ಲದು. ಹೀಗೆ ಮಾಡುವುದರಿಂದ ಕನ್ನಡ ಬರಹವನ್ನು ಕಲಿಯುವ, ಬಳಸುವ ಹಾಗೂ ಉಳಿಸುವ ಬೆಳೆಸುವ ಕೆಲಸ ಬಹಳಷ್ಟು ಸುಲಭವಾಗುವ ಸಾಧ್ಯತೆ ಇದೆ ಎಂಬುದು ಈ ಪಠ್ಯಗಳಿಂದ ಸ್ಪಷ್ಟವಾಗುತ್ತದೆ.

ನಮ್ಮ ಪ್ರಾಥಮಿಕ ಶಾಲೆಗಳಲ್ಲಿ ಉಚ್ಚಾರಣೆಯಲ್ಲಿಲ್ಲದ ಈ ಹೆಚ್ಚಿನ ಅಕ್ಷರಗಳನ್ನು ಕಲಿಯುವುದಕ್ಕಾಗಿ ಮಕ್ಕಳು ಅದರಲ್ಲು ಸಮಾಜದ ಕೆಳವರ್ಗದವರು ಎಂದು ಗುರುತಿಸಿಕೊಂಡಿರುವ ಮಕ್ಕಳಿಗೆ ತುಂಬಾ ಕಷ್ಟದ ಕೆಲಸ. ಇದರ ತೊಂದರೆಯಿಂದ ಎಷ್ಟೋ ಮಕ್ಕಳು ಶಾಲೆಯನ್ನು ಬಿಟ್ಟಿರುವ ನಿದರ್ಶನಗಳುಂಟು. ಜೊತೆಗೆ ಪೋಷಕರ ಒತ್ತಡದ ಮೇರೆಗೆ ಉಪಾಧ್ಯಾಯರಿಗೂ ಕೈಯಲ್ಲಿ ಎಷ್ಟು ಬಾರಿ ಪೆಟ್ಟು ತಿನ್ನಬೇಕಾಗಿದೆ ಎಂಬುದನ್ನು ನಾವೆಲ್ಲರೂ ಬಲ್ಲೆವು. ಈ ಅವಶ್ಯವಿಲ್ಲದ ಅಕ್ಷರಗಳಿಂದಾಗಿ ಮಕ್ಕಳಿಗೆ ಮಾತ್ರವಲ್ಲ. ಉಪಾಧ್ಯಾಯರಿಗೂ, ವಯಸ್ಕರಿಗೂ ಕನ್ನಡ ಬರಹವನ್ನು ಕಲಿಯುವುದು ಒಂದು ದೊಡ್ಡ ಶಿಕ್ಷೆ ಎಂದೆನಿಸುತ್ತದೆ. ಈ ವಿಧಾನವನ್ನು ಅನುಸರಿಸುವುದರಿಂದ ಕನ್ನಡ ಬರಹ ಮತ್ತು ಉಚ್ಚಾರಣೆ ಎಲ್ಲರ ಸೊತ್ತಾಗುತ್ತದೆ. ಜೊತೆಗೆ ಎಲ್ಲಾ ಮಕ್ಕಳೂ ಸುಲಭವಾಗಿ ಕಲಿಯುತ್ತಾರೆ. ಇದಕ್ಕಿಂತ ಮುಖ್ಯವಾಗಿ ವಯಸ್ಕರಿಗೂ ಅದರ ರುಚಿ ಹತ್ತುವ ಹಾಗೆ ಮಾಡುತ್ತಾರೆ. ಯಾಕೆಂದರೆ ಮಕ್ಕಳು ಬರಹ ಮತ್ತು ಉಚ್ಚಾರಣೆಯನ್ನು ಸರಿಯಾಗಿ ಕಲಿಯದಿರುವುದಕ್ಕೆ ಅವರ ತಂದೆ, ತಾಯಿಗಳ/ಪೋಷಕರ ಅಜ್ಞಾನವೂ ಒಂದು ಕಾರಣ. ಆದ್ದರಿಂದ ಕನ್ನಡ ಬರಹದಲ್ಲಿರುವ ಅವಶ್ಯವಿಲ್ಲದ ಅಕ್ಷರಗಳನ್ನೆಲ್ಲ ಕೈ ಬಿಡುವುದರಿಂದ ಅದನ್ನು ಕಲಿಯುವ ಕೆಲಸ ವಯಸ್ಕರಿಗೂ ಹೆಚ್ಚು ಸುಲಭವಾಗುತ್ತದೆ.

• • •

## ಅಧ್ಯಾಯ : ಐದು

# ಪದರಚನೆ

೫.೧. ಪದರಚನೆಯ ಪ್ರವೇಶ

೫.೨. ಭಾಷಾ ವಿಜ್ಞಾನದ ದೃಷ್ಟಿಯಲ್ಲಿ ಪದರಚನೆಯ ವಿಶ್ಲೇಷಣಾ ಕ್ರಮ.

೫.೩. ಪದ ಹಾಗೂ ಪದರೂಪ

೫.೪. ಕನ್ನಡ ಭಾಷಾ ಪಠ್ಯಗಳಲ್ಲಿ ಪದರಚನೆ ಕಲಿಸುವ ವ್ಯವಸ್ಥೆ

೫.೫. ಆಧುನಿಕ ಚಿಂತಕರ ಅಭಿಪ್ರಾಯಗಳ ಚರ್ಚೆ ಮತ್ತು ವಿಶ್ಲೇಷಣೆ

ಅಧ್ಯಾಯ : ಐದು

# ಪದರಚನೆ

## ೫.೧. ಪದರಚನೆಯ ಪ್ರವೇಶ

ಪ್ರಸ್ತುತ ಭಾಗದಲ್ಲಿ ಒಂದರಿಂದ ಏಳನೇ ತರಗತಿಯ ಪಠ್ಯಗಳು ಪದರಚನೆಯ ಹಿನ್ನೆಲೆಯಲ್ಲಿ ಹೇಗೆ ರೂಪಿಸಲಾಗಿದೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಅಲ್ಲದೆ ಈ ಎಲ್ಲಾ ತರಗತಿಯ ಪಠ್ಯಗಳಲ್ಲಿ ಕಲಿಸುವ ಪದರಚನೆ ವಿಧಾನ ಸರಿಯಾಗಿದೆಯೇ ಅಥವಾ ಇಲ್ಲವೇ ಎಂಬುದನ್ನು ಆಧುನಿಕ ಚಿಂತಕರ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಸಂಪ್ರದಾಯಿಕ ವ್ಯಾಕರಣದಲ್ಲಿ 'ಮರ' ಎಂಬ ಶಬ್ದಕ್ಕೆ ಪದ ಎಂದು ಕರೆದರೆ, ಭಾಷಾ ವಿಜ್ಞಾನದಲ್ಲಿ 'ಮರ' ಒಂದು ಆಕೃತಿಮಾವಾಗಿದೆ. ಏಕೆಂದರೆ 'ಮರ' ಎಂಬ ಆಕೃತಿಮಾದಲ್ಲಿ ನಾಲ್ಕು ಧ್ವನಿಗಳು ಇವೆ. ಮ್+ಅ+ರ್+ಅ=ಮರ ಅಂದರೆ ಒಂದು ವ್ಯಂಜನ ಒಂದು ಸ್ವರ, ಒಂದು ವ್ಯಂಜನ ಒಂದು ಸ್ವರ, ಸೇರಿ ಒಂದು ಪದವಾಗಿ ಅಥವಾ ಆಕೃತಿಮವಾಗಿ ಬಳಕೆಯಾಗಿದೆ. ಪ್ರಸ್ತುತ ಪಠ್ಯದಲ್ಲಿ ಮಕ್ಕಳಿಗೆ ನೇರವಾಗಿ ಆಕೃತಿಮಾ ಎಂದು ಬಳಕೆ ಮಾಡದೆ ಪದ ಎಂದು ಬಳಕೆ ಮಾಡುವುದರ ಮೂಲಕ ಕನ್ನಡದ ಪದ ರಚನೆಯನ್ನು ಬೇರೆ ಬೇರೆ ವಿಧಾನಗಳ ಮೂಲಕ ಬೋಧಿಸಲಾಗಿತ್ತದೆ. ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿ ಆಕೃತಿಮಾ ಎಂದು ಗುರುತಿಸಲಾಗಿದೆ. ಆಕೃತಿಮಾ ಎಂದರೆ ಉಚ್ಚಾರಣೆಯ ಅತ್ಯಂತ ಕನಿಷ್ಟತಮ ಅರ್ಥವತ್ತಾದ ಘಟಕವನ್ನು ಆಕೃತಿಮಾ ಎಂದು ಕರೆಯಲಾಗಿದೆ. ಪದ ಎಂಬುದು ಸಹ ಒಂದು ಅರ್ಥವತ್ತಾದ ಉಚ್ಚರಿತ ಘಟಕ ಇದನ್ನೆ ಸ್ವತಂತ್ರ ರೂಪಗಳೆಂದು ಕರೆಯಲಾಗಿದೆ. ಇಂತಹ ಸ್ವತಂತ್ರ ರೂಪಗಳಿಗೆ ಕಾರಕಗಳು, ಪ್ರತ್ಯಯಗಳು, ಪುರುಷ, ಲಿಂಗ, ವಚನ ಇತ್ಯಾದಿ ವ್ಯಾಕರಣಾಂಶಗಳನ್ನು ಸೇರಿಸಿ ಪದರಚನೆ ಮಾಡಲಾಗುತ್ತದೆ.

ಚಾರಿತ್ರಿಕವಾಗಿ ಕನ್ನಡ ಪದ ರಚನೆಯನ್ನು ಗಮನಿಸಿದಾಗ ಸಂಸ್ಕೃತ, ಪರ್ಶಿಯನ್, ಅರೇಬಿಕ್, ಮರಾಠಿ ಪದಗಳು ಕನ್ನಡ ಪದದಂತೆ ಕನ್ನಡ ಪದಕೋಶ ಪಟ್ಟಿಯಲ್ಲಿ ಸೇರಿರುವುದನ್ನು ಕಾಣುತ್ತೇವೆ. ಇದು ಬದಲಾದಂತೆ ಇವುಗಳ ಜೊತೆಗೆ ಆಧುನಿಕತೆ ಎಂಬ ಸರ್ಕಸ್‌ನಲ್ಲಿ ಇಂಗ್ಲೀಶ್ ಪದಗಳು ೨೦ನೇ ಶತಮಾನದಿಂದ ಈಚೆಗಿನ ಸಂದರ್ಭದಲ್ಲಿ ಕನ್ನಡದ ಪದಗಳಂತೆ ಸೇರಿರುವುದನ್ನು ಕಾಣುತ್ತೇವೆ.

ಉದಾಹರಣೆಗೆ : ಟ್ರೈನ್, ಬಸ್ಸು, ಕಾರು, ಪೋಲೀಸು, ಸ್ಟೇಷನ್ ಇತ್ಯಾದಿ. ಈ ಮೇಲಿನ ಅಂಶಗಳನ್ನು ಗಮನಿಸಿದರೆ ಕೇವಲ ಕನ್ನಡವು ಕನ್ನಡ ಧ್ವನಿಗಳಿಂದ ಪದಗಳನ್ನು ರಚಿಸದೆ ಅನ್ಯಭಾಷಾ ಪದಗಳಿಗೆ ಪ್ರತ್ಯಯ, ಕಾರಕ ಅಥವಾ ಲಿಂಗವನ್ನು ಸೇರಿಸುವುದರ ಮೂಲಕ ಹೊಸ ಪದರಚನೆಗಳು ರಚನೆ ಆಗುತ್ತಿವೆ. ಇದು ಏಕೆ ಈ ಪ್ರಕ್ರಿಯೆ ನಡೆಯುತ್ತಿದೆ. ಎಂಬುದನ್ನು ಗಮನಿಸಬೇಕಿದೆ. ಆಧುನಿಕತೆ ಮತ್ತು ಜಾಗತೀಕರಣದ ಸಂದರ್ಭಗಳು ಸಮಾಜದಲ್ಲಿ ಹೆಚ್ಚಾಗಿರುವುದರಿಂದ ವ್ಯಕ್ತಿ ಅನಿವಾರ್ಯವಾಗಿ ಸಂವಹನ ಮಾಡಬೇಕಾಗಿದೆ. ಹಾಗೆ ಮಾಡುವಾಗ ಭಾಷಾ ಬಳಕೆಯಲ್ಲಿ ವಿಶಿಷ್ಟತೆಯನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಅಂದರೆ ವ್ಯಕ್ತಿ ಸುಮ್ಮನೆ ಹೊಸ ಹೊಸ ಪದಗಳನ್ನು ಬಳಕೆ ಮಾಡದೆ ಸಂದರ್ಭಕ್ಕೆ ತಕ್ಕಂತೆ ಬಳಕೆ ಮಾಡುವ ಪರಿಪಾಠ ಇದೆ. ಈ ಪ್ರಕ್ರಿಯೆಯಿಂದ ಒಂದು ಭಾಷೆಯ ಬೆಳವಣಿಗೆಗೆ ಪೂರಕವಾಗಿದೆಯೇ ಹೊರತು ಮಾರಕವಾಗಿಲ್ಲ ಎಂದೆನಿಸುತ್ತದೆ. ಅದೇನೆ ಇರಲಿ ಮುಖ್ಯವಾಗಿ ಯಾವ ಯಾವ ಹಂತಗಳಲ್ಲಿ ಪದರಚನೆಯಾಗುತ್ತದೆ. ಮತ್ತು ಯಾವ ಭಾಷೆಗಳೊಂದಿಗೆ ಸೇರಿ ಕನ್ನಡ ಪದ ರಚನೆಯಾಗುತ್ತದೆ. ಈ ರಚನೆಯಿಂದ ಕನ್ನಡಕ್ಕೆ ಉಪಯೋಗವಿದೆಯೇ ಅಥವಾ ಇಲ್ಲವೇ ಎಂಬುದನ್ನು ತಿಳಿಯುವುದಾಗಿದೆ. ಅದರ ಜೊತೆಗೆ ಈ ಪದ ರಚನೆ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆಯಲ್ಲಿ ಪದ ರಚನೆಯನ್ನು ಹೇಗೆ ಬೋಧನೆ ಮಾಡಲಾಗುತ್ತಿದೆ. ಎಲ್ಲಿ ಕನ್ನಡ ಪದ ರಚನೆಯನ್ನು ಬೋಧನೆ ಮಾಡಲಾಗುತ್ತಿದೆಯೋ ಅಥವಾ ಬೇರೆ ಭಾಷೆಯ ಪದಗಳ ರಚನೆಯನ್ನು ವ್ಯಾಕರಣಾಂಶಗಳ ಹಿನ್ನೆಲೆಯಲ್ಲಿ ಬೋಧನೆ ಮಾಡಲಾಗುತ್ತಿದೆಯೋ, ಅದರ ಸಾಧಕ, ಬಾದಕಗಳನ್ನು ನೋಡುವುದು ಈ ಪದ ರಚನೆ ಭಾಗದ ಉದ್ದೇಶವಾಗಿದೆ. ಅಂದರೆ ಇಂದಿನ ಕನ್ನಡಭಾಷಾ ಪಠ್ಯಗಳ ರಚನೆ ಪ್ರಾಥಮಿಕ ಹಂತದಲ್ಲಿ ಹೇಗೆ ರಚನೆಯಾಗಿವೆ ಎಂಬುದನ್ನು ವಿವಿಧ ಭಾಷಿಕ ಹಂತಗಳಲ್ಲಿ ನೋಡಲಾಗಿದೆ. ಮಕ್ಕಳಿಗೆ ಪದ ರಚನೆಯನ್ನು ಬೋಧನೆ/ಕಲಿಸುವ ಉದ್ದೇಶದಿಂದ ಯಾವ ಯಾವ ವಿಧಾನದಿಂದ ಅಳವಡಿಸಲಾಗಿದೆ ಎಂಬುದನ್ನು ವಿಶ್ಲೇಷಿಸುವ ಉದ್ದೇಶವನ್ನು ಇಟ್ಟುಕೊಳ್ಳಲಾಗಿದೆ. ಪ್ರಾಥಮಿಕ ಹಂತದ ಪಠ್ಯಪುಸ್ತಕಗಳನ್ನು ಚಾರಿತ್ರಿಕವಾಗಿ ಅಧ್ಯಾಯ-೧ರಲ್ಲಿ ಗಮನಿಸಿದ್ದೇನೆ. ಇದರಿಂದ ತಿಳಿದು ಬಂದಿರುವುದೇನೆಂದರೆ ಅವುಗಳು ರಚನೆಯಲ್ಲಿ ವ್ಯತ್ಯಾಸವಿರುವುದನ್ನು ನೋಡಬಹುದಾಗಿದೆ. ಅಂದರೆ ಇಲ್ಲಿ ಅವುಗಳ ಚಾರಿತ್ರಿಕತೆಯನ್ನು ಗಮನಿಸದೆ, ಸಮಕಾಲೀನ ಕನ್ನಡ ಪ್ರಾಥಮಿಕ ಪಠ್ಯಗಳ ರಚನೆಯ ಸ್ವರೂಪವನ್ನು ಮಾತ್ರ ಗಮನಿಸಲಾಗಿದೆ. (ಈ ಚೌಕಟ್ಟು ಧ್ವನಿ ರಚನೆ, ಪದ ರಚನೆ, ವಾಕ್ಯ ರಚನೆಗೂ ಸಂಬಂಧಿಸಿದೆ)ಈ ರೀತಿ ಗಮನಿಸುವಾಗ ಪದ ರಚನೆಯನ್ನು, ಅದರ ವಿವಿಧ ಅಂಗಗಳನ್ನು ಬೋಧಿಸುವ ವಿಧಾನವನ್ನು, ವಿವರಿಸುವ ಉದ್ದೇಶವನ್ನು ಹೊಂದಿದೆ.

ನಂತರ ಪದರಚನೆ ಕನ್ನಡ ಜಾಯಮಾನದಲ್ಲಿ ಅಂದರೆ ಇಂದಿನ ಪಠ್ಯಗಳಲ್ಲಿನ ಪದಗುಚ್ಛ ವ್ಯವಸ್ಥೆಯನ್ನು ಹೇಗೆ ಬೋಧನೆ ಮಾಡಲಾಗುತ್ತಿದೆ. ಅದು ಕನ್ನಡ ಪದ

ರಚನೆಯ ವ್ಯವಸ್ಥೆಯನ್ನು ಬೋಧನೆ ಮಾಡಲಾಗುತ್ತಿದೆಯೇ! ಇದರ ಬಗ್ಗೆ ಮಗುವಿಗೆ ಸ್ಪಷ್ಟವಾದ ಚಿತ್ರಣ ಮೂಡಬಲ್ಲದೆ ಎಂಬುದನ್ನು ಆಧುನಿಕ ಚಿಂತಕರ ಅಭಿಪ್ರಾಯದ ಹಿನ್ನೆಲೆಯಲ್ಲಿ ನೋಡಲಾಗಿದೆ. ಅವುಗಳು ಸಮಾಜದಲ್ಲಿ ಬದುಕುವ ವಿದ್ಯಾರ್ಥಿಗಳಿಗೆ ಪೂರಕವಾಗಿದೆಯೇ ಅಥವಾ ಮಾರಕವಾಗಿದೆ ಎಂಬುದನ್ನು ನೋಡಿ ಇದರಿಂದ ಕನ್ನಡ ಪದಗಳು ಉಳಿಸಿ ಬೆಳೆಸುವ ಪರಂಪರೆಯನ್ನು ಸೃಷ್ಟಿಸುವ ಅಂಶಗಳನ್ನು ಬಿತ್ತುತ್ತವೆಯೇ ಅಥವಾ ಬೇರೆ ಅಂಶಗಳನ್ನು ಬಿತ್ತುವುದರ ಮೂಲಕ ಗೊಂದಲದ ಸರಪಳಿಯಲ್ಲಿ ಬಂದಿಸುತ್ತಿದ್ದೇವೆಯೇ ಎಂಬುದನ್ನು ನೋಡುವುದಾಗಿದೆ. ಇದರ ಜೊತೆಗೆ ಕೊನೆಯದಾಗಿ ಕನ್ನಡದ ಪದಗಳ ರಚನೆಗೆ ಆಗಬೇಕಾದ ಮಾರ್ಪಾಟುಗಳೇನು ಎಂಬುದನ್ನು ತಿಳಿಯುವ ಪ್ರಯತ್ನ ಧ್ವನಿ, ಪದ, ವಾಕ್ಯ ರಚನೆಯ ಮೂರು ಹಂತಗಳಲ್ಲಿಯೂ ಮಾಡಲಾಗಿದೆ. ಅಲ್ಲದೆ ಪ್ರಾಥಮಿಕ ಕನ್ನಡಭಾಷಾ ಪಠ್ಯಗಳು ಪದ ರಚನೆಗೆ ಸಂಬಂಧಿಸಿದಂತೆ ಬದಲಾವಣೆ ಮಾಡುವ ಅಗತ್ಯತೆ ಇದೆಯೇ ? ಇದ್ದರೆ ಅದು ಯಾವ ನಿಯಮದಡಿಯಲ್ಲಿ ಬದಲಾಗಬೇಕು ಎಂಬುದನ್ನು ಅಧ್ಯಯನ ಮಾಡುವ ಪ್ರಯತ್ನ ಮಾಡಲಾಗಿದೆ.

**೫.೨. ಭಾಷಾ ವಿಜ್ಞಾನದ ದೃಷ್ಟಿಯಲ್ಲಿ ಪದರಚನೆಯ ವಿಶ್ಲೇಷಿಸುವ ಕ್ರಮ**

ಪದರಚನಾ ವಿನ್ಯಾಸವನ್ನು ಭಾಷಾ ವಿಜ್ಞಾನದ ಸೂತ್ರದನ್ವಯ ವಿಶ್ಲೇಷಿಸಿ ವಿವರಿಸುವ ಅಧ್ಯಯನ ಕ್ರಮವೇ ಪದರಚನೆಯ ಮುಖ್ಯ ಉದ್ದೇಶ. ಇಲ್ಲಿ ಮುಖ್ಯವಾಗಿ ನಾಮ ಮತ್ತು ಕ್ರಿಯಾಪದಗಳ ರಚನಾ ವೈಶಿಷ್ಟತೆಯನ್ನು ಸ್ಥೂಲವಾಗಿ ನಿರೂಪಿಸಲಾಗುವುದು. ಹಾಗೆ ನಿರೂಪಿಸುವಾಗ ರಚನೆಯಲ್ಲಿನ ಆಖ್ಯಾತ ಮತ್ತು ಸಾಧಿತ ಪ್ರತ್ಯಯದ ಅರ್ಥ ವಿಶೇಷ ಮತ್ತು ಅವುಗಳ ಪ್ರಸಾರ ವಿಶಿಷ್ಟತೆಯನ್ನು ನಿದರ್ಶನಗಳೊಂದಿಗೆ ಚರ್ಚಿಸಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಪದರಚನಾ ವಿನ್ಯಾಸ ವಿಶೇಷತೆ ಮತ್ತು ಸ್ವರೂಪವನ್ನು ಆಧರಿಸಿ ಮೂರು ಮುಖ್ಯ ವರ್ಗಗಳಲ್ಲಿ ವರ್ಗೀಕರಿಸಿದೆ. ಅವುಗಳು ಈ ಕೆಳಗಿನಂತಿವೆ.

೧. ಸರಳ ಪದರಚನೆ

೨. ಸಮಾಸ ಪದರಚನೆ

೩. ಸಮ್ಮಿಶ್ರ ಪದರಚನೆ

ಸಾಮಾನ್ಯವಾಗಿ ಪದ ಒಂದು ಸ್ವತಂತ್ರ ಆಕೃತಿಮಾದಿಂದ ಕೂಡಿದ್ದು. ಅದು ಸದಾ ಮುಕ್ತವಾಗಿರುತ್ತದೆ. ಅಥವಾ ಬಹು ಆಕೃತಿಮಾ ಮುಕ್ತ–ಬುದ್ಧ ಆಕೃತಿಮಾಗಳಿಂದ ಕೂಡಿರುತ್ತದೆ. ಅದರಲ್ಲೂ ಒಂದು ಪ್ರಕೃತಿಯಾಗಿಯೂ ಮತ್ತು ಉಳಿದವು ಪ್ರತ್ಯಯವಾಗಿಯೂ ಬರುತ್ತದೆ. ಒಟ್ಟಿನಲ್ಲಿ ಪದ ಎಂಬುದು ಮುಕ್ತ ಆಕೃತಿಮಾದ ಇಲ್ಲವೇ ಪ್ರತ್ಯಯ ಸಂಯೋಜನಾಕೃತಿಮಾ ರಚನೆಯಾಗಿರುತ್ತದೆ. ಸರಳ ಆಕೃತಿಮಾ (ಪದ) ಕನಿಷ್ಠ ಒಂದು ಮುಕ್ತ ಆಕೃತಿಮಾ ರೂಪವಾಗಿರುತ್ತದೆ.(ಮರ–ಗಳು, ಮನೆಗಳು) ಇಲ್ಲಿ ಕನಿಷ್ಠ ಮುಕ್ತ ರೂಪ ಸದಾ ಪ್ರತ್ಯಯದಿಂದ

ಮುಕ್ತವಾಗಿರುತ್ತದೆ. ಅದೇ ಸ್ವತಂತ್ರ ರೂಪದ್ದು. ಸಮಾನಾಕೃತಿಮಾ ಎಂದರೆ (ಸಮಾಸಪದ) ಸಾಮಾನ್ಯವಾಗಿ ಕವಿಷ್ಠ ಒಂದಕ್ಕಿಂತ ಹೆಚ್ಚು ಮುಕ್ತ ಆಕೃತಿಮಾಗಳ ಸಂಯುಕ್ತ ರಚನೆಯಾಗಿರುತ್ತದೆ. (ಮರ+ಗೆಣಸು=ಮರಗೆಣಸು, ದೊಡ್ಡ +ಮರ=ದೊಡ್ಡಮರ) ಇಂತಹ ರಚನೆಗಳಲ್ಲಿ ಕನಿಷ್ಠ ಮುಕ್ತ ಆಕೃತಿಮಾದೊಡನೆ ಒಂದಕ್ಕಿಂತ ಹೆಚ್ಚು ಮುಕ್ತ ಆಕೃತಿಮಾಗಳ ವ್ಯವಸ್ಥಿತವಾದ ಜೋಡಣೆ ಕ್ರಮವಿದೆ. ಅಂದರೆ ಅರ್ಥ ವಿಶೇಷತೆಯಿಂದ ಸಂಯುಕ್ತ ರಚನೆಯಾಗಿದೆ.

ಸಮ್ಮಿಶ್ರ ಪದರಚನೆ ಎಂದರೆ ಕನಿಷ್ಠ ಒಂದು ಮುಕ್ತ ಆಕೃತಿಮಾದೊಡನೆ ಒಂದು ಬದ್ಧ ಆಕೃತಿಮಾ. ಒಂದು ಇಲ್ಲವೇ ಅದಕ್ಕಿಂತ ಹೆಚ್ಚಿನ ಬದ್ದರೂಪಗಳಿಂದ ಕೂಡಿದ ಸಂರಚನೆಯಾಗಿರುತ್ತದೆ. ('ಈಜು' ಕ್ರಿಯಾಪದ 'ಗಾರ' ಸಾಧಿತ ಪ್ರತ್ಯಯ) = ಈಜುಗಾರ, ಈಜುಪಟು ಬುದ್ಧಿ ಜ್ಞಾನವಂತ ಸಾಧಿತ ಪ್ರತ್ಯಯ-ತೃತಿಯ ವಿಭಕ್ತಿ ಪ್ರತ್ಯಯ ಬುದ್ಧಿವಂತಿಕೆಯಲ್ಲಿ ಈ ರಚನೆಯಲ್ಲಿ ಒಂದು ಇಲ್ಲವೇ ಒಂದು ಬದ್ದರೂಪ. ಒಂದಕ್ಕಿಂತ ಅಧಿಕ ಪ್ರತ್ಯಯಗಳಿಂದಾದ ಸಂಯೋಜನಾ ರಚನೆಯಾಗಿದೆ. ಪದರಚನೆಯ ಕಾರ್ಯಸ್ವರೂಪ ಮತ್ತು ಅರ್ಥವನ್ನು ಆಧರಿಸಿ ಎರಡು ರೀತಿಯಲ್ಲಿ ವಿಂಗಡಿಸಿ ವಿವರಿಸಬಹುದು.

೧. ಪದ-ಪ್ರಕೃತಿ-ಧಾತು, ಮುಕ್ತ ಆಕೃತಿಮಾ

೨. ಪ್ರತ್ಯಯ-ಬದ್ಧ ಆಕೃತಿಮಾ

ಕನ್ನಡ ಪ್ರಾಥಮಿಕ ಶಾಲೆಯ ಪಠ್ಯಪುಸ್ತಕಗಳಲ್ಲಿ ಪದರಚನೆಯ ಸ್ವರೂಪವನ್ನು ಗಮನಿಸಿದಾಗ ಪ್ರಕೃತಿ ಮತ್ತು ಪ್ರತ್ಯಯಗಳನ್ನು ಪರಸ್ಪರ ತುಲನೆ ಮಾಡಿದರೆ ಪ್ರಕೃತಿ ಮೂಲಾಕೃತಿಮಾ ಸ್ವತಂತ್ರಾಕೃತಿಮಾ-ಮೂಲಪದ ಪ್ರತ್ಯಯಗಳಿಗಿಂತ ಅಧಿಕವಾಗಿ ಬಳಕೆಯಲ್ಲಿದೆ. ಏಕೆಂದರೆ ಮಕ್ಕಳಿಗೆ ಪ್ರತ್ಯಯ ಸಹಿತವಾದಂತಹ ಪದರಚನೆಯನ್ನು ಕಲಿಯುವುದು ತುಂಬ ಕಷ್ಟಕರವಾಗಿರುವುದರಿಂದ ಹಂತಹಂತವಾಗಿ ಒಂದು ಪದ. ಅದಕ್ಕೊಂದು ಪ್ರತ್ಯಯ, ಹಾಗೆಯೇ ಒಂದು ಪದ ಒಂದಕ್ಕಿಂತ ಹೆಚ್ಚು ಪ್ರತ್ಯಯ ರಚನೆಯುಳ್ಳ ಪದಗಳನ್ನು ಅಳವಡಿಸಿರುವುದು ಗಮನಾರ್ಹವಾದ ಸಂಗತಿ. ಅಂದರೆ ಪದ ರಚನೆಯಲ್ಲಿ ಮುಖ್ಯವಾಗಿ ನಾಮಪದ (ವಿಭಕ್ತಿಯರೂಪ ಕ್ರಿಯಾಪದ ಕ್ರಿಯಾರೂಪ)ಅವ್ಯಯ (ಅವ್ಯಯರೂಪ) ಎಂದು ವರ್ಗೀಕರಿಸಿ ಅಧ್ಯಯನ ಮಾಡಬಹುದಾಗಿದೆ.

ನಾಮಪದ, ಲಿಂಗ, ವಚನ, ವಿಭಕ್ತಿ ಪ್ರತ್ಯಯಗಳಿಂದ ಕೂಡಿದರೆ ಕ್ರಿಯಾಪದ ಕಾಲಸೂಚಕ ಮತ್ತು ಪುರುಷಾರ್ಥಕ ಪ್ರತ್ಯಯದಿಂದ ಕೂಡಿರುತ್ತದೆ. ಹಾಗೆಯೇ ಅವ್ಯಯ ಎಂದರೆ ಪ್ರತ್ಯಯಗಳನ್ನು ತೆಗೆದುಕೊಳ್ಳುವ ರೂಪ. ಅಂದರೆ ಯಾವ ವಿಭಕ್ತಿ ರೂಪ ಆಕೃತಿಮಾತ್ಮಕ ರಚನೆಯಲ್ಲಿ ಕಾಲಸೂಚಕ ಪ್ರತ್ಯಗಳಷ್ಟೇ ತೆಗೆದುಕೊಳ್ಳುತ್ತದೆಯೋ ಅದನ್ನು ಕ್ರಿಯಾ ಪದವೆಂದು ಕರೆಯಬಹುದು. ಇಲ್ಲಿ ಪ್ರಕೃತಿಯನ್ನು ನಾಮ-ಕ್ರಿಯಾಪದ ಎಂದು ಗುರುತಿಸಲಾಗಿದೆ. ಸಾಮಾನ್ಯವಾಗಿ ವಿಭಕ್ತಿ ಪ್ರಕೃತಿಗಳು ಆಖ್ಯಾತ ಇಲ್ಲದೆ ಸಾಧಿತ ಪ್ರತ್ಯಯಗಳನ್ನು

ಅಣ್ಣ, ಬಣ್ಣ, ತಮ್ಮ, ತಂಗಿ, ಮಾವ, ಅಕ್ಕ ಇತ್ಯಾದಿ ಪದಗಳನ್ನು ಒಂದಕ್ಕಿಂತ ಹೆಚ್ಚು ಅರ್ಥವತ್ತಾದ ರೂಪಗಳಿಂದ ಕೂಡಿದೆ ಎಂದು ವಿಭಜಿಸಿ ತೋರಿಸಲು ಸಾಧ್ಯವಿಲ್ಲ. ಇಂಥವುಗಳನ್ನು ಸಾಮಾನ್ಯವಾಗಿ ಸರಳ ಪದಗಳು ಎಂದು ಹೇಳಬಹುದು. ಆದರೆ ಒಂದೊಂದು, ಕಾಣಿಕೆ, ದುಡಿತ, ತುಳಿತ, ಬೆಳ್ದಿಂಗಳು, ಇಕ್ಕಟ್ಟು, ಬಿಕ್ಕಟ್ಟು ಇತ್ಯಾದಿ ಪದ ರೂಪವನ್ನು ಒಂದು–ಒಂದು ಕಾಣ್–ಇಕೆ, ದುಡಿ–ತ, ತುಳಿ–ತ ಬೆಳ್–ತಿಂಗಳು, ಇರ್–ಕಟ್ಟು, ಎಂಬಂತೆ ವಿಭಜಿಸಿ ತೋರಿಸಬಹುದು.ಇಂತಹ ರೂಪಗಳನ್ನು ಅವು ಪ್ರಕೃತಿ, ಪ್ರತ್ಯಯಗಳು ಸೇರಿದ ರೂಪಗಳಾಗಿರಲಿ ಅಥವಾ ಒಂದಕ್ಕಿಂತ ಹೆಚ್ಚು ಪ್ರಕೃತಿಗಳು ಸೇರಿ ಆದ ಸಮಾಸ ಪದಗಳಾಗಿರಲಿ– ಆಂತರಿಕ ರಚನೆಯುಳ್ಳ ಪದಗಳು ಅಥವಾ ಸಾಧಿತ ಪದಗಳು ಎನ್ನಬಹುದು. ಆದರೆ ಸರಳ–ಸಾಧಿತವೆಂಬ ವಿಂಗಡಣೆ ಪದಗಳ ರಚನೆಯನ್ನು ಕುರಿತ ನಮ್ಮ ತಿಳುವಳಿಕೆಯನ್ನು ಅವಲಂಬಿಸಿದೆ. ಉದಾಹರಣೆಗೆ : ಅಡಿಗೆ, ಅಡಿಕೆ, ಮುಂದೆ, ಹಿಂದೆ, ಮಡಕೆ ಎಂಬ ಪದಗಳು ಸರಳ ಪದಗಳೆಂದು ಮೇಲ್ನೋಟಕ್ಕೆ ತೋರಬಹುದು. ಕೊಡುಗೆ, ಹಾಸುಗೆ ಇತ್ಯಾದಿ ಪದಗಳ ಹೋಲಿಕೆಯನ್ನಾಧರಿಸಿ ಅಡಿಕೆ ಎಂಬುದನ್ನು ಅಡು–ಗೆ ಎಂದಾಗಿ ವಿಭಜಿಸಿ ತೋರಿಸಬಹುದು. ಅಡಕೆ ಎಂಬುದು ಅಡ–ಕಾಯ್ ಎಂಬುದರ ಸವೆದ ರೂಪವೆಂದು ಕೆಲವರು ವಿವರಣೆಕೊಡುವುದುಂಟು. ಮುಂದೆ ಎಂಬ ಪದದಲ್ಲಿ 'ಎ' ಸ್ಥಾನ ಸೂಚಕ ಪ್ರತ್ಯಯವೆಂದು ಹೇಳಲಾಗುತ್ತದೆ. ಮೇಲು–ಮೇಲೆ, ಕೆಳಗು–ಕೆಳಗೆ, ಹಿಂದು–ಹಿಂದೆ ಇತ್ಯಾದಿ ಪದ ಜೋಡಿಗಳ ಹೋಲಿಕೆಯನ್ನು ಆಧರಿಸಿಕೊಂಡು 'ಎ' ಎಂಬ ಪ್ರತ್ಯಯ ಇಲ್ಲಿಯ ಪದಗಳಲ್ಲಿರುವಂತೆ ಮುಂದೆ ಎಂಬುದರಲ್ಲಿಯೂ ಇದೆ ಎಂದು ತರ್ಕಿಸಬಹುದು. ಆದ್ದರಿಂದ ಅಡಿಗೆ, ಅಡಿಕೆ, ಮುಂದೆ ಇವೆಲ್ಲವೂ ಆಂತರಿಕ ರಚನೆ ಹೊಂದಿದ ಪದಗಳೆಂದೇ ಭಾವಿಸಿದರೆ ಒಳ್ಳೆಯದೆನಿಸುತ್ತದೆ. ಆಂತರಿಕವಾದ ರಚನೆಯಿರುವ ಪದಗಳಲ್ಲಿ ಸೇರಿರುವ ಪ್ರತ್ಯಯಗಳು ಪದ ಪ್ರತ್ಯಯಗಳು ಪದವೊಂದು ವಾಕ್ಯದಲ್ಲಿ ಬಳಕೆಯಾಗುವಾಗ ಪಡೆಯುವ ಪ್ರತ್ಯಯಗಳು ಪದರೂಪ ಪ್ರತ್ಯಯಗಳು ಉದಾಹರಣೆಗೆ ಕಳ್ಳತನ ದುಡಿತ ಪದಗಳಲ್ಲಿಯ ತನ, ತ, ಗಳು ಪದ ಪ್ರತ್ಯಯಗಳು ಮರದಿಂದ ಆಯಿತು ಪದರೂಪಗಳಲ್ಲಿ –ಇಂದ, ಇತು, ಪದರೂಪ ಪ್ರತ್ಯಯಗಳಿಗೆ ಉದಾಹರಣೆಗಳು.

ಈ ಅಭಿಪ್ರಾಯಕ್ಕೆ ಈ ರೀತಿಯಾಗಿ ಪುಷ್ಟೀಕರಣ ಕೊಡಬಹುದು. ಮನೆ, ಮನೆತನ, ಬೆಳ್ದಿಂಗಳು ಮುಂತಾದ ಪದಗಳು–ಅವು ಸರಳವಾದದ್ದಾಗಿರಲಿ, ಪ್ರತ್ಯಯ ಸಹಿತ ರೂಪವಾಗಿರಲಿ ಅಥವಾ ಸಮಾಸಗಳಾಗಿರಲಿ–ನಮ್ಮ ಮೆದುಳಿನೊಳಗಿನ ಶಬ್ದಕೋಶದಲ್ಲಿ ಸೇರಿ ಹೋದ ರೂಪಗಳು, ಇಲ್ಲಿಯ ಮನೆತನ ಅಥವಾ ಬೆಳ್ದಿಂಗಳು ಎಂಬುವಂತಹ ಅಂಗ ರಚನೆಯುಳ್ಳ ಪದಗಳು ಅಥವಾ ಆಂತರಿಕ ರಚನೆಯುಳ್ಳ ಪದಗಳು ಮಾತನಾಡುವ ಕ್ಷಣದಲ್ಲಿ ಅವುಗಳ ಅಂಗಗಳಿಂದ ಸಿದ್ಧವಾಗುವ ರೂಪಗಳಲ್ಲಿ, ಯಾವುದೋ ಕಾಲದಲ್ಲಿ ರೂಪಗೊಂಡು ಬಳಕೆಗೆ ಸಿದ್ಧವಾಗಿರುವ ರೂಪಗಳು. ಆದರೆ ಪದ ರೂಪಗಳ ವಿಷಯ ಹಾಗಲ್ಲ. ಇವುಗಳಲ್ಲಿಯ

ಪದ ಹಾಗೂ ಪ್ರತ್ಯಯಗಳು (ಉದಾ: ಮನೆ–ಅನ್ನು, ಮರ–ಇಂದ) ತತ್‌ಕ್ಷಣದಲ್ಲಿ ಸೇರಿ ಪದ ರೂಪಗಳಾಗುತ್ತವೆ. ಪದವು ಸಿದ್ಧವಾಗುವುದು. ಒಂದು ಐತಿಹಾಸಿಕ ಪ್ರಕ್ರಿಯೆ ಪದ ರೂಪಗಳಾಗಿ ಉಂಟಾಗುವುದು. ಪ್ರಜ್ಞಾ ಪೂರ್ವಕವಾಗಿ ನಡೆಯುವ ತಾತ್ಕಾಲದ ಪ್ರಕ್ರಿಯೆ. ಆದ್ದರಿಂದ ಪದರೂಪಗಳು ನಿರ್ದಿಷ್ಟ ನಿಯಮಗಳಿಗೆ ಒಳಪಟ್ಟು ಯಾಂತ್ರಿಕವಾಗಿ ರೂಪ ಗೊಳ್ಳುತ್ತವೆ. ಇಲ್ಲಿ ನಡೆಯುವ ಸಂಧಿ ಕಾರ್ಯಗಳು ನಿಯತವಾಗಿರುತ್ತವೆ. ಉದಾಹರಣೆಗೆ: ನಾಮ ಪದವೊಂದು ಎಣಿಕೆಗೆ ಸಿಗುವಂತ ವಸ್ತುವೊಂದನ್ನು ಸೂಚಿಸಿದ್ದರೆ ಅದು ಬಹುವಚನ ಪ್ರತ್ಯಯವನ್ನು ಪಡೆಯಬಹುದೆಂಬುದು ಒಂದು ನಿಯಮ. ಅದು ನಪುಂಸಕ ವಾಚಿಯಾಗಿದ್ದರೆ–ಗಳು ಪ್ರತ್ಯಯವನ್ನು ಅಂಟಿಸಬೇಕೆಂಬುದು ಒಂದು ಉಪನಿಯಮ. ಈ ನಿಯಮಗಳಿಗೆ ಒಳಪಟ್ಟು ಮನೆಗಳು, ಮರಗಳು ಇತ್ಯಾದಿ ಯಾವುದೇ ಬಹುವಚನ ರೂಪವನ್ನು ಪಡೆಯಬಹುದು. ಆದರೆ ಪದಗಳ ವಿಷಯ ಹಾಗಲ್ಲ. ಉದಾಹರಣೆಗೆ 'ತನ' ಎಂಬ ಪದ ಪ್ರತ್ಯಯವನ್ನು ಮನೆತನ, ದೊಡ್ಡತನ, ಮುಂತಾದ ಇತಿಹಾಸದ ಬೇರೆ ಬೇರೆ ಅವಧಿಯಲ್ಲಿ ರೂಪಿತವಾಗಿರಬಹುದಾದ ಕೆಲವು ಪದಗಳಲ್ಲಿ ಮಾತ್ರ ಕಾಣುವುದು ಸಾಧ್ಯ.

| | | | | |
|---|---|---|---|---|
| ಸತ್ | + | ಆಚಾರ | = | ಸದಾಚಾರ |
| ಚಿತ್ | + | ಆನಂದ | = | ಚಿದಾನಂದ |
| ವಿದ್ಯುತ್ | + | ಲತಾ | = | ವಿದ್ಯುಲ್ಲತಾ |
| ವಿದ್ಯುತ್ | + | ಶಕ್ತಿ | = | ವಿದ್ಯುಚ್ಛಕ್ತಿ |
| ಏಕ | + | ಏಕ | = | ಏಕೈಕ |

ಮೇಲೆ ನೀಡಿದ ಉದಾಹರಣೆಗಳು ಒಂದರಲ್ಲಿ ಕನ್ನಡ ಪದಗಳಲ್ಲಾಗುವ ಸಂಧಿಗೆ ಉದಾಹರಣೆಗಳನ್ನು ನೀಡಿದೆ. ಎರಡರಲ್ಲಿಯ ಉದಾಹರಣೆಗಳು ಸಂಸ್ಕೃತ ಪದಗಳಲ್ಲಿಯ ಅಥವಾ ಕನ್ನಡದಲ್ಲಿ ಬಳಕೆಯಾಗುವ ಸಂಸ್ಕೃತ ಪದಗಳಲ್ಲಿ ಕಂಡು ಬರುವ ಸಂಧಿಗಳಲ್ಲಿ ಕೆಲವನ್ನು ಪ್ರತಿನಿಧಿಸುತ್ತವೆ. ಸಂಧಿ ನಿಯಮಗಳು ಭಾಷೆಯಿಂದ ಭಾಷೆಗೆ ಭಿನ್ನವಾಗಿರುವುದನ್ನು ಕಾಣುತ್ತೇವೆ. ಕನ್ನಡ ವ್ಯಾಕರಣಕಾರರು ತಮ್ಮ ವ್ಯಾಕರಣ ಗ್ರಂಥಗಳಲ್ಲಿ ಸಂಸ್ಕೃತದ ಸಂಧಿಗಳನ್ನು ವರ್ಣಿಸುವುದು ಕಾಲದಿಂದ ಕಾಲಕ್ಕೆ ಸಂಪ್ರದಾಯವಾಗಿ ಬೆಳೆಯುತ್ತ ಬಂದಿರುವುದನ್ನು ಕಾಣುತ್ತೇವೆ. ಸಂಧಿ ವಿಷಯದಲ್ಲಿ ಕನ್ನಡ ಮತ್ತು ಸಂಸ್ಕೃತ ಸಂಧಿಗಳಿಗೆ ವ್ಯತ್ಯಾಸವಿದೆ ಎಂಬುದು ತಿಳಿದ ಸಂಗತಿ. ಆದರೂ ನಾವು ಕನ್ನಡಭಾಷಾ ಪಠ್ಯಗಳಲ್ಲಿ ಸಂಸ್ಕೃತ ಸಂಧಿಗಳನ್ನು ಹೇಳಿ ಕೊಡುತ್ತಿದ್ದೇವೆ. ಇದಕ್ಕೆ ಕಾರಣ ಕೇಳಿದರೆ ಸರಳವಾಗಿ ನಾವು ನಿರೀಕ್ಷಿಸಬಹುದಾದ ಉತ್ತರ ಒಂದೇ ಇರುತ್ತದೆ. ಏನೆಂದರೆ ನಮ್ಮಲ್ಲಿ ಹೆಚ್ಚು ಪ್ರಮಾಣದಲ್ಲಿ ಸಂಸ್ಕೃತ ಪದಗಳಿವೆ ಎಂದು ಹೇಳುತ್ತಾರೆ. ಆದರೆ ಇವುಗಳನ್ನು ಬರವಣಿಗೆಯ ದೃಷ್ಟಿಯಲ್ಲಿ ಸರಿಯಾಗಿ ಬರೆಯುತ್ತಿರ ಬಹುದು. ಆದರೆ ಉಚ್ಚಾರಣೆಯಲ್ಲಿ ಇವುಗಳನ್ನು ಸಂಸ್ಕೃತದಲ್ಲಿದ್ದಂತೆ ಉಚ್ಚಾರಣೆಯಾಗುತ್ತಿಲ್ಲ.

ಇವುಗಳು ಸಂಸ್ಕೃತದಂತೆ ಉಚ್ಚಾರಣೆಯಾಗುತ್ತಿಲ್ಲ ಎಂಬುದನ್ನು ನಾವು ಮನಗಂಡು ಸಂಸ್ಕೃತ ಸಂಧಿಗಳನ್ನು ಹೇಳಿಕೊಡುವ ಮತ್ತು ಅವುಗಳ ನಿಯಮಗಳನ್ನು ಹೇಳುವ ಪರಿಪಾಠಕ್ಕೆ ತಡೆಯಲು ಯೋಚಿಸುವ ಅದನ್ನು ಪಠ್ಯದಿಂದ ಬಿಡುವ ವಿವೇಕಯುತವಾದ ನಿರ್ಣಯಗಳು ಬೇಕಾಗಿದೆ. ಕನ್ನಡ ಭಾಷಾ ಶಾಸ್ತ್ರಜ್ಞರು, ಚಿಂತಕರು ಪಠ್ಯಗಳಲ್ಲಿ ಅಳವಡಿಸುವ ಬಿಡುವುದರ ಬಗ್ಗೆ ಸ್ಪಷ್ಟವಾಗಿ ನಿರ್ಣಯಿಸಬೇಕಾಗಿದೆ. ಇದಕ್ಕೆ ಈ ಮೇಲಿನ ಉದಾಹರಣೆಗಳೆ ಸಾಕ್ಷಿಯಾಗಿವೆ. ಸ್ವರ ಸಂಧಿಗಳಲ್ಲಿ ಆಗಮ ಅಥವಾ ಲೋಪವಾಗುವುದು ಕನ್ನಡದಲ್ಲಿಯ ನಿಯಮ. ಆದೇಶ ವಾಗುವುದು ಸಂಸ್ಕೃತದಲ್ಲಿಯ ನಿಯಮ. ವ್ಯಂಜನ ಸಂಧಿಗಳು ಹೊಸಗನ್ನಡ ಜಾಯಮಾನದಲ್ಲಿ ಕಾಣಿಸಿಕೊಂಡ ನಿದರ್ಶಗಳಿಲ್ಲ. ಮೇಲೆ ಪದಮಧ್ಯ ಸಂಧಿಗೆ ಕೊಟ್ಟ ಮೊದಲ ಎರಡು ಉದಾಹರಣೆಗಳು. ಆಂತರಿಕ ರಚನೆಯಿರುವ ಪದಗಳಲ್ಲಿ ಮಾತ್ರ ಕಾಣಿಸಿಕೊಳ್ಳುತ್ತವೆ. ಇಂತಹ ಪದಗಳು ಹಿಂದೆಯೇ ಯಾವಾಗಲೋ ಸಿದ್ದವಾಗಿ ಶಬ್ದಕೋಶವನ್ನು ಸೇರಿದವುಗಳಾಗಿ ಕಂಡು ಬರುತ್ತದೆ. ಈಗ ಹೊಸದಾಗಿ ರೂಪಗೊಂಡಂತವುಗಳಲ್ಲ. ಸಂಸ್ಕೃತದಲ್ಲಿ ಪದ ಮಧ್ಯ ಹಾಗೂ ಪದಾಂತ್ಯವಾಗಿ ಅನೇಕ ಬಗೆಯ ವ್ಯಂಜನ ಸಂಧಿಗಳಿವೆ. ಉದಾಹರಣೆ ಎರಡರಲ್ಲಿ ಕೊಡಲಾದವು. ಸಂಸ್ಕೃತ ಪದಗಳು ಇವುಗಳಲ್ಲಿ ಕಂಡು ಬರುವ ಸಂಧಿಗಳು ಸಂಸ್ಕೃತದ ಸಂಧಿ ಕಾರ್ಯಗಳಾದ್ದರಿಂದ ಸಂಸ್ಕೃತದ ಸಂಧಿಗಳ ವರ್ಣನೆ ಅವಶ್ಯಕ ಎಂದು ವಾದಿಸಲು ಸಾಧ್ಯ. ಕಾರಣ ಈ ಮೇಲೆ ಹೇಳಿದಂತೆ ಕನ್ನಡದಲ್ಲಿ ಹೆಚ್ಚು ಪದಗಳು ಇರುವುದರಿಂದ ಸಂಸ್ಕೃತ ಪದಗಳ, ಸಂಧಿಗಳ ವಿವರಣೆ ಅಗತ್ಯ ಎಂದು ವಾದಿಸುವ ಒಂದು ದೊಡ್ಡ ಪಂಗಡವೆ ಇದೆ. ಆದರೆ ಈ ಸಮಸ್ಯೆಗೆ ಇನ್ನೊಂದು ರೀತಿಯ ವಿವರಣೆ ನೀಡಲು ಸಾಧ್ಯವಿದೆ. ವಿದ್ಯುತ್, ಲತೆ, ದೇಶ, ಅಂತರ ಮುಂತಾದ ಸಂಧಿಗೆ ಮೊದಲಿನ ರೂಪಗಳಂತೆ ವಿದ್ಯುಲ್ಲತೆ, ದೇಶಾಂತರ ಎಂಬ ಸಂಧಿಯಾದ ನಂತರದ ರೂಪಗಳು ಸಂಸ್ಕೃತದಿಂದ ನೇರವಾಗಿ ಸ್ವೀಕೃತವಾಗಿವೆಯೇ ವಿನಾ ಪದ, ಪ್ರತ್ಯಯಗಳು ಕನ್ನಡಕ್ಕೆ ಸ್ವೀಕೃತವಾದ ಮೇಲೆ ಸಂಧಿಯಾಗಿ ಸಿದ್ದವಾದವುಗಳಲ್ಲ ಎಂದು ವಿವರಿಸಲು ಸಾಧ್ಯವಿದೆ. ಆದ್ದರಿಂದ ಸಂಸ್ಕೃತ ಸಂಧಿಗಳು ಕನ್ನಡ ಭಾಷೆಯಲ್ಲಿ ಕಂಡು ಬರುವಂತವುಗಳಲ್ಲ ಎಂದು ಭಾವಿಸಬಹುದು. ಆದ್ದರಿಂದ ಕನ್ನಡ ಭಾಷೆಯಲ್ಲಿ ಸಂಸ್ಕೃತ ಪದಗಳಿವೆ ಎಂದು ಸಂಸ್ಕೃತ ಸಂಧಿಗಳನ್ನು ಕನ್ನಡ ಪಠ್ಯಗಳಲ್ಲಿ ಅಳವಡಿಸಿಕೊಂಡು ಬೋಧಿಸುವುದು ಎಷ್ಟರಮಟ್ಟಿಗೆ ಸರಿಯಾದ ಕ್ರಮ ಎಂಬುದನ್ನು ಅವಲೋಕಿಸಿಕೊಳ್ಳುವ ಅಗತ್ಯತೆ ಬಹಳ ಇದೆ. ನಮ್ಮಲ್ಲಿ ಸಂಸ್ಕೃತ ಪದಗಳು ಹೆಚ್ಚಾಗಿ ಪ್ರಚಲಿತದಲ್ಲಿರಲು ಕಾರಣವಿದೆ. ಏಕೆಂದರೆ ಸಂಸ್ಕೃತ ಭಾಷೆಯ ವಿದ್ವಾಂಸರ ಬರಹಗಳು ಕನ್ನಡಕ್ಕೆ ಅನುವಾದವುಗಳಾಗಿವೆ. ಈಗ ಅವುಗಳ ಬಳಕೆ ಕಡಿಮೆ ಯಾಗಿದೆ. ಉಚ್ಚಾರಣೆಯ ವಿಚಾರದಲ್ಲಂತೂ ಅವು ಕನ್ನಡದಲ್ಲಿ ಇಂದು ಇಲ್ಲದಂತಾಗಿದೆ. ಇನ್ನೊಂದು ವಿಪರ್ಯಾಸವೇನೆಂದರೆ ಕನ್ನಡ ಪದಗಳಲ್ಲಿದ್ದು ಅವುಗಳನ್ನು ಕನ್ನಡ ಪಠ್ಯಗಳಲ್ಲಿ ಕೊಡದೆ ಸಂಸ್ಕೃತ ಪದಗಳನ್ನು ಕೊಡಲಾಗಿದೆ. ಇದನ್ನು ಬದಲಾಯಿಸುವ ಅಗತ್ಯತೆ ಇದೆ. ಆದ್ದರಿಂದ ಸಂಸ್ಕೃತ ಸಂಧಿಗಳನ್ನು ಕನ್ನಡ ಪಠ್ಯಗಳಲ್ಲಿ ಬೋಧಿಸುವ ಅಗತ್ಯತೆ ಇಲ್ಲವೆಂಬಂತೆ

ಕಂಡುಬರುತ್ತದೆ. ಅದಕ್ಕಾಗಿ ಪಠ್ಯಪುಸ್ತಕ ರಚನಾ ಸಮಿತಿಯವರು ಇದನ್ನು ಪುನರಾವಲೋಕಿಸುವ ಅಗತ್ಯತೆ ಇದೆ ಎಂಬುದು ಈ ಕನ್ನಡಭಾಷಾ ಪಠ್ಯಗಳಲ್ಲಿನ ಪದಗಳಿಂದ ಸ್ಪಷ್ಟವಾಗುತ್ತದೆ.

**೫.೪. ಕನ್ನಡ ಭಾಷಾ ಪಠ್ಯಗಳಲ್ಲಿ ಪದರಚನೆ ಕಲಿಸುವ ವ್ಯವಸ್ಥೆ**

ಕರ್ನಾಟಕ ಸರ್ಕಾರ ಪ್ರಾಥಮಿಕ ಕನ್ನಡ ಭಾಷಾ ಪಠ್ಯ ಪ್ರಥಮ ಭಾಷೆಯಾಗಿ ಕಲಿಯುವ ಮಕ್ಕಳಿಗೆ ಕನ್ನಡ ಪದ ರಚನೆಯ ತಿಳುವಳಿಕೆಯ ದೃಷ್ಟಿಯನ್ನು ಇಟ್ಟುಕೊಂಡು ಕನ್ನಡ ಪ್ರಥಮ ಭಾಷೆಯ ಪಾಠ, ಪದ್ಯ ಹಾಗೂ ಭಾಷಾಭ್ಯಾಸ ಚಟುವಟಿಕೆಗಳ ಮೂಲಕ ಪದ ರಚನೆಯನ್ನು ಕಲಿಸುವ ಪ್ರಯತ್ನ ಮಾಡಿರುವುದನ್ನು ಕಾಣುತ್ತೇವೆ. ಒಂದನೇ ತರಗತಿ ಕನ್ನಡ ಕಲಿ–ನಲಿ ೧ ಪಠ್ಯದಲ್ಲಿ ಪದ ರಚನೆಗಾಗಿ ಪದ ಓದು–ಅಕ್ಷರಗಳಲ್ಲಿ ಕಲಿತ ಅಕ್ಷರ ಅಕ್ಷರಗಳಿಂದಾದ ಪದಗಳು ಎಂಬ ಹಂತಗಳನ್ನು ಕೊಡಲಾಗಿದೆ. ಉದಾಹರಣೆಗೆ : ರಸ ಎಂಬ ಪದವನ್ನು ಓದಿ 'ರ' ಕಲಿಯುವಂತೆ ಗರಗಸ ಎಂಬ ಪದವನ್ನು ಓದಿ 'ಗ' ಕಲಿಯುವಂತೆ 'ಸರ' ಎಂಬ ಪದವನ್ನು ಓದಿ 'ಸ' ದಸರ ಪದವನ್ನು ಓದಿ 'ದ' ಅಕ್ಷರವನ್ನು ಕಲಿಸುವ ಪ್ರಯತ್ನಗಳು ನಡೆದಿವೆ. ಇವನ್ನು ನೆನಪಿಸಿಕೊಳ್ಳಲು ಈ ಪದಗಳ ಚಿತ್ರಗಳನ್ನು ಸಹ ಕೊಡಲಾಗಿದೆ. ನಂತರ ಮಗುವಿಗೆ 'ಜ' ಅಕ್ಷರವನ್ನು ಸಹ ಕೊಟ್ಟು ಚಿತ್ರ ನೋಡಿ ಜನ ಎಂದು 'ವ' ಅಕ್ಷರದಿಂದ 'ವನ' ಎಂದು 'ಬ' ಅಕ್ಷರದಿಂದ ಬಸವ ಎಂದು 'ನ' ಅಕ್ಷರದಿಂದ ನಗರ ಎಂದು ಚಿತ್ರ ನೋಡಿ ಕಲಿಸುವ ಪ್ರಯತ್ನವನ್ನು ಮಾಡಲಾಗಿದೆ. ಇದೇ ವಿಧಾನವನ್ನು ತರಗತಿಯ ಪಠ್ಯದುದ್ದಕ್ಕೂ ಸರಳಪದ, ಒತ್ತಕ್ಷರ, ದೀರ್ಘಾಕ್ಷರ, ವ್ಯಂಜನಾಕ್ಷರ, ಅನುನಾಸಿಕಾಕ್ಷರಗಳಿಂದ ಬರುವ ಎರಡಕ್ಷರ, ಮೂರಕ್ಷರ ಪದಗಳನ್ನು ಕಲಿಸುವ ಪ್ರಯತ್ನವನ್ನು ಸಹ ಮಾಡಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಅಭ್ಯಾಸದ ವ್ಯವಸ್ಥೆಯನ್ನು ಮಾಡಿರುವುದನ್ನು ಕಾಣುತ್ತೇವೆ.

ಉದಾಹರಣೆಗೆ ಹೇಳುವುದಾದರೆ ಈ ಕೆಳಗಿನ ಅಕ್ಷರ ಗುಂಪಿನಲ್ಲಿರುವ ಎರಡಕ್ಷರ ಪದಗಳನ್ನು ಗುರುತಿಸಿ ಬರೆಯಿರಿ ಎಂದು ಕೇಳಲಾಗಿದೆ.

| ನ | ಅ | ಪ | ಆ | ಸ |
|---|---|---|---|---|
| ಊ | ರ | ಳ | ಟ | ಯ |
| ಟ | ಏ | ಬ | ಕ | ಮ |
| ಸ | ರ | ತ | ದ | ನ |

ಎಂದು ಕೇಳಲಾಗಿದೆ. ಇದರಿಂದ ಮಕ್ಕಳು ಈ ಅಕ್ಷರಗಳಲ್ಲಿ ಬರುವ ಎರಡಕ್ಷರ ಪದಗಳನ್ನು ಗುರುತಿಸುವಲ್ಲಿ ಸಮರ್ಥರಾಗುವರು. ಈ ವಿಧಾನವನ್ನೇ ಮುಂದುವರೆಸಿ ಮುಂದಿನ ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಮೂರಕ್ಷರದ ಪದಗಳನ್ನು ಬರೆಯಲು ಸಹ ಕೇಳಲಾಗಿದೆ.

| ಅ | ಕ | ಳ | ಸ | ದ | ಡ | ಷ |
|---|---|---|---|---|---|---|
| ಮ | ಜ | ನ | ಕ | ವ | ಲ | ಯ |
| ರ | ಭ | ಸ | ವ | ಸ | ವ | ಣ |
| ಧ | ಶ | ರ | ನ | ಚ | ಣ | ಖ |
| ಬ | ರಾ | ಳ | ಮ | ತ | ಬ | ಲ |
| ಠ | ರ | ಕ | ನ | ಕ | ರ | ಟ |

ಎರಡು ವಿಧಾನದಿಂದ ಸರಳ ಪದಗಳನ್ನು ಬರೆಯುವುದನ್ನು ಕಲಿಯುವರು. ಮಾದರಿಯಂತೆ ಅಕ್ಷರದಿಂದ ಪದರಚಿಸಿ-ಬರೆಯಿರಿ ನಂತರ ಸ್ಪಷ್ಟವಾಗಿ ಓದಿ ಎಂದು ಕೇಳಲಾಗಿದೆ.

**ಮಾದರಿ : ಆ = ಆನೆ, ಆಟ, ಆಕಳು, ಆಲ**

ಇ --- --- --- ---

ಉ --- --- --- ---

ಊ --- --- --- ---

ಎ --- --- --- ---

ಏ --- --- --- ---

ಈ ರೀತಿಯಾಗಿ ಕೊಡಲಾಗಿದೆ. ಮಾದರಿಯಲ್ಲಿ ಒಂದು ಅಕ್ಷರದಿಂದ ನಾಲ್ಕು ಪದಗಳನ್ನು ಕೊಡಲಾಗಿದೆ. ಇದನ್ನೇ ಮಕ್ಕಳು ಉಳಿದ ಅಕ್ಷರಗಳಿಗೆ ನಾಲ್ಕು ನಾಲ್ಕು ಪದಗಳನ್ನು ಬರೆಯಲು ಕೇಳಲಾಗಿದೆ. ಇದರಿಂದ ಮಕ್ಕಳು ಒಂದು ವರ್ಣದಿಂದ ಪ್ರಾರಂಭವಾಗುವ ಸರಳ ಪದಗಳನ್ನು ಸೃಜನಶೀಲತೆಯಿಂದ ಬರೆಯುವರು. ಇದರಿಂದ ಮಕ್ಕಳ ಸರಳ ಪದದ ಸಂಪತ್ತು ಹೆಚ್ಚಾಗುವುದು. ಮುಂದುವರಿದಂತೆ ಭಾಷಾ-ಚಟುವಟಿಕೆಗಳಲ್ಲಿ ಕೆಳಗಿನ ಪದಗಳನ್ನು ಗಟ್ಟಿಯಾಗಿ ಓದಿ ಬರೆಯಿರಿ ಎಂದು ಕೇಳಲಾಗಿದೆ. ಉದಾಹರಣೆಗೆ ಅಕ್ಕರೆ, ಹುಟ್ಟುಹಬ್ಬ, ಅಲಂಕರಿಸು, ಅತಿಥಿ, ಸಭಾಪತಿ, ಸಾಮೂಹಿಕ ಗೀತೆ, ವೈಭವ, ಕಲ್ಲುಸಕ್ಕರೆ, ಭಾಷಣ, ನಮಿಸಿದರು ಎಂಬ ಇತ್ಯಾದಿ ಪದಗಳನ್ನು ನೀಡಲಾಗಿದೆ. ಇದರಿಂದ ಮಕ್ಕಳು ಒತ್ತಕ್ಷರಗಳನ್ನು ಓದುವುದರ ಜೊತೆಗೆ ಒತ್ತಕ್ಷರ ಪದಗಳ ರಚನೆಯನ್ನು ಕಲಿಯುವರು. ಎರಡನೆಯ ತರಗತಿಯಲ್ಲಿ ಮಕ್ಕಳ ವಯೋಮಾನಕ್ಕೆ ತಕ್ಕಂತೆ ಪದರಚನಾ ವಿನ್ಯಾಸವನ್ನು ಹೇಳಿ ಕೊಡುವ ಪ್ರಯತ್ನ ಮಾಡಲಾಗಿದೆ. ಉದಾಹರಣೆಗೆ ಪ್ರಾಸ ಪದಗಳನ್ನು ಹೇಳಿಸಿ ಎಂದು ಕೇಳಲಾಗಿದೆ.

ಸುತ್ತಲು – ಎತ್ತಲು – ಜಗ್ಗಿದ –

ಕುಣಿಯಲಿ – ತಣಿಯಲಿ – ಪುಟ್ಟ –

ಮರದಲಿ – ಮರೆಯಲಿ – ಇದೇ ರೀತಿ ಈ ಗಾದೆ ಮಾತುಗಳನ್ನು ಓದಿ, ಗೆರೆ ಹಾಕಿದ ಪದಗಳನ್ನು ಗಮನಿಸಿ ಎಂದು ಕೇಳಲಾಗಿದೆ.

ಅತಿ ಆಸೆ ಗತಿ ಗೆಡಿಸಿತು.

ಇದ್ರೆ ಈ ಊರು ಎದ್ರೆ ಮುಂದಿನ ಊರು

ತಾಳಿದವನು ಬಾಳಿಯಾನು

ರಟ್ಟೆ ಮುರಿದು ರೊಟ್ಟಿ ತಿನ್ನು

ಈ ಎರಡು ವಿಧಾನಗಳು ಮಕ್ಕಳಿಗೆ ಪ್ರಾಸ ಪದಗಳನ್ನು ಪರಿಚಯಿಸುವ ಉದ್ದೇಶವನ್ನು ಹೊಂದಿದೆ. ಇದರಿಂದ ಸುಲಭವಾಗಿ ಕಲಿಯುತ್ತಾರೆ ಮತ್ತು ನೆನಪಿನಲ್ಲಿಟ್ಟು ಕೊಳ್ಳುತ್ತಾರೆ. ಇದರಿಂದ ಮಕ್ಕಳ ಪದ ಸಂಪತ್ತು ಹೆಚ್ಚಾಗುತ್ತದೆ. ಚಿತ್ರಕ್ಕೆ ಪದ ಹೊಂದಿಸಿ ಓದಿ ಬರೆಯಿರಿ ಎಂಬ ಪ್ರಶ್ನೆಗಳನ್ನು ಕೇಳಲಾಗಿದೆ.

| **ಕೊಟ್ಟಿರುವ ಚಿತ್ರಗಳು** | **ಪದ** |
|---|---|
| * ಉಳಿ ಚಿತ್ರ | ಆಮೆ |
| * ಔಷಧ ಚಿತ್ರ | ಐರಾವತ |
| * ಇನ ಚಿತ್ರ | ಔಷಧ |
| * ಆನೆ ಚಿತ್ರ | ಉಳಿ |
| * ಆಮೆ ಚಿತ್ರ | ಇನ |

ಈ ವಿಧಾನವನ್ನು ಕೊಟ್ಟಿರುವ ಉದ್ದೇಶ ತಮ್ಮ ಸುತ್ತಮುತ್ತಲಿನ ವಾತಾವರಣದಲ್ಲಿ ಕಾಣುವ ವಸ್ತು, ಪ್ರಾಣಿಗಳ ಹೆಸರನ್ನು ತಿಳಿಸುವ ಉದ್ದೇಶ ಹೊಂದಿದೆ. ಇಲ್ಲಿ ಚಿತ್ರದ ಮುಂದೆ ಬೇರೆ ಪದ ರಚನೆ ಇರುವುದರಿಂದ ಮಗು ಚಿತ್ರವನ್ನು ಗಮನಿಸಿ ಆ ಚಿತ್ರಕ್ಕೆ ತಕ್ಕಂತ ಪದವನ್ನು ಗ್ರಹಿಸಿ ಸರಿಪಡಿಸುವುದರಿಂದ ಮಕ್ಕಳು ಪದಗಳನ್ನು ಸುಲಭವಾಗಿ ಗ್ರಹಿಸಬಲ್ಲರು. ಆದರೆ ನಮ್ಮ ಪರಿಸರದಲ್ಲಿ 'ಇನ' ಮತ್ತು 'ಉಳಿ' 'ಐರಾವತ' ಎಂಬ ಪದಗಳು ಎಷ್ಟರಮಟ್ಟಿಗೆ ಬಳಕೆಯಾಗುತ್ತವೆ ಎಂಬುದು ಮುಖ್ಯವಾದ ಪ್ರಶ್ನೆಯಾಗುತ್ತದೆ.

ಮಿಂಚು ಪಟ್ಟಿಗಳ ಅಕ್ಷರ ಸೇರಿಸಿ ಮೂರಕ್ಷರದ ಪದ ಮಾಡಿ ಎಂಬ ಪ್ರಶ್ನೆಯನ್ನು ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಕೇಳಲಾಗಿದೆ.

ಉದಾಹರಣೆಗೆ :

ಯ ಗ ನ ವಿ ರ ಜ

ಮಾದರಿ : ನಗರ --- --- --- --- ---

--- --- --- --- ---

ಇದನ್ನು ಕೊಟ್ಟಿರುವ ಉದ್ದೇಶ ಈ ವರ್ಣಗಳಿಂದ ಸರಳ ಪದಗಳ ರಚನೆಯನ್ನು ಅರಿಯುತ್ತಾರಲ್ಲದೆ ಸುಲಭವಾಗಿ ಬರೆಯುತ್ತಾರೆ. ಆದರೆ ಮಗುವಿಗೆ ಎಲ್ಲಿಯೂ ಮಿಂಚು ಅಕ್ಷರಗಳೆಂದು ಕಲಿಸಿರುವುದಿಲ್ಲ. ಆದರೆ ಭಾಷಾಭ್ಯಾಸದಲ್ಲಿ ಇಂತಹ ಚಟುವಟಿಕೆಗಳ ಅಗತ್ಯತೆಯಾದರು ಏನು ಎಂಬುದನ್ನು ಸ್ಪಷ್ಟ ಪಡಿಸಬೇಕು. ಮಗುವಿಗೆ ಮಿಂಚು ಎಂಬ ವರ್ಣಗಳ ಮಾಹಿತಿ ದೊರಕದೆ ಮಿಂಚು ವರ್ಣಗಳ ಸಹಾಯದಿಂದ ಪದರಚನೆ ಮಾಡಿಸುವ ವಿಧಾನವನ್ನು ಕಲಿಸುವ ಅಗತ್ಯತೆಯಾಧರು ಏನು? ಮಕ್ಕಳಿಗೆ ಇದರಿಂದ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯುವ ಸಾಧ್ಯತೆ ಹೆಚ್ಚಾಗಿದೆ. ಕೆಲವೊಂದು ಸಂದರ್ಭಗಳಲ್ಲಿ ವಾಸ ಸ್ಥಳಗಳನ್ನು ಹೊಂದಿಸಿ ಬರೆಯಿರಿ ಎಂದು ಭಾಷಾಭ್ಯಾಸದಲ್ಲಿ ಕೇಳಲಾಗಿದೆ.

| ಅ | ಆ |
|---|---|
| ಮನೆ | ಮರ ಕುಟಿಕ |
| ಗುಹೆ | ಹಕ್ಕಿ |
| ಗೂಡು | ಹಾವು |
| ಪೊಟರೆ | ಸಿಂಹ |
| ಹುತ್ತ | ಮನುಷ್ಯ |

ಈ ವಿಧಾನದಿಂದ ಮಕ್ಕಳು ಮನುಷ್ಯ ಮತ್ತು ಪ್ರಾಣಿಗಳು ವಾಸಿಸುವ ಸ್ಥಳಗಳ (ನಾಮಪದಗಳನ್ನು) ಕಲಿಯುತ್ತಾರೆ. ಜೊತೆಗೆ ಪ್ರಾಣಿಗಳು ವಾಸಿಸುವ ಸ್ಥಳಗಳ ಪದಗಳನ್ನು ಕಲಿಯುತ್ತಾರೆ. ನಂತರ ಬಿಟ್ಟ ಪದಗಳನ್ನು ತುಂಬಿರಿ ಎಂಬ ಪ್ರಶ್ನೆಗಳನ್ನು ಕೇಳಲಾಗಿದೆ.

* ಬಾಗಿಲಿಗೆ ...................... ಕಟ್ಟಿದರು
* ತೊಟ್ಟಿಲಿಗೆ ..................... ಮಾಡುತ್ತಿದ್ದರು
* ಮಗು ..................... ಹಾಗೆ ಇದೆ. ಇತ್ಯಾದಿ ಈ ತರಹದ

ಪ್ರಶ್ನೆಗಳನ್ನು ಕೊಡಲಾಗಿದೆ. ಮಗು ಪಾಠದಲ್ಲಿ ಕಲಿತ ಪದವನ್ನು ಅನುಸರಿಸಿ ಇಲ್ಲಿ ಬರೆಯಬೇಕು. ಇದರಿಂದ ಮಗು ವಾಕ್ಯದಲ್ಲಿ ಸರಿಯಾದ ಪದ ಬಳಕೆಯ ವಿಧಾನವನ್ನು ಕಲಿಯುತ್ತದೆ.

ಅಣ್ಣ – ತಂಗಿ

ತಂದೆ – ತಾಯಿ

ಮಾವ – ಅತ್ತೆ

ಸೋದರ – ಸೋದರಿ

ಗೆಳೆಯ – ಗೆಳತಿ

ಇತ್ಯಾದಿ ಪದಗಳನ್ನು ತಿಳಿಯಿರಿ ಎಂದು ಚಟುವಟಿಕೆಯಲ್ಲಿ ನೀಡಲಾಗಿದೆ. ಇದರಿಂದ ವಿದ್ಯಾರ್ಥಿಗಳು ಸಂಬಂಧವಾಚಕ ಶಬ್ದಗಳನ್ನು ಪರಿಚಯ ಮಾಡಿಕೊಳ್ಳುವರು. ಜೊತೆಗೆ ಬಳಸುವ ಕ್ರಮವನ್ನು ಕಲಿಸುವ ದೃಷ್ಟಿಯಿಂದ ಇವುಗಳನ್ನು ಕೊಟ್ಟಂತೆ ತೋರುತ್ತದೆ.

ಮಾದರಿಯಂತೆ ಬರೆಯಿರಿ ಎಂಬ ಪ್ರಶ್ನೆಗಳನ್ನು ಕೇಳಲಾಗಿದೆ.

**ಮಾದರಿ :**

ಮರ – ಮರಗಳು

ಪ್ರಾಣಿ –

ಬಾಲಕ –

ಒಡನಾಡಿ –

ಹಕ್ಕಿ –

ಈ ವಿಧಾನದ ಉದ್ದೇಶ ಮಕ್ಕಳಿಗೆ 'ಗಳು' ಎಂಬ ಪ್ರತ್ಯಯವು ಯಾವ ಪದಗಳಿಗೆ ಸೇರಿಸಿ ಪದ ರಚನೆಯನ್ನು ಮಾಡಬಹುದು ಎಂಬುದನ್ನು ತಿಳಿಸಿಕೊಡುವ ಪ್ರಯತ್ನದ ಸಲುವಾಗಿ ಇಂತಹ ಪ್ರಶ್ನೆಗಳನ್ನು ನೀಡಿದಂತೆ ಕಂಡು ಬರುತ್ತದೆ.

ಅಣ್ಯರ –

ಸಮಂಭ್ರ –

ಒಡಡಿನಾ –

ನಗಡು –

ಇತ್ಯಾದಿ ವರ್ಣಗಳನ್ನು ಅದಲು ಬದಲು ಕೊಟ್ಟು ಅಕ್ಷರಗಳನ್ನು ಸರಿಯಾಗಿ ಜೋಡಿಸಿ ಪದ ಬರೆಯಿರಿ ಎಂದು ಪ್ರಶ್ನೆ ಮಾಡಲಾಗಿದೆ. ಇದರ ಉದ್ದೇಶ ಮಕ್ಕಳು ಪದವನ್ನು ರಚಿಸುವಾಗ ಸರಿಯಾದ ವರ್ಣಮಾಲೆಗಳನ್ನು, ಒತ್ತಕ್ಷರಗಳನ್ನು ಬಳಸಿ ರಚಿಸುವ ಸೃಜನಶೀಲತೆಯ ಬೆಳವಣಿಗೆಗಾಗಿ ಈ ಪ್ರಶ್ನೆಗಳನ್ನು ಕೊಡಲಾಗಿದೆ. ಗುಂಪಿಗೆ ಸೇರದ ಪದವನ್ನು ಗುರುತಿಸಿ ಎಂದು ಕೆಲವೊಂದು ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಕೊಡಲಾಗಿದೆ.

ಉದಾಹರಣೆಗೆ :

| | | | | |
|---|---|---|---|---|
| ೧. | ಚಕ್ಕುಲಿ | ಚೂಡ | ರುಚಿಕರ | ಪೇಡ |
| ೨. | ಪತ್ರ, | ವರ್ತಮಾನ ಪತ್ರ | ಭಿತ್ತಿಪತ್ರ, | ಪುಸ್ತಕ |
| ೩. | ಪೌಡರ್ | ಬಳೆ | ಶಾಂಪೂ, | ಲಿಪ್‌ಸ್ಟಿಕ್ |
| ೪. | ಅನುದಿನ, | ಪ್ರತಿದಿನ | ದಿನಾಲು, | ದಿನ ಬಿಟ್ಟು ದಿನ |

ಇದರ ಉದ್ದೇಶ ಮಕ್ಕಳು ಪದ ಬಳಕೆಯನ್ನು ಯಾವ ಯಾವ ಹಂತಗಳಲ್ಲಿ ಬಳಸುವ ವಿಧಾನವನ್ನು ಕಲಿಸುವುದಾಗಿದೆ. ಜೊತೆಗೆ ಒಂದು ಪ್ರಶ್ನೆಯ ಮೂರು ಪದಗಳು ಒಂದು ವಸ್ತುವನ್ನು ಅಥವಾ ಒಂದು ಸಂದರ್ಭವನ್ನು ಸೂಚಿಸುತ್ತವೆ. ಇನ್ನೊಂದು ಪದ ಬೇರೆ ವಸ್ತು ಅಥವಾ ಸಂದರ್ಭವನ್ನು ನಿಭಾಯಿಸುತ್ತಿರುತ್ತದೆ. ಇದರಿಂದ ಮಕ್ಕಳು ಸಂದರ್ಭಕ್ಕೆ ತಕ್ಕಂತೆ ಪದಗಳ ಬಳಕೆಯ ವಿಧಾನವನ್ನು ಕಲಿಯುತ್ತದೆ. ಒಂದು ವಸ್ತು ಅಥವಾ ನಿದರ್ಶನಕ್ಕೆ ಬರುವ ಗುಂಪುಗಳ ಪದಗಳನ್ನು ತಿಳಿಸುವ ಪದಗಳನ್ನು ಪರಿಚಯಿಸುವ ಉದ್ದೇಶವನ್ನು ಸಹ ಹೊಂದಿದೆ. ಇದರಿಂದ ಮಕ್ಕಳ ಪದ ಬಳಕೆಯ ವಿಧಾನ ಸುಧಾರಿಸುವುದು.

ಭಾಷಾಭ್ಯಾಸ ಚಟುವಟಿಕೆಯಲ್ಲಿ ಕೇಂದ್ರದಲ್ಲಿರುವ ಅಕ್ಷರವನ್ನು ವೃತ್ತ ಪರಿಧಿಯ ಅಕ್ಷರದೊಡನೆ ಹೊಂದಿಸಿ ಪದ ಹೇಳಿರಿ ಎಂದು ಪ್ರಶ್ನೆಗಳನ್ನು ಕೇಳಲಾಗಿದೆ.

ಮಾದರಿ : ಅಂಗ




ಇದನ್ನು ಪ್ರಶ್ನಿಸಿರುವ ಉದ್ದೇಶ 'ಅ' ಎಂಬ ವರ್ಣದ ಪ್ರಾರಂಭವಾಗುವ ಪದಗಳ ರಚನೆಯನ್ನು ಮಾಡಿಸುವುದಾಗಿದೆ. ಇದರಿಂದ ಮಕ್ಕಳು 'ಅ' ವರ್ಣದಿಂದ ಪ್ರಾರಂಭವಾಗುವ ಪದಗಳನ್ನು ಕುರಿತು ಪದ ಬಳಸುವುದನ್ನು ಕಲಿಯುವರು.

ದಿನಾಲೂ-ಇತ್ಯಾದಿ ಮಾತನಾಡುವ ರೂಪಗಳನ್ನು ಕೊಡಲಾಗಿದೆ. ಇದರ ಉದ್ದೇಶ ಮಾತನಾಡುವ ಭಾಷೆ ಬರಹದ ಭಾಷೆಗೆ ಭಿನ್ನವಾದುದು, ಮತ್ತು ಶಿಷ್ಟರೂಪವುಳ್ಳದ್ದು ಎಂಬುದನ್ನು ತಿಳಿಸುವುದಾಗಿದೆ. ಇದರಿಂದ ವಿದ್ಯಾರ್ಥಿಗಳು ಮಾತನಾಡುವ ಪದದ ಪರಿಚಯದ ಜೊತೆಗೆ ಬರಹದ ರೂಪದ ಪದವನ್ನು ಕಲಿಯುತ್ತಾರೆ. ಆದರೆ ಇದು ಒಳ್ಳೆಯ ಮಾರ್ಗ ವೆನಿಸಲಾರದು. ಬರಹದ ಮಾತು ಮತ್ತು ಮಾತನಾಡುವ ಎರಡು ರೂಪಗಳು ಒಂದೇ ಆಗಬೇಕು. ಇಲ್ಲವಾದಲ್ಲಿ ಬರಹದ ಕನ್ನಡ ರೂಪ ಮಾತನಾಡುವ ಕನ್ನಡ ರೂಪ ಎಂದು ಭೇದ ಮಾಡಿ ತೋರಿಸಿದಂತಾಗುತ್ತದೆ. ಆದ್ದರಿಂದ ಎರಡು ರೂಪಗಳಲ್ಲು ಒಂದೇ ರೀತಿ ಇರುವಂತೆ ಪಠ್ಯ ರಚನೆಯ ಅಗತ್ಯತೆ ಇದೆ ಎಂಬಂತೆ ತೋರುತ್ತದೆ. ಇದರಿಂದ ವಿದ್ಯಾರ್ಥಿಗಳ ಕಲಿಕೆ ಸುಲಭವಾಗಿ ಅರ್ಥಪೂರ್ಣವಾಗಬಲ್ಲದು.

ಪಠ್ಯಗಳಲ್ಲಿ ಕೊಟ್ಟಿರುವ ಪದ ಗಮನಿಸಿ ವಿರುದ್ಧಾರ್ಥಕ ಬರೆಯಿರಿ ಎಂದು ಪ್ರಶ್ನೆಯನ್ನು ಮಾಡಲಾಗಿದೆ. ಉದಾಹರಣೆಗೆ :

ಹತ್ತು X –

ದೊಡ್ಡ X –

ಸಿಟ್ಟು X –

ಅರಳು X –

ಹೆದರು X – ಇತ್ಯಾದಿ ರೂಪಗಳನ್ನು ಕೊಡಲಾಗಿದೆ. ಇದರ ಉದ್ದೇಶ ಪದ ಗುಚ್ಛಗಳನ್ನು ವಿದ್ಯಾರ್ಥಿಗಳಿಗೆ ಹೆಚ್ಚಿಸುವ ಉದ್ದೇಶವನ್ನು ಹೊಂದಿದೆ. ಅಲ್ಲದೆ ಆ ಪದಕ್ಕೆ ಬರುವ ವಿರುದ್ಧ ಪದವನ್ನು ಕಲಿಸುವುದಾಗಿದೆ. ಆದರೆ ಈ ಪ್ರಶ್ನೆ ಕೇಳುವ ಕ್ರಮ ಅಷ್ಟೊಂದು ಸಮಂಜಸವಾದುದದಲ್ಲ. ಏಕೆಂದರೆ ಕನ್ನಡದಲ್ಲಿ ಹೆಚ್ಚಾಗಿ ನಿಷೇದಾರ್ಥಕ ಪದಗಳು ಬರುತ್ತವೆ. ಇದನ್ನು ನಿಷೇದಾರ್ಥಕ ಪದವೆನ್ನಬಹುದು. ಕನ್ನಡದಲ್ಲಿ ವಿರುದ್ಧಾರ್ಥಕ ಪದಗಳ ಪ್ರಮಾಣ ಕಡಿಮೆ. ಇದಕ್ಕಿಂತ ಮುಖ್ಯವಾಗಿ ನಾವು ಮಕ್ಕಳಿಗೆ ಸಂಸ್ಕೃತಿಯ ದೃಷ್ಟಿಯಿಂದ ಈ ಪ್ರಶ್ನೆಗಳನ್ನು ಕೇಳುವುದು ಅಷ್ಟೊಂದು ಸಮಂಜಸವಲ್ಲ. ಕಾರಣ ಮಗುವಿಗೆ 'ತಂದೆ'ಯ ವಿರುದ್ಧ ಪದ ಯಾವುದು ಎಂದರೆ 'ತಾಯಿ' ಎಂದು ಹೇಳುತ್ತದೆ. 'ಹಿಂದೂ' ಎಂಬ ಪದಕ್ಕೆ ವಿರುದ್ಧವಾದ ಪದ ಕೇಳಿದರೆ 'ಮುಸ್ಲಿಂ' ಎಂದು ಹೇಳುವುದನ್ನು ನಮ್ಮ ಸಮಾಜದ ಔಪಚಾರಿಕ ಚಟುವಟಿಕೆಯ ಸಂದರ್ಭದಲ್ಲಿ ಕಾಣಬಹುದು. ಆದ್ದರಿಂದ ಇದನ್ನು ಪಠ್ಯಪುಸ್ತಕ ರಚನಾ ಸಮಿತಿ ಪುನರಾವಲೋಕಿಸುವುದು ಅಗತ್ಯ ಬಹಳ ಇದೆ ಎಂಬಂತೆ ಕಂಡು ಬರುತ್ತದೆ.

ಕೆಳಗಿನ ಮಾದರಿ ಪದಬಳ್ಳಿ ಗಮನಿಸಿ ಎಂದು ಕೇಳಲಾಗಿದೆ. ಉದಾಹರಣೆಗೆ

ಕುಣಿ – ಜಿಗಿ – ನೆಗೆ – ಹಾರು – ನಲಿ – ನರ್ತಿಸು

ಭಯ – ಹೆದರು – ಅಂಜಿಕೆ – ಗಾಬರಿ – ನಡುಗು – ಬೆದರು

ಸಂತೋಷ – ಆನಂದ – ಸಂತಸ – ಉಲ್ಲಾಸ – ಹಿಗ್ಗು – ತಣಿ

ಆಸೆ – ಭಯಕೆ – ಇಚ್ಛೆ – ಆಪೇಕ್ಷೆ – ಅಭಿಲಾಷೆ – ಆಕಾಂಕ್ಷೆ ಇತ್ಯಾದಿ ರೀತಿಯ ಪದಗಳ ಬಳ್ಳಿಯನ್ನು ಕೊಡಲಾಗಿದೆ. ಇದರಿಂದ ಮಕ್ಕಳು ಒಂದು ಪದವನ್ನು ಹಿಗ್ಗಿಸುತ್ತಾ ಹೋದಂತೆ ಮಕ್ಕಳು ವಿವಿಧ ಅರ್ಥ ರೂಪಗಳನ್ನು ತಿಳಿಯುತ್ತಾರೆ ಎಂಬ ಕಾರಣಕ್ಕಾಗಿ ಈ ಪದ ಬಳ್ಳಿಯನ್ನು ಕೊಟ್ಟಂತೆ ಕಾಣುತ್ತದೆ. ಇದರಿಂದ ಮಕ್ಕಳು ಒಂದು ಪದದ ವಿವಿಧ ಅರ್ಥಗಳನ್ನು ತಿಳಿದು, ಪದ ಸಂಪತ್ತನ್ನು ಹೆಚ್ಚಿಸಿಕೊಳ್ಳುತ್ತಾರೆ.

ವಿದ್ಯಾರ್ಥಿಗಳಿಗೆ ಪದ ರಚನೆಯ ಸೃಜನಶೀಲ ಬೆಳವಣಿಗೆಗಾಗಿ ಆಟದ ಮೂಲಕ ಪದಗಳನ್ನು ಕಲಿಸುವ ಪ್ರಯತ್ನ ನಡೆದಿದೆ. ಉದಾಹರಣೆಗೆ : ಬಿಟ್ಟ ಪದವನ್ನು ಮಾದರಿಯಂತೆ ಹೇಳುವ ಆಟ ಆಡಿ ಎಂದು ಕೇಳಲಾಗಿದೆ. ಇದಕ್ಕೆ ಸೂಚನೆಯ ಭಾಗದಲ್ಲಿ 'ಅ' ಗುಂಪು ಒಂದು ಪದ ಹೇಳಿದರೆ. 'ಆ' ಗುಂಪು ಅದಕ್ಕೆ ಸಂಬಂಧಿಸಿದ ಪದ ಹೇಳಲಿ ಎಂದು ಹೇಳಲಾಗಿದೆ.

ಮಾದರಿ : ತಳಿರು – ತೋರಣ

| 'ಅ' ಗುಂಪು | 'ಆ' ಗುಂಪು |
|---|---|
| – | ವೇಷ |
| ಹೂ | – |
| – | ಕಾಯಿ |
| ಹಾಲು | – |
| – | ನಡೆ |
| ಉಡುಗೆ | – |
| – | ಡೊಂಕು |
| ಲಾಲನೆ | – |

ಈ ರೀತಿಯಾಗಿ ಕೇಳಲಾಗಿದೆ. ಆಟದ ಮೂಲಕ ಪಾಠ ನಡೆಯುತ್ತದೆ. ಇದರಿಂದ ಮಕ್ಕಳು ಈ ಎಲ್ಲಾ ಪಠ್ಯಗಳು ಸಾಮಾಜಿಕ ಸಂವಹನದಲ್ಲಿ ಬಳಕೆಯಾಗುವ ಧ್ವನಿ, ಪದ,

ವಾಕ್ಯ, ಪದಕೋಶಗಳು ಎಷ್ಟರಮಟ್ಟಿಗೆ ಬಳಕೆಯಾಗುತ್ತವೆ ಎಂಬುದನ್ನು ನೋಡಬೇಕಿದೆ. ಭಾಷಾ ದೃಷ್ಟಿಯಿಂದ ಶಿಕ್ಷಣದ ದೃಷ್ಟಿಯಿಂದ ಈ ಎಲ್ಲಾ ಪಠ್ಯಗಳನ್ನು ಪಠ್ಯಕ್ರಮದ ಹಿನ್ನೆಲೆಯಲ್ಲಿ ಗಮನಿಸಬೇಕಿದೆ. ಅಲ್ಲದೆ ರಾಜ್ಯ, ರಾಷ್ಟ್ರ, ಅಂತರಾಷ್ಟ್ರೀಯ, ಭಾಷೆ, ನಾಡಹಬ್ಬಗಳು, ಸಂಸ್ಕೃತಿಯ ದೃಷ್ಟಿಯಿಂದ ಏನನ್ನು ಕಲಿಯುತ್ತಿವೆ ಅಥವಾ ಏನನ್ನು ಕಲಿಸುತ್ತಿದ್ದಾರೆ ಎಂಬುದನ್ನು ಗಮನಿಸಬೇಕಿದೆ. ಇಂದು ಸಂಸ್ಕೃತಿ ಎಂಬುದು ಇಂದಿನ ವಿದ್ಯಾರ್ಥಿಗಳಲ್ಲಿ ಇಲ್ಲ ಎಂಬ ಕೂಗು ಏಕೆ ಕೇಳಿ ಬರುತ್ತಿದೆ. ಎಂಬುದನ್ನು ತಿಳಿಯಬೇಕಾಗಿದೆ.

ನಾಲ್ಕನೇ ತರಗತಿಯ ಪುಸ್ತಕದಲ್ಲಿಯೂ ಸಹ ಹಿಂದಿನ ತರಗತಿಗಳ ಪಠ್ಯದಲ್ಲಿ ಪದ ರಚನೆಯ ಕಲಿಕೆಗೆ ಆದ್ಯತೆ ನೀಡಿದಂತೆ ಈ ತರಗತಿಯ ಮಕ್ಕಳ ವಯಸ್ಸಿಗೆ ಅನುಗುಣವಾಗಿ ಪದರಚನೆಯನ್ನು ಹೇಳಿಕೊಡುವ ಪ್ರಯತ್ನಗಳು ನಡೆದಿರುವುದನ್ನು ಕಾಣಬಹುದು.

ಮಾದರಿಯಲ್ಲಿ ಸೂಚಿಸಿರುವಂತೆ ಸೂಕ್ತ ಪದ ರಚಿಸಿ ಬರೆಯಿರಿ ಎಂದು ಭಾಷಾಭ್ಯಾಸ ಗಳಲ್ಲಿ ಕೇಳಲಾಗಿದೆ.

**ಮಾದರಿ : ೧ ತವರೂರು – ತವರು+ ಊರು**

ಬೇರೂರು – .................

ಕಾಲೂರು – .................

ನನ್ನೂರು – .................

ನಮ್ಮೂರು – .................

**ಮಾದರಿ : ೨ ಬೀಡಿದು – ಬೀಡು + ಇದು**

ಊರಿದು – .................

ನಾಡಿದು – .................

ಹಾಡಿದು – .................

ಕಾಡಿದು – .................

**ಮಾದರಿ : ೩ ನಮ್ಮ – ನಮ್ಮದು – ನಮ್ಮವರು**

ನನ್ನ – ................. – .................

ನಿನ್ನ – ................. – .................

ನಿಮ್ಮ – ................. – .................

ತಮ್ಮ – ................. – .................

ಈ ಪ್ರಶ್ನೆಯಲ್ಲಿ ಬರುವ ಮೂರು ಮಾದರಿಗಳ ಉದ್ದೇಶ ಊರು, ಇದು, ದು, ಅರು, ಎಂಬ ಪ್ರತ್ಯಯಗಳು ಯಾವ ಪದಗಳಿಗೆ ಸೇರುತ್ತವೆ ಎಂಬುದನ್ನು ತಿಳಿಸಲು ಪ್ರಯತ್ನಿಸಲಾಗಿದೆ. ಅಂತಹ ಪದಗಳನ್ನು ಕೊಟ್ಟು ಈ ಪದಗಳಲ್ಲಿ ಪ್ರತ್ಯಯಗಳು ಇವೆಯೇ ಎಂಬುದನ್ನು ತಿಳಿಸುವುದಾಗಿದೆ. ಇದರಿಂದ ಮಕ್ಕಳು ಸಮಸ್ತ ಪದವನ್ನು ಬಿಡಿಸಿ ಬರೆದು, ಅದರ ವಿಗ್ರಹ ರೂಪವನ್ನು ತಿಳಿಯುವಲ್ಲಿ ಸಮರ್ಥರಾಗುವರು. ಇದರಿಂದ ಮಕ್ಕಳು ಯಾವ ಪದಗಳನ್ನು ಬಿಡಿಸಿ ವಿಗ್ರಹ ರೂಪವನ್ನು ಬರೆಯಲು ಸಾಧ್ಯ ಎಂಬುದನ್ನು ತಿಳಿಯುತ್ತಾರೆ. ಆದರೆ ಬಿಡಿಸಲಾಗದ ಪದಗಳಿಗೆ ಸರಿಯಾದ ವಿವರಣೆಯನ್ನು ಎಲ್ಲಿಯೂ ಕೊಟ್ಟಿಲ್ಲ. ಇದಲ್ಲದೆ ಪದ ರಚನೆಯ ತಿಳುವಳಿಕೆಯ ಕೌಶಲಕ್ಕಾಗಿ 'ಕ' ಅಕ್ಷರದಿಂದ ಪ್ರಾರಂಭವಾಗುವ ಪದಗಳನ್ನು ತುಂಬಿ ಎಂದು ಪ್ರಶ್ನೆ ಮಾಡಲಾಗಿದೆ.

| ಮಾದರಿ : ಈ ಬೆಳೆಯಿಂದ ಸಕ್ಕರೆ ತಯಾರಿಸುವರು | ಕ | ಬ್ಬು | | | | |
|---|---|---|---|---|---|---|
| ಮಕ್ಕಳಿಗೆ ಇಷ್ಟವಾದುದು | | | | | | |
| ಕವಿ ಬರೆದ ಹಾಡು | | | | | | |
| ಹಾಡು ಬರೆಯುವವರು | | | | | | |
| ನಮ್ಮ ನಾಡು | | | | | | |
| ನಮ್ಮ ರಾಜ್ಯ | | | | | | |

ಈ ವಿಧಾನವು ಮುಖ್ಯವಾದ ವಿಧಾನವಾಗಿದ್ದು 'ಕ' ದಿಂದ ಪ್ರಾರಂಭವಾಗುವ ೨ ೩, ೪, ೫, ೬, (ಕ್ರಮವಾಗಿ) ಅಕ್ಷರಗಳ ಪದಗಳನ್ನು ಕೇಳಲಾಗಿದೆ. ಇದರಿಂದ ಮಕ್ಕಳು ಸರಳ ಪದದಿಂದ ವಿಶಿಷ್ಟವಾದ ಪದ ರಚನೆಯನ್ನು ತಿಳಿದು ಪದ ಸಂಪತ್ತನ್ನು ಹೆಚ್ಚಿಸಿಕೊಳ್ಳುವರು. ಜೊತೆಗೆ ನಮ್ಮ ನಾಡು, ರಾಜ್ಯ 'ಕ' ವರ್ಣದಿಂದ ಪದ ರಚನೆಯಾಗುತ್ತದೆ ಎಂಬುದನ್ನು ತಿಳಿದುಕೊಳ್ಳುವರು. ಮುಖ್ಯೋಪಾಧ್ಯಾಯ, ಯುವಕ, ಸದಸ್ಯ, ವೈದ್ಯ, ಅಧ್ಯಕ್ಷ, ತಜ್ಞ ಎಂಬ ಇತ್ಯಾದಿ ಪದಗಳನ್ನು ಕೊಟ್ಟು ಸ್ತ್ರೀ ರೂಪ ಬರೆಯಿರಿ ಎಂದು ಕೇಳಲಾಗಿದೆ. ಇದರಿಂದ ಮಕ್ಕಳು ಹೊಸ ಪದಗಳನ್ನು ಕಲಿಯುತ್ತಾರಲ್ಲದೆ, ಲಿಂಗಗಳಲ್ಲಿ ಬದಲಾವಣೆ ಹೊಂದುವ ಪದಗಳ ಪದ ಸಂಪತ್ತನ್ನು ತಿಳಿಯುತ್ತಾರೆ. ಜೊತೆಗೆ ಪದಗಳನ್ನು ಸಂದರ್ಭಕ್ಕೆ ತಕ್ಕಂತೆ ಬಳಸುವ ವಿಧಾನವನ್ನು ಕಲಿಯುವರು.

ಕೆಲವೊಂದು ಪಾಠಗಳ ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಮಾದರಿಯಲ್ಲಿ ಸೂಚಿಸಿರುವಂತೆ ಸೂಕ್ತ ಪದ ರಚಿಸಿ – ಬರೆಯಿರಿ ಎಂದು ಪ್ರಶ್ನೆ ಮಾಡಲಾಗಿದೆ.

ಮಾದರಿ : ಹಣ–ಹಣವಂತ

ಬುದ್ಧಿ ................

ಗುಣ ................

ಶೀಲ ................

ಶಕ್ತಿ ................

ಭಾಗ್ಯ ................ ಇತ್ಯಾದಿ ಪದಗಳನ್ನು ಕೊಟ್ಟಿದ್ದಾರೆ. ಮಾದರಿಯಲ್ಲಿ ರುವಂತೆ ಮಕ್ಕಳು ಬುದ್ಧಿವಂತ, ಗುಣವಂತ, ಶೀಲವಂತ, ಶಕ್ತಿವಂತ, ಭಾಗ್ಯವಂತ ಎಂದು ಬರೆಯುತ್ತಾರೆ. ಇದರಿಂದ ಮಕ್ಕಳು ಗುಣವಾಚಕ ಶಬ್ಧಗಳನ್ನು ಗ್ರಹಿಸುತ್ತಾರೆ. ಅಲ್ಲದೆ 'ವಂತ' ಎಂಬುದು ಯಾವ ಪದಗಳಿಗೆ ಸೇರಿಸಿದರೆ ಅರ್ಥಕ್ಕೆ ಭಾದೆ ಬರುವುದಿಲ್ಲ ಎಂಬುದನ್ನು ಕಲಿಸುವ ದೃಷ್ಟಿಯಿಂದ ಈ ವಿಧಾನವನ್ನು ಹೇಳಿ ಕೊಡಲಾಗುತ್ತದೆ ಎಂಬಂತೆ ತೋರುತ್ತದೆ. ಮುಂದುವರೆದಂತೆ ಪಕ್ಷಿತಜ್ಞ ................ ಶಿಕ್ಷಣತಜ್ಞ ................ ಪರಿಸರತಜ್ಞ ................ಗಣಿತಜ್ಞ ................ ಎಂಬ ಇತ್ಯಾದಿ ಪದಗಳನ್ನು ಕೊಟ್ಟು ಕೊಟ್ಟಿರುವ ಪದಗಳನ್ನು ಸ್ಪಷ್ಟವಾಗಿ ಓದಿ ಅರ್ಥ ತಿಳಿದು ಬರೆಯಿರಿ ಎಂದು ಕೇಳಲಾಗಿದೆ. ಇದರ ಉದ್ದೇಶ ಒಂದು ವಿಷಯದಲ್ಲಿ ಪಡೆದ ಪರಿಣಿತರನ್ನು ಏನೆಂದು ಕರೆಯುತ್ತಾರೆ ಎಂಬುದನ್ನು ತಿಳಿಸುವುದಾಗಿದೆ. ಅಲ್ಲದೆ ಆ ಪದವನ್ನು ಪರಿಚಯಿಸಿ ಅದನ್ನು ನೆನಪಿನಲ್ಲಿಡಲು ಮಕ್ಕಳಿಗೆ ಬರೆಯಿರಿ ಎಂದು ಪ್ರಶ್ನೆ ಮಾಡಿದಂತೆ ತೋರುತ್ತದೆ. ಆದರೆ ಈ ಪದಗಳನ್ನು ಗಮನಿಸಿದರೆ ಹಿರಿಯ ಪ್ರಾಥಮಿಕ ಅಂದರೆ ಆರು ಅಥವಾ ಏಳನೇ ತರಗತಿಯಲ್ಲಿ ಇಂತಹ ಪದಗಳನ್ನು ಕಲಿಸುವುದು ಸೂಕ್ತವಾದುದೆಂದೆನಿಸುತ್ತದೆ. ಏಕೆಂದರೆ ಕಿರಿಯ ಪ್ರಾಥಮಿಕ ಮಕ್ಕಳಿಗೆ ಈ ತರಹದ ಪ್ರಶ್ನೆಗಳು ಸಲ್ಲದು.

ಕೊಟ್ಟಿರುವ ಪದಗಳಿಗೆ ಮಾದರಿಯಂತೆ ಸೂಕ್ತ ಜೋಡಿ ಪದ ಬರೆಯಿರಿ ಎಂದು ಕೇಳಲಾಗಿದೆ.

ಮಾದರಿ : ಮನೆ – ಮಠ

ಕೆರೆ –

ಊರು –

ಪ್ರಾಣಿ –

ಹಾದಿ – ಇದರ ಉದ್ದೇಶ ಜೋಡಿ ಪದಗಳನ್ನು ಪರಿಚಯಿಸುವುದಾಗಿದೆ. ಇದರಿಂದ ಮಕ್ಕಳು ಜೋಡಿ ಪದಗಳು ಒಂದು ಪದ, ಒಂದು ಅರ್ಥಕೊಟ್ಟರೆ ಇನ್ನೊಂದು

ಪದ ಬೇರೆ ಅರ್ಥವನ್ನು ಕೊಡುತ್ತದೆ ಎಂಬುದನ್ನು ತಿಳಿಯುತ್ತಾರೆ. ಇದಲ್ಲದೆ ಮಕ್ಕಳಿಗೆ ಪದಗಳ ನೆನಪಿಗಾಗಿ ಜೋಡಿ ಪದಗಳನ್ನು ಕಲಿಸುವುದು ಮುಖ್ಯವೆನಿಸುತ್ತದೆ.

ಗಿಡ, ಬಿರುಗಾಳಿ, ಸೈಕ್ಲೋನ್, ಮರ, ಕೆಮ್ಮು, ಪ್ರಾಣಿ, ಕೆರೆ, ಜ್ವರ, ಪಕ್ಷಿ, ಸಮುದ್ರ, ಬಳ್ಳಿ, ಚಂಡಮಾರುತ, ಕೀಟ, ತಲೆನೋವು, ಬಾವಿ ಎಂಬ ಪದಗಳನ್ನು ಕೊಟ್ಟು, ಕೊಟ್ಟಿರುವ ಪದ ಪಟ್ಟಿಯಿಂದ ಪರಸ್ಪರ ಸಂಬಂಧವಿರುವ ಪದಗಳನ್ನು ಆರಿಸಿ ಬರೆಯಿರಿ ಎಂದು ಕೇಳಲಾಗಿದೆ. ಇದರಿಂದ ಮಕ್ಕಳು ತಮ್ಮ ಪರಿಸರದಲ್ಲಿ ಕಂಡುಕೊಂಡ ಅನುಭವದಿಂದ ಬರೆಯುವರು. ಕೆಳಗಿನಂತೆ ಪದಗಳನ್ನು ಕೊಡಲಾಗಿದೆ.

ನದಿ ................ ................ ................

ಜನ ................ ................ ................

ಕಾಡು ................ ................ ................

ಗಾಳಿ ................ ................ ................

ನೆಗಡಿ ................ ................ ................ ಇತ್ಯಾದಿ ರೂಪಗಳನ್ನು ಕೊಡಲಾಗಿದೆ. ಇದರಿಂದ ಮಕ್ಕಳು ಒಂದು ಪದಕ್ಕೆ ಹೊರಡುವ ವಿವಿಧ ಬಗೆಯ ಪರಿಸರ ಅಥವಾ ಮನುಷ್ಯನಿಗೆ ಸಂಬಂಧವಿರುವ ಪದಗಳನ್ನು ಗ್ರಹಿಸುತ್ತಾರೆ. ಅಲ್ಲದೆ ಆ ಪದದಿಂದ ಹೊರಡುವ ಇತರ ಪದಗಳನ್ನು ಪಟ್ಟಿ ಮಾಡಿ ಬೇರ್ಪಡಿಸುತ್ತಾರೆ. ಆದ್ದರಿಂದ ಇದೊಂದು ಉತ್ತಮವಾದ ಸೃಜನಶೀಲವಾದ ಅಭ್ಯಾಸ ಚಟುವಟಿಕೆ ಎಂದು ಹೇಳಬಹುದು. ಆದರೆ ಈ ಚಟುವಟಿಕೆ ಬೋಧಿಸುವವರನ್ನು ಆಧರಿಸಿರುವುದರಿಂದ ಬೋಧಿಸುವವರ ಅನುಗುಣವಾಗಿ ಕಲಿಕೆಯಾಗುವ ಸಂಭವ ಹೆಚ್ಚಾಗಿರುತ್ತದೆ.

**ಕೊಟ್ಟಿರುವ ಪದಗಳ ರಚನೆ ಬದಲಿಸಿ ಎಂದು ಕೇಳಲಾಗಿದೆ.**

ಬಳೆ –

ದಾನಿ –

ಮಗು –

ಆಭರಣ –

ಕಾರ್ಯಕರ್ತ – ಇತ್ಯಾದಿ ಪದಗಳನ್ನು ಕೊಟ್ಟು ವಚನ ಬದಲಾವಣೆ ಮಾಡಲು ಕೇಳಲಾಗಿದೆ. ಇದರಿಂದ ಮಗು ಕನ್ನಡದಲ್ಲಿನ ಏಕವಚನ, ಬಹುವಚನ ಎಂಬ ಪರಿಕಲ್ಪನೆಯನ್ನು ಮೂಡಿಸುವ ಉದ್ದೇಶವನ್ನು ಹೊಂದಿದೆ. ಇದರಿಂದ ಮಕ್ಕಳು ಏಕವಚನ, ಬಹುವಚನ ಪದಗಳನ್ನು ಗ್ರಹಿಸುವಲ್ಲಿ ಸಮರ್ಥರಾಗುವರು. ಆದರೆ ಇಲ್ಲಿ ಕೊಟ್ಟಿರುವ ಉದಾಹರಣೆಗಳಲ್ಲಿ

ಮಗು ಎಂಬ ಪದಕ್ಕೆ ವಚನಗಳನ್ನು ಹೇಳುವ ಸಾಮರ್ಥ್ಯ ಈ ವಿದ್ಯಾರ್ಥಿಗಳಿಗೆ ಇರುವುದಿಲ್ಲ. ಇದನ್ನು ತಿಳಿದು ಪ್ರಾರಂಭದಲ್ಲಿಯೇ ಇಂತಹ ಪದಗಳನ್ನು ವಚನಗಳ ಪಟ್ಟಿಯಲ್ಲಿ ಕೊಡುವುದು ಅಷ್ಟೊಂದು ಸಮಂಜವಲ್ಲ ಎಂದು ಅನಿಸುತ್ತದೆ. ಅಲ್ಲದೆ 'ಮಗು' ಎನ್ನುವ ಪದಕ್ಕೆ ಮಗುಗಳು ಎಂದು ಬರೆಯುವ ಸಂಭವವು ಇರುತ್ತದೆ.

ನಿಷೇಧಾರ್ಥಕ ಪದಗಳ ತಿಳುವಳಿಕೆಯನ್ನು ವಿದ್ಯಾರ್ಥಿಗಳಿಗೆ ತಿಳಿಸಿ ಕೊಡಲು ಮಾದರಿಯಲ್ಲಿ ಸೂಚಿಸಿರುವಂತೆ ಸೂಕ್ತ ಪದ ರಚಿಸಿ – ಬರೆಯಿರಿ ಎಂದು ಕೇಳಲಾಗಿದೆ.

**ಉದಾಹರಣೆಗೆ : ಮಾದರಿ : ನೋಡು – ನೋಡಲಿಲ್ಲ**

ಮಾಡು –

ದಾಟು –

ಎದೆಗುಂದು –

ಹಾಡು –

ಸೋಲು – ಇತ್ಯಾದಿ.

ಇದರಿಂದ ಮಕ್ಕಳು ಯಾವ ಪದಗಳು ಕ್ರಿಯೆಯನ್ನು ನಿಷೇಧಿಸಿದವುಗಳಾಗಿರುತ್ತವೆಯೊ ಅವುಗಳು ನಿಷೇಧಾರ್ಥಕ ಪದಗಳೆಂದು ಗುರುತಿಸಿ. ಆ ಪದಗಳ ಬಳಕೆ ಯಾವ ಸಂದರ್ಭದಲ್ಲಿ ಬರುತ್ತದೆ ಎಂಬುದನ್ನು ತಿಳಿಯುವರು.

ಪದರಚನೆಗೆ ಸಂಬಂಧಿಸಿದಂತೆ ಹಿರಿಯ ಪ್ರಾಥಮಿಕ ಕನ್ನಡ ಭಾಷಾ ಪಠ್ಯಪುಸ್ತಕಗಳಾದ ಐದು, ಆರು, ಏಳನೇ ತರಗತಿಯ ಪಠ್ಯಗಳಲ್ಲಿ ಸಂಧಿ ವಿಭಜನೆಯ ಪದಗಳು, ಸಮಾಸ ಪದಗಳು, ಪ್ರತ್ಯಯ ಸೇರುವ ಪದಗಳು, ಲಿಂಗಪದಗಳು, ವಿಭಕ್ತಿಯಾಗುವ ಪದಗಳು, ವಚನ ಪದಗಳು, ಕಾರಕ ಪದಗಳನ್ನು ಈ ಮೂರು ತರಗತಿಗಳಲ್ಲಿ ಹೆಚ್ಚಾಗಿ ಕಾಣುತ್ತೇವೆ. ಈ ಪದಗಳು ರಚನೆಯಾಗುವ ಬಗೆಯನ್ನು ವಿವರವಾಗಿ ಹಂತ, ಹಂತವಾಗಿ ನಿಯಮಗಳನ್ನು ಹೇಳಿ ಕೊಡುವುದರ ಮೂಲಕ ಈ ಪದಗಳ ಬಳಕೆಯ ವಿಧಾನ ಹಾಗೂ ಸಮಸ್ತ ಪದ ವಿಗ್ರಹ ರೂಪವಾಗಿ ಪದವನ್ನು ಬಿಡಿಸಿ ಬರೆದಾಗ ಆಗುವ ಪದ ರಚನೆಯ ಕ್ರಮವನ್ನು ಕಾಣುತ್ತೇವೆ. ಈ ಮೇಲಿನ ಅಂಶಗಳನ್ನು ಹಿರಿಯ ಪ್ರಾಥಮಿಕ ಪಠ್ಯಗಳಲ್ಲಿ ಮಕ್ಕಳ ಮಾನಸಿಕ ಸಾಮರ್ಥ್ಯಕ್ಕೆ ಅನುಗುಣವಾಗಿ ಪದ ರಚನೆಯಲ್ಲಿ ಕಲಿಸುವುದನ್ನು ಕಾಣುತ್ತೇವೆ. ಆದರೆ ಯಾವ ಹಿನ್ನೆಲೆಯಲ್ಲಿ ಕಲಿಸಬೇಕು? ಹೇಗೆ ಕಲಿಸಬೇಕು? ಎಂಬ ಮಾಹಿತಿಗಳಿಲ್ಲ.

ಈ ಪಠ್ಯಗಳ ಭಾಷಾಭ್ಯಾಸ ಚಟುವಟಿಕೆಯಲ್ಲಿ ಮಾದರಿಯಲ್ಲಿ ಸೂಚಿಸಿರುವಂತೆ ಪದರಚನೆ ಬದಲಿಸಿ ಬರೆಯಿರಿ ಎಂದು ಕೇಳಲಾಗಿದೆ.

ಮಾದರಿ : ಸ್ವಾತಂತ್ರ - ಸ್ವಾತಂತ್ರ್ಯ

ಪ್ರವೀಣ ................ ................

ನವೀನ ................ ................

ಪರತಂತ್ರ ................ ................

ಕರುಣೆ ................ ................

ಈ ತರಹದ ಪ್ರಶ್ನೆಗಳು ವಿದ್ಯಾರ್ಥಿಗಳಿಗೆ ಅಲ್ಪಪ್ರಾಣದಿಂದ ಉಚ್ಚರಿಸಿದಾಗ ಯಾವ ಅರ್ಥ ಕೊಡುತ್ತದೆ. ಮಹಾಪ್ರಾಣ ಹಾಗೂ ಒತ್ತಕ್ಷರವನ್ನು ಬಳಸಿದಾಗ ಯಾವ ಅರ್ಥವನ್ನು ಒಂದೇ ಪದ ಭಿನ್ನ ಭಿನ್ನವಾಗಿ ಅರ್ಥೈಯಿಸುವುದನ್ನು ತಿಳಿಯುತ್ತಾರೆ. ಅಲ್ಲದೆ ಅವುಗಳ ವ್ಯತ್ಯಾಸವನ್ನು ತಿಳಿಸುತ್ತಾರೆ. ಸಮಯ, ಸಂದರ್ಭಕ್ಕೆ ತಕ್ಕಂತೆ ಪದ ಬಳಕೆಯ ವಿಧಾನವನ್ನು ಕಲಿಸುವ ಕೌಶಲವನ್ನು ಈ ಪ್ರಶ್ನೆಗಳು ಮಾಡಿದಂತೆ ತೋರುತ್ತದೆ. ಭಾಷಾ ಸಂಪತ್ತು ಭಾಷಾಭ್ಯಾಸ ಚಟುವಟಿಕೆಗಳಲ್ಲಿ ನಾಮಪದ, ವಾಕ್ಯ ಮಾಡಿ ಅವುಗಳಲ್ಲಿ ಬರುವ ಮೂರು ವಿಧಗಳಾದ ರೂಢನಾಮ, ಅಂಕಿತನಾಮ, ಅನ್ವರ್ಥಕನಾಮ ಉದಾಹರಣೆಗಳ ಮೂಲಕ ನಾಮಪದ ಹೇಳಿ ಕೊಡುವುದನ್ನು ಹಿರಿಯ ಪ್ರಾಥಮಿಕ ಶಿಕ್ಷಣದ ಕನ್ನಡಭಾಷಾ ಪಠ್ಯ ಪುಸ್ತಕದ ವ್ಯವಸ್ಥೆಯಲ್ಲಿ ಕಾಣುತ್ತೆವೆ. ಅಲ್ಲದೆ ನಾನು, ನಾವು, ನೀನು, ನೀವು, ಅವನು, ಅವಳು, ಅವರು, ಅದು, ಅವು ಎಂಬ ಸರ್ವನಾಮ ಪದಗಳಲ್ಲಿ ಬರುವ ಪ್ರಥಮ, ಮಧ್ಯಮ, ಉತ್ತಮ ಪುರುಷ, ಸರ್ವನಾಮಗಳನ್ನು ಸರ್ವನಾಮ ಪದದ ವಾಕ್ಯದ ಮೂಲಕ ಹೇಳಿ ಕೊಡುವ ಪರಿಪಾಠವನ್ನು ಈ ತರಗತಿಗಳಲ್ಲಿ ಕಾಣುತ್ತೇವೆ. ನಂತರ ಕೌಶಲದ ನೆನಪಿಗಾಗಿ ಕೊಟ್ಟಿರುವ ಪದಗಳನ್ನು ವಿಂಗಡಿಸಿ ಕೋಷ್ಠಕದಲ್ಲಿ ಬರೆಯಿರಿ ಎಂದು ಕೇಳಲಾಗಿದೆ. ಉದಾಹರಣೆಗೆ : ಮಹಾಮಂತ್ರಿ, ರಾಜ, ರಸ್ತೆ, ಶೇಖರ, ಕುರುಡ, ನಾವು, ಮೂಗ, ತಸ್ಲೀಮ, ಕಂಠೀರವ ಕ್ರೀಡಾಂಗಣ, ಲೀಲಾ, ಅವಳು, ಆನೆ, ಅರಣ್ಯ, ಶಿಕ್ಷಕಿ, ಡಯಾನಾ, ಜೋಸೆಫ್, ಕನಕಾಂಬರ, ಮಲ್ಲಿಗೆ, ಸಂಪಿಗೆ ಎಂಬ ಇತ್ಯಾದಿ ಪದಗಳನ್ನು ಕೊಡಲಾಗಿದೆ.

ಈ ಚಟುವಟಿಕೆಯಿಂದ ವಿದ್ಯಾರ್ಥಿಗಳು ನಾಮಪದಗಳಲ್ಲಿ ಬರುವ ರೂಢನಾಮ, ಅಂಕಿತನಾಮ, ಅನ್ವರ್ಥನಾಮ, ಸರ್ವನಾಮಗಳ ಪದಗಳನ್ನು ತಿಳಿದುಕೊಂಡು ಬರೆಯುವಲ್ಲಿ ಸಮರ್ಥರಾಗುವರು. ಇದರ ಜೊತೆಗೆ ಗುಣ ವಿಶೇಷಣದ ವಾಕ್ಯವನ್ನು ಕೊಟ್ಟು ಉದಾಹರಣೆಗಳ ಮೂಲಕ ಗುಣ ವಿಶೇಷಣದ ನಾಮಪದಗಳನ್ನು ಕೊಟ್ಟಿರುವುದನ್ನು ಕಾಣುತ್ತೇವೆ. ಆದರೆ ಈ ಎಲ್ಲಾ ಮೇಲಿನ ವ್ಯಾಕರಣಾಂಶಗಳಲ್ಲಿ ಸೂಕ್ತವಾದ ವಿಶ್ಲೇಷಣಾಕ್ರಮ ಕೊರತೆ ಪಠ್ಯಗಳಲ್ಲಿ ಕಾಣಿಸಿಕೊಳ್ಳುವುದು ಸ್ಪಷ್ಟವಾಗಿದೆ. ಏಕೆಂದರೆ ವ್ಯಾಕರಣವನ್ನು ಭಾಷಾ ಹಿನ್ನೆಲೆಯಲ್ಲಿ ಕಲಿಸುವುದು ಸಮಂಜಸವಾದ ನಿರ್ಧಾರವಲ್ಲ. ಅಲ್ಲದೆ ಇಲ್ಲಿ ಕಲಿಸುವ ವ್ಯಾಕರಣ ಕನ್ನಡದ್ದಲ್ಲ ಎಂದೆನಿಸುವುದು ಸ್ಪಷ್ಟವಾಗುತ್ತದೆ.

ಭಾಷಾಭ್ಯಾಸದ ಚಟುವಟಿಕೆಯಲ್ಲಿ ಕೊಟ್ಟಿರುವ ಪದರಚನೆ ಗಮನಿಸಿ ಓದಿ ರಚನೆಯಾದ ಪದ ಏನನ್ನು ಸಂಕೇತಿಸುತ್ತದೆ ತಿಳಿಯಿರಿ ಎಂದು ಪ್ರಶ್ನೆಗಳನ್ನು ಕೇಳಲಾಗಿದೆ. ಉದಾಹರಣೆಗೆ

| ಮೂಲಧಾತು | + | ಪ್ರತ್ಯಯ | ಪದರಚನೆ |
|---|---|---|---|
| ಮಾಡು | + | ಇಸು | ಮಾಡಿಸು |
| ತಿನ್ನು | + | ಇಸು | ತಿನ್ನಿಸು |
| ಓಡು | + | ಇಸು | ಓಡಿಸು |
| ನೋಡು | + | ಇಸು | ನೋಡಿಸು |
| ಕೇಳು | + | ಇಸು | ಕೇಳಿಸು |

ಈ ತರಹದ ಪ್ರಶ್ನೆಗಳನ್ನು ಪಠ್ಯದಲ್ಲಿ ಕೊಟ್ಟಿರುವ ಉದ್ದೇಶವೇನೆಂದರೆ ಕ್ರಿಯಾಪದದ ಮೂಲಧಾತುವನ್ನು ತಿಳಿಸಿ ಆ ಧಾತುಗಳಿಗೆ 'ಇಸು' ಎಂಬ ಪ್ರತ್ಯಯ ಸೇರಿದಾಗ ಪ್ರೇರಣಾರ್ಥಕ ಪದಗಳಾಗುತ್ತವೆ ಎಂಬುದನ್ನು ತಿಳಿಸಿ ಕೊಡುವ ದೃಷ್ಟಿಯಿಂದ ಈ ತರಹದ ಪ್ರಶ್ನೆಗಳನ್ನು ಕೇಳಿರುವುದು ಕಂಡು ಬರುತ್ತದೆ. **ಉದಾಹರಣೆಗೆ :**

| | | | | |
|---|---|---|---|---|
| ಸಂಗೀತ | + | ಅಭ್ಯಾಸ | – | ಸಂಗೀತಾಭ್ಯಾಸ |
| ಜಗತ್ತಿನ | + | ಆದ್ಯಂತ | – | ಜಗತ್ತಿನಾದ್ಯಂತ |
| ಸಿಂಹ | + | ಆಸನ | – | ಸಿಂಹಾಸನ |
| ಹರಿ | + | ಈಶ್ವರ | – | ಹರೀಶ್ವರ |
| ಕವಿ | + | ಇಂದ್ರ | – | ಕವೀಂದ್ರ |

ಗುರು + ಉಪದೇಶ – ಗುರೂಪದೇಶ ಇತ್ಯಾದಿ ಪದಗಳ ವಿಗ್ರಹ ರೂಪವನ್ನು ಕೊಟ್ಟು, ಕೊಟ್ಟಿರುವ ಪದರಚನೆ ಗಮನಿಸಿ ಓದಿ, ರಚನಾ ರೂಪದಲ್ಲಿನ ವ್ಯತ್ಯಾಸ ತಿಳಿಯಿರಿ ಎಂದು ಕೇಳಲಾಗಿದೆ. ಇದರ ಉದ್ದೇಶ ವಿಗ್ರಹ ರೂಪದಲ್ಲಿನ ಎರಡು ಪದಗಳು ಅಥವಾ ಪೂರ್ವಪದ ಮತ್ತು ಉತ್ತರ ಪದಗಳಿಂದ ಹೊಸದೊಂದು ರೂಪಗೊಳ್ಳುವ ಪದ ಪರಿಚಯಿಸುವ ಉದ್ದೇಶವನ್ನು ಹೊಂದಿದೆ. ಇದರಿಂದ ಮಕ್ಕಳು ವಿಗ್ರಹ ರೂಪದಲ್ಲಿನ ಪದಗಳು ಸಮಸ್ತ ಪದವಾಗಿ ರಚನೆಯಾದಾಗ ರಚನೆಯಲ್ಲಿನ ಬದಲಾವಣೆಯನ್ನು ಗುರುತಿಸಲು ಸಮರ್ಥರಾಗುವಂತೆ ಮಾಡಲು ಈ ತರಹದ ಪ್ರಶ್ನೆಗಳನ್ನು ಅಳವಡಿಸಿದಂತೆ ಕಾಣುತ್ತದೆ.

ಕನ್ನಡದಲ್ಲಿ ಹೆಚ್ಚಾನು ಹೆಚ್ಚು ಸಂಸ್ಕೃತ ಪದಗಳು ಸೇರ್ಪಡೆಗೊಂಡಿರುವುದು ನಮಗೆಲ್ಲಾ ತಿಳಿದಿರುವ ವಿಷಯವಾಗಿದೆ. ಆದರೆ ಕನ್ನಡ ಪದಗಳಿದ್ದು ಅವುಗಳನ್ನು ಬಳಸದೆ ಸಂಸ್ಕೃತ

ಪದಗಳನ್ನು ಬಳಸುವುದು ವಿಷಾದನೀಯ ಸಂಗತಿ. ಸಂಸ್ಕೃತ ಪದಗಳನ್ನು ಬಳಸಿದ್ದರೂ ಕನ್ನಡದಲ್ಲಿ ಆ ಪದಗಳ ರೂಪವನ್ನು ತಿಳಿಸಿ ಕೊಡಲು ಮಕ್ಕಳಿಗೆ ಭಾಷಾಭ್ಯಾಸದಲ್ಲಿ ವ್ಯವಸ್ಥೆ ಮಾಡಲಾಗಿದೆ. ಆದರೆ ಇದು ಅಸ್ಪಷ್ಟವೆನಿಸುತ್ತದೆ. ಈ ತರಹದ ಕನ್ನಡ, ಸಂಸ್ಕೃತ ಪದಗಳ ತಿಳುವಳಿಕೆಗಾಗಿ ಕೊಟ್ಟಿರುವ ಪದ ರೂಪವನ್ನು ಗಮನಿಸಿ ಓದಿ ಎಂದು ಕೇಳಲಾಗಿದೆ.

**ಉದಾಹರಣೆಗೆ :** **ಸಂಸ್ಕೃತ ರೂಪ** **ಕನ್ನಡ ರೂಪ**

| ಸಂಸ್ಕೃತ ರೂಪ | ಕನ್ನಡ ರೂಪ |
|---|---|
| ರಾಕ್ಷಸ | ರಕ್ಕಸ |
| ಮೃದು | ಮೆದು |
| ನಿದ್ರೆ | ನಿದ್ದೆ |
| ಕುಮಾರಿ | ಕುವರಿ |
| ಆಕಾಶ | ಆಗಸ |
| ಚಂದ್ರ | ಚಂದಿರ |
| ಸುಖ | ಸೊಗ ಎಂಬ ಇತ್ಯಾದಿ ಪದಗಳನ್ನು |

ಕೊಡಲಾಗಿದೆ. ಇದರಿಂದ ಮಕ್ಕಳು ಸಂಸ್ಕೃತ ಪದದ ರೂಪಕ್ಕೆ ಕನ್ನಡದಲ್ಲಿ ಆ ಪದಕ್ಕೆ ಏನೆನ್ನುತ್ತಾರೆ ಎಂಬುದನ್ನು ತಿಳಿಯುತ್ತಾರೆ. ಅಲ್ಲದೆ ಕನ್ನಡ ರೂಪದ ಪದ ರಚನೆಯನ್ನು ಕಲಿಯುವರು. ಆದರೆ ಇದರಿಂದ ಸಾಮಾಜಿಕ ಸಂವಹನದಲ್ಲಿ ಈ ಪದಗಳ ಬಳಕೆ ಕಡಿಮೆ. ಏಕೆಂದರೆ ನಮ್ಮ ಪಠ್ಯಗಳಲ್ಲಿನ ಪಾಠಗಳು, ಪದ್ಯಗಳು ಸಂಸ್ಕೃತ ಪದಗಳನ್ನು ಬಿತ್ತರಿಸುವ ಕೆಲಸ ಮಾಡುತ್ತಿವೆ ಎಂದು ಹೇಳಬಹುದು. ಕನ್ನಡ ಪದಗಳು ಸಾಮಾಜಿಕ ಸಂವಹನದಲ್ಲಿ ಬರಬೇಕಾದರೆ ಕನ್ನಡ ಭಾಷಾ ಪಠ್ಯಗಳಲ್ಲಿ ಕನ್ನಡ ಪದಗಳನ್ನು ಭಾಷಾ ಅಭ್ಯಾಸದಲ್ಲಿ ಕೊಡುವುದರ ಜೊತೆಗೆ ಪಾಠ, ಪದ್ಯಗಳಲ್ಲಿ ನೇರವಾಗಿ ಕನ್ನಡ ಪದಗಳಿಂದ ರಚನೆಯಾದಾಗ ಕನ್ನಡ ಪದಗಳ ರೂಪ ಉಳಿಯಲು ಸಾದ್ಯ. ಇದರಿಂದ ಸಂಸ್ಕೃತ ಪದಗಳು ದಿನ ಕಳೆದಂತೆ ಮರಿಚಿಕೆಯಾಗುತ್ತವೆ.

ಕಾಲ ಬದಲಾವಣೆ ಕಂಡಂತೆ ಪಠ್ಯಗಳಲ್ಲಿ ಅಳವಡಿಸಿದ ಕನ್ನಡ ಪದಗಳು ಸಾಮಾಜಿಕ ಸಂವಹನದಲ್ಲಿ ಬೆರೆತು ಹೋಗುತ್ತವೆ. ಈ ಕ್ರಮದಿಂದ ಕನ್ನಡ ಉಳಿಸಿ ಬೆಳೆಸುವ ಚಿಂತನೆಗೆ ಒಂದು ಯಶಸ್ಸು ದೊರೆತಂತೆ ಆಗುತ್ತದೆ. ಆದ್ದರಿಂದ ಕನ್ನಡಭಾಷಾ ಪಠ್ಯಪುಸ್ತಕಗಳನ್ನು ರಚನೆ ಮಾಡುವ ಸಮಿತಿಗಳ ಅಧ್ಯಕ್ಷರು, ಸದಸ್ಯರುಗಳು ಹಾಗೂ ಎನ್.ಸಿ.ಇ.ಆರ್.ಟಿ, ಡಿ.ಎಸ್.ಇ.ಆರ್.ಟಿ, ಯೋಜನಾಧಿಕಾರಿಗಳು ಮತ್ತು ಕರ್ನಾಟಕ ಸರ್ಕಾರ ಈ ಕ್ರಮವನ್ನು ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯಗಳಲ್ಲಿ ಅಳವಡಿಸಿಕೊಳ್ಳುವುದು ಬಹಳ ಅವಶ್ಯಕತೆ ಇದೆ ಎಂದು ಹೇಳಬಹುದು.

ಸಂಧಿ ಬಿಡಿಸಿ ಹೆಸರು ಗುರುತಿಸಿ ಎಂದು ಕೆಲವು ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಕೇಳಲಾಗಿದೆ. ಈ ವಿಧದ ಪ್ರಶ್ನೆಗಳಲ್ಲಿ ಕನ್ನಡ ಮತ್ತು ಸಂಸ್ಕೃತ ಸಂಧಿಗಳ ಪರಿಚಯ ಹಾಗೂ ಆ ಸಂಧಿಗಳ ನಿಯಮವನ್ನು ಹೇಳಿಕೊಡುವ ಪರಿಪಾಠ ನಡೆಯುತ್ತಾ ಬಂದಿರುವುದನ್ನು ಹಿರಿಯ ಪ್ರಾಥಮಿಕ ಹಂತದ ಕನ್ನಡಭಾಷಾ ಪಠ್ಯಗಳಲ್ಲಿ ಕಾಣಬಹುದು.

ಉದಾಹರಣೆಗೆ

**ಮಾದರಿ : ಗುಪ್ತಾಚಾರ – ಗುಪ್ತ + ಆಚಾರ – ಸವರ್ಣದೀರ್ಘ ಸಂಧಿ**

ಒಂದು ಮಾದರಿಯನ್ನು ಕೊಟ್ಟು ಕೆಳಗಡೆ ದೃಶ್ಯಾಭಿವ್ಯಕ್ತಿ, ವಿವಿಧೊದ್ದೇಶ, ಕೋಟ್ಯಾನುಕೋಟಿ, ಏಕೈಕ, ಸೂರ್ಯೋದಯ, ರಣಾಂಗಣ ಇತ್ಯಾದಿ ಪದಗಳನ್ನು ಕೊಡಲಾಗಿದೆ. ಇದರಿಂದ ಮಕ್ಕಳು ಈ ಪದಗಳನ್ನು ವಿಗ್ರಹ ರೂಪದಲ್ಲಿ ರಚನೆ ಮಾಡಿ ಆಯಾ ಪದಗಳಾನುಸಾರ ಗುಣಸಂಧಿ, ವೃದ್ಧಿಸಂಧಿ, ಸವರ್ಣಧೀರ್ಘ ಸಂಧಿ ಅಥವಾ ಇನ್ನಾವುದೇ ಸಂಸ್ಕೃತ ಸಂಧಿಯ ಹೆಸರನ್ನು ಮತ್ತು ಅದರ ನಿಯಮವನ್ನು ತಿಳಿಯುವರು. ಆದರೆ ಕನ್ನಡಭಾಷಾ ಪಠ್ಯಗಳಲ್ಲಿ ಸಂಸ್ಕೃತ ಸಂಧಿಗಳ ನಿಯಮ ಮತ್ತು ಉದಾಹರಣೆಗಳನ್ನು ಕಲಿಸುವ ಅಗತ್ಯತೆಯಾದರು ಏನು? ಎಂಬ ಪ್ರಶ್ನೆ ನಮ್ಮ ಮುಂದೆ ಬಂದು ನಿಲ್ಲುತ್ತದೆ. ಆದರೆ ಇದಕ್ಕೆ ಕೆಲವರು ಸರಳವಾಗಿ ಕನ್ನಡದಲ್ಲಿ ಹೆಚ್ಚಾಗಿ ಸಂಸ್ಕೃತ ಪದಗಳ ಬಳಕೆ ಬರವಣಿಗೆಯಲ್ಲಿ ಇರುವುದರಿಂದ ಈ ಪದಗಳಿಗೆ ಸಂಧಿ ಕಾರ್ಯವನ್ನು ತಿಳಿಸಲು ಹೇಳಿ ಕೊಡಲಾಗುತ್ತದೆ ಎಂದು ಹೇಳುತ್ತಾರೆ. ಆದರೆ ಈ ನಿಯಮ ಮತ್ತು ಸಂಸ್ಕೃತ ಸಂಧಿಗಳನ್ನು ಮಕ್ಕಳಿಗೆ ಕಲಿಸುವುದು ಎಷ್ಟು ಕಷ್ಟ. ಕಷ್ಟದಿಂದ ಕಲಿತರು ಆ ಸಂಧಿಗಳಿಂದ ಕನ್ನಡ ಭಾಷೆಗೆ ಅಥವಾ ವಿದ್ಯಾರ್ಥಿಗಳು ಸಾಮಾಜಿಕ ಸಂವಹನದಲ್ಲಿ ಈ ಪದಗಳ ಬಳಕೆಯನ್ನು ಮಾಡುತ್ತಾರೆಯೇ? ಎಂಬುದನ್ನು ಅರಿಯಬೇಕಾಗಿದೆ. ಈ ವಿಚಾರದಲ್ಲಿ ಸೂಕ್ಷ್ಮವಾಗಿ ಗಮನಿಸಿದರೆ, ಸಂಸ್ಕೃತ ಪದದಿಂದ ಬಂದಿರುವ ಸಂಧಿ ಪದಗಳನ್ನು ಬಳಸುವುದು ವಿರಳವಾಗಿದೆ. ಹಾಗಿದ್ದಾಗ ಈ ಸಂಸ್ಕೃತ ಸಂಧಿ ನಿಯಮ ಮತ್ತು ಪದಗಳು ಕನ್ನಡ ಪಠ್ಯಗಳಲ್ಲಿ ಏಕೆ ಬೇಕು? ಎಂಬುದರ ಸತ್ಯಾಂಶವನ್ನು ಅರಿತುಕೊಳ್ಳಬೇಕಾಗಿದೆ. ಕನ್ನಡ ಪಠ್ಯಗಳಿಂದ ಸಂಸ್ಕೃತ ಸಂಧಿಗಳ ಪದಗಳು ಮತ್ತು ನಿಯಮಗಳನ್ನು ಕೈಬಿಡುವ ವಿಚಾರವನ್ನು ಕನ್ನಡ ಪಠ್ಯಪುಸ್ತಕ ರಚನಾ ಸಮಿತಿ ಯೋಚಿಸುವ ಅಗತ್ಯತೆ ತುಂಬಾ ಇದೆ ಎಂಬುದು ಈ ಪ್ರಾಥಮಿಕ ಹಂತದ ಕನ್ನಡಭಾಷಾ ಪಠ್ಯಗಳ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

| **ಕ್ರಿಯಾಪದ** | **ನಾಮಪದ** |
|---|---|
| ಕೆಡು | ಕೇಡು |
| ಕೊಡು | ಕೋಡು |

| | |
|---|---|
| ಬಿಡು | ಬೀಡು |
| ಪಡು | ಪಾಡು ಎಂಬ ಇತ್ಯಾದಿ ರೂಪಗಳನ್ನು ಕೊಟ್ಟು |

, ಕೊಟ್ಟಿರುವ ರಚನೆಯ ರೂಪಗಳನ್ನು ಗಮನಿಸಿ ಓದಿ ಎಂದು ಕೇಳಲಾಗಿದೆ. ಈ ವಿಧಾನದ ಚಟುವಟಿಕೆಯಿಂದ ವಿದ್ಯಾರ್ಥಿಗಳು ಕ್ರಿಯಾಪದಗಳಲ್ಲಿನ ಪದಗಳು ನಾಮ ಪದಗಳಾಗಿ ಬಂದಾಗ ಬದಲಾವಣೆಯ ವ್ಯತ್ಯಾಸವನ್ನು ತಿಳಿಯುವರು. ಜೊತೆಗೆ ಕ್ರಿಯಾಪದ, ನಾಮ ಪದಗಳ ಗುಂಪನ್ನು ಮಿಶ್ರವಾಗಿ ಕೊಟ್ಟಾಗ ಸೂಕ್ತವಾಗಿ ವಿಂಗಡಿಸುವರು. ಇದರಿಂದ ಮಕ್ಕಳು ಕ್ರಿಯಾಪದ ಮತ್ತು ನಾಮಪದಗಳ ಗುಂಪನ್ನು ಬೇರ್ಪಡಿಸುವ ಕೌಶಲವನ್ನು ಕಲಿಯುವಲ್ಲಿ ಸಮರ್ಥರಾಗುವರು.

ಹಿರಿಯ ಪ್ರಾಥಮಿಕ ಶಿಕ್ಷಣದ ಕನ್ನಡ ಭಾಷಾ ಪಠ್ಯಗಳ ಕೊನೆಯ ಘಟ್ಟದಲ್ಲಿ ಸಮಾಸದ ಬಗೆಗೆ ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಕೊಟ್ಟಿರುವುದನ್ನು ಕಾಣುತ್ತೇವೆ. ಜೊತೆಗೆ ಪಠ್ಯದಲ್ಲಿ ಈ ತರಹದ ಅಭ್ಯಾಸ ಚಟುವಟಿಕೆಗಳು ಹಂತ ಹಂತವಾಗಿ ಸಮಾಸ ಪದವನ್ನು ಬಿಡಿಸುವ ವಿಧಾನ ಮತ್ತು ಸಮಾಸಗಳ ವ್ಯಾಖ್ಯಾನವನ್ನು ಕೊಡಲಾಗಿದೆ. ಅಲ್ಲದೆ ವಿಧಗಳನ್ನು ಸಹ ಕೊಟ್ಟಿರುವುದನ್ನು ಕಾಣುತ್ತೇವೆ. ಇದರಿಂದ ಮಕ್ಕಳು ಸಮಾಸ ಪದಗಳನ್ನು ತಿಳಿದು ಅವುಗಳ ವಿಗ್ರಹರೂಪ ಮತ್ತು ಸಮಸ್ತ ಪದದ ರೂಪಗಳಲ್ಲಿನ ಪದಗಳ ವ್ಯತ್ಯಾಸವನ್ನು ತಿಳಿಯುವರು. ಅಲ್ಲದೆ ಸಮಾಸ ಪದಗಳ ಪೂರಕ ಮಾಹಿತಿಯನ್ನು ಗ್ರಹಿಸುವಲ್ಲಿ ಸಮರ್ಥರಾಗುವರು. ಈ ತರಹದ ಚಟುವಟಿಕೆಗಳಲ್ಲಿ ಕನ್ನಡಭಾಷಾ ಪಠ್ಯಪುಸ್ತಕಗಳ ರಚನಾ ಸಮಿತಿ ಕೈ ಹಾಕಿದಂತೆ ತೋರುತ್ತದೆ. ಇಂತಹ ಚಟುವಟಿಕೆಗಳಿಗೆ ಉದಾಹರಣೆಗಳನ್ನು ಗಮನಿಸುವುದಾದರೆ ಕೋಷ್ಟಕವನ್ನು ಗಮನಿಸಿ ಸಮಾಸದ ರಚನಾ ವಿನ್ಯಾಸ ಮತ್ತು ವಿಧಗಳನ್ನು ತಿಳಿಯಿರಿ ಎಂದು ಕೇಳಿರುವುದಂಟು.

ಉದಾಹರಣೆಗೆ

| **ಪೂರ್ವಪದ** | **+** | **ಉತ್ತರಪದ** | **–** | **ಸಮಸ್ತಪದ / ಸಮಾಸ** |
|---|---|---|---|---|
| ಮಳೆಯ | + | ಕಾಲ | = | ಮಳೆಗಾಲ |
| ಹಿರಿದು | + | ಜೇನು | = | ಹೆಜ್ಜೇನು |
| ಇನಿದು | + | ಸರ | = | ಇಂಚರ |
| ಮೂರು | + | ಮಡಿ | = | ಮುಮ್ಮಡಿ |
| ಕೈಯ | + | ಮುಂದು | = | ಮುಂಗೈ |

| | | | |
|---|---|---|---|
| ಮರವೂ | + ಗಿಡವೂ | | |
| | + ಬಳ್ಳಿಯೂ | = | ಮರಗಿಡಬಳ್ಳಿಗಳು |
| ಕಣ್ಣನ್ನು | + ಮುಚ್ಚಿ | = | ಕಣ್ಮುಚ್ಚಿ |

ಈ ರೀತಿಯ ವಿಧಾನದಲ್ಲಿ ಸಮಾಸದ ವಿವಿಧ ಭಾಗಗಳನ್ನು ಹಾಗೂ ಸಮಾಸದ ವಿಧಗಳನ್ನು ವಿದ್ಯಾರ್ಥಿಗಳು ತಿಳಿಯುತ್ತಾರೆ. ಈ ವಿಧಾನವನ್ನೆ ತರಗತಿಯ ಪಠ್ಯದುದ್ದಕ್ಕೂ ಸಮಾಸದ ವಿಧಗಳನ್ನು ಒಂದೊಂದು ಉದಾಹರಣೆಗಳ ಮೂಲಕ ಮತ್ತು ಸಮಾಸದ ವ್ಯಾಖ್ಯಾನವನ್ನು ಕಲಿಸುವ ಪ್ರಕ್ರಿಯೆಯನ್ನು ಕಾಣುತ್ತೇವೆ. ಇದರಿಂದ ವಿದ್ಯಾರ್ಥಿಗಳು ಸಮಾಸದ ಬಗ್ಗೆ ಪರಿಮಾಣಾತ್ಮಕವಾಗಿ ತಿಳುವಳಿಕೆಯನ್ನು ಪಡೆಯುವರು. ಆದರೆ ಪಾಠ/ಪದ್ಯಗಳೊಂದಿಗೆ ನೇರವಾಗಿ ಧ್ವನಿ, ಪದ, ವಾಕ್ಯ, ವ್ಯಾಕರಣಾಂಶಗಳು ತಿಳುವಳಿಕೆಯ ಅಗತ್ಯತೆ ಕೊಡಬೇಕಾಗುತ್ತದೆ. ಆದರೆ ಈ ಮೇಲಿನ ಅಂಶಗಳನ್ನು ಚಟುವಟಿಕೆ ಆಧಾರಿತವಾಗಿ ಕಲಿಸುವುದು ಅಷ್ಟೊಂದು ಸಮಂಜಸವಾದ ಪರಿಣಾಮ ವಿದ್ಯಾರ್ಥಿಗಳಿಗೆ ಮೂಡುವುದಿಲ್ಲ. ಆದ್ದರಿಂದ ಈ ಅಂಶಗಳನ್ನು ನೇರವಾಗಿ ಪಾಠ/ಪದ್ಯಗಳೊಪಾದಿಯಲ್ಲಿ ಅಳವಡಿಸಿ ಕೊಳ್ಳುವುದು ಅವಶ್ಯಕವೆನಿಸುತ್ತದೆ. ಏಕೆಂದರೆ ಮೂರು ವರ್ಷದ ಬುದ್ದಿ ನೂರು ವರ್ಷದ ತನಕ ಎಂಬುದನ್ನು ಮನಗಂಡು ಅಳವಡಿಸಿ ಕೊಳ್ಳುವುದು ಅವಶ್ಯಕ. ಅಷ್ಟೇ ಅಲ್ಲದೆ ಈ ಪಠ್ಯಗಳೆಲ್ಲವು ಕನ್ನಡಭಾಷಾ ಪಠ್ಯಗಳಾಗಿರುವುದರಿಂದ ವ್ಯಾಕರಣಾಂಶಗಳನ್ನು ಪದ್ಯ/ಪಾಠಗಳಲ್ಲಿಯೆ ನೇರವಾಗಿ ಬೋಧನೆಗೆ ಅವಕಾಶ ಮಾಡಿ ಕೊಡಬಹುದು. ನಂತರ ಭಾಷಾ ಚಟುವಟಿಕೆಗಳಲ್ಲಿ ಕೊಡುವುದು ಸೂಕ್ತವೆನಿಸುತ್ತದೆ.

ಗದಗ, ಕಿಟಕಿ, ನವೀನ, ಕುಟುಕು ಇತ್ಯಾದಿ ಪದಗಳನ್ನು ಕೊಟ್ಟು ಯಾವ ರೀತಿ ಓದಿದರೂ ಅರ್ಥ ವ್ಯತ್ಯಾಸವಾಗದ ಪದಗಳನ್ನು ರಚಿಸಿ ಎಂದು ಕೇಳಲಾಗಿದೆ. ಇದರ ಉದ್ದೇಶ ಮಕ್ಕಳಿಗೆ ಪದ ರಚನೆಗೆ ಸೃಜನಶೀಲ ಚಟುವಟಿಕೆ ಮತ್ತು ಪದ ಸಂಪತ್ತನ್ನು ಹೆಚ್ಚಿಸುವ ದೃಷ್ಟಿಯಿಂದ ಈ ತರಹದ ಚಟುವಟಿಕೆಗಳು ಅಗತ್ಯವೆನಿಸಿವೆ. ಇದರಿಂದ ಮಕ್ಕಳು ಸುಲಭವಾಗಿ ಪದಗಳನ್ನು ನೆನಪಿನಲ್ಲಿಟ್ಟುಕೊಳ್ಳುತ್ತಾರೆ. ಅಲ್ಲದೆ ಜಲಜ, ನಳಿನ ಎಂಬ ಪದಗಳನ್ನು ರಚಿಸುವಲ್ಲಿ ಸಮರ್ಥರಾಗಬಹುದು.

ಅಂಕಿತನಾಮ, ಸರ್ವನಾಮ, ಸಂಖ್ಯಾವಾಚಕ, ಗುಣವಾಚಕ, ಕ್ರಿಯಾಪದಗಳ ತಿಳುವಳಿಕೆಗೆ ಅವಕಾಶ ಮಾಡಿ ಕೊಡಲಾಗಿದೆ. ಜೊತೆಗೆ ಇವುಗಳು ಒಂದಕ್ಕಿಂತ ಒಂದು ಭಿನ್ನ ರೂಪವಾದ ಪದರಚನೆ ಮಾಡುವವುಗಳಾಗಿವೆ. ಆದ್ದರಿಂದ ಇವುಗಳ ವ್ಯತ್ಯಾಸದ ತಿಳುವಳಿಕೆಗಾಗಿ ಪಠ್ಯದಲ್ಲಿ ಅಂದರೆ ಭಾಷಾಭ್ಯಾಸ ಚಟುವಟಿಕೆಯಲ್ಲಿ ಕೆಳಗಿನ ಕೋಷ್ಟಕದ ಪದಗಳಲ್ಲಿ ಅಂಕಿತನಾಮ, ಸರ್ವನಾಮ, ಗುಣವಾಚಕ, ಸಂಖ್ಯಾವಾಚಕ, ಕ್ರಿಯಾಪದಗಳನ್ನು ಪಟ್ಟಿ ಮಾಡಿ ಎಂದು

ಕೇಳಲಾಗಿದೆ. ಇದರಿಂದ ಮಕ್ಕಳು ಪದ ರಚನೆಯಲ್ಲಿ ವಿವಿಧ ಪಂಗಡಗಳಲ್ಲಿ ಕೋಷ್ಠಕ ನೋಡಿ ಬರೆಯುವರು. ಕೋಷ್ಠಕಕ್ಕೆ ಈ ಕೆಳಗಿನ ಉದಾಹರಣೆಯನ್ನು ಗಮನಿಸಬಹುದು.

| ಕಿರಿದು | ಮೈಸೂರು | ಬೆಂಗಳೂರು | ಇವು | ಕೆಂಪು | ಅವರು |
|---|---|---|---|---|---|
| ಮಲಗಿದಳು | ದೊಡ್ಡದು | ವಿಶ್ವೇಶ್ವರಯ್ಯ | ಎಂಟು | ಓಡಿದನು | ದೊಡ್ಡದು |
| ಕರ್ನಾಟಕ | ನಾಲ್ವಡಿ | ಸಣ್ಣದು | ಇವಳು | ಕೆಟ್ಟದ್ದು | ಮನೆ |

ಕ್ರಿಯಾಪದ ರಚನೆಯಲ್ಲಿಯೇ ಭಿನ್ನವಾದ ಪದ ರೂಪ ರಚನೆಯಾಗುತ್ತವೆ ಎಂಬುದನ್ನು ವಿದ್ಯಾರ್ಥಿಗಳಿಗೆ ತಿಳಿಸಲು ಭಾಷಾಭ್ಯಾಸ ಚಟುವಟಿಕೆಯಲ್ಲಿ ಭಿನ್ನ ಪದ ರಚನಾ ಕ್ರಮವನ್ನು ಓದಿ ಅರ್ಥೈಸಿ ಎಂದು ಪ್ರಶ್ನೆಗಳನ್ನು ಕೇಳಿರುವುದುಂಟು.

**ಉದಾಹರಣೆಗೆ :**

| **ಕ್ರಿಯಾಪದ ಮೂಲರೂಪ** | **ವಿಧ್ಯರ್ಥ ರಚನೆ** | **ಸಂಭಾವನಾರ್ಥಕ ರಚನೆ** | **ನಿಷೇದಾರ್ಥ ರಚನೆ** |
|---|---|---|---|
| ಪಡೆ | ಪಡೆಯಲಿ | ಪಡೆದಾನು | ಪಡೆಯನು |
| ನಡೆ | ನಡೆಯಲಿ | ನಡೆದಾನು | ನಡೆಯನು |
| ಬೇಡು | ಬೇಡಲಿ | ಬೇಡಿಯಾನು | ಬೇಡೆನು |
| ಕೊಡು | ಕೊಡಲಿ | ಕೊಟ್ಟಾನು | ಕೊಡೆನು |
| ಮಾಡು | ಮಾಡಲಿ | ಮಾಡಿಯಾನು | ಮಾಡೆನು |
| ಓಡು | ಓಡಲಿ | ಓಡಿಯಾನು | ಓಡೆನು |

ಎಂದು ಕೊಡಲಾಗಿದೆ. ಕ್ರಿಯಾ ಪದದ ಮೂಲ ರೂಪದ ಒಂದು ಪದ ಬೇರೆ ಬೇರೆ ರೀತಿಯಲ್ಲಿ ಪದ ರಚನೆಯ ವಿಧಾನವನ್ನು ತಿಳಿಸಿ ಕೊಡುವ ಉದ್ದೇಶದಿಂದ ಈ ಚಟುವಟಿಕೆ ಯನ್ನು ಅಳವಡಿಸಿ ಕೊಂಡಂತೆ ತೋರುತ್ತದೆ. ಇದರಿಂದ ಮಕ್ಕಳು ಕ್ರಿಯಾಪದ ಮೂಲ ರೂಪದ ಒಂದು ಪದದಿಂದ ವಿಧ್ಯರ್ಥ ರಚನೆ, ಸಂಭಾವನಾರ್ಥಕ ರಚನೆ ಹಾಗೂ ನಿಷೇದಾರ್ಥ ರಚನೆಯಲ್ಲಿ ಆಗುವ ಪದ ರಚನೆಯ ವಿಧಾನವನ್ನು ತಿಳಿಯುವರು.

ಮಕ್ಕಳು ಪದಬಂದ ಜ್ಞಾನವನ್ನು ಅರಿತು ಕೊಳ್ಳಲು ಜೊತೆಗೆ ಪದ ರಚನೆಯನ್ನು ಮಕ್ಕಳಲ್ಲಿ ವೃದ್ದಿಸುವ ಸಲುವಾಗಿ ಪದಬಂದ ಪೂರ್ಣಗೊಳಿಸಿ-ಪದಗಳನ್ನು ಓದಿ ಎಂದು ಬಹುತೇಕ ಪ್ರಾಥಮಿಕ ಹಂತದ ತರಗತಿಗಳ ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಕೊಟ್ಟಿರುವುದನ್ನು ಕಾಣುತ್ತೇವೆ.

ಉದಾಹರಣೆಗೆ :

| | | | | | |
|---|---|---|---|---|---|
| ೧ | ೭ ಸ | | | ೨ | ೬ ಜ |
| | | | ೩ ಸ್ | | |
| | ೪ | ದೈ | | | |
| | | | ೫ | ದು | |

ಸುಳಿವು : ಎಡದಿಂದ ಬಲಕ್ಕೆ

೧. ಮೈಸೂರಿನಲ್ಲಿ ಆಚರಿಸುವ ವಿಶ್ವವಿಖ್ಯಾತ ಹಬ್ಬ

೨. ಆಡು/ಮೇಕೆ ಎಂಬರ್ಥದಲ್ಲಿ ಉಪಯೋಗಿಸುವ ಪದ

೩. ಒಳ್ಳೆಯವರಿಗೆ ಹೇಳುವ ಗೌರವದ ಮಾತು

೪. ದೈವ ಬಲ ಇದ್ದವನಿಗೆ ಸಂಬೋಧಿಸಿ ಹೇಳುವ ಪದ

೫. ಕಷ್ಟಪಟ್ಟು ಕೆಲಸ ಮಾಡು

ಮೇಲಿನಿಂದ ಕೆಳಕ್ಕೆ :

೬. ಸೀತೆಯ ತಂದೆ

೨. ತಂದೆಯ ತಂದೆ

೩. ರುಚಿ ನೋಡು ಎಂಬ ಪದಕ್ಕೆ

೭. ತಾಳ್ಮೆಯಿಂದ ಇರು.......... ಈ ವಿಧಾನದಿಂದ ಮಕ್ಕಳು ವಿವಿಧ ಬಗೆಯ ವಿಚಾರಗಳನ್ನು ತಿಳಿಯುತ್ತಾರೆ. ಜೊತೆಗೆ ಪದ ಸಂಗ್ರಹದ ಜ್ಞಾನವನ್ನು ಹೆಚ್ಚಾಗಿಸಿಕೊಳ್ಳುತ್ತಾರೆ. ಕಲಿತ ಪದಗಳನ್ನೇ ಪುನರಾವಲೋಕನವನ್ನು ಮಾಡಿಕೊಳ್ಳುತ್ತಾರೆ. ಇದು ಒಂದು ಸೃಜನಶೀಲ ಚಟುವಟಿಕೆಯಾಗಿದೆ ಎಂದರೆ ತಪ್ಪಾಗಲಾರದು.

ಹಿರಿಯ ಪ್ರಾಥಮಿಕ ಕನ್ನಡಭಾಷಾ ಪಠ್ಯಪುಸ್ತಕಗಳು ಆಧುನಿಕ ಭಾಷಾ ಬೋಧನೆಗೆ ಒಳಪಟ್ಟು ರಚಿತವಾಗಿವೆ ಎಂದು ಅಧ್ಯಕ್ಷರು ಹೇಳುತ್ತಾರೆ. ಅದರಂತೆ ಕನ್ನಡ ಭಾಷೆ ಜಾಗತೀಕರಣಗೊಂಡು ಯಥಾವತ್ತಾಗಿ ಅನ್ಯಭಾಷಾ ಪದಗಳು ಸೇರಿರುವುದನ್ನು ಕಾಣ ಬಹುದಾಗಿದೆ. ಈ ಜಾಗತೀಕರಣದಿಂದ ಮುಖ್ಯವಾಗಿ ಇಂಗ್ಲೀಶ್ ಭಾಷೆಯ ಪದಗಳು ಸೇರಿರುವುದಂತು ಸತ್ಯವಾಗಿದೆ. ಈ ಸ್ವೀಕರಣಗೊಂಡ ಪದಗಳನ್ನು ಕನ್ನಡಭಾಷಾ ಪಠ್ಯಗಳಲ್ಲಿ

ಬಳಸಿಕೊಳ್ಳಲಾಗಿದೆ. ಉದಾಹರಣೆಗೆ : ಬಸ್ಸು, ಕಂಡಕ್ಟರ್, ಕಂಪ್ಯೂಟರ್, ಇಂಜಿನಿಯರ್, ಡ್ರೈವರ್, ಕ್ಲೀನರ್ ಎಂಬ ಇತ್ಯಾದಿ ಹಲವಾರು ಪದಗಳು ಕನ್ನಡ ಭಾಷಾ ಪಠ್ಯಗಳನ್ನು ಗಮನಿಸಿದಾಗ ಸಿಗುತ್ತವೆ. ಈ ಪದಗಳಿಗೆ ಕನ್ನಡ ಪದಗಳಿವೆ. ಆದರೆ ಸ್ವೀಕರಣಗೊಂಡ ಪದಗಳನ್ನು ಪರಿಚಯಿಸುವ ಅಗತ್ಯತೆಯನ್ನು ಕೇಳಿದರೆ ಅದಕ್ಕೆ ದೊರಕುವುದು ಒಂದೇ ಉತ್ತರ. ಈ ಪದಗಳು ಸಾಮಾಜಿಕ ಸಂವಹನಗಳಲ್ಲಿ ಬಳಕೆಯಲ್ಲಿರುವುದರಿಂದ ಬಳಸಲಾಗುತ್ತದೆ ಎಂದು ಸಾಮಾನ್ಯವಾಗಿ ಹೇಳುತ್ತಾರೆ. ಆದರೆ ಇದರಿಂದ ಕನ್ನಡ ಭಾಷೆಯ ಪದಗಳ ಪರಿಣಾಮ ಏನಾಗುವುದು ಎಂಬುದನ್ನು ವಿಚಾರ ಮಾಡುವ ಅಗತ್ಯತೆ ನಮ್ಮೆಲ್ಲರಿಗೂ ಇದೆ ಎಂದೆನಿಸುತ್ತದೆ. ಈ ಕೆಲವು ಪದಗಳಿಗೆ ಕನ್ನಡ ಪಠ್ಯಗಳ ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಕನ್ನಡ ಪದಗಳ ರೂಪವನ್ನು ಕೊಡಲಾಗಿದೆ. ಆದರೆ ಪಾಠ/ಪದ್ಯಗಳಲ್ಲಿ ಮಾತ್ರ ಸ್ವೀಕರಣಗೊಂಡ ಪದಗಳನ್ನೇ ಕೊಡಲಾಗಿದೆ. ಕನ್ನಡ ಭಾಷೆಯ ಅಳಿವು ಉಳಿವಿನ ಪ್ರಶ್ನೆ ಉದ್ಭವವಾಗುವುದು ಇಲ್ಲಿಂದ. ಇದರ ಪರಿಣಾಮ ಏನಾಗುತ್ತದೆ ಎಂಬುದು ಈ ಮೇಲಿನ ವಿವರಣೆಯನ್ನು ಗಮನಿಸಿದರೆ ಅರ್ಥವಾಗುತ್ತದೆ. ಆದ್ದರಿಂದ ಕನ್ನಡಭಾಷಾ ಪಠ್ಯಪುಸ್ತಕ ರಚನಾ ಸಮಿತಿ ಪಾಠ/ಪದ್ಯಗಳಲ್ಲಿ ಸ್ವೀಕರಣಗೊಂಡ ಪದಗಳ ಬಳಕೆಗೆ ಆದ್ಯತೆ ನೀಡಬೇಕೋ? ನೇರವಾಗಿ ಕನ್ನಡಭಾಷಾ ಪಠ್ಯದಲ್ಲಿ ಕನ್ನಡ ಪದಗಳ ಬಳಕೆ ಆಗಬೇಕೋ? ಎಂಬುದನ್ನು ಕೂಲಂಕುಶವಾದ ತೀರ್ಮಾನಕ್ಕೆ ಬರಬೇಕಾಗಿದೆ. ಕನ್ನಡ ಪದಗಳನ್ನು ಉಳಿಸುವ ಪ್ರಯತ್ನ ಪ್ರಾಥಮಿಕ ಕನ್ನಡಭಾಷಾ ಪಠ್ಯಗಳಿಂದಲೇ ಪ್ರಾರಂಭವಾಗಬೇಕು. ಈ ಪದಗಳಿಗೆ ಕನ್ನಡ ಪದಗಳಿಲ್ಲದ ಪಕ್ಷದಲ್ಲಿ ಕನ್ನಡ ಪದಗಳ ರಚನೆ ಮಾಡುವ ಕ್ರಮ ಕೈಗೊಂಡರೆ, ಉತ್ತಮ ನಿರ್ಧಾರ ಎನ್ನಬಹುದು. ನಮ್ಮ ಪಠ್ಯಪುಸ್ತಕ ರಚನಾ ಸಮಿತಿ ಈ ತರಹದ ಆಲೋಚನೆ ಮಾಡುವುದು ತುಂಬಾ ಅಗತ್ಯವಿದೆ ಎಂಬುದು ಈ ಪಠ್ಯಗಳ ವಿಶ್ಲೇಷಣೆಯಿಂದ ಸ್ಪಷ್ಟವಾಗುತ್ತದೆ.

### ೫.೫. ಆಧುನಿಕ ಚಿಂತಕರ ಅಭಿಪ್ರಾಯಗಳ ಚರ್ಚೆ ಮತ್ತು ವಿಶ್ಲೇಷಣೆ

ಪ್ರಾಥಮಿಕ ಕನ್ನಡ ಭಾಷಾ ಪಠ್ಯಪುಸ್ತಕಗಳ ಬಗ್ಗೆ ಆಧುನಿಕ ಸಂದರ್ಭದಲ್ಲಿ ಕನ್ನಡ ಭಾಷೆಗೆ ತನ್ನದೇ ಆದ ಧ್ವನಿ, ಪದ, ವಾಕ್ಯ ಮತ್ತು ವ್ಯಾಕರಣದ ಕೊರತೆ ಇದೆ ಎಂದು ಭಾಷಾ ಶಾಸ್ತ್ರಜ್ಞರು ಮತ್ತು ಭಾಷಾ ಚಿಂತಕರ ಅಭಿಪ್ರಾಯಗಳ ಸಂಖ್ಯೆ ವಿರಳವಾದುದು ಎಂದೆನಿಸುತ್ತದೆ. ಈ ವಿಷಯದ ಬಗ್ಗೆ ಹೆಚ್ಚು ಚಿಂತನೆ ನಡೆಸಿದವರೆಂದರೆ ಡಾ. ಕೆ.ವಿ. ನಾರಾಯಣ, ಡಿ.ಎನ್.ಶಂಕರ ಭಟ್ ಇವರ ಜೊತೆಗೆ ಕಾರ್ಯ ನಿರ್ವಹಿಸುತ್ತಿರುವ ಕನ್ನಡ ವಿಶ್ವವಿದ್ಯಾಲಯದ ಭಾಷಾಧ್ಯಯನದ ಅಧ್ಯಾಪಕರು ಹಾಗೂ ಮೈಸೂರಿನ ಭಾರತೀಯ ಭಾಷಾ ಸಂಸ್ಥಾನದಲ್ಲಿನ ಕೆಲವು ಅಧ್ಯಾಪಕರು ಮೈಸೂರು, ಬೆಂಗಳೂರು, ಮಂಗಳೂರು ವಿಶ್ವವಿದ್ಯಾಲಯದ ಭಾಷಾಧ್ಯಯನದ ಅಧ್ಯಾಪಕರಾದ ಸಿ.ಎಸ್. ರಾಮಚಂದ್ರನ್, ಇವರನ್ನು ಬಿಟ್ಟರೆ, ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಅಲ್ಲೊಬ್ಬ ಇಲ್ಲೊಬ್ಬ ಲೇಖಕರ ಲೇಖನಗಳನ್ನು ಬೆರಳೆಣಿಕೆಯಲ್ಲಿ ಕಾಣಬಹುದು. ಈ ವಿವರಣೆಯನ್ನು ಏಕೆ ನೀಡುತ್ತಿದ್ದಾರೆಂದು ಪ್ರಶ್ನೆ ಮಾಡಬಹುದು.

ಆಧುನಿಕ ಹಾಗೂ ಜಾಗತೀಕರಣ ಸಂದರ್ಭದಲ್ಲಿ ಕನ್ನಡ ಸಾಹಿತ್ಯ, ಕನ್ನಡ ವಿಮರ್ಶೆಯ ಮುಖಗಳನ್ನು ಗಮನಿಸುತ್ತೇವೆ. ಅದೇ ನಮ್ಮ ಕನ್ನಡ ಭಾಷೆ ಕಲಿಸುವ ಮೂಲ ತಳಹದಿಯಲ್ಲಿ ಒಂದಾದ ಪ್ರಾಥಮಿಕ ಕನ್ನಡ ಭಾಷಾ ಪಠ್ಯಗಳನ್ನು ಗಮನಿಸುವವರು, ವಿಮರ್ಶಿಸುವವರು ಎಷ್ಟಿದ್ದಾರೆ ಎಂಬುದರ ಬಗ್ಗೆ ನಮ್ಮನ್ನು ನಾವೇ ಪ್ರಶ್ನೆ ಮಾಡಿಕೊಳ್ಳುವದು ಅವಶ್ಯಕವಾಗಿದೆ. ಏಕೆಂದರೆ ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯಗಳೆಂದು ಹೇಳುವ ನಾವು ಅಲ್ಲಿ ಕಲಿಸುವ ಧ್ವನಿ, ಪದ, ವಾಕ್ಯ ಹಾಗೂ ವ್ಯಾಕರಣದ ಚಟುವಟಿಕೆಗಳು ಯಾವುವು ಎಂದರೆ? ಸಂಸ್ಕೃತ ಮತ್ತು ಇಂಗ್ಲೀಶ್ ಭಾಷೆಯ ಪದ ಮತ್ತು ವ್ಯಾಕರಣವನ್ನು ಕಲಿಸುತ್ತಿದ್ದೇವೆ. ಹಾಗೆಂದ ಮಾತ್ರಕ್ಕೆ ಕನ್ನಡ ಧ್ವನಿ, ಪದ, ವಾಕ್ಯ ಮತ್ತು ವ್ಯಾಕರಣ ಕಲಿಸುತ್ತಿಲ್ಲ ಎಂದರ್ಥವಲ್ಲ.

ನಮ್ಮ ಸರ್ಕಾರದ ಶಿಕ್ಷಣ ಸಂಸ್ಥೆಗಳು ದಿನಕ್ಕೊಂದು ಭಾಷಾ ನೀತಿಗಳನ್ನು ತರುತ್ತಲೇ ಇವೆ. ಅವುಗಳ ಬಗ್ಗೆ ವಿಮರ್ಶಿಸುವ ಮತ್ತು ಪರಾಮರ್ಶಿಸುವವರ ಕೊರತೆ ನಮ್ಮಲ್ಲಿ ಎದ್ದು ಕಾಣುತ್ತಿದೆ. ಈ ನೀತಿಗಳು ಜಾರಿಗೆ ಬಂದು ಕನ್ನಡ ಭಾಷೆಯನ್ನು ಕಲಿಸುವ ಮತ್ತು ಕಲಿಯುವವರಿಗೆ ಹೇಗೆ ಪರಿಣಾಮ ಬೀರಿವೆ ಎಂಬುದನ್ನು ಲೆಕ್ಕ ಪುಸ್ತಕಗಳ ಅಂಕೆಗಳಲ್ಲಿನ ದಾಖಲೆಗಳ ನಿರ್ಧಾರಕ್ಕೆ ಬರುತ್ತೇವೆ. ಆದರೆ ನೈಜ ಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸುವುದನ್ನು ಕನ್ನಡ ಭಾಷಾ ಪಠ್ಯಪುಸ್ತಕ ರಚನಾ ಸಮಿತಿ ಮಾಡುವುದು ಸೂಕ್ತವೆನಿಸುತ್ತದೆ. ಕನ್ನಡ ಭಾಷಾ ಪಠ್ಯಗಳಲ್ಲಿ ಕನ್ನಡದಲ್ಲಿ ಬಳಕೆಯಲ್ಲಿರುವ ಅಂದರೆ ಕನ್ನಡದ್ದೇ ಆದ ಧ್ವನಿ, ಪದ, ವಾಕ್ಯ ಮತ್ತು ಕನ್ನಡದ್ದೇ ಆದ ವ್ಯಾಕರಣವನ್ನು ರೂಪಿಸಬೇಕಿದೆ. ಜೊತೆಗೆ ಕನ್ನಡ ಪಠ್ಯಗಳಲ್ಲಿ ಅದನ್ನು ಹೇಗೆ ಅಳವಡಿಸಿ ಕೊಳ್ಳಬೇಕು ಎಂಬುದನ್ನು ಯೋಚಿಸಿ ನಿರ್ಧಾರಗಳನ್ನು ತೆಗೆದು ಕೊಳ್ಳುವುದು ನಮ್ಮೆಲ್ಲರ ಮುಖ್ಯವಾದ ಗುರುತರ ಜವಾಬ್ದಾರಿ ಇದೆ ಎಂದು ಈ ಪಠ್ಯಪುಸ್ತಕಗಳ ಸ್ವರೂಪದ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಪ್ರಾಥಮಿಕ ಪಠ್ಯಗಳಲ್ಲಿನ ಪದ ರಚನೆಗೆ ಸಂಬಂಧಿಸಿದಂತೆ ಆಧುನಿಕ ಚಿಂತಕರು ಯಾವ ಯಾವ ವಿಚಾರಗಳನ್ನು ಮುಂದಿಡುತ್ತಾರೆ. ಅವರ ವಿಚಾರಗಳನ್ನು ಒಪ್ಪಿ ಪಠ್ಯಗಳಲ್ಲಿ ಅಳವಡಿಸಿಕೊಳ್ಳಬಹುದೇ ಎಂಬುದನ್ನು ಚರ್ಚಿಸುವ ಅಗತ್ಯತೆ ಇದೆ ಎಂಬುದು ಕಂಡು ಬರುತ್ತದೆ. ಆದ್ದರಿಂದ ಪದ ರಚನೆಗೆ ಸಂಬಂಧಿಸಿದಂತೆ ಆಧುನಿಕ ಚಿಂತಕರ ಅಭಿಪ್ರಾಯಗಳ ಜೊತೆಯಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಇಂದು ವ್ಯಾಕರಣ ಬೋಧನೆ ನಮ್ಮ ಶಾಲೆಯ ಪಠ್ಯ ಪುಸ್ತಕಗಳಲ್ಲಿ ಬಹಳ ತೊಡಕಿನ ವಿಷಯವಾಗಿದೆ. ಭಾಷಾಭ್ಯಾಸ ಚಟುವಟಿಕೆಗಳನ್ನು ಪಠ್ಯಗಳಲ್ಲಿ ಗಮನಿಸಿದಾಗ ವ್ಯಾಕರಣ ಎಂಬ ಸಂಪ್ರದಾಯದ ದಾರಿಯಲ್ಲಿ ನಡೆಯುವ ಪ್ರಯತ್ನವನ್ನು ಮುಂದುವರಿಸಿದ್ದೇವೆ. ಕನ್ನಡ ವ್ಯಾಕರಣವೆಂಬಂತೆ ಪಠ್ಯಗಳಲ್ಲಿ ಸಂಸ್ಕೃತ ಪದಗಳ ಉದಾಹರಣೆಗಳ ಮೂಲಕ ಸಂಸ್ಕೃತ ವ್ಯಾಕರಣ ನಿಯಮಗಳನ್ನು ಕನ್ನಡದ ಪಠ್ಯಗಳಲ್ಲಿ ನಿರರ್ಗಳವಾಗಿ ಬೋಧಿಸಿ ತಿಳಿಸುವ ಪರಿಪಾಠ ನಮ್ಮಲ್ಲಿ ಇಂದಿಗೂ ಕಾಣಬಹುದು. ಕನ್ನಡ ಭಾಷೆಯ ಪಠ್ಯಪುಸ್ತಕಗಳ

ಈ ದುಸ್ಥಿತಿಯನ್ನು ಗಮನಿಸಿಯೇ ಡಿ.ಎನ್. ಶಂಕರಭಟ್‌ರವರು 'ಕನ್ನಡಕ್ಕೆ ಬೇಕು ಕನ್ನಡದ್ದೆ ವ್ಯಾಕರಣ' ಎಂಬ ಪುಸ್ತಕವನ್ನು ರಚಿಸಿದಂತೆ ತೋರುತ್ತದೆ.

ನಮ್ಮ ಕನ್ನಡ ಭಾಷಾ ಪಠ್ಯಗಳಲ್ಲಿನ ಬೋಧನೆ ಕಂಠಪಾಠ ಮಾದರಿಯಲ್ಲಿ ನಡೆಯುತ್ತಿದೆ. ಅಂತಹ ಬೋಧನೆ ಕೇವಲ ಪರೀಕ್ಷೆಯ ಉದ್ದೇಶಕ್ಕೆ ಸೀಮಿತವಾಗಿದೆ. ಪರೀಕ್ಷೆ ಮುಗಿದ ನಂತರ ನಮ್ಮ ನೆನಪಿನಿಂದ ಮರೆ ಮಾಚುತ್ತದೆ. ಇದಕ್ಕೆ ಕಾರಣಗಳೇನಿರಬಹುದು? ಎಂಬುದರ ಬಗ್ಗೆ ಚಿಂತನೆಗಳು ನಡೆಯುತ್ತಿವೆ. ಕನ್ನಡದಲ್ಲಿ ಸಂಧಿ ,ಕಾರ್ಯಗಳನ್ನು ಅಧ್ಯಯನಕ್ಕೆ ಅನುಕೂಲವಾಗುವ ರೀತಿಯಲ್ಲಿ ಕನ್ನಡ ಮತ್ತು ಸಂಸ್ಕೃತ ಸಂಧಿಗಳೆಂದು ವರ್ಗೀಕರಿಸಲಾಗಿದೆ. ಈ ಎರಡು ಭಾಷೆಗಳ ಸಂಧಿ ಕಾರ್ಯಗಳು ಪರಸ್ಪರ ಭಿನ್ನವಾಗಿದೆ ಎಂದು ಹೇಳಲಾಗಿದೆ. ಆದರೆ ಹೇಗೆ ಭಿನ್ನ ಎಂದು ಎಲ್ಲಿಯೂ ಹೇಳಿಲ್ಲ. ಅವು ಹೇಗೆ ಭಿನ್ನವಾಗಿವೆ ಎಂದು ತೋರಿಸುವ ಕೆಲಸವನ್ನು ಇತ್ತೀಚೆಗೆ ಡಿ.ಎನ್ ಶಂಕರ ಭಟ್ ಅವರು ಪ್ರಯತ್ನಿಸಿದ್ದಾರೆ.

ಕನ್ನಡದಲ್ಲಿ ಸಂಧಿ ಕಾರ್ಯಗಳನ್ನು ವಿವರಿಸುವಾಗ ಸಂಸ್ಕೃತ ಭಾಷೆಗೆ ನೀಡಿದ ಮಾನ್ಯತೆಯನ್ನು ಹಿಂದಿ, ಇಂಗ್ಲೀಶ್ ಮರಾಠಿ, ಪರ್ಶಿಯನ್ ಅರೇಬಿಕ್ ಮುಂತಾದ ಭಾಷೆಗಳಿಗೆ ನೀಡಿಲ್ಲ. ಈ ಎಲ್ಲಾ ಭಾಷೆಗಳಿಂದ ಬಂದಿರುವ ಪದಗಳನ್ನು ಅಶುದ್ದ ನೆಲೆಯಲ್ಲಿ ನಿಂತು ನೋಡಲಾಗುತ್ತಿದೆ. ಕನ್ನಡಕ್ಕೆ ಸಮಕಾಲೀನ ವ್ಯಾಕರಣ ರಚನೆ ಮಾಡಬೇಕಾದರೆ, ಮೊದಲು ಸಂಸ್ಕೃತ ಭಾಷೆಯ ಪದಗಳು ನಮ್ಮ ಬರಹ ಮತ್ತು ಬಳಕೆಯ ಎರಡು ನೆಲೆಗಳಲ್ಲಿವೆ. ಅಂತಹವುಗಳನ್ನು ಒಂದು ಕಡೆ ಸಂಗ್ರಹಿಸ ಬೇಕಾಗಿದೆ ನಂತರ ವರ್ಗೀಕರಿಸಿ ಸಂಸ್ಕೃತ ಪದಗಳ ನಡುವೆ ಇರುವ ಸಂಧಿ ಕಾರ್ಯಕ್ಕಿಂತ ಕನ್ನಡ ಸಂದಿ ,ಕಾರ್ಯ ಹೇಗೆ ಭಿನ್ನವಾಗಿದೆ ಎಂಬುದನ್ನು ನಿರ್ಧರಿಸ ಬೇಕಾಗಿದೆ. ಡಿ.ಎನ್. ಶಂಕರ ಭಟ್ ಅವರು ಕನ್ನಡದಲ್ಲಿರುವ ಸಂಧಿ ಕಾರ್ಯಗಳನ್ನು ಸಂಸ್ಕೃತ ಭಾಷೆಯಲ್ಲಿರುವ ಹಾಗೆ ಅದರ ಪರಿಭಾಷೆಗಳನ್ನು ಬಳಸಿ ವಿವರಿಸಲಾಗುತ್ತದೆ. ಇದರಿಂದ ಶೈಕ್ಷಣಿಕವಾಗಿ ಯಾವುದೇ ಪ್ರಯೋಜನವಾಗುತ್ತಿಲ್ಲ. ಅದರ ಬದಲಾಗಿ ಸಂಧಿ ಕಾರ್ಯಗಳಲ್ಲಿ ಜರುಗಿರುವ ಧ್ವನಿಗಳ ಬದಲಾವಣೆ ಮತ್ತು ಅದರ ನಿಯಮಗಳನ್ನು ಬೋಧಿಸ ಬೇಕಾಗಿದೆ.

ಕನ್ನಡದ ಸಂಧಿ ,ಕಾರ್ಯಗಳನ್ನು ಅವುಗಳ ಕಾರ್ಯದ ಆಧಾರದ ಮೇಲೆ ಲೋಪಸಂಧಿ, ಆಗಮಸಂಧಿ, ಆದೇಶಸಂಧಿ ಎಂದು ವರ್ಗೀಕರಿಸ ಬಹುದಾಗಿದೆ. ಕನ್ನಡ ಪದಕ್ಕೆ ಕನ್ನಡಪದ ಸೇರಿ ಆಗುವ ಸಂಧಿಗಳು ಕನ್ನಡ ಸಂಧಿಗಳು. ಇದರಂತೆ ಸಂಸ್ಕೃತ ಪದಗಳಿಗೆ ಸಂಸ್ಕೃತ ಪದಗಳು ಸೇರಿ ಆಗುವ ಸಂಧಿಗಳು ಸಂಸ್ಕೃತ ಸಂಧಿಗಳೆಂದು ವರ್ಗೀಕರಿಸಲಾಗಿದೆ.

ಉತ್ತರಪದ ಸ್ವರದಿಂದ ಮೊದಲಾದರೆ ಲೋಪ ಇಲ್ಲ ಆಗಮ ಸಂಧಿಗಳೆಂದು, ವ್ಯಂಜನವಿದ್ದರೆ ಸಾಮಾನ್ಯವಾಗಿ ಆದೇಶ ಸಂಧಿ ಎಂದು ಕರೆಯಲಾಗಿದೆ. ಆದರೆ ಸಂಸ್ಕೃತ ಭಾಷೆಯಲ್ಲಿ ಆದೇಶ ಸಂಧಿಗಳೇ ಜಾಸ್ತಿ. ಕನ್ನಡದಲ್ಲಿ ಲೋಪ ಆಗಮಗಳು ಜಾಸ್ತಿ.

ಆದೇಶದಲ್ಲಿ ಹೆಚ್ಚು ವ್ಯಂಜನಗಳು ಕಾರ್ಯ ಪ್ರವೃತ್ತಿಯಾದರೆ ಲೋಪ, ಆಗಮ ಸಂಧಿಗಳಲ್ಲಿ ಸ್ವರಗಳು ಹೆಚ್ಚು ಕಾರ್ಯ ಪ್ರವೃತ್ತವಾಗಿರುತ್ತವೆ.

ಡಿ.ಎನ್. ಶಂಕರ ಭಟ್ ಅವರು ಅಭಿಪ್ರಾಯ ಪಡುವ ಹಾಗೇ ಸಂಧಿಗಳು ಪರಿಭಾಷೆಗಳನ್ನು ನೇರವಾಗಿ ಬೋಧನೆ ಮಾಡದೆ ಸಂಧಿಯಾಗುವಾಗ ಧ್ವನಿಗಳ ಬದಲಾವಣೆ ಹೇಗಾಗಿದೆ ಎಂಬುದನ್ನು ವಿವರಿಸ ಬೇಕಾಗಿದೆ. ಉದಾ: 'ವಿದ್ಯುತ್' ಎಂಬ ಪದಕ್ಕೆ 'ಶಕ್ತಿ' ಎಂಬ ಪದ ಸೇರಿ 'ವಿದ್ಯುಚ್ಛಕ್ತಿ' ಎಂಬ ಸಮಸ್ತ ಪದ ಲಭ್ಯವಾಗುವುದನ್ನು ನೋಡುತ್ತೇವೆ. ಇಲ್ಲಿ 'ವಿದ್ಯುತ್' ಎಂಬ ಪದದಲ್ಲಿ ಕೊನೆಯ ಎರಡು ಧ್ವನಿಗಳಾದ 'ತು' ಮತ್ತು 'ಉ' ಲೋಪವಾಗಿ 'ವಿದ್ಯುತ್' ಮಾತ್ರ ಉಳಿದಿದೆ. 'ವಿದ್ಯುತ್' ಪದದ ಕೊನೆಯ 'ತ'ಕಾರ 'ಚ'ಕಾರವಾಗುತ್ತದೆ. 'ವಿದ್ಯುತ್' ಪದಕ್ಕೆ 'ಶಕ್ತಿ' ಪದದಲ್ಲಿನ 'ಶ್' ಧ್ವನಿಗೆ 'ಚ' ಬಂದು ಸೇರಿ 'ವಿದ್ಯುಚ್ಛಕ್ತಿ' ಎಂಬ ಸಮಸ್ತ ಪದ ಸಿದ್ಧಿಸಿದೆ. ಈ ಪ್ರಕ್ರಿಯೆಯನ್ನು ಹೀಗೆ ಹೇಳುವ ಬದಲು ಶ್ಚುತ್ವಸಂಧಿ .................. ಸಂಧಿ ಎಂದು ಹೇಳುವುದರಿಂದ ಮಕ್ಕಳಿಗೆ ಯಾವ ಪ್ರಯೋಜನವಾಗುತ್ತಿಲ್ಲ. ಈ ಹಿನ್ನೆಲೆಯಿಂದ ಸಂಸ್ಕೃತದ ಎಲ್ಲಾ ಸಂಧಿ ಕಾರ್ಯಗಳನ್ನು ಕನ್ನಡದ ಮೂರೇ ಮೂರು ಸಂಧಿ ಕಾರ್ಯದಲ್ಲಿ ವಿವರಿಸಿ ಹೇಳಲು ಸಾಧ್ಯವಿದೆ. ಅದರಲ್ಲೂ 'ಇ, ಈ, ಉ, ಊ, ಒ, ಓ ಮತ್ತು ಅ, ಆ, ಎಂಬ ಸ್ವರಗಳೇ ಸಾಕಾಗಿದೆ. ಅದರಲ್ಲೂ ಕನ್ನಡದ ಸಂಧಿಕಾರ್ಯ ವಿವರಿಸಲು ' ಅ, ಇ, ಎ, ಉ, ಓ ಸ್ವರಗಳೇ ಸಾಕಾಗಿವೆ. ಉಳಿದ ಸ್ವರಗಳ ಅಗತ್ಯವಿಲ್ಲವೆಂದೇನಿಸುತ್ತದೆ. ಈ ವಿಧಾನವನ್ನು ಅನುಸರಿಸುವುದರಿಂದ ಔಪಚಾರಿಕ ಮತ್ತು ಅನೌಪಚಾರಿಕ ನೆಲೆಯ ಭಾಷಾ ಬಳಕೆಯ ನಡುವಿನ ಅಂತರವನ್ನು ಕಡಿಮೆ ಮಾಡಬಹುದಾಗಿದೆ. ಜೊತೆಗೆ ಸಂಧಿ ಕಾರ್ಯಗಳನ್ನು ನೆನಪಿನಲ್ಲಿ ಉಳಿಯುವಂತೆ ಮಾಡಬಹುದಾಗಿದೆ.

ನಮ್ಮ ಪಠ್ಯಪುಸ್ತಕಗಳಲ್ಲಿ ಕನ್ನಡಾಂಬೆ, ಕನ್ನಡ ಅಭಿಮಾನ, ಕೈಗಾರಿಕಾ ಅಭಿವೃದ್ಧಿ ಮುಂತಾದವುಗಳನ್ನು ಸವರ್ಣದೀರ್ಘ ಸಂಧಿ ಅಡಿಯಲ್ಲಿ ನೀಡಲಾಗಿದೆ. ವಾಸ್ತವವಾಗಿ ಇವು ಸವರ್ಣದೀರ್ಘ ಸಂಧಿ ಅಲ್ಲ. ಕನ್ನಡ ಮತ್ತು ಸಂಸ್ಕೃತ ಪದಗಳು ಸೇರಿಕೊಂಡು ಆಗಿರುವ ರಚನೆಗಳು. ಅದೇ ರೀತಿಯಲ್ಲಿ ಪದಗಳನ್ನು ವಿಭಜನೆ ಮಾಡುವ ಗೊಂದಲ ಪಠ್ಯ ಪುಸ್ತಕಗಳಲ್ಲಿ ಸಾಕಷ್ಟಿದೆ. ಉದಾಹರಣೆಗೆ **ಕಾಲು + ಅಂಶ =ಕಾಲಾಂಶ** ಎಂದು ಕೊಡಲಾಗಿದೆ. ಇರ ಬೇಕಾದದ್ದು **'ಕಾಲಂಶ' ಎಂದು ಹಾಗೆಯೇ ಒಳಾರರ್ಥ** ಎಂದಿದ್ದು, ಇರ ಬೇಕಾದದ್ದು ಒಟ್ಟರರ್ಥ. ಅದೇ ರೀತಿಯಲ್ಲಿ ಒಳಂಗಣ-ಒಳಾಂಗಣ ಇರಬೇಕಾದದ್ದು ಒಳಂಗಣ ಅಂದರೆ ನಮ್ಮ ದಿನ ನಿತ್ಯದಲ್ಲಿ ಬಳಕೆಯಾಗುವ ಪದಗಳನ್ನು ಇದು ಈ ಸಂಧಿ ವರ್ಗಕ್ಕೆ ಸೇರುತ್ತದೆ ಎಂಬ ತಿಳುವಳಿಕೆ ಬರಬೇಕಾಗಿದೆ.

ಕನ್ನಡದ ಪದ ರಚನೆಯಲ್ಲಿ ಇಂದು ಪಲ್ಲಟವಾಗಿರುವುದನ್ನು ಕಾಣುತ್ತೇವೆ. ಪದ ರಚನೆಯ ಕೆಲವು ನಿಯಮಗಳು ಈಗ ಬದಲಾಗಿವೆ. ಈ ಬದಲಾವಣೆಯು ಕನ್ನಡ

ಭಾಷೆಯ ಪಠ್ಯಗಳಲ್ಲಿ ಪದಗಳು ಬಳಕೆಯಾಗಿವೆ. ಆದರೆ ಆ ಪದಗಳ ರಚನೆಯಲ್ಲಿ ವ್ಯತ್ಯಾಸವಾದ ಬಗೆಯನ್ನು ವಿವರಿಸುವ ಪ್ರಯತ್ನಗಳು ನಡೆದಿಲ್ಲ. ವಿಭಕ್ತಿ ಪ್ರತ್ಯಯಗಳನ್ನು ನಾಮ ಪದಗಳಿಗೆ ಹಚ್ಚುವಾಗ ಇದ್ದ ನಿಯಮಗಳು ಕೆಲವು ಬದಲಾಗುತ್ತವೆ. ಚತುರ್ಥಿ ವಿಭಕ್ತಿ ಪ್ರತ್ಯಯಗಳಲ್ಲಿ ಒಂದಾದ 'ಗೆ' ಪ್ರತ್ಯಯವೂ ಸಾಮಾನ್ಯವಾಗಿ ಈಗ ನಮಗೆ ಪರಿಚಿತವಿರುವ ನಿಯಮದಂತೆ 'ಎ' ಕಾರ ಮತ್ತು 'ಇ'ಕಾರ (ಪೂರ್ವಸ್ವರಗಳು) ಈ ಕಾರಗಳಿಂದ ಕೊನೆಯಾಗುವ ಪದಗಳಿಗೆ ಮಾತ್ರ ಸೇರುತ್ತವೆ. ಆದರೆ ಈಗ ಈ ಪ್ರತ್ಯಯವನ್ನು ಬೇರೆ ಎರಡು ಸಂದರ್ಭಗಳಲ್ಲಿ ಬಳಸುತ್ತಿದ್ದೇವೆ. ಒಂದು : ವ್ಯಂಜನಾಂತ ಪದಗಳಿಗೆ ಚತುರ್ಥಿ ವಿಭಕ್ತಿ ಪ್ರತ್ಯಯವಾಗಿ ಈ 'ಗೆ' ಪ್ರತ್ಯಯ ಸೇರುತ್ತದೆ. ಕನ್ನಡದ ಯಾವುದೇ ದಿನ ಪತ್ರಿಕೆಯನ್ನು ತೆರೆದು ನೋಡಿದರೂ ಪ್ರತಿ ದಿನವೂ ನೂರಾರು ಇಂತಹ ಪ್ರಯೋಗಗಳನ್ನು ಕಾಣುತ್ತೇವೆ. ಉದಾಹರಣೆಗೆ : ಲಂಡನ್‌ಗೆ, ಇರಾಕ್‌ಗೆ, ಜಪಾನ್‌ಗೆ, ಬ್ಯಾಟ್‌ಗೆ, ಬಾಲ್‌ಗೆ, ಫೀಲ್ಡ್‌ಗೆ, ಫಿಲಂಗೆ, ರೋಡ್‌ಗೆ ಹೀಗೆ ಹಲವಾರು ಇಲ್ಲಿ ಈ ಹಿಂದೆ ಇದ್ದ ಇನ್ನೊಂದು ನಿಯಮ ಬಳಕೆಯಿಂದ ಜಾರಿ ಹೋಗಿರುವುದು ಗಮನಿಸಬೇಕಾದಂತಹ ವಿಷಯವಾಗಿದೆ. ಸಾಮಾನ್ಯವಾಗಿ ವ್ಯಂಜನಾಂತ ಪದಗಳನ್ನು ಕನ್ನಡಕ್ಕೆ ಎರವಲು ಪಡೆದಾಗ ಆ ಪದಗಳನ್ನು ಸ್ವರಾಂತ ಮಾಡಿಕೊಂಡು ಅನಂತರ ಅಗತ್ಯ ಬಿದ್ದರೆ ಚತುರ್ಥಿ ವಿಭಕ್ತಿ ಪ್ರತ್ಯಯ ಹಚ್ಚಬೇಕಿತ್ತು. ಸ್ವರಾಂತ ಮಾಡ ಬೇಕೆಂದರೆ 'ಉ' ಕಾರ ಸೇರ್ಪಡೆಯಾಗುತ್ತಿತ್ತು. ಈ 'ಉ' ಕಾರ ಸೇರುವಾಗ ಕೊನೆಯ ವ್ಯಂಜನದ ಹಿಂದಿನ ಸ್ವರ ಕನ್ನಡಿಗರ ಉಚ್ಚಾರಣೆಯಲ್ಲಿ ಹ್ರಸ್ವವಾಗಿದ್ದರೆ ಆಗ ಆ ವ್ಯಂಜನವು ದ್ವಿತ್ವಗೊಂಡು ಅನಂತರ 'ಉ' ಕಾರ ಸೇರುತ್ತದೆ. ಉದಾಹರಣೆಗೆ: ಲಾಸ್ – ಲಾಸು, ಪೆನ್–ಪೆನ್ನು, ಬಸ್–ಬಸ್ಸು, ಕಿಟ್–ಕಿಟ್ಟು ಇತ್ಯಾದಿ ಆದರೆ ಟೌನ್ – ಟೌನು, ಬ್ಯಾಟ್–ಬ್ಯಾಟು ಆಗುತ್ತವೆ. ಹೀಗೆ 'ಉ' ಕಾರ ಸೇರಿದ ಮೇಲೆ ಚತುರ್ಥಿ ವಿಭಕ್ತಿ ಪ್ರತ್ಯಯವನ್ನು ಸೇರಿಸಬೇಕಾಗಿ ಬಂದರೆ 'ಉ' ಕಾರವನ್ನು ಲೋಪಗೊಳಿಸಿ ಅದಕ್ಕೆ 'ಇಗೆ' ಪ್ರತ್ಯಯವನ್ನು ಸೇರಿಸುವುದುಂಟು. ಉದಾಹರಣೆಗೆ ಕಾಲು–ಕಾಲಿಗೆ, ಕೋಲು–ಕೋಲಿಗೆ, ಹಾಡು–ಹಾಡಿಗೆ ಇದ್ದಂತೆ ಬ್ಯಾಟು–ಬ್ಯಾಟಿಗೆ, ಗೇಟು–ಗೇಟಿಗೆ ಆಗುತ್ತಿತ್ತು. ನಾವು ಇಲ್ಲಿ ಗುರುತಿಸಿದಂತೆ ಕಳೆದ ಕೆಲವು ದಶಕಗಳಲ್ಲಿ ಆಗಿರುವ ಬದಲಾವಣೆ ಎಂದರೆ ಈ ಪ್ರಚಲಿತ ನಿಯಮ ಕಳೆದು ಹೋಗಿ ಮೂಲ ವ್ಯಂಜನಾಂತ ರೂಪಕ್ಕೆ ನೇರವಾಗಿ 'ಗೆ' ಕಾರವನ್ನು ಸೇರಿಸಲಾಗುತ್ತದೆ. ಉದಾಹರಣೆಗೆ : ಗೇಟ್‌ಗೆ, ಬ್ಯಾಟ್‌ಗೆ ಇದು ಉಚ್ಚಾರಣೆ ಮತ್ತು ಬರಹ ಎರಡರಲ್ಲೂ ಕಾಣಿಸಿಕೊಳ್ಳತೊಡಗಿದೆ. ನಾವು ಧ್ವನಿ ಪಲ್ಲಟಗಳ ನೆಲೆಯಲ್ಲಿ ಗುರುತಿಸದ ನಿಯಮಗಳೇ ಇಲ್ಲೂ ಕೂಡ ಪ್ರವೃತ್ತವಾಗಿವೆ.

'ಗೆ' ಎಂಬ ಚತುರ್ಥಿ ವಿಭಕ್ತಿ ಪ್ರತ್ಯಯ ಸಾಮಾನ್ಯವಾಗಿ 'ಅ' ಕಾರಂತ ಪದಗಳಿಗೆ ಸೇರುವುದಿಲ್ಲ. ಉದಾಹರಣೆಗೆ ಕಡತ, ಜಗಳ, ಕಲಹ, ಮರ, ಪುಸ್ತಕ ಮುಂತಾದ ಮಾನವೇತರ ನಾಮ ಪದಗಳಿಗೆ ಚತುರ್ಥಿ ಪ್ರತ್ಯಯವಾಗಿ 'ಕ್ಕೆ' ಎಂಬ ಪ್ರತ್ಯಯ ಸೇರುತ್ತದೆ.

ಉದಾಹರಣೆಗೆ ಕಡತಕ್ಕೆ, ಜಗಳಕ್ಕೆ, ಕಲಹಕ್ಕೆ, ಪುಸ್ತಕಕ್ಕೆ ಎಂಬಂತೆ. ಆದರೆ ಮಾನವ ನಾಮ ಪದಗಳು 'ಅ' ಕಾರಾಂತವಾಗಿದ್ದಾಗ ಮೊದಲು ಲಿಂಗವಾಚಿ ಪ್ರತ್ಯಯವನ್ನು ಪಡೆದು ಅನಂತರ 'ಇಗೆ' ಎಂಬ ಪ್ರತ್ಯಯವನ್ನು ಸೇರಿಸುತ್ತದೆ. ಉದಾಹರಣೆಗೆ ರಾಮ ಎಂಬ 'ಅ' ಕಾರಂತ ಪದಕ್ಕೆ ಮೊದಲು ಪುಲ್ಲಿಂಗವಾಚಿ 'ಅನ್' ಪ್ರತ್ಯಯವನ್ನು ಸೇರಿಸಿ ಅನಂತರ 'ಇಗೆ' ಕೂಡಿಸಿದರೆ 'ರಾಮನಿಗೆ' ಎಂಬ ರೂಪ ಸಿಗುತ್ತದೆ. ಈ ನಿಯಮ ಕೂಡ ಬದಲಾಗುತ್ತಿದೆ. ವ್ಯಕ್ತಿವಾಚಿ ನಾಮ ಪದಗಳಲ್ಲಿ 'ಅ' ಕಾರಂತ ಪದಗಳೆಂದರೆ ಅವುಗಳಿಗೆ ನೇರವಾಗಿ 'ಗೆ' ಪ್ರತ್ಯಯ ಸೇರುತ್ತದೆ ಉದಾಹರಣೆಗೆ ರಾಮಗೆ –ಸೀತೆಗೆ ಈ ಹೊಸ ನಿಯಮವು ಸಾರಾಸಗಟಾಗಿ ಎಲ್ಲಾ 'ಅ' ಕಾರಾಂತ ನಾಮ ಪದಗಳಿಗೂ ಅನ್ವಯಿಸುವಂತಿವೆ. ಇದರಿಂದ ಕೆಲವು ಗೊಂದಲಗಳು ಉಂಟಾಗುವ ಸಾದ್ಯತೆಗಳಿವೆ. ಅದರಲ್ಲೂ ಈ ಪ್ರತ್ಯಯ ಪಡೆಯುತ್ತಿರುವ ವ್ಯಕ್ತಿಗೆ ಸಾಮಾಜಿಕವಾಗಿ ಹೆಚ್ಚು ಗೌರವವಿದ್ದರೆ ಆಗ 'ಗೆ' ಪ್ರತ್ಯಯ ಸೇರಿಸುವ ಮೊದಲು ಗೌರವ ಸೂಚಕವಾದ 'ಅವರು' ಎಂಬ ಪದವನ್ನು ಸೇರಿಸಬೇಕೆ ಅಥವಾ ಬೇಡವೇ ಎಂಬ ಜಿಜ್ಞಾಸೆ ಮೊದಲಾಗುತ್ತದೆ. ಉದಾಹರಣೆಗೆ : ಸಿದ್ದರಾಮಯ್ಯ ಎಂಬ ನಾಮ ಪದಕ್ಕೆ 'ಗೆ' ಪ್ರತ್ಯಯವನ್ನು ಸೇರಿಸಿದಾಗ ಸಿದ್ದರಾಮಯ್ಯನವರಿಗೆ ಎನ್ನಬೇಕೋ ಅಥವಾ ಸಿದ್ದರಾಮಯ್ಯಗೆ ಎನ್ನಬೇಕೋ ಎಂಬ ಗೊಂದಲ ಉಂಟಾಗುತ್ತದೆ. ಕನ್ನಡ ಪತ್ರಿಕೆಗಳು ಈ ನೆಲೆಯಲ್ಲಿ ಇನ್ನೂ ಖಚಿತವಾದ ನಿಲುವನ್ನು ತಿಳಿದಿಲ್ಲವೆಂದು ತೋರುತ್ತದೆ. ಸಿದ್ದರಾಮಯ್ಯಗೆ, ಯಡಿಯೂರಪ್ಪಗೆ ಎಂಬ ರೂಪಗಳನ್ನು ನಾವು ಪತ್ರಿಕೆಗಳಲ್ಲಿ ಕಂಡರೂ ದೇವೆಗೌಡಗೆ ಎಂಬ ರೂಪವನ್ನು ಗಮನಿಸಿಲ್ಲ. ಸಾಮಾನ್ಯವಾಗಿ ದೇವೆಗೌಡರಿಗೆ ಎಂಬ ರೂಪ ಬಳಕೆಯಲ್ಲಿದೆ. ಅಂದರೆ ಈ 'ಗೆ' ಪ್ರತ್ಯಯ ಸೇರುವ ಹೊಸ ವಿಧಾನ ಕೇವಲ ಪದಾಂತ್ಯದ ಧ್ವನಿಯನ್ನು ಮಾತ್ರ ಅವಲಂಭಿಸಿಲ್ಲ ಎಂದಾಯಿತು.

ಕನ್ನಡದಲ್ಲಿ ಸಪ್ತಮಿ ವಿಭಕ್ತಿ ಪ್ರತ್ಯಯ ಇದೆಯೋ ಇಲ್ಲವೋ ಅಥವಾ ಈಗ ಅದರ ಬದಲು ಪೂರ್ಣವಾಗಿ ಸ್ವತಂತ್ರವಾಗಿರುವ ಪದಗಳನ್ನು ಬಳಸುತ್ತಿದ್ದೇವೆಯೋ ಎಂಬುದು ಚರ್ಚೆಯ ವಿಷಯ. ಆ ವಿಭಕ್ತಿ ಪ್ರತ್ಯಯ 'ಒಳಗೆ' ಮತ್ತು 'ಅಲ್ಲಿ' ಎಂಬ ಪದೋತ್ತರಿಗಳನ್ನು ಬಳಸುತ್ತಿದ್ದೇವೆ. ಈ ಎರಡು ರೂಪಗಳು ಸ್ವತಂತ್ರವಾಗಿಯೂ ಬಳಕೆಯಾಗುತ್ತಿವೆ. ಆದ್ದರಿಂದ ಅವುಗಳನ್ನು ಪ್ರತ್ಯಯಗಳೆಂದು ಹೇಳುವುದು ಕಷ್ಟ. ಆದರೆ ನಮ್ಮ ಗಮನ ಸೆಳೆಯಬೇಕಾದ ಮತ್ತೊಂದು ಅಂಶವೆಂದರೆ ಈ ಪದೋತ್ತರಿಗಳ ಬದಲು ಮತ್ತೊಂದು ಪ್ರತ್ಯಯ ಈಗ ವ್ಯಾಪಕವಾಗಿ ಬಳಕೆಯಾಗುತ್ತವೆ. ಆದ್ದರಿಂದ ಅವುಗಳನ್ನು ಪ್ರತ್ಯಯವೆಂದು ಹೇಳುವುದು ಕಷ್ಟ. ಆದರೆ ನಮ್ಮ ಗಮನ ಸೆಳೆಯಬೇಕಾದ ಮತ್ತೊಂದು ಅಂಶವೆಂದರೆ ಈ ಪದೊತ್ತರಿಗಳ ಬದಲು ಮತ್ತೊಂದು ಪ್ರತ್ಯಯ ಈಗ ವ್ಯಾಪಕವಾಗಿ ಬಳಕೆಯಾಗುತ್ತಿದೆ. ಇದು 'ಆಗ' ಎನ್ನುವ ಪ್ರತ್ಯಯ ಚಾರಿತ್ರಿಕವಾಗಿ 'ಆಗ' ಎಂಬ ರೂಪ 'ಆಗಂ' ಎಂಬ ಪದದಿಂದ ನಿಷ್ಪನ್ನವಾಗಿದೆ ಎಂದು ಹೇಳುತ್ತಾರೆ. ಆಗಂ ಎಂದರೆ ಒಳಗೆ ಎಂದರ್ಥ. ದ್ರಾವಿಡದ ಜ್ಞಾತಿ

ಭಾಷೆಗಳಲ್ಲಿ ಕೆಲವು ಕಡೆ 'ಆಗಂ' ಉಳಿದುಕೊಂಡಿದೆ. ಈ ರೂಪದಿಂದಲೇ ಬೆಳೆದು ಬಂದ 'ಆಗ' ರೂಪ ಪ್ರತ್ಯಯವಾಗಿ ತುಂಗಭದ್ರೆಯ ಉತ್ತರದ ಕರ್ನಾಟಕದಲ್ಲಿ ಬಹು ವ್ಯಾಪಕವಾಗಿ ಬಳಕೆಯಲ್ಲಿದೆ. ಉದಾಹರಣೆಗೆ : ಮನಿಯಾಗ, ಊರಾಗ, ತಲಿಯಾಗ, ಹೊಲದಾಗ, ಮಾರ್ಕೆಟ್‌ನಾಗ, ತೋಟದಾಗ, ರೋಡದಾಗ ಈ ರೂಪಗಳು ಈ ಉಪ ಭಾಷೆಗಳಲ್ಲಿ ಮಾತ್ರ ಇದ್ದವು. ಆದರೆ ಈಚೆಗೆ ಈ ಪ್ರತ್ಯಯ ತುಂಗಭದ್ರೆಯ ದಕ್ಷಿಣದ ಕಡೆ ಗೋಚರಿಸಲು ಪ್ರಾರಂಭಿಸಿದೆ. ಈ ಚಲನೆ ನಿಧಾನಗತಿಯಲ್ಲಿದೆ. ಹಾಡುಗಳಲ್ಲಿ ಅದು ಕಾಣತೊಡಗಿದೆ. ಮುಂದಿನ ದಶಕಗಳಲ್ಲಿ ಈ ಚಲನೆ ವ್ಯಾಪಕಗೊಂಡು ಈ ಪ್ರತ್ಯಯ ಕನ್ನಡದ ಸಪ್ತಮಿ ವಿಭಕ್ತಿ ಪ್ರತ್ಯಯವಾಗಿ ನೆಲೆಗೊಳ್ಳುವುದೇ ಎಂಬುದನ್ನು ಕಾಯ್ದು ನೋಡಬೇಕು ಎಂದು **ಡಾ. ಕೆ.ವಿ.ನಾರಾಯಣರವರು ಕನ್ನಡ ಜಗತ್ತು ಅರ್ಧ ಶತಮಾನದಲ್ಲಿ ಅಭಿಪ್ರಾಯ ಪಡುತ್ತಾರೆ.**

ಈ ಮೇಲಿನ ವಿವರಣೆಯನ್ನು ಗಮನಿಸಿದರೆ ಪ್ರತ್ಯಯಗಳ ಬಳಕೆ ಕಾಲದಿಂದ ಕಾಲಕ್ಕೆ ಬೇರೆ ಭಾಷೆಗಳಿಂದ ಬಂದ ಪದಗಳಿಗೆ ಸೇರುವ ಪ್ರಕ್ರಿಯೆಯನ್ನು ಹೇಳಲಾಗಿದೆ. ಈ ವಿಧಾನವನ್ನು ಪಠ್ಯಪುಸ್ತಕದಲ್ಲಿ ಹೇಳಿ ಕೊಡುವ ಅಗತ್ಯತೆ ಇದೆ ಎಂಬುದನ್ನು ಮನಗಾಣಬೇಕಿದೆ. ಈ ರೀತಿಯ ಬೋಧನೆಯನ್ನು ಅಳವಡಿಸಿಕೊಳ್ಳುವುದರಿಂದ ಮಾತನಾಡುವ ಭಾಷೆ ಮತ್ತು ಬರವಣಿಗೆ ಭಾಷೆಯಲ್ಲಿನ ಭಿನ್ನತೆಯನ್ನು ದೂರ ಮಾಡಬಹುದು.

ಮಕ್ಕಳು ಸುಲಭ ರೀತಿಯಾಗಿ ಗ್ರಹಿಸಿ ಅರ್ಥ ಮಾಡಿಕೊಳ್ಳುವಲ್ಲಿ ಈ ವಿಧಾನ ಸಹಾಯಕವಾದಂತೆ ತೋರುತ್ತದೆ. ಅಲ್ಲದೆ ಆಧುನಿಕ ಭಾಷಾ ವಿಜ್ಞಾನದಲ್ಲಿ ಬದಲಾದ ಪದ ರಚನೆಯ ವ್ಯವಸ್ಥೆಯನ್ನು ಕಲಿಸಿದಂತಾಗುತ್ತದೆ. ಆದ್ದರಿಂದ ಈ ಹೊಸ ಹೊಸ ಪದ ರಚನೆಯ ವ್ಯವಸ್ತೆಯನ್ನು ಮಕ್ಕಳ ಮಾನಸಿಕ ಸಾಮರ್ಥ್ಯಕ್ಕೆ ಅನುಗುಣವಾಗಿ ಕನ್ನಡ ಭಾಷಾ ಪಠ್ಯದಲ್ಲಿ ಅಳವಡಿಸುವ ಅಗತ್ಯತೆ ಇದೆ ಎಂಬುದು ಈ ಎಲ್ಲಾ ಪಠ್ಯ ಪುಸ್ತಕಗಳ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

**ಡಾ. ಕೆ.ವಿ. ನಾರಾಯಣರವರು ಕನ್ನಡದ ಸಂಧಿಗಳ ಬಗ್ಗೆ ಈ ರೀತಿಯಾಗಿ ಅಭಿಪ್ರಾಯ ಪಡುತ್ತಾರೆ.** ಕನ್ನಡ ಸಂಧಿಗಳನ್ನು ಲೋಪ. ಆಗಮ ಮತ್ತು ಆದೇಶ ಎಂದು ವಿಭಜಿಸುತ್ತೇವೆ. ಕನ್ನಡ ಪದಕ್ಕೆ ಕನ್ನಡ ಪದವೇ ಪರವಾದಾಗ ಈ ಸಂಧಿಗಳು ನಡೆಯುತ್ತವೆ. ಉತ್ತರ ಪದ ಸ್ವರದಿಂದ ಮೊದಲಾದರೆ ಲೋಪ ಇಲ್ಲವೇ ಆಗಮ ಸಂಧಿಗಳು. ವ್ಯಂಜನ ಇದ್ದರೆ ಸಾಮಾನ್ಯವಾಗಿ ಆದೇಶ ಸಂಧಿಯು ನಡೆಯುವುದು. ಇದು ಅಷ್ಟು ಖಚಿತವಾದ ನಿಯಮವಾಗಿ ಉಳಿದಿಲ್ಲ. (ಪೂರ್ವ ಪದದ ಕೊನೆಯ ಧ್ವನಿಯು ಯಾವುದು ಎನ್ನುವುದು ಕೂಡ ಮುಖ್ಯ) ಏಕೆಂದರೆ ಇತ್ತೀಚಿನ ದಶಕಗಳಲ್ಲಿ ಕನ್ನಡ ಮತ್ತು ಸಂಸ್ಕೃತ ಪದಗಳನ್ನು ಸೇರಿಸಿ ಸಂಧಿ ಮಾಡುವ ಪ್ರವೃತ್ತಿ ಹೆಚ್ಚಾಗುತ್ತಿದೆ. ಹೀಗಿದ್ದಾಗ ಯಾವ ಭಾಷೆಯ ಸಂಧಿ ನಿಯಮವನ್ನು

ಅನುಸರಿಸಬೇಕು ಎಂಬ ಪ್ರಶ್ನೆ ಎದುರಾಗುತ್ತದೆ. ಉದಾಹರಣೆಗೆ : ಊಟೋಪಚಾರ ಎಂಬ ರಚನೆಯನ್ನೇ ನೋಡೋಣ. ಇಲ್ಲಿ ಊಟ ಪೂರ್ವಪದ. ಉತ್ತರ ಪದ ಉಪಚಾರ ಸಂಸ್ಕೃತ ಪದ. ಊಟೋಪಚಾರ ಪದದಲ್ಲಿ ಸಂಸ್ಕೃತ ಗುಣ ಸಂಧಿಯ ನಿಯಮವನ್ನು ಪಾಲಿಸಲಾಗಿದೆ. 'ಅ' ಕಾರಕ್ಕೆ 'ಉ' ಕಾರ ಪರವಾದಾಗ 'ಓ' ಕಾರ ಬರುವುದು ಈ ಸಂಧಿಯ ಒಂದು ಸಾಧ್ಯತೆ. ಅದೇ ಇಲ್ಲೂ ನಡೆದಿದೆ ಎಂಬುದನ್ನು ಹೇಳುತ್ತಾರೆ.

ಇಂತಹ ಪ್ರಸಂಗಗಳಲ್ಲಿ ಸಮಾನ್ಯವಾಗಿ ಸಂಸ್ಕೃತ ಸಂಧಿಯ ನಿಯಮಗಳನ್ನೇ ಪಾಲಿಸಲಾಗುತ್ತದೆ ಎಂದು ತಿಳಿಯಬೇಕೋ ಅಥವಾ ಬೇರೆ ಯಾವುದೋ ಒಂದು ಪದ ರಚನೆಯ ಮಾದರಿಯನ್ನು ಅನುಕರಿಸಿ ಈ ಹೊಸ ರೂಪಗಳನ್ನು ಸೃಷ್ಟಿಸುತ್ತಾರೋ ಎಂದು ತಿಳಿಯಬೇಕೋ ಈ ಪ್ರಶ್ನೆ ಎದುರಾಗುತ್ತದೆ. ಇಂತಹ ಪದ ರಚನೆಗಳು ಸಾಮಾನ್ಯವಾಗಿ ಮಾಧ್ಯಮಗಳಲ್ಲಿ ಬಳಕೆ ಆಗುವುದನ್ನು ಗಮನಿಸುತ್ತೇವೆ. ಅಲ್ಲಿ ಸಂದರ್ಭದ ತುರ್ತಿನಿಂದ ಹೊಸ ಪದಗಳು ರಚನೆಯಾಗಿ ಬಳಕೆಯಾಗುತ್ತವೆ. ಸಂಧಿ ನಿಯಮಗಳನ್ವಯವು ಅಲ್ಲಿನ ಮುಖ್ಯ ಕಾಳಜಿಯಾಗಿ ತೋರುವುದಿಲ್ಲ. ಹಾಗಾಗಿ ಅಂತಹುದೇ ರೂಪಗಳನ್ನು ಮಾದರಿಯಾಗಿ ಇರಿಸಿಕೊಂಡು ಅದರ ಹೋಲಿಕೆಯ ಮೇಲೆ ಹೊಸ ಪದಗಳನ್ನು ಪಡೆಯಲಾಗುತ್ತದೆ. ಇದು ಹೆಚ್ಚು ಸಾಧುವಾದ ವಿವರಣೆ ಎಂದು ತಿಳಿಯಬೇಕು. ಇಲ್ಲದಿದ್ದರೆ ಕನ್ನಡೋತ್ಸವ, ಹಸುರೋತ್ಸವ ಎಂಬ ರೂಪಗಳನ್ನು ಬಳಸುವುದು ಸಾಧ್ಯವಾಗುವುದಿಲ್ಲ. ಆದ್ದರಿಂದ ಈ ಬದಲಾವಣೆಯಾಗುತ್ತಿರುವ ಅಂಶಗಳನ್ನು ಕನ್ನಡಭಾಷಾ ಪಠ್ಯಗಳಲ್ಲಿ ಅಳವಡಿಸುವುದು ಮುಖ್ಯ. ಸಂಧಿ ನಿಯಮದ ವ್ಯಾಖ್ಯಾನ ಸಡಿಲಿಕೆಗೆ ಪಠ್ಯ ರಚನಾ ಸಮಿತಿ ಪರಾಮರ್ಶಿಸಿ ಹೊಸ ಪದಗಳ ಬಳಕೆಯ ರೀತಿಯಲ್ಲಿ ಪಠ್ಯಗಳು ರಚನೆಯಾದರೆ ಪರಿಸದಲ್ಲಿ ಕೇಳಿಸಿಕೊಂಡ ಈ ಪದಗಳನ್ನು ಮಗು ಬೋಧನಾ ವಿಧಾನದಲ್ಲಿ ಕೇಳುವುದರಿಂದ ಸ್ಮೃತಿಯ ರೂಪದಲ್ಲಿ ಉಳಿಯಲು ಸಹಾಯಕ ವಾದುದಾಗಿದೆ.

ಇದೇ ಬಗೆಯಲ್ಲಿ ಇನ್ನೂ ಬೇರೆ ಬೇರೆ ಹೊಸ ಪದಗಳನ್ನು ರೂಪಿಸುವುದನ್ನು ನೋಡುತ್ತೇವೆ. ಅದರಲ್ಲೂ ನಿಷೇಧ ರೂಪಗಳನ್ನು ಅಥವಾ ವಿರುದ್ಧ ಪದಗಳನ್ನು ಪಡೆಯಲು ಸಂಸ್ಕೃತದ ಉಪಸರ್ಗ ಅಥವಾ ಪೂರ್ವ ಪ್ರತ್ಯಯವನ್ನು ಬಳಸಲಾಗುತ್ತದೆ. ಸಂಸ್ಕೃತದ ಲ್ಲಿರುವಂತೆ ಎರಡು ಪ್ರತ್ಯಯಗಳು ಕನ್ನಡದಲ್ಲಿ ಬಳಕೆಯಲ್ಲಿವೆ. ಒಂದು/'ಅ'/ 'ಅನ್' ಇನ್ನೊಂದು 'ನಿಃ' /ನಿರ್/ ನಿಶ್/ ನಿಷ್' ಇವೆರಡು ಬೇರೆ ಬೇರೆ ಕೆಲಸಗಳನ್ನು ಮಾಡುವ ಪ್ರತ್ಯಯಗಳು. ಗುಣವನ್ನು ಅಲ್ಲಗಳೆಯುವುದು 'ಅ' ಪ್ರತ್ಯಯದ ಕೆಲಸ. ಆದರೆ ಗುಣ ಇಲ್ಲ ಎನ್ನುವುದನ್ನು ಹೇಳುವುದು 'ನಿರ್' ಪ್ರತ್ಯಯದ ಕೆಲಸ. ಉದಾಹರಣೆಗೆ ಅಚಲ ಮತ್ತು ನಿಶ್ಚಲ ಎಂಬ ಎರಡು ರೂಪಗಳನ್ನು ನೋಡೋಣ. ಚಲಿಸಬಹುದಾದದ್ದು 'ಚಲ' ಚಲಿಸಲಾಗದ್ದು ಅಂದರೆ ಎಂದೆಂದೂ ಅಲುಗಾಡದೆ ಇರುವಂತದ್ದು 'ಅಚಲ'. ಆದರೆ ಚಲಿಸುವ ಸಾಧ್ಯತೆ ಇದ್ದು ಈಗ ಚಲನೆ ಇಲ್ಲದೆ ಸುಮ್ಮನಿರುವುದು ನಿಶ್ಚಲ. ಆದರೆ

ಕನ್ನಡದಲ್ಲಿ ಈ ಎರಡೂ ಪ್ರತ್ಯಯಗಳನ್ನು ಬೇರೆ ಬೇರೆಯಾಗಿ ಇರಿಸಿಕೊಳ್ಳುವ ಬದಲಿಗೆ ಇವೆರಡು ಪ್ರತ್ಯಯಗಳ ಕೆಲಸವನ್ನು ಒಂದೇ ಪ್ರತ್ಯಯದಿಂದ ನಿರ್ವಹಿಸುತ್ತಿರುವುದು ಕಂಡು ಬರುತ್ತದೆ. ಅಂದರೆ 'ಅ' ಮತ್ತು 'ನಿರ್'ಗಳನ್ನು 'ಅ' ಪ್ರತ್ಯಯದ ವ್ಯಾಪ್ತಿಯಲ್ಲೇ ಇರಿಸಲಾಗಿದೆ. ಸಂಸ್ಕೃತದಿಂದ ಎರವಲು ಪಡೆಯದೇ ಕನ್ನಡದಲ್ಲೇ ಹೊಸದಾಗಿ ನಿಷೇಧ ರೂಪಗಳನ್ನು ತಯಾರು ಮಾಡಿಕೊಳ್ಳಬೇಕಾಗಿ ಬಂದಾಗ 'ಅ' ಪ್ರತ್ಯಯವನ್ನು ಮಾತ್ರ ಬಳಸುತ್ತಾರೆ. ಹೀಗೆ ಈ ಪ್ರತ್ಯಯ ಸೇರಬೇಕಾದ ರೂಪ ಸಂಸ್ಕೃತದ್ದೇ ಆಗಿರಬೇಕು ಎಂಬ ನಿಯಮವನ್ನು ಇಟ್ಟುಕೊಂಡಿಲ್ಲ. ಕನ್ನಡದ ಪದಗಳಿರಲಿ, ಕೆಲವೊಮ್ಮೆ ಅನ್ಯ ಮೂಲದ ಪದಗಳಿಗೂ ಈ ಪ್ರತ್ಯಯವನ್ನು ಹತ್ತಿಸುವುದುಂಟು. ಉದಾಹರಣೆಗೆ ಹಿಂದಿಯಲ್ಲದ್ದು ಎಂದು ಹೇಳಬೇಕಾದಾಗ 'ಅಹಿಂದಿ' ಎನ್ನುವುದು. ಹಾಗೆಯೇ 'ಅದಲಿತ' ಎಂಬ ಪದವನ್ನು ಬಳಸಲಾಗಿದೆ. ಇಂತಹ ರಚನೆಗಳನ್ನು ಗಮನಿಸಿದಾಗ ಪದರಚನೆಯ ನಿಯಮಗಳನ್ನು ಅರಿತು ಅದಕ್ಕೆ ಅನುಗುಣವಾಗಿ ಹೊಸ ಪದಗಳನ್ನು ರೂಪಿಸುತ್ತಿದ್ದಾರೆ ಎಂದು ತಿಳಿಯುವುದು ಕಷ್ಟ. ಬಹುಮಟ್ಟಿಗೆ ಪ್ರಚಲಿತವಿರುವ ಒಂದು ರೂಪವನ್ನು ಮಾದರಿಯಾಗಿಟ್ಟುಕೊಂಡು ಅದಕ್ಕೆ ಸಮಾನ ರಚನೆಯ ನೆಲೆಯಲ್ಲಿ ಮತ್ತೊಂದು ರೂಪವನ್ನು ಸೃಷ್ಟಿಸುವುದು ಒಂದು ಮುಖ್ಯ ಪ್ರವೃತ್ತಿಯಾಗಿದೆ. ಈ ತರದ ವ್ಯಾಕರಣ ಮತ್ತು ಪ್ರತ್ಯಯಗಳನ್ನು ಬಳಸಿ ಹೀಗೆಯೇ ಹೊಸ ಪದಗಳನ್ನು ರಚಿಸುತ್ತಿರುವುದು ಮಾಧ್ಯಮಗಳಲ್ಲಿ ಢಾಳಾಗಿ ಕಂಡು ಬರುವ ಪ್ರವೃತ್ತಿ.

ಈ ಮೇಲಿನ ಹೊಸ ಪದಗಳ ರಚನೆಯನ್ನು ಗಮನಿಸಿದಾಗ ಇದು ಸಾಮಾಜಿಕ ಸಂವಹನದಲ್ಲಿ ನಡೆಯುವ ಪ್ರಕ್ರಿಯೆಯಾಗಿರುವುದರಿಂದ ಇಂತಹ ಪದಗಳನ್ನು ಮಕ್ಕಳು ಸಾಮಾಜಿಕ ಸಂವಹನದಲ್ಲಿ ಕೇಳಿರುತ್ತಾರೆ. ಹೊಸ ಪದಗಳ ಬಳಕೆಯಾಗುವ ಮತ್ತು ಅವುಗಳನ್ನು ಕಟ್ಟುವ ನೀತಿಯನ್ನು ಬೋಧನೆಯ ಸಂದರ್ಭದಲ್ಲಿ ಕಲಿಸುವ ಪಾಠ/ಪದ್ಯಗಳು ಕನ್ನಡಭಾಷಾ ಪಠ್ಯಗಳಲ್ಲಿ ಅಳವಡಿಸುವ ಯೋಚನೆಯನ್ನು ಮಾಡುವ ಅಗತ್ಯತೆ ಇದೆ. ಇದರಿಂದ ಮಕ್ಕಳಿಗೆ ಭಾಷಾ ವೈವಿಧ್ಯತೆಯಲ್ಲಾಗುವ ಬದಲಾವಣೆಯನ್ನು ಪ್ರಾಥಮಿಕ ಹಂತದಲ್ಲಿಯೇ ಮಕ್ಕಳ ಸಾಮರ್ಥ್ಯಕ್ಕೆ ಅನುಸಾರವಾಗಿ ಪಠ್ಯದಲ್ಲಿ ರಚಿಸುವ ಅಗತ್ಯತೆ ಇದೆ ಎಂಬುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಪದ ರಚನೆಯ ವ್ಯವಸ್ಥೆಯು ಭಾಷೆಯ ರಚನೆಯನ್ನು ವಿವರಿಸುವ ನಿಯಮಗಳಲ್ಲಿ ಮುಖ್ಯವೆನಿಸುತ್ತವೆ. ಪಠ್ಯಗಳಲ್ಲಿ ನೀಡಿರುವ ಬಹುತೇಕ ಪದಗಳು ಲಿಖಿತ ಮತ್ತು ಪ್ರಾಮಾಣೀಕರಣ ಭಾಷೆಯ ಪದಗಳಾಗಿರುತ್ತವೆ. ಈ ಪಠ್ಯಗಳಲ್ಲಿ ಪಾರಿಭಾಷಿಕ ಪದಗಳನ್ನು ಧಾರಾಳವಾಗಿ ಬಳಸಲಾಗಿದೆ. ಭಾಷೆಯ ರಚನೆಯನ್ನು ವಿವರಿಸುವಾಗ ಈ ಪದಗಳು ಮುಖ್ಯ 'ಏಕೆ' ಎಂಬುದನ್ನು ಹೇಳುವಲ್ಲಿ ಈ ಪಠ್ಯಗಳು ವಿಫಲವಾಗಿವೆ. ಉದಾಹರಣೆಗೆ: 'ಮನೆಯನ್ನು' ಮತ್ತು 'ಕಾಲನ್ನು' ಎಂಬ ಎರಡು ರೂಪಗಳನ್ನು ವಿವರಿಸುವಾಗ ಮೊದಲನೆಯದು ಆಗಮ ಸಂಧಿಗೂ ಎರಡನೆಯದು ಲೋಪಸಂಧಿಗೂ ಉದಾಹರಣೆ

ಎಂದು ಹೇಳುತ್ತಾರೆ. ಆದರೆ ಒಂದೆಡೆ 'ಯ' ಕಾರವನ್ನು (ಮನೆ+ಅನ್ನು) ಮತ್ತೊಂದೆಡೆ 'ಉ' ಕಾರ ಲೋಪವು (ಕಾಲು+ಅನ್ನು) ಏಕೆ ನಡೆಯುತ್ತವೆ. ಎಂದು ಈ ಪ್ರಾಥಮಿಕ ಕನ್ನಡಭಾಷಾ ಪಠ್ಯಗಳು ವಿವರಿಸುವುದಿಲ್ಲ. ಈ ವಿಧಾನವನ್ನು ವಿವರಿಸಿದಾಗ ಮಾತ್ರ ಮಗು ಬೋಧನೆಯಲ್ಲಿ ಮತ್ತು ಕಲಿಕೆಯಲ್ಲಿ ಪರಿಪೂರ್ಣವಾಗುತ್ತದೆ. ಇಂತಹ ವಿಷಯಗಳ ಬಗ್ಗೆ ಪಠ್ಯಪುಸ್ತಕ ರಚನಾ ಸಮಿತಿ ಮುತುವರ್ಜಿವಹಿಸಿದಲ್ಲಿ ಮಾತ್ರ ಪದ ರಚನೆಯನ್ನು ಕಲಿಸುವ ವಿಧಾನ ಸುಧಾರಿಸಿದಂತೆ ಕಂಡು ಬರುತ್ತದೆ. ಮಗುವಿಗೆ ಎಷ್ಟೊಂದು ಬೋಧಿಸುವ ವ್ಯವಸ್ಥೆ ಇದೆ ಎನ್ನುವುದಕ್ಕಿಂತ ಮಗು ಬೋಧನೆಯ ವಿಷಯದಲ್ಲಿ ಸ್ಪಷ್ಟತೆ ಇದೆಯೇ ಎಂಬುದರ ಬಗ್ಗೆ ಅಂತರಾವಲೋಕನವನ್ನು ಪಠ್ಯಪುಸ್ತಕ ರಚನಾ ಸಮಿತಿ ಮಾಡಿಕೊಳ್ಳಬೇಕಿದೆ ಎಂಬುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಡಾ. ಕೆ.ವಿ. ನಾರಾಯಣರವರು 'ನಮ್ಮ ಕನ್ನಡ ಸಂಚಿಕೆ ೬೦'ರಲ್ಲಿ ಕನ್ನಡ ಕಲಿಕೆ ಎಂಬ ಲೇಖನದಲ್ಲಿ 'ಕನ್ನಡ ಒಂದು ಪ್ರಮಾಣ ರೂಪವನ್ನು ಕಲಿಸಲು ಶಿಕ್ಷಣ ಕ್ರಮದಲ್ಲಿ ಪ್ರಯತ್ನಿಸಲಾಗುತ್ತದೆ. ಈ ಪ್ರಮಾಣ ಧ್ವನಿರಚನೆ, ಪದರಚನೆ ಮತ್ತು ಪದಕೋಶಗಳು ಆಗಿವೆ. ಕನ್ನಡ ಹಲವು ಉಪ ಭಾಷೆಗಳಿಗಿಂತ ಭಿನ್ನವಾಗಿದೆ ಎಂಬುದಾಗಿ ಅಭಿಪ್ರಾಯ ಪಡುತ್ತಾರೆ'. ಇವರ ಮಾತುಗಳನ್ನು ಗಮನಿಸಿದಾಗ ಇದು ವಾಸ್ತವವಾಗಿ ಸತ್ಯವಾಗಿದೆ. ಏಕೆಂದರೆ ಕಲಿಕೆಯಲ್ಲಿ ಈ ವ್ಯತ್ಯಾಸದ ಪರಿಣಾಮವೇನು ಎಂಬುದು ಒಂದು ಮುಖ್ಯ ಪ್ರಶ್ನೆಯಾಗಿದೆ. ಅಲ್ಲದೆ ಈ ವ್ಯತ್ಯಾಸವು ಕೇವಲ ವಿವರಣೆಯ ಹಂತದಲ್ಲಿ ಮಾತ್ರ ಉಳಿದಿಲ್ಲ. ಪ್ರಭೇದಗಳ ನಡುವೆ ತಾರತಮ್ಯ ಭಾವವನ್ನು, ಸಾಮಾಜಿಕ ನೆಲೆಯಲ್ಲಿ ಪರಿಗ್ರಹಿಸುವ ಪ್ರವೃತ್ತಿಯು ಇದೆ. ಅಂದರೆ ಪ್ರಮಾಣ ಕನ್ನಡದ ಕೌಶಲಗಳನ್ನು ಬಳಸುವುದು ಸಾಮಾಜಿಕವಾಗಿ ಹೆಚ್ಚು ಗೌರವವನ್ನು ತಂದುಕೊಡುವ ಹಾಗೆ ಅದನ್ನುಳಿದ ಇತರ ಪ್ರಭೇದಗಳನ್ನು, ಕೊನೆಯ ಪಕ್ಷ ಅವುಗಳಲ್ಲಿ ಹಲವು ಪ್ರಬೇಧಗಳನ್ನು ಬಳಸುವುದು ಸಾಮಾಜಿಕ ಅವಹೇಳನಕ್ಕೆ ಅಥವಾ ತಿರಸ್ಕಾರಕ್ಕೆ ಕಾರಣವಾಗುತ್ತಿದೆ. ಕೆಲವೊಮ್ಮೆ ಹೀಗೆ ಪ್ರಭೇದಗಳನ್ನು ಬಳಸುವುದು ಸ್ಥಿರೀಕೃತ ಪ್ರತಿ ಕ್ರಿಯೆಗೆ ಕಾರಣವಾಗುತ್ತದೆ. ಈ ಕೆಲವು ಪ್ರಭೇದಗಳನ್ನು ಬಳಸುವ ಮೂಲಕ ವ್ಯಕ್ತಿಯ ಸಾಮಾಜಿಕ ನೆಲೆಗಳನ್ನು, ಗುಣಸ್ವಭಾವಗಳನ್ನು, ಊಹಿಸುವ ಪ್ರವೃತ್ತಿಯೂ ಕನ್ನಡ ಸಮಾಜದಲ್ಲಿದೆ. ಈ ಎಲ್ಲಾ ಕಾರಣಗಳಿಂದ ಶಿಕ್ಷಣ ಕ್ರಮವು ಕನ್ನಡ ಪ್ರಭೇದಗಳನ್ನು ತನ್ನ ವ್ಯಾಪ್ತಿಯಿಂದ ಹೊರಗಿಟ್ಟಿರುವುದು ಎಷ್ಟರಮಟ್ಟಿಗೆ ಸರಿ ಎನ್ನುವುದು ಒಂದು ಮುಖ್ಯ ಪ್ರಶ್ನೆಯಾಗಿದೆ.

ಕನ್ನಡದ ಪ್ರಭೇದಗಳನ್ನು ನಿರಾಕರಿಸುವ ಮೂಲಕ ಸಾಮಾಜಿಕವಾಗಿ ಉಂಟಾಗಿರುವ ಪರಿಣಾಮಗಳು ಕೆಲವಿವೆ. ಇದರ ಜೊತೆಗೆ ಕನ್ನಡದ ಪದಕೋಶಕ್ಕೆ ಅಗತ್ಯವಾಗಿ ಸೇರ್ಪಡೆ ಯಾಗಬೇಕಿದ್ದ ನೂರಾರು ಪದಗಳು ಪ್ರಮಾಣ ಕನ್ನಡದಿಂದ ಮರೆಯಾಗುತ್ತಿವೆ. ಇದೊಂದು ದೊಡ್ಡ ಕೊರತೆ ಎಂದು ಪಠ್ಯಪುಸ್ತಕ ರಚನಾ ಸಮಿತಿ ಗಂಭೀರವಾಗಿ ಪರಾಮರ್ಶಿಸಬೇಕಾಗಿದೆ. ಅಲ್ಲದೇ ಪ್ರಭೇದಗಳ ಸ್ವರೂಪವನ್ನು ಅರಿಯದ ಹೊರತು ಕನ್ನಡದ ರಚನೆಯ ಎಲ್ಲಾ

ಲಕ್ಷಣಗಳು ನಮ್ಮ ಗಮನಕ್ಕೆ ಬರುವುದು ಸಾಧ್ಯವಾಗುದಿಲ್ಲ. ಎಷ್ಟೋ ಪ್ರಭೇದಗಳು ನಮ್ಮಲ್ಲಿ ಆಂಶಿಕವಾಗಿ ಕನ್ನಡಭಾಷಾ ರಚನೆಯ ನಿಯಮಗಳನ್ನು ಬೇರೆ ಬೇರೆ ರೀತಿಯಲ್ಲಿ ಬಳಸುತ್ತಿರುತ್ತವೆ. ಈ ಅಂಶ ಭಾಷಾ ಅಧ್ಯಯನಕಾರರಿಗೆ ಮತ್ತು ಬಳಕೆದಾರರಿಗೆ ಗೊತ್ತಿರಬೇಕಾದುದು ಅಗತ್ಯ. ಆದ್ದರಿಂದ ಇಂತಹ ಅಂಶಗಳನ್ನು ಕನ್ನಡಭಾಷಾ ಪಠ್ಯಗಳಲ್ಲಿ ಸೇರಿಸುವುದರ ಬಗ್ಗೆ ಯೋಚಿಸುವುದು ತುಂಬಾ ಅಗತ್ಯತೆ ಇದೆ ಎಂಬುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಡಾ. ಡಿ. ಪಾಂಡುರಂಗಬಾಬು ಸಂಪಾದನೆ ಮಾಡಿರುವ **'ನಮ್ಮ ಕನ್ನಡ ಸಂಚಿಕೆ ೬೮'** ರಲ್ಲಿನ 'ಭಾಷಾ ಶಿಕ್ಷಣದ ಸಾಮಾಜಿಕ ಆಯಾಮಗಳು' ಎಂಬ ಲೇಖನದಲ್ಲಿ ಸಂಬಂಧವಾಚಕ ಪದಗಳನ್ನು ಶಾಲೆಗಳಲ್ಲಿ ಹೇಳಿಕೊಡುವ ವಿಧಾನದ ಬಗ್ಗೆ ಚರ್ಚೆ ಮಾಡುತ್ತಾರೆ. ಕನ್ನಡದ ಸಂಬಂಧವಾಚಕ ಪದಗಳು ಬಳಕೆಯಲ್ಲಿ ನಿರ್ದಿಷ್ಟ ಸಾಮಾಜಿಕ ಉಪಭಾಷೆಗಳಲ್ಲಿ ಅರ್ಥ ವ್ಯತ್ಯಾಸಗಳನ್ನು ಪಡೆದುಕೊಳ್ಳುತ್ತವೆ. ಕನ್ನಡದಲ್ಲಿ ಬಳಕೆಯಾಗುವ ಅಜ್ಜಿ, ಅಜ್ಜ, ತಾತ, ಇತ್ಯಾದಿ ಪದಗಳಿಗೆ ನಿರ್ದಿಷ್ಟ ಅರ್ಥವಿದೆ. ಎಲ್ಲಾ ಕನ್ನಡಿಗರಿಗೂ ತಿಳಿದಿದ್ದರೂ ಮತ್ತು ಅವು ಪ್ರಾಮಾಣಿತ ಗ್ರಂಥಸ್ಥ ರೂಪಗಳಾಗಿದ್ದರೂ ಕನ್ನಡದ ಎಷ್ಟೋ ಸಾಮಾಜಿಕ ಉಪಭಾಷೆಗಳಲ್ಲಿ ಈ ಪದಗಳಿಗೆ ಕ್ರಿಯಾತ್ಮಕತೆ ಇಲ್ಲ. ಇದರ ಬದಲಾಗಿ ಇದೇ ಪದಗಳ ಅರ್ಥಕ್ಕೆ ಪರ್ಯಾಯ ಪದಗಳನ್ನು ಬಳಸುತ್ತಾರೆ. ಉದಾಹರಣೆಗೆ ಮೈಸೂರು ಭಾಗದ ತಳ ಸಮುದಾಯಗಳಲ್ಲಿ ಅಜ್ಜ–ತಾತ ಎನ್ನುವ ಪದಗಳಿಗೆ ಪರ್ಯಾಯವಾಗಿ 'ಅಯ್ಯ' ಎಂಬ ಪದ ರೂಪವೂ ಅಜ್ಜಿ ಎನ್ನುವ ಪದಕ್ಕೆ 'ಅಮ್ಮ' ಎನ್ನುವ ಪದ ರೂಪಗಳು ವ್ಯಾಪಕವಾಗಿ ಬಳಕೆಯಲ್ಲಿವೆ. (ತಾಯಿಯನ್ನು ಅಕ್ಕ, ತಂದೆಯನ್ನು ಅಣ್ಣ ಎಂದು ಸಂಭೋದಿಸುವ ಕ್ರಮ ಕೆಲವರಲ್ಲಿದ್ದರೂ ಅದು ಆ ಉಪ ಭಾಷೆಯ ಲಕ್ಷಣವಲ್ಲ. ಏಕೆಂದರೆ ಇದೇ ಸಂಬಂಧಗಳನ್ನು ಸಂಭೋದನೆಯನ್ನು ಬಿಟ್ಟು ಉಲ್ಲೇಖಿಸುವಾಗ ತಾಯಿ/ಅಮ್ಮ, ತಂದೆ/ಅಪ್ಪ ಎಂಬ ಎರಡು ರೂಪಗಳನ್ನೇ ಬಳಸುತ್ತಾರೆ.) ಈಗ ವಿದ್ಯಾರ್ಥಿ ಶಾಲೆಯಲ್ಲಿ ಕನ್ನಡ ಭಾಷೆಯನ್ನು ಕಲಿಯುತ್ತಿದ್ದಾನೆ ಎಂದು ಕೊಳ್ಳೋಣ. ಶಾಲಾ ಪಠ್ಯದಲ್ಲಿ ಅಥವಾ ಬೋಧಕರ ಬೋಧನೆಯಲ್ಲಿ ಪ್ರಾಮಾಣಿತ ರೂಪಗಳಾದ ಅಜ್ಜಿ–ಅಜ್ಜ, ತಾತಾ ಎಂಬ ರೂಪಗಳು ಕಲಿಸಲ್ಪಡುತ್ತವೆ. ಈ ವಿಧಾನ ಸರಿ. ಆದರೆ ವಿದ್ಯಾರ್ಥಿ ಈಗಾಗಲೇ ಕಲಿತಿರುವ ಅಯ್ಯ, ಅಮ್ಮ ಎಂಬ ರೂಪಗಳನ್ನು ಹೇಗೆ ನಿರ್ವಹಿಸಬೇಕು. ಹಾಗೆಯೇ ಅಮ್ಮ ಎಂಬ ರೂಪಗಳನ್ನು ಹೇಗೆ ನಿರ್ವಹಿಸಬೇಕು ಅದೇ ತೆರನಾಗಿ ಅಮ್ಮ ಎಂಬ ರೂಪ ಅದೇ ತರಗತಿಯ ಕೆಲವು ವಿದ್ಯಾರ್ಥಿಗಳಲ್ಲಿ ಪ್ರಮಾಣಿತ ರೂಪದಲ್ಲಿ ಇರುವ ತಾಯಿ ಎಂಬ ಅರ್ಥದಲ್ಲಿಯೇ ಇರುತ್ತದೆ. ಸಹಜವಾಗಿಯೇ ಅಂತಹ ಸಾಮಾಜಿಕ ಹಿನ್ನೆಲೆಯ ವಿದ್ಯಾರ್ಥಿಗಳಲ್ಲಿ ಗೊಂದಲಗಳಾಗುವುದಿಲ್ಲ. ಅದೇ ತರಗತಿಯ ಅದೇ ಪಾಠಗಳನ್ನು ಕಲಿಯುತ್ತಿರುವ ಬೇರೊಬ್ಬ ವಿದ್ಯಾರ್ಥಿಗೆ ಆತನ ಸಾಮಾಜಿಕ ಉಪಭಾಷೆಯ ಪರಿಸರದಲ್ಲಿ ತಾಯಿಗೆ 'ಅವ್ವ' ಎಂಬ ರೂಪವನ್ನು ಕಲಿತಿರುತ್ತಾನೆ. ಆಗ ಆ ವಿದ್ಯಾರ್ಥಿಗೆ ಶಿಕ್ಷಕ ಅಥವಾ

ಪಠ್ಯಕ್ರಮ ತನ್ನ ಉಪ ಭಾಷಿಕ ರೂಪ ತಾನು ಈಗಾಗಲೇ ಕಲಿತಿರುವ ರೂಪವು ತಪ್ಪೆಂದು ಹೇಳದಿದ್ದರೂ ಕಲಿಯುತ್ತಿರುವ ಭಾಷಾ ರೂಪಕ್ಕೂ ಕಲಿತಿರುವ ರೂಪದ ನಡುವಿನ ವ್ಯತ್ಯಾಸಗಳ ಬಗೆಗೆ ವಿದ್ಯಾರ್ಥಿಗೆ ಮೌನವೇ ಪರಿಹಾರವಾಗುತ್ತದೆ. ತಾನು ಕಲಿತಿರುವ ರೂಪ ತಪ್ಪಾದುದೆಂದೂ ತಾನು ಶಾಲೆಯಲ್ಲಿ ಕಲಿಯುತ್ತಿರುವ ರೂಪವೇ ಸರಿಯಾದುದೆನ್ನುವ ಪ್ರತಿಷ್ಠಿತವೆನ್ನುವ ಮನೋಭಾವನೆ ಬೆಳೆಯುತ್ತದೆ. ತನ್ನ ಉಪ ಭಾಷಿಕ ರೂಪದ ಬಗೆಗೆ ಅನಗತ್ಯ ಕೀಳಿರಿಮೆ ಬೆಳೆಯುತ್ತದೆ. ಪ್ರಮಾಣಿತ ರೂಪಕ್ಕೆ ಬದಲಾಗಿ ಕನ್ನಡದ ಸಾಮಾಜಿಕ, ಪ್ರಾದೇಶಿಕ ಉಪ ಭಾಷೆಗಳಲ್ಲಿ ಬಳಕೆಯಾಗುವ ಅನೇಕ ಪರ್ಯಾಯ ರೂಪಗಳ ಬಗೆಗಿನ ಕೀಳಿರಿಮೆಯಿಂದಾಗಿ ಶಿಕ್ಷಿತ ವರ್ಗದ ಕನ್ನಡದಲ್ಲಿ ಉಪಭಾಷಿಕ ರೂಪಗಳ ಸ್ಥಾನ ಪಡೆಯಲಾರವು. ಪ್ರಮಾಣಿತ ರೂಪಗಳ ಬಳಕೆಯ ಔಪಚಾರಿಕ ಎಲ್ಲೆಗಳನ್ನು ಹೊರತುಪಡಿಸಿಯೂ ಅನೌಪಚಾರಿಕ, ಕೌಟುಂಬಿಕ, ಆಪ್ತ ಸಾಮಾಜಿಕ ಪರಿಸರಗಳಲ್ಲಿಯೂ ಶಿಷ್ಟ ರೂಪಗಳೇ ಬಳಕೆಯಾಗುವಂತೆ ಮಾಡುತ್ತದೆ. ಆದ್ದರಿಂದ ಪಠ್ಯಗಳಲ್ಲಿ ಉಪಭಾಷಾ ರೂಪಗಳನ್ನೇ ಬಳಸಿದಾಗ ಮಗುವಿಗೆ ಸರಳತೆಯಿಂದ ಕಲಿಯುತ್ತದೆ. ಇದರಿಂದ ಕಲಿಕೆಯಲ್ಲಿ ಸೃಜನಶೀಲತೆಯನ್ನು ಕಾಣಬಹುದು ಎಂಬುದು ಈ ಅಧ್ಯಯನದಿಂದ ತಿಳಿದು ಬರುತ್ತದೆ.

ಕನ್ನಡ ಪಠ್ಯಪುಸ್ತಕಗಳಲ್ಲಿ ರಾಷ್ಟ್ರಗೀತೆಯಲ್ಲಿ 'ಉಚ್ಛಲ' ಎಂದು ಬಳಕೆ ಮಾಡಲಾಗಿದೆ. ರಾಷ್ಟ್ರಗೀತೆಯ ಸಂದರ್ಭದಲ್ಲಿ ಅರ್ಥದ ದೃಷ್ಟಿಯಿಂದ ಅಲ್ಪಪ್ರಾಣ ಬಳಕೆ ಸೂಕ್ತವಾದುದು. ಮಹಾಪ್ರಾಣದ ಬಳಕೆ ಸೂಕ್ತವಾದುದಲ್ಲ. ಇಲ್ಲಿ ಉಚ್ಛಲ ಗುಣವಾಚಕವಾಗಿ ಬಳಕೆಯಲ್ಲಿದೆ. ಇದಕ್ಕೆ 'ಮೇಲಕ್ಕೆ ಚಿಮ್ಮುವ' ಎನ್ನುವ ಅರ್ಥ ಇದೆ. ಈ ತಿದ್ದುಪಡಿ ಕನ್ನಡದ ಎಲ್ಲ ಹಂತದ ಪಠ್ಯಪುಸ್ತಕಗಳಲ್ಲಿ ಆಗಬೇಕಿದೆ. ಈ ವಿಚಾರವನ್ನು ಕುರಿತು ದಿನಾಂಕ ೧೪.೦೭.೨೦೦೩ರಂದು ಕನ್ನಡ ಪ್ರಭದಲ್ಲಿ ಡಾ. ಎಂ ಚಿದಾನಂದಮೂರ್ತಿ ಅವರು **'ಕಲುಷಿತ ಪ್ರೈಮರಿ ಪಠ್ಯಗಳು'** ಎಂಬ ಲೇಖನದಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಈ ತರಹದ ತಪ್ಪುಗಳಿಂದ ಅರ್ಥಕ್ಕೆ ಚ್ಯುತಿ ಬರುತ್ತದೆ. ಮೇಲು ನೋಟಕ್ಕೆ ಒಂದು ಪದ ತಪ್ಪು ಎಂದು ಕಂಡು ಬಂದರೂ ಸೂಕ್ಷ್ಮವಾಗಿ ಇದನ್ನು ಗಮನಕ್ಕೆ ತೆಗೆದುಕೊಂಡರೆ ಮಕ್ಕಳ ಹಿತ ದೃಷ್ಟಿಯಿಂದ ಇದು ಸಮಸ್ಯೆಯನ್ನು ಉಲ್ಬಣಗೊಳಿಸುತ್ತದೆ. ಆದ್ದರಿಂದ ಪಠ್ಯದಲ್ಲಿ ಪದಗಳ ಬಳಕೆ ಮಾಡುವಾಗ ಸರಿಯಾದ ಕ್ರಮದಲ್ಲಿ ರಚನೆ ಮಾಡ ಬೇಕೆಂಬುದನ್ನು ಸಾರುತ್ತದೆ.

ಕನ್ನಡ ಬರಹ ಎಲ್ಲರ ಸೊತ್ತಾಗ ಬೇಕಿದ್ದಲ್ಲಿ ನಾವು ಮಾಡ ಬೇಕಾದುದು ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯಗಳಲ್ಲಿ ಓದಲು-ಬರೆಯಲು ಹಾಗೂ ಮಾತನಾಡುವ ಅಂಶಗಳು ಬೇರೆ ಬೇರೆಯಾಗದೆ ಕಲಿಕೆಯಾಗುವಂತೆ ಕ್ರಮ ಕೈಕೊಳ್ಳಬೇಕಾಗಿದೆ. ಜೊತೆಗೆ ಈ ಕಲಿಕೆಯ ಅಂಶಗಳು ಜೀವನದುದ್ದಕ್ಕೂ ಪ್ರಯೋಜನಗಳನ್ನು ದಿನ ನಿತ್ಯವೂ ಪಡೆಯುವಂತಾಗಬೇಕು. ಈ ಪ್ರಯತ್ನ ನಡೆಯಬೇಕಾದರೆ ಡಿ.ಎನ್. ಶಂಕರ ಭಟ್ಟರು ಹೇಳುವಂತೆ ಕೆಳವರ್ಗದ

(ತಳಸಮುದಾಯ) ಜನರಿಗೆ ಕನ್ನಡ ಬರಹಗಳನ್ನು ಓದಿ ಅರ್ಥ ಮಾಡಿಕೊಳ್ಳುವ ಕೆಲಸ ಹೆಚ್ಚಾಗಬೇಕಿದೆ. ಕನ್ನಡ ಬರಹಗಳಲ್ಲಿ ಸಾಧ್ಯವಿರುವಲ್ಲೆಲ್ಲ ಕನ್ನಡದೇ ಆದ ಪದಗಳನ್ನು ಬಳಸಲು ಪ್ರಯತ್ನಿಸಬೇಕು. ಅವಶ್ಯವಿಲ್ಲದಿದ್ದರೂ ಸಂಸ್ಕೃತ ಪದಗಳನ್ನು ಬಳಸುವ ಪ್ರವೃತ್ತಿಗೆ ಕಡಿವಾಣ ಹಾಕಬೇಕು. ಇವರ ಅಭಿಪ್ರಾಯಕ್ಕೆ ಪುಷ್ಟೀಕರಿಸಿ ಹೇಳುವುದಾದರೆ ಪ್ರಾಥಮಿಕ ಹಂತದಲ್ಲೂ ಈ ಪ್ರಕ್ರಿಯೆಯನ್ನು ತೊಡಗಿಸಿಕೊಳ್ಳಬೇಕು. ಓದು, ಬರಹ ಮತ್ತು ಸಾಮಾಜಿಕ ಸಂವಹನ ಬೇರೆ ಬೇರೆ ರೀತಿ ಎಂದು ಹೊಗಲಾಡಿಸುವ ಕೆಲಸ ಪ್ರಾಥಮಿಕ ಹಂತದ ಕನ್ನಡ ಭಾಷಾಪಠ್ಯಗಳಿಂದಲೇ ಪ್ರಾರಂಭವಾಗಬೇಕು. (ಡಿ.ಎನ್ ಶಂಕರಭಟ್-ಕನ್ನಡ ಬರಹವನ್ನು ಸರಿಪಡಿಸೋಣ! ಪುಟ-೨೬)

ಕನ್ನಡ ಬರಹಗಳಲ್ಲಿ ಬಳಸುವ ಸಂಸ್ಕೃತ ಪದಗಳನ್ನು ಸಂಸ್ಕೃತದ ಬರವಣಿಗೆ ಮತ್ತು ಉಚ್ಚಾರಣೆಯಂತೆ ಕೊಡಲಾಗಿದೆ. ಈ ರೀತಿ ಬರೆಯಬೇಕು ಎಂಬ ನಿಯಮದಿಂದಾಗಿ ಕನ್ನಡ ಬರಹಗಳಲ್ಲಿ ಹೆಚ್ಚಿನ ಅಕ್ಷರಗಳನ್ನು ಬಳಸಬೇಕಾಗಿದೆ ಎಂದು ಡಿ.ಎನ್.ಶಂಕರಭಟ್ಟರು ಅಭಿಪ್ರಾಯ ಪಡುತ್ತಾರೆ. ಈ ಅಕ್ಷರಗಳ ಕಲಿಕೆಗಾಗಿ ಮಕ್ಕಳಿಗೆ ಕನ್ನಡದ ಮೊದಲನೆಯ ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯ ಪುಸ್ತಕದಲ್ಲಿ ಬರೆಯುವ ಮತ್ತು ಉಚ್ಚರಿಸುವ ಕ್ರಮವನ್ನು ಕಲಿಸಬೇಕಾಗಿದೆ. ಏಕೆಂದರೆ ಈ ಮಕ್ಕಳಿಗೆ ಗೊತ್ತಿರುವ ಕನ್ನಡ ಪದಗಳೆಲ್ಲೆಲ್ಲೂ ಈ ಅಕ್ಷರಗಳು ಬರುವುದಿಲ್ಲ.

ಮಕ್ಕಳಿಗೆ ಓದಲು ಮತ್ತು ಬರೆಯಲು ಕಲಿಸುವ ಅಧ್ಯಾಪಕರು ಇಂತಹ ಸಂಸ್ಕೃತ ಪದಗಳನ್ನು ಬರಹದಲ್ಲಿರುವ ಹಾಗೆ ಉಚ್ಚರಿಸುವುದಿಲ್ಲ. ಅದನ್ನು ಕಲಿಯುವ ಮಕ್ಕಳಿಗೆ ಇನ್ನೂಷ್ಟು ಕ್ಲಿಷ್ಟವಾಗುತ್ತದೆ. ಮೊದಲನೆಯ ತರಗತಿಯ ಪಠ್ಯ ಪುಸ್ತಕಗಳಲ್ಲೇ ಮಕ್ಕಳು ಕಲಿಯ ಬೇಕಾಗಿರುವ ಇಂತಹ ಹಲವು ಸಂಸ್ಕೃತ (ತತ್ಸಮ) ಪದಗಳಲ್ಲಿ ಕೆಲವನ್ನು ಕಾಣುತ್ತೇವೆ. ಉದಾಹರಣೆಗೆ : ಔಜಸ-ಕಾಂತಿ, ಐಲ-ಕುಬೇರ. ಶಶಕ-ಮೊಲ, ಋತ-ಸತ್ಯ ಇತ್ಯಾದಿ. ಈ ಸಂಸ್ಕೃತ ಪದಗಳು ಮೊದಲನೆಯ ತರಗತಿಯಲ್ಲಿ ಮಕ್ಕಳಿಗೆ ಕನ್ನಡ ಬರಹವನ್ನು ಕಲಿಸುವುದಕ್ಕಾಗಿ ತಯಾರಾಗಿರುವ ಪಠ್ಯ ಪುಸ್ತಕದಲ್ಲಿ ಬಳಕೆಯಾಗಿವೆ ಎಂಬುದನ್ನು ಇಲ್ಲಿ ಪ್ರತ್ಯೇಕವಾಗಿ ನೆನಪಿಸುವ ಅವಶ್ಯಕತೆ ಈ ಅಧ್ಯಯನದಲ್ಲಿ ನಡೆದಿದೆ. ಇವುಗಳಲ್ಲಿ ಭರ. ಖರ. ಐದಳ ಮತ್ತು ಇಂಗ್ಲೀಶ್‌ನ ಝೀಬ್ರಾ ಕ್ರಾಸ್ ನಂತಹ ಪದಗಳಂತೂ ಅವರ ಜೀವನದಲ್ಲಿ ಮುಂದೆಂದೂ ಬಳಸಲು ಸಾಧ್ಯವಿಲ್ಲ. ಅಲ್ಲದೆ ನಿಜಕ್ಕೂ ಇಲ್ಲಿ ಬಳಕೆಯಾದ ಕೆಲವು ಸಂಸ್ಕೃತ ಮತ್ತು ಇಂಗ್ಲೀಶ್ ಪದಗಳು ಸ್ನಾತಕೋತ್ತರ ಪದವಿಯನ್ನು ಪಡೆದಿರುವ ವ್ಯಕ್ತಿಯೂ ಅದೂವರೆಗೂ ನೋಡದೇ ಇರುವ ಸಂಬಂಧ ಹೆಚ್ಚಾಗಿರುತ್ತದೆ. (ಕನ್ನಡ ಬರಹವನ್ನು ಸರಿಪಡಿಸೋಣ! ಪುಟ-೧೬೧,-೧೬೨)

ಸಂಸ್ಕೃತ ಪದಗಳಾದ ಭರ, ಖಗ, ಐದಳ, ಜಠರ, ಷಟ್, ಇನ, ಆಕಾಶ, ಉರಗ, ಛಗ, ಚರಣ, ಋತ, ಖರ, ಧವಳ, ಅಂತಃಕಲಹ, ಅಜ ಇಂತಹ ಸಾವಿರಾರು ಸಂಸ್ಕೃತ

ಪದಗಳನ್ನು ಒಂದನೇ ತರಗತಿಯಿಂದ ಏಳನೇ ತರಗತಿಯ ಕನ್ನಡಭಾಷಾ ಪಠ್ಯಗಳಲ್ಲಿ ಸರ್ವೇಸಾಮಾನ್ಯವಾಗಿ ಕಾಣುತ್ತೇವೆ. ಈ ಸಂಸ್ಕೃತ ಪದಗಳು ಮೊದಲನೆಯ ತರಗತಿಯ ಮಕ್ಕಳಿಗೆ ಕನ್ನಡ ಬರಹವನ್ನು ಕಲಿಸುವುದಕ್ಕಾಗಿ ಮುದ್ರಿತವಾಗಿರುವ ಪಠ್ಯಪುಸ್ತಕದಲ್ಲಿ ಕಾಣ ಬಹುದಾಗಿದೆ. ಇಲ್ಲಿ ಈ ವಿಚಾರವನ್ನು ಪ್ರತ್ಯೇಕವಾಗಿ ಹೇಳುವ ಅವಶ್ಯಕತೆ ಇದೆ. ಏಕೆಂದರೆ ಕನ್ನಡ ಭಾಷೆಯ ಪ್ರಥಮ ಪಠ್ಯದಲ್ಲಿಯೇ ಇಂತಹ ಸಂಸ್ಕೃತ ಪದಗಳನ್ನು ಮತ್ತು ಸಂಸ್ಕೃತ ಭಾಷೆಯ ವ್ಯಾಕರಣದ ನಿಯಮಗಳನ್ನು ಹೇಳಿ ಕೊಡುವುದಾದರೆ ಕನ್ನಡ ಭಾಷಾ ಪಠ್ಯಪುಸ್ತಕ ಅನ್ನುವುದಾದರೂ ಏಕೆ? ಎಂಬುದನ್ನು ನಾವೇ ಅರಿತು ಕೊಳ್ಳಬೇಕಾಗಿದೆ. ಇದನ್ನು ಅವಶ್ಯವಾಗಿ ಪಠ್ಯಪುಸ್ತಕ ರಚನಾ ಸಮಿತಿ ಪರಿಶೀಲಿಸಿ ಕನ್ನಡ ಪದಗಳ ಬಳಕೆಗೆ ಆದ್ಯತೆ ನೀಡಬೇಕಾಗಿದೆ. ಜೊತೆಗೆ ಈ ಮೇಲೆ ಪರಿಚಯಿಸುವ ಪದಗಳು ಜೀವವದಲ್ಲಿ ಮುಂದೆಂದೂ ಬಳಸುವ ಸಂದರ್ಭವೇ ಬರಲಾರದು. ಇಂತಹ ಪದಗಳು ಕನ್ನಡ ಭಾಷಾ ಪಠ್ಯಗಳಲ್ಲಿರುವಾಗ ಆ ಪದಗಳನ್ನು ಕಲಿಸುವುದರಿಂದ ಆಗುವ ಪ್ರಯೋಜನವಾದರೂ ಏನು ಎಂಬುದನ್ನು ಯೋಚಿಸಬೇಕಿದೆ. ಬಳಕೆಯಲ್ಲಿ ಕೆಲವು ಪದಗಳು ಇವೆ ಎಂದು ಕನ್ನಡದ ಮೊದಲನೆಯ ಪಠ್ಯಪುಸ್ತಕದಲ್ಲೇ ಹಲವು ಸಂಸ್ಕೃತ ಪದಗಳನ್ನು ಹೇಳಿಸುವ ಮತ್ತು ಅವನ್ನು ಬರೆಯುವ ಕ್ರಮವನ್ನು ಕಲಿಸಬೇಕಾಗಿದೆ. ಏಕೆಂದರೆ ಆ ಮಕ್ಕಳಿಗೆ ಗೊತ್ತಿರುವ ಕನ್ನಡದ ಪದಗಳೆಲ್ಲವೂ ಈ ಅಕ್ಷರಗಳು ಬರುವುದಿಲ್ಲ. ಆದ್ದರಿಂದ ಪದ ರಚನೆಗೆ ಸಂಬಂಧಿಸಿದಂತೆ ಬಳಸುವ ಪದಗಳ ಬಗ್ಗೆ ಪಠ್ಯಪುಸ್ತಕ ರಚನಾ ಸಮಿತಿ ಪರಾಮರ್ಶಿಸುವ ಅಗತ್ಯತೆ ಇದೆ ಎಂಬುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

• • •

## ಅಧ್ಯಾಯ : ಆರು

# ವಾಕ್ಯರಚನೆ ಮತ್ತು ಅರ್ಥಸಹಿತ ಪದಕೋಶ

ಅಧ್ಯಾಯ : ಆರು

# ವಾಕ್ಯರಚನೆ ಮತ್ತು ಅರ್ಥಸಹಿತ ಪದಕೋಶ

## ೬.೧. ಪ್ರಸ್ತಾವನೆ

ಪ್ರಸ್ತುತ ಭಾಗದಲ್ಲಿ ಒಂದರಿಂದ ಏಳನೇ ತರಗತಿಯಲ್ಲಿನ ವಾಕ್ಯ ರಚನೆಗಳು ಸರಳವಾಗಿವೆ. ಇವುಗಳನ್ನೇ ಸರಳ ವಾಕ್ಯಗಳೆಂದು ಕರೆಯಬಹುದು. ಅಂದರೆ ಮಕ್ಕಳಿಗೆ ಸರಳ ವಾಕ್ಯ, ಸಂಯುಕ್ತ ವಾಕ್ಯಗಳನ್ನು ಕಲಿಸುವುದಕನ್ನೆ ಅವಕಾಶವನ್ನು ಕಲ್ಪಿಸಲಾಗಿದೆ. ಕಲಿತ ಪದಗಳಿಂದ ವಾಕ್ಯ ರಚನೆ ಮಾಡುವುದಾಗಲಿ, ಒಂದು ವಾಕ್ಯದಲ್ಲಿ ಉತ್ತರಿಸುವುದಾಗಲಿ, ಗಾದೆ ಮಾತನ್ನು ವಿಸ್ತರಿಸುವುದು, ಸ್ವಂತ ವಾಕ್ಯ ರಚಿಸುವುದು, ಸಂಬಂಧಿತ ಪದಗಳನ್ನು ಬಳಸಿ ವಾಕ್ಯ ರಚನೆ ಮಾಡುವುದು, ಬಿಟ್ಟ ಸ್ಥಳ ತುಂಬಿ ವಾಕ್ಯ ಪೂರ್ಣ ಮಾಡುವುದು. ಭಿನ್ನ ಭಿನ್ನ ಅರ್ಥ ಕೊಡುವ ವಾಕ್ಯಗಳನ್ನು ರಚಿಸುವುದು ಇನ್ನು ಮುಂತಾದ ಮಾದರಿಗಳಲ್ಲಿ ಮಕ್ಕಳು ಸುಲಭವಾಗಿ ಕನ್ನಡದ ಸರಳ ಸಂಯುಕ್ತ ಮತ್ತು ಸಂಕೀರ್ಣ ವಾಕ್ಯಗಳನ್ನು ಕಲಿಸಲು ಹಲವಾರು ವಿಧಾನಗಳನ್ನು ಬಳಸಲಾಗಿದೆ. ಅವುಗಳನ್ನು ಕಲಿಸುವುದಕ್ಕೆ ಯಾವ ಯಾವ ವಿಧಾನಗಳನ್ನು ಅನುಸರಿಸಲಾಗಿದೆ ಎಂಬುದನ್ನು ಮುಂದೆ ನಿದರ್ಶನದ ಮೂಲಕ ಸುದೀರ್ಘವಾಗಿ ಚರ್ಚೆ ಮಾಡಲಾಗಿದೆ.

ವಾಕ್ಯ ಎಂದರೇನು? ಎಂಬ ಪ್ರಶ್ನೆಗೆ ಸರಳವಾಗಿ ಉತ್ತರಿಸುವುದು ಕಷ್ಟ. ಆದರೆ ಯಾವುದು ವಾಕ್ಯವಲ್ಲ ಅಥವಾ ಯಾವುದು ವಾಕ್ಯ ರಚನೆ ಅಲ್ಲ ಎಂದು ಹೇಳಬಹುದು. ಒಂದು ಪದ ವಾಕ್ಯ ಆಗಬಹುದು. ಹಾಗೆಯೇ ಪದಗಳ ಸಮೂಹವನ್ನು ವಾಕ್ಯ ಎಂದು ವ್ಯಾಖ್ಯಾನಿಸಬಹುದು.

ಉದಾಹರಣೆಗೆ : ಅವರು ಯಾರು ?

ಶಂಕರ್

ಇಲ್ಲಿಗೆ ಯಾಕೆ ಬಂದಿದ್ದಾರೆ.

ಗೊತ್ತಿಲ್ಲ ?

ಮೇಲಿನ ಎರಡು ವಾಕ್ಯರಚನೆಗಳು ಪ್ರಶ್ನಾರ್ಥಕದಿಂದ ಕೂಡಿವೆ. ಮೊದಲನೆಯ ಪ್ರಶ್ನಾರ್ಥಕ ವಾಕ್ಯಕ್ಕೆ ಶಂಕರ್ ಎರಡನೇ ಪ್ರಶ್ನಾರ್ಥಕ ವಾಕ್ಯಕ್ಕೆ ಉತ್ತರ ಗೊತ್ತಿಲ್ಲ. ಇಲ್ಲಿ ಒಂದೊಂದು ಪದಗಳು ಮಾತ್ರ ಬಳಕೆಯಾಗಿವೆ. ಇವು ಮೇಲ್ನೋಟಕ್ಕೆ ಪದವಾಗಿ ಕಂಡರೂ ವಾಕ್ಯಗಳ ಒಳರಚನೆಯಲ್ಲಿ ಸರಳ ವಾಕ್ಯಗಳ ರಚನೆಯಾದವುಗಳಾಗಿವೆ. ಹೇಗೆಂದರೆ ಅವರು ಶಂಕರ ಹಾಗೂ ನನಗೆ ಯಾಕೆಂದು ಗೊತ್ತಿಲ್ಲ ಎಂಬ ವಾಕ್ಯಮಾದರಿ ಹ್ರಸ್ವಗೊಂಡಿರುವುದನ್ನು ನೋಡಬಹುದು.

ವಾಕ್ಯ ಎಂದರೇನು? ಎಂಬ ಪ್ರಶ್ನೆಗೆ ಸರಳವಾಗಿ ಉತ್ತರಿಸುವುದು ಕಷ್ಟ. ಆದರೂ ಯಾವುದು ವಾಕ್ಯವಲ್ಲ ಅಥವಾ ಎಲ್ಲಿ ವಾಕ್ಯರಚನೆ ಇಲ್ಲ ಎಂಬುದನ್ನು ಹೇಳಬಹುದು. ಇಂತಹ ಅಂಶಗಳನ್ನು ಗಮನಿಸಿದಾಗ ವಾಕ್ಯ ಎಂದರೆ ಪೂರ್ಣ ಅರ್ಥ ನೀಡುವ ಪದಗಳ ಸಮೂಹ ಎಂದು ಹೇಳಬಹದು. ಕೆಲವು ಸಂದರ್ಭದಲ್ಲಿ ವಾಕ್ಯ ಎಂದರೆ ಪದಗಳ ಸಮೂಹವಲ್ಲ.

**ಉದಾಹರಣೆಗೆ** : ೧. ಆ ದೊಡ್ಡ ಮರದ ಮೇಲೆ ಪುಟ್ಟ ಹಕ್ಕಿ ಕುಳಿತಿದೆ.

೨. ಆ ಪುಟ್ಟ ಮರದ ಮೇಲೆ ಒಂದು ದೊಡ್ಡ ಹಕ್ಕಿ ಕುಳಿತಿದೆ.

೩. ಆ ಪುಟ್ಟ ಮೇಲೆ ಒಂದು ಮರದ ಹಕ್ಕಿ ದೊಡ್ಡ ಕುಳಿತಿದೆ.

ಮೇಲಿನ ಮೂರು ಉದಾಹರಣೆಗಳನ್ನು ಗಮನಿಸಿದಾಗ ಒಂದೇ ಮಾದರಿ ಪದಗಳು ಬಳಕೆಯಾಗಿದ್ದರು ಒಂದು ಮತ್ತು ಎರಡು ವಾಕ್ಯ ಮಾದರಿಗಳು ಬೇರೆಯಾಗಿದ್ದು ಅವು ನಿಯಮ ಬದ್ಧವಾಗಿವೆ. ಮೂರನೇ ವಾಕ್ಯ ಮಾದರಿ ಕನ್ನಡದ ಸಂದರ್ಭದಲ್ಲಿ ಯಾವ ಅರ್ಥವನ್ನು ಕೊಡುವುದಿಲ್ಲ. ಅಂದರೆ ಆ ವಾಕ್ಯದಲ್ಲಿ ಬಳಕೆಯಾಗಿರುವ ಪದಗಳು ಕನ್ನಡದ ವಾಕ್ಯರಚನೆಗೆ ಅನುಗುಣವಾಗಿಲ್ಲ. ಹಾಗಾಗಿ ಮೂರನೇ ವಾಕ್ಯ ಪದಗಳ ಸಮೂಹವೇ ಹೊರತು ವಾಕ್ಯವಲ್ಲ. ಮೊದಲು ಎರಡು ವಾಕ್ಯ ಮಾದರಿಗಳಲ್ಲಿ ಬಳಕೆಯಾಗಿರುವ ಪದಗಳು ಒಂದೇ ರೀತಿಯಾಗಿದ್ದರೂ ವಾಕ್ಯಗಳು ಮಾತ್ರ ಬೇರೆ ಬೇರೆಯಾಗಿವೆ. ಒಂದನೇ ವಾಕ್ಯದಲ್ಲಿ ಪದಗಳು ಆ ದೊಡ್ಡ ಮರದ ಮೇಲೆ, ಒಂದು ಪುಟ್ಟಹಕ್ಕಿ ಹಾಗೂ ಕುಳಿತಿದೆ ಎಂಬ ಪದಗುಚ್ಚಗಳಾಗಿ ಮೊದಲು ರೂಪಗೊಂಡು ನಂತರ ಈ ಪದಗುಚ್ಚಗಳಾಗಿ ಸೇರಿ ವಾಕ್ಯ ಮಾದರಿ ಸಿದ್ದವಾಗಿದೆ. ಎರಡನೇ ವಾಕ್ಯ ರಚನೆಯಲ್ಲಿ ಇದೇ ರೀತಿಯಾಗಿದೆ. ಆದರೆ ಮೊದಲನೇ ವಾಕ್ಯದ ಪದಗಳು ಬಳಕೆಯಲ್ಲಿ ಇದ್ದರು ಬಳಕೆಯ ರೀತಿಯಲ್ಲಿ ಬೇರೆ ಬೇರೆಯಾಗಿ ಸೇರಿರುವುದರಿಂದ ಅದು ಇನ್ನೊಂದು ವಾಕ್ಯ ಮಾದರಿಯಾಗಿದೆ.

ಕನ್ನಡದ ಮತ್ತೊಂದು ವಿಧಾನದಲ್ಲೂ ವಾಕ್ಯರಚನೆ ಆಗುವುದನ್ನು ನೋಡಬಹುದು. ಒಂದು ವಾಕ್ಯದಲ್ಲಿ ಬಳಕೆಯಾಗುವ ಪದಗಳ ಸ್ಥಾನವನ್ನು ಅದಲು ಬದಲು ಮಾಡಿದಾಗ

ಅರ್ಥ ಒಂದೇ ರೀತಿ ಇರುವುದಿಲ್ಲ ಎಂಬುದು ತಿಳಿಯುತ್ತದೆ. ಇಲ್ಲಿ ಪದಗಳ ಸ್ಥಾನವನ್ನು ಬದಲಾಯಿಸುವುದೆಂದರೆ ಇಡೀ ಪದಗುಚ್ಚವನ್ನೇ ಬದಲಾಯಿಸಬೇಕು.

**ಉದಾಹರಣೆಗೆ** : ಒಂದು ಪುಟ್ಟಹಕ್ಕಿ ಆ ದೊಡ್ಡ ಮರದ ಮೇಲೆ ಕುಳಿತಿದೆ ಅಥವಾ ಕುಳಿತಿದೆ ಒಂದು ಪುಟ್ಟ ಹಕ್ಕಿ ಆ ದೊಡ್ಡ ಮರದ ಮೇಲೆ ಎಂದು ಪದಗುಚ್ಚಗಳನ್ನೇ ಅದಲು ಬದಲು ಮಾಡಿ ವಾಕ್ಯರಚನೆ ಮಾಡಿದಾಗ ಕನ್ನಡದ ವಾಕ್ಯ ರಚನೆಗೆ ಅನುಗುಣವಾಗಿ ಇರುತ್ತದೆ. ವಿಶೇಷವಾಗಿ ಕನ್ನಡದ ವಾಕ್ಯರಚನೆ ಕ್ರಿಯಾಪದದಿಂದ ಪ್ರಾರಂಭವಾಗುವುದಿಲ್ಲ. ಒಂದು ವೇಳೆ ಪ್ರಾರಂಭವಾದರೂ ಅದು ಕಾವ್ಯ ಭಾಷೆಯಲ್ಲಿ ಮಾತ್ರ

**೬.೨. ಕನ್ನಡಭಾಷಾ ಪಠ್ಯಗಳಲ್ಲಿ ವಾಕ್ಯರಚನೆ ಕಲಿಸುವ ಬಗೆ**

ಪ್ರಸ್ತುತ ಭಾಗದಲ್ಲಿ ಕಿರಿಯ, ಹಿರಿಯ ಪ್ರಾಥಮಿಕ ಕನ್ನಡಭಾಷಾ ಪಠ್ಯಪುಸ್ತಕಗಳನ್ನು ಅವಲೋಕಿಸಿದಾಗ ಕನ್ನಡದ ವಾಕ್ಯರಚನೆಯನ್ನು ಬೇರೆ ಬೇರೆ ವಿಧಾನಗಳ ಮೂಲಕ ಕಲಿಕೆಗೆ ಅವಕಾಶ ಮಾಡಿಕೊಟ್ಟಿರುವುದನ್ನು ಗಮನಿಸಬಹುದು. ಅಂದರೆ ಕನ್ನಡ ವಾಕ್ಯರಚನೆಯ ವಿಧಗಳನ್ನು ಕಿರಿಯ ಪಠ್ಯಗಳಲ್ಲಿ ಅಳವಡಿಸಿದರೆ ಹಿರಿಯ ಪ್ರಾಥಮಿಕ ಕನ್ನಡ ಪಠ್ಯ ಪುಸ್ತಕಗಳಲ್ಲಿ ಪದ ಪಟ್ಟಿಯನ್ನು ನೀಡಿ ವಾಕ್ಯ ರಚನೆಯನ್ನು ಮಾಡುವುದಕ್ಕೆ ಅವಕಾಶ ಮಾಡಿಕೊಡಲಾಗಿದೆ. ಅಂದರೆ ಕನ್ನಡದ ವಾಕ್ಯ ರಚನೆಯನ್ನು ಕಿರಿಯ ಪ್ರಾಥಮಿಕ ಮಕ್ಕಳಿಗೆ ಪುರುಷ, ಲಿಂಗ ಮತ್ತು ವಚನಕ್ಕೆ ಅನುಗುಣವಾಗಿ ವಾಕ್ಯ ರಚನೆಯನ್ನು ಅಳವಡಿಸಲಾಗಿದೆ. ಅದೇ ರೀತಿಯಲ್ಲಿ ಹಿರಿಯ ಪ್ರಾಥಮಿಕ ಕನ್ನಡಭಾಷಾ ಪಠ್ಯ ಪುಸ್ತಕಗಳನ್ನು ಶಾಲಾ ಮಕ್ಕಳಿಗೆ ಅನುಗುಣವಾಗಿ ನಾಮಪದಗಳಿಗೆ ಪ್ರತ್ಯಯ ಲಿಂಗ, ವಚನ ಸಂಬಂಧವಾಚಕ, ಸರ್ವನಾಮ, ತದ್ಧಿಂತಾ ಏಕವಚನ ಮತ್ತು ಬಹುವಚನ ಮುಂತಾದ ವ್ಯಾಕರಣ ಅಂಶಗಳಿಂದ ಆರಂಭ ಮಾಡಿದೆ. ನಂತರ ಮಾದರಿಯಂತೆ ವಾಕ್ಯ ರಚನೆ ಮಾಡುವುದರ ಮೂಲಕ ವಾಕ್ಯ ರಚನೆಯಲ್ಲಿ ಗುಣವಾಚಕ ಪದಗಳನ್ನು ಕೂಡಿಸಿ ರಚಿಸುವುದು. ಮತ್ತು ಸಂಖ್ಯಾವಾಚಕಗಳನ್ನು ರೂಪಿಸುವುದು. ನಿಷೇದಾರ್ಥಕ ವಾಕ್ಯ ರಚಿಸುವುದು. ಸೂಕ್ತ ಪದ ಬಳಸಿ ವಾಕ್ಯ ರಚನೆ ಮಾಡುವುದು. ಪ್ರಾದೇಶಿಕ ವಾಕ್ಯರಚನೆಗೆ ಬದಲಾಗಿ ಬರಹದ ವಾಕ್ಯದ ರಚನೆಗೆ ಬದಲಾಯಿಸುವುದು. ಇತ್ಯಾದಿ ವಿಧಾನಗಳನ್ನು ಹಿರಿಯ ಪ್ರಾಥಮಿಕ ಶಾಲೆಯ ಮಕ್ಕಳ ಕಲಿಕೆಗೆ ಅವಕಾಶ ಮಾಡಿ ಕೊಡಲಾಗಿದೆ. ಮುಂದುವರೆದು ವಾಕ್ಯದಲ್ಲಿ ಬರುವ ಲೇಖನ ಚಿಹ್ನೆಗಳನ್ನು ಗುರುತಿಸಿ ವಾಕ್ಯ ರಚಿಸುವುದನ್ನು, ಹೇಳಿ ಕೊಡುವುದನ್ನು ಕಾಣುತ್ತೇವೆ. ಹಾಗೆಯೇ ಕಾಲಕ್ಕೆ ಅನುಗುಣವಾಗಿ ವಾಕ್ಯಗಳನ್ನು ಬದಲಾಯಿಸುವುದು. ಇತ್ಯಾದಿ ವಿಧಾನಗಳಿಂದ ಪಠ್ಯಪುಸ್ತಕ ರಚನೆ ಪರಿಣಾಮಕಾರಿ ಕಲಿಕೆಗೆ ಪೂರಕವಾಗಿದೆ. ಅಂದರೆ ಕಿರಿಯ ಪ್ರಾಥಮಿಕ ಮಟ್ಟಕ್ಕಿಂತ ಹಿರಿಯ ಪ್ರಾಥಮಿಕ ಮಟ್ಟದಲ್ಲಿ ಕಲಿಯುವ ಕಲಿಕೆಗೆ ಅವಕಾಶ ಮಾಡಿಕೊಟ್ಟಿದೆ. ವಾಕ್ಯರಚನೆಗಳು ಒಂದೇ ರೀತಿಯಾಗಿರದೇ ಸರಳತೆಯಿಂದ ಸಂಕೀರ್ಣತೆಯ ಕಡೆಗೆ ನಡೆದಿರುವುದನ್ನು ಕಾಣಬಹುದಾಗಿದೆ.

ಕಿರಿಯ ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯ ಪುಸ್ತಕಗಳನ್ನು(ಒಂದರಿಂದ ನಾಲ್ಕನೇ ತರಗತಿ)ಗಮನಿಸಿದಾಗ ಪಾಠ ಮತ್ತು ಚಟುವಟಿಕೆಯಲ್ಲಿ ೧೯೮೦ರ ದಶಕದ ಹಿಂದಿನ ಪಠ್ಯಗಳು ಮತ್ತು ೧೯೮೬ರ ಹೊಸ ರಾಷ್ಟ್ರೀಯ ಶಿಕ್ಷಣ ನೀತಿ ಅನ್ವಯ ಪಠ್ಯಪುಸ್ತಕಗಳನ್ನು ವಿವಿಧ ಚಟುವಟಿಕೆಗಳ ರೂಪದಲ್ಲಿ ರಚನೆಯಾಗಿವೆ. ಇದರ ಉದ್ದೇಶ ಮಕ್ಕಳ ಸೃಜನಶೀಲತೆಯ ಬೆಳವಣಿಗೆಗಾಗಿ ಈ ಪ್ರಯತ್ನ ಮಾಡಲಾಗುತ್ತಿದೆ ಎಂದು ಪಠ್ಯ ಪುಸ್ತಕ ರಚನಾ ಸಮಿತಿಯ ಅಧ್ಯಕ್ಷರು ಹೇಳುತ್ತಾರೆ. ಇತ್ತೀಚಿನ ಪಠ್ಯಗಳನ್ನು ಗಮನಿಸಿದರೆ (೨೦೦೬ರಿಂದ ೨೦೦೮) ವಾಕ್ಯ ರಚನೆಗೆ ಸಂಬಂಧಿಸಿದಂತೆ ಸೃಜನಶೀಲ ಚಟುವಟಿಕೆಗಳನ್ನು ಕ್ರಿಯಾತ್ಮಕಗೊಳಿಸಲಾಗಿದೆ. ಪದ್ಯಗಳ ಮೂಲಕ ವಾಕ್ಯ ರಚನೆಯನ್ನು ರಾಗವಾಗಿ ಬೋಧನೆಯನ್ನು ಮಾಡುವುದರ ಮೂಲಕ ಕಲಿಕೆಗೆ ಅವಕಾಶ ಮಾಡಿಕೊಡಲಾಗಿದೆ. ಉದಾಹರಣೆಗೆ ಪದ್ಯಪಾಠ ಒಂದನೇ ತರಗತಿಯ ಪಠ್ಯದಲ್ಲಿನ ಠಣ್! ಠಣ! ಠಣ! ದಲ್ಲಿ .....

ಸುತ್ತ ಹಸುರುವನ

ನಡುವೆ ಮೇವ ದನ!

ಮರದ ಬಳಿ

ಗೊಲ್ಲ ನುಲಿ!

ತಾನ! ತಾನ! ನನ............ ಈ ಪದ್ಯವನ್ನು ನೀಡಿರುವ ಉದ್ದೇಶ ನಲಿಯುತ್ತ ನಲಿಯುತ್ತ ಕಲಿಯುವುದು. ಮತ್ತು ಜ್ಞಾಪಕದಲ್ಲಿಡಲು ಅಂತ್ಯ ಪ್ರಾಸವುಳ್ಳ ಪಾಠ ಕೊಡಲಾಗಿದೆ. ಜೊತೆಗೆ ಪದ್ಯದಲ್ಲಿನ ಸರಳ ವಾಕ್ಯಗಳನ್ನು ಪರಿಚಯಿಸುವ ಉದ್ದೇಶವನ್ನು ಹೊಂದಿದೆ. ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಬಿಟ್ಟಿರುವ ಮುಂದಿನ ಸಾಲನ್ನು ಹೇಳಿಸಿ ಎಂದು ಪ್ರಶ್ನೆ ಮಾಡಲಾಗಿದೆ.

ಉದಾಹರಣೆಗೆ

.......... .......... ಹಣ !

.......... .......... ಮೊಕ

.......... .......... ದನ !............ ಈ ವಿಧಾನದ ಕ್ರಮದಿಂದ ಸರಳ ವಾಕ್ಯಗಳನ್ನು ಬಾಯಿಪಾಠದ ಮೂಲಕ ಕಲಿಸುವುದಾಗಿದೆ.

ಕಲಿತ ಪದಗಳಿಂದ ಸರಳ ವಾಕ್ಯಗಳನ್ನು ರಚನೆ ಮಾಡಿಸಿ ಓದಿಸಿ ಬರೆಯಿಸಿ ಎಂದು ಪ್ರಶ್ನೆಯನ್ನು ಕೊಡಲಾಗಿದೆ. ಅಂದರೆ ಹಿಂದಿನ ಪಾಠಗಳಲ್ಲಿ ಕಲಿತ ಪದಗಳಿಂದ ಸರಳ ವಾಕ್ಯ ರಚನೆ ಮಾಡುವುದನ್ನು ಕಲಿಸುವುದಾಗಿದೆ.

**ಉದಾಹರಣೆಗೆ : ಕಲಿತ ಪದಗಳು**

| | | | | |
|---|---|---|---|---|
| ಮರದ | ಅಂದ | ಸರ | ರಥ | ಬಹಳ |
| ಊರ | ಅವನ | ಅದರ | ವನ | |
| ಫಲ | ಚರಕ | ಅಮರ | ಸಲಗನ | |
| ಭಯ | ಜನರ | ಹಠ | ಕನಕನ | |
| ಬಳಪ | ಬಸವನ | ಥಳ ಥಳ | ಕಳಸ | |
| ತಬಲದ | ತನನ | ಆತನ | ಗರಗಸ | ಸರಸರ |

ಈ ಮಾದರಿ ಪದಗಳನ್ನು ಮಾದರಿಗಾಗಿ ಒಂದು ವಾಕ್ಯವನ್ನು ರಚಿಸಲಾಗಿದೆ.

**ಮಾದರಿ : ರಥದ ಕಳಸ ಥಳ ಥಳ**

ಈ ಮಾದರಿಯನ್ನು ಶಿಕ್ಷಕರು ವಿದ್ಯಾರ್ಥಿಗಳಿಗೆ ಬೋಧನೆಯ ಕ್ರಮದ ಮೂಲಕ ಹೇಳಿಕೊಡುವರು. ಇದನ್ನು ಕಲಿತ ವಿದ್ಯಾರ್ಥಿಗಳು ಉಳಿದ ಪದಗಳ ಸಹಾಯದಿಂದ ಸರಳ ವಾಕ್ಯ ರಚಿಸುವುದನ್ನು ಕಲಿತುಕೊಳ್ಳುವರು.

ಪಾಠ/ಪದ್ಯಗಳಲ್ಲಿನ ವಾಕ್ಯಗಳನ್ನು ಪುನರಾವಲೋಕಿಸಲು ಹಾಗೂ ಪಾಠದ ತಿರುಳನ್ನು ಅರ್ಥಯಿಸಲು ಪಾಠದ ವಾಕ್ಯಗಳನ್ನು ಸರಿಯಾಗಿ ಗ್ರಹಿಸಿದ್ದಾರೆಯೇ ಅಥವಾ ಇಲ್ಲವೇ ಎಂಬುದನ್ನು ಮೌಲ್ಯಮಾಪನ ಚಟುವಟಿಕೆಯ ಮೂಲಕ ಕೊಡಲಾಗಿದೆ. ಕೆಲವೊಂದು ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಮಾದರಿಯನ್ನು ತೋರಿಸಿ ಸರಿ/ತಪ್ಪು ಹೇಳಿ-ಗುರುತಿಸಿ ಬರೆಯಿರಿ ಎಂದು ಪ್ರಶ್ನೆ ಮಾಡಿರುವುದನ್ನು ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯಗಳಲ್ಲಿ ಕಾಣುತ್ತೇವೆ.

**ಉದಾಹರಣೆಗೆ ಮಾದರಿ : ಹಗಲು ರಾತ್ರಿ ದುಡಿಯುವುದೊಂದೇ ನನ್ನ ಕೆಲಸ (ಸರಿ)**

* ಅಕ್ಕರೆಯಿಂದ ಕಿವಿ ಹಿಂಡುವುದಿಲ್ಲ
* ಎರಡು ಕೈಗಳು ದೊಡ್ಡವು
* ದೊಡ್ಡ ಕೈಯಿಂದ ನಿಮಿಷ ತೋರಿಸುವೆ
* ನೇಸರದಿಂದ ಸಮಯ ತಿಳಿಯುತ್ತಿರಲಿಲ್ಲ ಈ ರೀತಿಯಲ್ಲಿ ವಾಕ್ಯಗಳನ್ನು ನೀಡಲಾಗಿದೆ. ಇದರಿಂದ ಮಕ್ಕಳು ಪಾಠ/ಪದ್ಯಗಳಲ್ಲಿ ಬಂದಿರುವ ವಾಕ್ಯ, ಅರ್ಥ ಸರಿಯಾಗಿದ್ದರೆ ಸರಿ ಎಂದು, ತಪ್ಪಾಗಿದ್ದರೆ ತಪ್ಪು ಎಂದು ಗ್ರಹಿಸಿ ಉತ್ತರಗಳನ್ನು ಹೇಳುವರು ಇಲ್ಲವೆ ಬರೆಯುವರು.

ಒಂದು ವಾಕ್ಯದಲ್ಲಿ ಉತ್ತರಿಸಿ ಎಂಬ ಪ್ರಶ್ನೆಗಳನ್ನು ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯ ಪುಸ್ತಕಗಳಲ್ಲೆಲ್ಲಾ ಕೇಳಲಾಗಿದೆ.

**ಉದಾಹರಣೆಗೆ :** * ರಂಗಪ್ಪ ಏನು ಮಾಡುತ್ತಿದ್ದನು ?

* ಒಣ ಮರವನ್ನು ಎಲ್ಲಿ ಕಂಡನು?

* ರಂಗಪ್ಪನಿಗೆ ಏಕೆ ಚಿಂತೆಯಾಯಿತು?

* ರಂಗಪ್ಪನ ಚಿಂತೆ ಪರಿಹರಿಸಲು ಯಾರು ಬಂದರು?

* ರಂಗಪ್ಪ ಚಿನ್ನದ ಕೊಡಲಿಯನ್ನು ಏಕೆ ತೆಗೆದುಕೊಳ್ಳಲಿಲ್ಲ?

* ದೇವತೆ ಏನನ್ನು ಮೆಚ್ಚಿದಳು? ........ ಎಂಬ ಇತ್ಯಾದಿ ಪ್ರಶ್ನೆಗಳನ್ನು ಕೊಟ್ಟಿದ್ದಾರೆ. ಈ ಮಾದರಿಯ ಅಭ್ಯಾಸ ಕಲಿಕೆಗೆ ಅವಕಾಶ ಮಾಡಿಕೊಟ್ಟಿರುವ ಉದ್ದೇಶ ಪ್ರಶ್ನೆಗಳಿಂದ ಸರಳ ವಾಕ್ಯದ ಮೂಲಕ ವಿದ್ಯಾರ್ಥಿಗಳಿಗೆ ಉತ್ತರವನ್ನು ತಿಳಿಸಿ ಬರೆಸುವುದಾಗಿದೆ. ಇದರಿಂದ ವಿದ್ಯಾರ್ಥಿಗಳು ಪಾಠ/ಪದ್ಯದಲ್ಲಿ ಕೊಟ್ಟಿರುವ ವಾಕ್ಯಗಳನ್ನು ಸುಲಭವಾಗಿ ಗ್ರಹಿಸುವರು. ಆದರೆ ಈ ಕ್ರಮ ಭಾಷಾ ದೃಷ್ಟಿಯ ತಿಳುವಳಿಕೆಯ ಕಲಿಕೆ ಎಷ್ಟರಮಟ್ಟಿಗೆ ನಡೆಯುತ್ತದೆ ಎನ್ನುವುದನ್ನು ಅವಲೋಕಿಸಬೇಕಾಗಿದೆ. ಈ ಒಂದು ವಾಕ್ಯದಲ್ಲಿ ಉತ್ತರಿಸಿ ಪ್ರಶ್ನೆಗೆ ಉತ್ತರ ಪಡೆಯುವ ಕ್ರಮ ಸದ್ಯದ ಪರಿಸ್ಥಿತಿಯಲ್ಲಿ ಸರಿಯಿಲ್ಲವೆಂದೆನಿಸುತ್ತದೆ. ಹೇಗೆಂದರೆ ಭಾರತ ದೇಶದ ಪ್ರಧಾನಮಂತ್ರಿ ಯಾರು? ಎಂಬ ಪ್ರಶ್ನೆಗೆ ಉತ್ತರವನ್ನು ಡಾ. ಮನಮೋಹನಸಿಂಗ್ ಎಂದು ನಿರೀಕ್ಷಿಸುತ್ತಾರೆ. ಈ ವಿಧಾನದಿಂದ ಮಕ್ಕಳ ಜ್ಞಾನವನ್ನು ಪರೀಕ್ಷಿಸುತ್ತೇವೆಯೆ ಹೊರತು ಸರಳ ವಾಕ್ಯರಚನೆ ಅಲ್ಲ. ಸರಳವಾಕ್ಯ ರಚನೆಯನ್ನು ಕಲಿಸುವುದಾದರೆ ಭಾರತ ದೇಶದ ಪ್ರಧಾನಮಂತ್ರಿ ಡಾ. ಮನಮೋಹನಸಿಂಗ್ ಎಂದು ಉತ್ತರ ಬರೆದ ವಿದ್ಯಾರ್ಥಿಗಳಗೆ ಅಂಕ ನೀಡಿದಾಗ ಸ್ಪಷ್ಟವಾಗುತ್ತದೆ. ಆದ್ದರಿಂದ ಇದರ ಬಗ್ಗೆ ಚರ್ಚೆ ಆಗಬೇಕಾದ ಅಗತ್ಯತೆ ಇದೆ ಎಂಬುದು ಕಂಡು ಬರುತ್ತದೆ.

ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಇವುಗಳನ್ನು ಗಮನಿಸಿ ಓದಿ ಮೇಲಿನ ವಾಕ್ಯಗಳಂತೆ ನಾಲ್ಕು ವಾಕ್ಯಗಳನ್ನು ರಚಿಸಿ ಎಂದು ಪ್ರಶ್ನಿಸಲಾಗಿದೆ.

**ಉದಾಹರಣೆಗೆ :** * ಅಂಗಳದಲ್ಲಿ ರಂಗವಲ್ಲಿ ಬಿಡಿಸಿದ್ದರು.

* ತೊಟ್ಟಿಲನ್ನು ಸಿಂಗಾರ ಮಾಡಿದ್ದರು.

* ಹೆಣ್ಣು ಮಕ್ಕಳು ದೀಪ ಬೆಳಗಿಸಿದರು.

* ಮಗುವನ್ನು ತೊಟ್ಟಿಲಿಗೆ ಹಾಕಿದರು.......... ಎಂಬ ಇತ್ಯಾದಿ ವಾಕ್ಯಗಳನ್ನು ಗಮನಿಸಿದ ವಿದ್ಯಾರ್ಥಿಗಳು ಅದೇ ರೀತಿಯ ವಾಕ್ಯಗಳನ್ನು ಕಟ್ಟಲು ಪ್ರಯತ್ನಿಸುವರು. ಏಕೆಂದರೆ ಇಲ್ಲಿ ಕೊಟ್ಟಿರುವ ವಾಕ್ಯಗಳೆಲ್ಲವು ನಮ್ಮ ದಿನನಿತ್ಯದ ಹಬ್ಬಗಳ

ಸಂದರ್ಭಗಳಲ್ಲಿ ಬಳಕೆಯಲ್ಲಿರುವ ವಾಕ್ಯಗಳನ್ನು ಕೊಡಲಾಗಿದೆ. ಇದನ್ನು ಅನುಕರಣೆ ಮಾಡಿ ತಮ್ಮ ದಿನನಿತ್ಯದಲ್ಲಿ ಬಳಕೆಯಲ್ಲಿರುವ ವಾಕ್ಯಗಳನ್ನು ಗ್ರಹಿಸಿ ಬರೆಯುವರು. ಅಲ್ಲದೆ ಸ್ತ್ರೀವಾಚಕ, ಪುರುಷವಾಚಕ ಹಾಗೂ ವಸ್ತುಗಳು ಬಂದಾಗ ಯಾವ ರೀತಿಯ ವಾಕ್ಯಗಳನ್ನು ಬಳಸುತ್ತಾರೆ ಎಂಬುದನ್ನು ತಿಳಿಯುವರು. ಮತ್ತೊಂದು ವಿಧಾನದಲ್ಲಿ ತಿನ್ನಲು, ಸುಂದರ, ಕಗ್ಗತ್ತಲು, ಚುರುಕು, ಉತ್ಸಾಹ ಎಂಬ ಪದಗಳನ್ನು ಕೊಟ್ಟು ಈ ಪದಗಳನ್ನು ಉಪಯೋಗಿಸಿ ಕೊಂಡು ವಾಕ್ಯ ಮಾಡಿರಿ ಎಂದು ಪ್ರಶ್ನಿಸಿದೆ. ಈ ಚಟುವಟಿಕೆಗಳಿಂದ ಮಕ್ಕಳು ಪಾಠಗಳಲ್ಲಿ ಬಂದ ಪದಗಳು ಆಗಿರುವುದರಿಂದ ಆ ಪಾಠದಲ್ಲಿ ಬಂದ ಪದದ ಸಾಲನ್ನು ಹುಡುಕಿ ಆ ವಾಕ್ಯವನ್ನು ಬರೆಯುವರು. ಇದರಿಂದ ಮಕ್ಕಳು ಪಾಠದಲ್ಲಿ ಬರುವ ವಾಕ್ಯಗಳನ್ನು ನೆನಪಿಡಲು ಸಹಾಯಕವಾಗಬಲ್ಲದು.

ಉದಾಹರಣೆಗೆ :

* ಮೈದಾನದ ಮರವೊಂದರಲ್ಲಿ ಹೆಜ್ಜೇನು ಗೂಡು ಕಟ್ಟಿದ್ದವು.
* ಜೇನು ನೊಣಗಳು ಮಕ್ಕಳನ್ನು ಮುತ್ತಿದವು
* ರಜನಿ ಮತ್ತು ಸುಲ್ತಾನರು ಅಕ್ಕ ಪಕ್ಕದ ಮನೆಗಳಿಂದ ರಗ್ಗು ತಂದರು.
* ಶಾಲೆಯ ಮೈದಾನದಲ್ಲಿ ಆಟೋಟದ ಪಂದ್ಯಾವಳಿ ನಡೆಯುತ್ತಿತ್ತು.
* ಇದ್ದಕ್ಕಿದ್ದ ಹಾಗೆ ಹೆಜ್ಜೇನಿನ ಗೂಡಿಗೆ ಗಿಡಗ ಬಡಿದು ಹಾರಿ ಹೋಯಿತು
* ಮಕ್ಕಳನ್ನು ಒಟ್ಟುಗೂಡಿಸಿ ಹೊದಿಸಿದರು.
* ಜೇನು ನೊಣಗಳ ಕಡಿತಕ್ಕೆ ಮಕ್ಕಳು ಚೀರಾಡ ತೊಡಗಿದರು.
* ಎಲ್ಲರೂ ಅವರ ಪರೋಪಕಾರ, ಧೈರ್ಯ, ಸಮಯ ಪ್ರಜ್ಞೆಯನ್ನು ಕೊಂಡಾಡಿದರು.
* ಜೇನು ನೊಣಗಳಿಂದ ತಪ್ಪಿಸಿಕೊಳ್ಳಲು ಮಕ್ಕಳು ಚೆಲ್ಲಾಪಿಲ್ಲಿಯಾಗಿ ಓಡಿದರು.......

ಈ ರೀತಿಯಾಗಿ ವಾಕ್ಯಗಳನ್ನು ಕೊಟ್ಟು ಈ ವಾಕ್ಯಗಳನ್ನು ಅನುಕ್ರಮವಾಗಿ ಬರೆಯಿರಿ ಎಂದು ಕೇಳಲಾಗಿದೆ. ಈ ವಾಕ್ಯಗಳೆಲ್ಲವು ಪಾಠಗಳಲ್ಲಿ ಬರುವ ವಾಕ್ಯಗಳಾಗಿವೆ. ಈ ವಾಕ್ಯಗಳನ್ನು ಮಿಶ್ರ ಮಾಡಿ ಕೊಡಲಾಗಿದೆ. ಮಕ್ಕಳು ಪಾಠವನ್ನು ಗಮನಿಸುತ್ತಾ ವಾಕ್ಯಗಳನ್ನು ಕಾಲಾನುಕ್ರಮದಲ್ಲಿ ಬರೆಯುವರು. ಇದರಿಂದ ಮಕ್ಕಳನ್ನು ಸೃಜನಶೀಲತೆಯ ಚಟುವಟಿಕೆಗಳ ಮೂಲಕ ವಾಕ್ಯಗಳನ್ನು ಕಾಲಾನುಕ್ರಮದಲ್ಲಿ ಬರೆಯಲು ಪ್ರಯತ್ನಿಸುವರು.

ಅಭ್ಯಾಸ ಚಟುವಟಿಕೆಯಲ್ಲಿ ಕೊಟ್ಟಿರುವ ಪದ ಬಳಸಿ ಅರ್ಥ ವ್ಯತ್ಯಾಸದೊಂದಿಗೆ ಸ್ವಂತ ವಾಕ್ಯ ಬರೆಯಿರಿ ಎಂದು ಕೇಳಲಾಗಿದೆ. ಉದಾಹರಣೆಗೆ : ಬಾನು – ಭಾನು ಚುಕ್ಕಿ – ಚಂದ್ರ ತೆರೆ (ಬಿಚ್ಚು)–ತೆರೆ (ಸಮುದ್ರದ ಅಲೆ) ಮಾಟ –ನೋಟ ........ಇತ್ಯಾದಿಗಳನ್ನು ಕೊಡಲಾಗಿದೆ. ಇದರಿಂದ ಮಕ್ಕಳು ಪದದ ಅರ್ಥಕ್ಕನುಸಾರವಾಗಿ

ವಾಕ್ಯವನ್ನು ರಚಿಸುವರು. ಜೊತೆಗೆ ಸಂದರ್ಭಕ್ಕನುಸಾರವಾಗಿ ಪದವನ್ನು ಬಳಸಿ ವಾಕ್ಯ ರಚನೆ ಮಾಡುವರು. ಈ ವಿಧಾನದಿಂದ ಕನ್ನಡದಲ್ಲಿರುವ ಪದ ಬಳಕೆಯಿಂದ ಅರ್ಥದಲ್ಲಾಗುವ ವ್ಯತ್ಯಾಸವನ್ನು ತಿಳಿದು ವಾಕ್ಯವನ್ನು ರಚಿಸುವಲ್ಲಿ ಸಮರ್ಥರಾಗುವರು.

ಚೌಕಟ್ಟಿನಲ್ಲಿರುವ ಪದಗಳನ್ನು ಉಪಯೋಗಿಸಿಕೊಂಡು ವಾಕ್ಯ ಮಾಡಿ ಎಂದು ಕೆಲವೊಂದು ಪ್ರಾಥಮಿಕ ಹಂತದ ಕನ್ನಡ ಪಾಠ ಪಠ್ಯ ಪುಸ್ತಕಗಳ ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಕೇಳಲಾಗಿದೆ.

**ಉದಾಹರಣೆಗೆ :**

**ವಾಕ್ಯರಚನಾ ಚೌಕಟ್ಟು**

| | | | |
|---|---|---|---|
| ಜಗದೀಶ | ಶಾಲೆ | | |
| ಝುರೀನಾ | ಊರು | | |
| ಜಮುನಾ ← | ಮನೆ | → - ಗೆ | ಹೋಗುತ್ತಾನೆ |
| ಝುಕೀರ | ಅಂಗಡಿ | | ಹೋಗುತ್ತಾಳೆ |
| ಜಾನ್ | ಜಾತ್ರೆ | | |

**ಮಾದರಿ : * ಜಗದೀಶ ಶಾಲೆಗೆ ಹೋಗುತ್ತಾನೆ**

*** ಝುರೀನಾ ಶಾಲೆಗೆ ಹೋಗುತ್ತಾಳೆ**

ಮೂಲಪದ ಒಂದಕ್ಕೆ ಲಿಂಗ, ವಚನ ಮತ್ತು ವಿಭಕ್ತಿ ರೂಪಗಳನ್ನು ಹಚ್ಚುತ್ತಾ ಹೋದಂತೆ ಬೇರೆ ಬೇರೆ ಪದ ವರ್ಗಗಳನ್ನು ರಚಿಸಬಹುದು ಎಂಬುದನ್ನು ಕಲಿಸಲು ಈ ವಿಧಾನವನ್ನು ಅನುಸರಿಸಲಾಗಿದೆ. ಇದು ಕಲಿಕೆಗೆ ಪೂರಕವಾದ ವಿಧಾನ ಎಂದರೆ ತಪ್ಪಾಗಲಾರದು.

ಅರ್ಜುನ ಮಹಾತ್ಮಗಾಂಧಿ ಇತ್ಯಾದಿ ಪದಗಳನ್ನು ಕೊಟ್ಟು ಸಂಬಂಧಿಸಿದ ಪದಗಳನ್ನು ಬರೆದು ಅದರ ಸಹಾಯದಿಂದ ವಾಕ್ಯ ಮಾಡಿ ಎಂದು ಪಾಠದ ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಅಲ್ಲಲ್ಲಿ ಕೇಳಲಾಗಿದೆ. **ಉದಾಹರಣೆಗೆ :**

**ಮಾದರಿ – ಬಿಲ್ವಿದ್ಯೆ : ಬಾಣ, ಬಿಲ್ಲು, ಏಕಲವ್ಯ, ಅರ್ಜುನ, ದ್ರೋಣಾಚಾರ್ಯ**

* ಏಕಲವ್ಯ ಬಿಲ್ವಿದ್ಯೆ ಕಲಿತು ಅರ್ಜುನನ್ನು ಸೋಲಿಸಿದ

* ದ್ರೋಣಾಚಾರ್ಯ ಏಕಲವ್ಯನ ಗುರು ......ಈ ಮಾದರಿಗಳನ್ನು ಗಮನಿಸಿದ ಮಕ್ಕಳು ಅರ್ಜುನ ಮಹಾತ್ಮಗಾಂಧಿಯ ತಂದೆ, ತಾಯಿ ಅಥವಾ ಅವರ ಸೇವೆಯ ಬಗ್ಗೆ

ಇರುವ ಪ್ರಶಂಶನೀಯವಾದ ಹಾಗೂ ಪಾಠದಲ್ಲಿ ಬಂದಿರುವ ಸಂಬಂಧಿಸಿದ ಪದಗಳನ್ನು ಬಳಸಿಕೊಂಡು ವಾಕ್ಯವನ್ನು ಕಟ್ಟುವರು. ಇದೊಂದು ಸೃಜನಶೀಲ ಚಟುವಟಿಕೆ ಎಂದು ಹೇಳಬಹುದು. ಜೊತೆಗೆ ಕನ್ನಡದ ಸಂಬಂಧವಾಚಕ ವಾಕ್ಯಗಳನ್ನು ವಿದ್ಯಾರ್ಥಿಗಳು ಕಲಿಯ ಬಹುದಾಗಿದೆ.

ಅರಳುತ್ತದೆ, ನೋಡುತ್ತಾಳೆ, ತಿನ್ನುತ್ತಾನೆ, ಆಡುತ್ತದೆ, ಪದಗಳನ್ನು ಕೊಟ್ಟು ..........

ರಾಮ –

ಗಂಗೆ –

ಮಗು –

ಹೂವು – ........ಎಂಬ ಇತ್ಯಾದಿ ಪದಗಳನ್ನು ನೀಡಿ ಕೊಟ್ಟಿರುವ ಪದಗಳಲ್ಲಿ ಸರಿಯಾದ ಪದ ಆರಿಸಿ ಬಿಟ್ಟ ಸ್ಥಳದಲ್ಲಿ ಬರೆದು ವಾಕ್ಯ ಪೂರ್ಣ ಮಾಡಿ ಎಂದು ಕೇಳಲಾಗಿದೆ. ಇದರ ಉದ್ದೇಶ ದಿನನಿತ್ಯದಲ್ಲಿ ಬಳಕೆಯಾಗುವ ಪದ ಹಾಗೂ ವಾಕ್ಯಗಳನ್ನು ಹೇಳಿಸುವುದಾಗಿದೆ. ಈ ವಾಕ್ಯಗಳನ್ನು ಯಾವ ಸಂದರ್ಭದಲ್ಲಿ ಸಾಮಾಜಿಕ ಸಂವಹನದಲ್ಲಿ ಬಳಸುತ್ತಾರೆ ಎಂಬುದನ್ನು ಮಗುವಿಗೆ ಕಲಿಸಲು ಸಹಾಯಕವಾದುದಾಗಿದೆ. ಇದರಿಂದ ಮಗು ತನ್ನ ಸುತ್ತಮುತ್ತಲಿನ ಪರಿಸರದಲ್ಲಿ ಬಳಸುವ ಪದ, ವಾಕ್ಯಗಳನ್ನು ಕಲಿತು ಸ್ವತಃ ವಾಕ್ಯರಚನೆಯನ್ನು ಮಾಡುವಲ್ಲಿ ಸಮರ್ಥರಾಗುತ್ತಾರೆ. ಇದೇ ರೀತಿ ಸೃಜನಶೀಲ ಚಟುವಟಿಕೆಯ ರೀತಿಯಲ್ಲಿ ವಾಕ್ಯವನ್ನು ರಚಿಸಲು ಕೊಟ್ಟಿರುವ ಪದವನ್ನು ಸರಿಯಾಗಿ ಜೋಡಿಸಿ ವಾಕ್ಯ ಬರೆಯಿರಿ ಎಂದು ಕೇಳಲಾಗಿದೆ.

ಉದಾಹರಣೆಗೆ :

| | | |
|---|---|---|
| ತಲೆಕೂದಲು | ನೀರು | ಕಟ್ಟಿದ್ದರು |
| ಪಾತ್ರೆಗಳಲ್ಲಿ | ಎಳೆದು | ತಂದರು |
| ಸಮುದ್ರದಲ್ಲಿ | ಹಡಗು | ಹೋದನು |
| ದೊಡ್ಡ | ನಡೆದೇ | ಕಟ್ಟಿದನು.......... |

ಇದು ಕೂಡ ಒಂದು ಉತ್ತಮವಾದ ಸೃಜನಶೀಲ ಚಟುವಟಿಕೆಯಾಗಿದೆ. ಮಕ್ಕಳು ಸರಳವಾಗಿ ವಾಕ್ಯ ರಚನೆಯನ್ನು ಮಾಡುವಲ್ಲಿ ಸಮರ್ಥರಾಗುವರು. ಹೇಗೆಂದರೆ ಪಾತ್ರೆಗಳಲ್ಲಿ ನೀರು ತಂದರು ಎಂದು ಸರಳ ವಾಕ್ಯವನ್ನು ಮಕ್ಕಳು ಕಲಿತುಕೊಳ್ಳುವರು.

**ಉದಾಹರಣೆಗೆ :** * ಮಂಗನಿಗೆ ಮದುವೆಯಾಯಿತು

* ಮಂಗನ ಮದುವೆಗೆ ಮೃಗ –ಖಗಗಳು ಬಂದಿದ್ದವು

* <u>ಮಂಗನಲ್ಲಿ</u> ಒಡವೆಗಳು ಇದ್ದವು.

* <u>ಮಂಗನೇ</u> ನೀನು ಶ್ರೀಮಂತನೆಂದು ಮೊಲ ಹೊಗಳಿತು. ಎಂಬ ವಾಕ್ಯಗಳನ್ನು ಕೊಟ್ಟು ಕೊಟ್ಟಿರುವ ವಾಕ್ಯದಲ್ಲಿ ಗೆರೆ ಹಾಕಿದ ಪದವನ್ನು ಗಮನವಿಟ್ಟು ಓದಿ ಎಂದು ಕೇಳಲಾಗಿದೆ. ಇದರ ಉದ್ದೇಶ ಮಗುವಿಗೆ 'ಮಂಗ' ಎಂಬ ನಾಮಪದಕ್ಕೆ ವಾಕ್ಯ ರಚನೆಗಳಲ್ಲಿ ಒಂದೇ ಪದಕ್ಕೆ ವಿಭಕ್ತಿ ಪ್ರತ್ಯಯಗಳು ಸೇರಿದಾಗ ಆಗುವ ವಾಕ್ಯ ರಚನೆಯನ್ನು ತಿಳಿಸಲು ಈ ಚಟುವಟಿಕೆಯನ್ನು ಕೊಟ್ಟಂತೆ ತೋರುತ್ತದೆ. ಇದರಿಂದ ವಿದ್ಯಾರ್ಥಿಗಳು ಯಾವ ನಾಮ ಪದಕ್ಕೆ ಯಾವ ವಿಭಕ್ತಿ ಪ್ರತ್ಯಯ ಸೇರಿ ವಾಕ್ಯರಚನೆಯಾಗಿದೆ. ಎಂಬುದನ್ನು ಗ್ರಹಿಸಿಕೊಳ್ಳುವಲ್ಲಿ ಸಮರ್ಥರಾಗುವರು.

**ಉದಾಹರಣೆಗೆ** * ರಾಮ ರಾವಣನನ್ನು ಕೊಂದನು.

* ನಾನು ದೇಶವನ್ನು ಪ್ರೀತಿಸುತ್ತೇನೆ.

* ಶಂಕರನಿಗೆ ವಿದ್ಯಾರ್ಥಿವೇತನ ದೊರೆಯಿತು....... ಎಂಬ ಇತ್ಯಾದಿ ವಾಕ್ಯಗಳನ್ನು ಕೊಟ್ಟು ಕೊಟ್ಟಿರುವ ವಾಕ್ಯಗಳನ್ನು ಗಮನಿಸಿ ಹಾಗೂ ಅದರ ಅದರ ವಿಭಜನೆಯನ್ನು ನೋಡಿ ತಿಳಿಯಿರಿ ಎಂದು ಕೇಳಿದೆ.

**ವಿಭಜನೆಯ ಕ್ರಮ**

| ಕರ್ತೃ | ಕರ್ಮ | ಕ್ರಿಯಾಪದ |
|---|---|---|
| ರಾಮ | ರಾವಣನನ್ನು | ಕೊಂದನು |
| ನಾನು | ದೇಶವನ್ನು | ಪ್ರೀತಿಸುತ್ತೇನೆ |
| ಶಂಕರನಿಗೆ | ವಿದ್ಯಾರ್ಥಿವೇತನ | ದೊರೆಯಿತು |

ಇದನ್ನು ಗಮನಿಸಿದ ವಿದ್ಯಾರ್ಥಿಗಳು ಸರಳ ವಾಕ್ಯದ ವಿಭಜನೆಯ ವಿಧಾನವನ್ನು ಕಲಿಯುವರು. ಆದರೆ ವಿಭಜನೆಯಲ್ಲಿ ಬಂದಿರುವ ಕರ್ತೃ, ಕರ್ಮ, ಕ್ರಿಯಾಪದದ ಬಗ್ಗೆ ತಿಳಿಸುವ ಕ್ರಮ ಮೊದಲು ಬಂದರೆ ಸೂಕ್ತವಾದುದು ಎಂಬುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಈ ನಿಟ್ಟಿನ ಕ್ರಮದಲ್ಲಿ ಕಿರಿಯ ಪ್ರಾಥಮಿಕ ಹಂತದ ಕನ್ನಡಭಾಷಾ ಪಠ್ಯಪುಸ್ತಕಗಳ ವಾಕ್ಯರಚನೆಯು ಚಟುವಟಿಕೆ ಆಧಾರಿತ ಜೊತೆಗೆ ಪಾಠದ ವಿಷಯಕ್ಕೆ ಸಂಬಂಧಿಸಿದ ವಾಕ್ಯರಚನೆ ಮಾಡುವ ವಿಧಾನದ ಸ್ವರೂಪವನ್ನು ಕಾಣಬಹುದು.

ಕಿರಿಯ ಪಠ್ಯಗಳು ನಂತರ ಹಿರಿಯ ಪ್ರಾಥಮಿಕ ಕನ್ನಡಭಾಷಾ ಪಠ್ಯಗಳಲ್ಲಿ ವಾಕ್ಯರಚನೆಯ ಸ್ವರೂಪವನ್ನು ಗಮನಿಸಿದರೆ ಕಿರಿಯ ಪಠ್ಯಗಳಲ್ಲಿ ಕಂಡುಬರುವ ಚಟುವಟಿಕೆಗಳನ್ನು ಮಕ್ಕಳ

ಮನಸ್ಸಿನ ಮಾನಸಿಕ ಸ್ಥಿತಿಗನುಗುಣವಾಗಿ ಪುನರಾವಲೋಕಿಸುವುದರ ಜೊತೆಗೆ ಹೊಸ ಹೊಸ ರೂಪದ ವಿಧಾನದಲ್ಲಿ ಹೇಳಿ ಕೊಡಲಾಗುತ್ತದೆ. ವಾಕ್ಯ ರಚನೆಯ ಸಂಕೀರ್ಣತೆಯ ವಿಧಾನದಲ್ಲಿ ಸಿದ್ಧಾಂತದ ಮೂಲಕ ವಾಕ್ಯರಚನೆಗೆ ಅವಕಾಶ ಮಾಡಿಕೊಡಲು ಪ್ರಯತ್ನಿಸಿರು ವುದನ್ನು ಕಾಣುತ್ತೇವೆ. ಉದಾಹರಣೆಗೆ : ಪ್ರತ್ಯಯ, ಪ್ರಕೃತಿ, ಧಾತು, ಲಿಂಗಗಳು, ಸಂಬಂಧ ವಾಚಕ ಶಬ್ಧಗಳಲ್ಲಿ ವಾಕ್ಯರಚನಾ ವಿಧಾನ, ಸರ್ವನಾಮಗಳು, ತದ್ದಿತ ಪ್ರತ್ಯಯಗಳು ಏಕವಚನ, ಬಹುವಚನ ಎಂಬ ಇತ್ಯಾದಿ ವ್ಯಾಕರಣ ಅಂಶಗಳನ್ನು ಹೊಂದಿರುವ ವಾಕ್ಯರಚನೆಯ ಸ್ವರೂಪ ಅವುಗಳದೇ ಆದ ಸಿದ್ಧಾಂತದ ನಿಯಮವನ್ನು ತಿಳಿಸುವ ಪ್ರಯತ್ನ ಹಿರಿಯ ಪ್ರಾಥಮಿಕ ಪಠ್ಯಗಳಲ್ಲಿ ಕಾಣುತ್ತೇವೆ.

**ಉದಾಹರಣೆಗೆ :**

* ಕನ್ನಡ ಪದ್ಯದಲ್ಲಿ ನಿನಗೆ ಇಷ್ಟವಾದ ಸಾಲು ಯಾವುದು? ಏಕೆ ?
* ಪಂಜೆ ಅವರ ಅಧ್ಯಕ್ಷೀಯ ಭಾಷಣದಲ್ಲಿ ಕನ್ನಡ ಪ್ರೇಮ ಹೇಗೆ ಪ್ರಕಟವಾಗಿದೆ? ವಿವರಿಸಿ.
* ಪಂಜೆ ಅವರ ತಂದೆ ಸಾಯುವ ಮುನ್ನ ಅವರಿಗೆ ಹೇಳಿದ್ದೇನು?
* ರಾಯಣ್ಣ ತನ್ನ ಸೈನಿಕರನ್ನು ಹೇಗೆ ಹುರಿದುಂಭಿಸಿದ?
* ಸಂಪಗಾಂವಿ ಕೃಷ್ಣರಾಯನಿಗೆ ರಾಯಣ್ಣ ಬುದ್ದಿ ಕಲಿಸಿದ ಬಗೆ ಹೇಗೆ?.........

ಎಂಬ ಇತ್ಯಾದಿ ಪ್ರಶ್ನೆಗಳನ್ನು ಪ್ರಾಥಮಿಕ ಹಂತದ ಕೆಲವೊಂದು ಅಭ್ಯಾಸ ಚಟುವಟಿಕೆಯಲ್ಲಿ ಕೇಳಲಾಗಿದೆ. ಇವುಗಳಿಗೆ ನಾಲ್ಕು ವಾಕ್ಯಗಳಲ್ಲಿ ಉತ್ತರ ಬರೆಯಿರಿ ಎಂದು ಕೇಳಿದೆ. ಇದರ ಉದ್ದೇಶ ಸಂಕ್ಷಿಪ್ತ ಮಾದರಿಯಲ್ಲಿ ಅಚ್ಚುಕಟ್ಟಾಗಿ ಪಾಠ/ಪದ್ಯಗಳಲ್ಲಿ ಗ್ರಹಿಸಿದ ವಾಕ್ಯಗಳನ್ನು ಪ್ರಶ್ನೆಗಳಿಗೆ ಅನುಸಾರ ವ್ಯಾಖ್ಯಾನ ಮಾಡುವುದಾಗಿದೆ. ಇದರಿಂದ ವಾಕ್ಯ ಬರೆಯುವುದನ್ನು ವಿದ್ಯಾರ್ಥಿಗಳು ಕಲಿಯುವರು. ವಾಕ್ಯರಚನೆಗೆ ಸಂಬಂಧಿಸಿದಂತೆ ಇದೊಂದು ಉತ್ತಮವಾದ ಸೃಜನಶೀಲವಾದ ಚಟುವಟಿಕೆಯಾಗಿದೆ.

ಮಾದರಿಯಲ್ಲಿ ಕೊಟ್ಟಿರುವ ಪದಗಳನ್ನು ಬಳಸಿಕೊಂಡು ನಿಮ್ಮ ಊರು/ ನಗರದಲ್ಲಿ ಬಸ್ಸು ಲಾರಿಗೆ ಡಿಕ್ಕಿ ಹೊಡೆದಿದೆ. ಈ ಘಟನೆಯನ್ನು ನೀವು ಕಂಡಂತೆ ಒಂದೊಂದು ವಾಕ್ಯ ಹೇಳಿ ಘಟನೆಯನ್ನು ವಿವರಿಸಿ ಎಂದು ಪಠ್ಯೇತರ ಚಟುವಟಿಕೆಯ ಭಾಗಗಳಲ್ಲಿ ಕೇಳಲಾಗಿದೆ. ಉದಾಹರಣೆಗೆ

**ಮಾದರಿ : ಸುಶೀಲ : ಕೆಂಪು ಬಸ್ಸು ಜೋರಾಗಿ ಬರುತ್ತಿತ್ತು**

ರಹೀಮ್ :

ಸಂದೀಪ್ :

ಸಕೀಲ್ :

ಪೀಟರ್ :

ರೀಟಾ :

ಎಂಬ ಇತ್ಯಾದಿ ವಾಕ್ಯರಚನೆಗೆ ಸಂಬಂಧಿಸಿದಂತೆ ಚಟುವಟಿಕೆಯನ್ನು ಕೊಡಲಾಗಿದೆ. ಇದೊಂದು ಉತ್ತಮವಾದ ಸೃಜನಶೀಲ ಚಟುವಟಿಕೆಯಾಗಿದೆ. ತಮ್ಮ ಸುತ್ತಮುತ್ತಲಿನ ಪ್ರದೇಶದಲ್ಲಿ ನಡೆದ ಘಟನೆಯನ್ನು ಜ್ಞಾಪಿಸಿಕೊಂಡು ವಾಕ್ಯರಚನೆ ಮಾಡುವುದನ್ನು ಕಲಿಸಲು ಇದು ಸಹಾಯಕವಾಗಿದೆ. ಇದರಿಂದ ವಿದ್ಯಾರ್ಥಿಗಳು ಪ್ರಬಂಧ ಮಾದರಿ ಪ್ರಶ್ನೆಗಳಿಗೆ ಸರಳವಾಗಿ ಉತ್ತರ ಬರೆಯುವಲ್ಲಿ ಸಮರ್ಥರಾಗುವರಲ್ಲದೆ ನಡೆದ ಘಟನೆಗಯನ್ನು ವಾಕ್ಯದ ರೂಪದಲ್ಲಿ ಬರೆಯುವುದನ್ನು ಕಲಿಯುವರು.

ಭಾಷಾಭ್ಯಾಸ ಚಟುವಟಿಕೆಗಳಲ್ಲಿ ವಚನದ ವಿವರಣೆಯನ್ನು ಮೊದಲಿಗೆ ವಿವರಿಸಿ ನಂತರ ಕೊಟ್ಟಿರುವ ವಾಕ್ಯಗಳನ್ನು ವಚನ ಬದಲಾಯಿಸಿ ಬರೆಯಿರಿ ಎಂದು ಕೇಳಲಾಗಿದೆ. ಉದಾಹರಣೆಗೆ :

* ಆಟಗಾರ ನಿಯಮ ಬದ್ಧವಾಗಿ ಆಡಿದ
* ವ್ಯಾಪಾರಿ ಬಟ್ಟೆ ಮಾರಿ ಲಾಭ ಪಡೆಯುತ್ತಾನೆ.
* ನನ್ನ ತಮ್ಮ ಬಹಳ ಜಾಣ
* ಆ ಮನೆ ಬಹಳ ದೊಡ್ಡದು............

ವಿದ್ಯಾರ್ಥಿಗಳು ಈ ಚಟುವಟಿಕೆಯಿಂದ ಏಕವಚನ ಮತ್ತು ಬಹುವಚನ ಮಾದರಿಯ ವಾಕ್ಯಗಳನ್ನು ಗುರುತಿಸಿಕೊಂಡು ಏಕವಚನ ವಾಕ್ಯಗಳನ್ನು ಬಹುವಚನವಾಗಿ, ಬಹುವಚನ ವಾಕ್ಯಗಳನ್ನು ಏಕವಚನಕ್ಕೆ ಪರಿವರ್ತಿಸುವ ವಿಧಾನವನ್ನು ಕಲಿಯುವರು. ಅಲ್ಲದೆ ಸಾಮಾಜಿಕ ಸಂವಹನದಲ್ಲಿ ಸಂದರ್ಭನುಸಾರ ಏಕವಚನ, ಬಹುವಚನ, ವಾಕ್ಯ ಬಳಸುವುದನ್ನು ಕಲಿಯುವರು. ಇದೊಂದು ಭಾಷಾ ಚಟುವಟಿಕೆಗೆ ಉತ್ತಮ ಮಾದರಿ. ಆದರೆ ಯಾವ ವಿಧಾನದಲ್ಲಿ ಬದಲಾಯಿಸಬೇಕು ಎಂಬುದನ್ನು ಪ್ರಾಥಮಿಕ ಹಂತದ ಯಾವ ತರಗತಿಯ ಪಠ್ಯದಲ್ಲೂ ಕೊಟ್ಟಿರುವುದಿಲ್ಲ.

ಈ ಮೇಲಿನ ವಿಧಾನದಂತೆ ಲಿಂಗಗಳ ವಿಧಗಳನ್ನು ಸಹ ಕೊಡಲಾಗಿದೆ. ಈ ವಿಧಗಳಿಗೆ ಉದಾಹರಣೆಗಳನ್ನು ನೀಡಿ ಚಟುವಟಿಕೆಯ ಭಾಗದಲ್ಲಿ 'ಅನ್ಯಲಿಂಗ' ಪದ ಬಳಸಿ ವಾಕ್ಯ ಬದಲಾಯಿಸಿ ಎಂದು ಕೇಳಲಾಗಿದೆ.

**ಉದಾಹರಣೆಗೆ** :
* ಗಾಯಕ ಸುಂದರವಾಗಿ ಹಾಡಿದನು.
* ಅಪ್ಪ ಹೊಲಕ್ಕೆ ಹೋದನು.

* ಬಾಲಕಿ ಚೆನ್ನಾಗಿ ನಟಿಸಿದಳು

* ಮುದುಕ ಮೆಲ್ಲ ಮೆಲ್ಲನೆ ನಡೆಯುತ್ತಾನೆ.

* ರಾಣಿಗೆ ಒಬ್ಬ ಸೇವಕಿ ಇದ್ದಳು.......

ಇದರ ಉದ್ದೇಶ ವಿದ್ಯಾರ್ಥಿಗಳಿಗೆ ಲಿಂಗಸಂಬಂಧಿ ಪದಗಳ ಮೂಲಕ ವಾಕ್ಯ ರಚಿಸುವುದು ನಂತರ ಲಿಂಗ ಬದಲಾವಣೆ ಸಂದರ್ಭದಲ್ಲಿ ಆ ವಾಕ್ಯದಲ್ಲಿ ಆಗುವ ಪದಗಳು ಹೇಗೆ ಬದಲಾಗುತ್ತವೆ ಅವುಗಳ ವ್ಯತ್ಯಾಸವನ್ನು ಕಲಿಸಲು ಈ ವಿಧಾನ ಸಹಾಯಕ ವಾಗಿದೆ. ಇದರಿಂದ ವಿದ್ಯಾರ್ಥಿಗಳು ಲಿಂಗಗಳಲ್ಲಿ ಬದಲಾಗುವ ವಾಕ್ಯಗಳನ್ನು ಗುರುತಿಸಿಕೊಂಡು ಸಂದರ್ಭನುಸಾರ ವಾಕ್ಯರಚನೆ ಮಾಡುವಲ್ಲಿ ಸಮರ್ಥರಾಗುವರು. ಆದರೆ ಇಲ್ಲಿ 'ಅನ್ಯಲಿಂಗ' ಎಂದರೆ ಯಾವ ಲಿಂಗ ಎಂದು ಅರ್ಥಮಾಡಿಕೊಳ್ಳಬೇಕು ಎಂಬುದನ್ನು ಯೋಚಿಸಬೇಕಿದೆ. ಕನ್ನಡದಲ್ಲಿ ಸ್ತ್ರೀಲಿಂಗ, ಪುಲ್ಲಿಂಗ, ನಪುಂಸಕಲಿಂಗ ಇದೆಯೇ ಹೊರತು ಅನ್ಯ ಲಿಂಗವೆಂದು ಎಲ್ಲಿಯೂ ಬಳಕೆಯಾಗಿಲ್ಲ. ಅದಕ್ಕಾಗಿ ಈ ತರಹದ ಪದ ಬಳಕೆ ಸೂಕ್ತವಾಗಲಾರದು. ಇದರಿಂದ ಮಕ್ಕಳಿಗೆ ಅನಾವಶ್ಯಕವಾಗಿ ಗೊಂದಲವಾಗುವುದನ್ನು ಕಾಣಬಹುದು.

ಪದ್ಯಭಾಗದ ಚಟುವಟಿಕೆಗಳಲ್ಲಿ ಈ ವಾಕ್ಯದ ಅರ್ಥ ಹೇಳಿ ಎಂದು ಕೇಳಲಾಗಿದೆ.

**ಉದಾಹರಣೆಗೆ :** * ಕಟ್ಟೆಯನು ಕಟ್ಟಿ ನೀರೆರೆದವರು ಯಾರೋ?

* ಅಲ್ಲೆ ಆಹಾರವನು ತಂದೀಯುವವರ್ಯಾರು?........ ಇತ್ಯಾದಿ ವಾಕ್ಯಗಳನ್ನು ಕೇಳಲಾಗಿದೆ. ಇದರ ಉದ್ದೇಶ ಪದ್ಯಗಳ ವಾಕ್ಯದಲ್ಲಿ ಬರುವ ರಚನಾ ಸ್ವರೂಪವನ್ನು ಮಕ್ಕಳಿಗೆ ತಿಳಿಸುವುದರ ಜೊತೆಗೆ ವಾಕ್ಯದಲ್ಲಿ ಗುಣಾತ್ಮಕ ಮತ್ತು ಪರಿಣಾಮಾತ್ಮಕ ಅರ್ಥವುಳ್ಳದ್ದಾಗಿರುತ್ತದೆ ಎಂಬುದನ್ನು ಹೇಳಿ ಕೊಡುವುದಾಗಿದೆ. ಇದರಿಂದ ವಿದ್ಯಾರ್ಥಿಗಳು ವಾಕ್ಯದಲ್ಲಿ ಬರುವ ವಿಶೇಷ ಅರ್ಥವನ್ನು ಗ್ರಹಿಸುವರು.

ಕನ್ನಡಭಾಷೆಯ ಗುಣವಿಶೇಷಣ ತಿಳುವಳಿಕೆಗಾಗಿ ಗುಣವಿಶೇಷಣದ ವಾಕ್ಯವನ್ನು ನೀಡಿ. ಉದಾಹರಣೆಗಳ ಮೂಲಕ ವಿವರಿಸಿ ನಂತರ ಕೊಟ್ಟಿರುವ ವಾಕ್ಯಗಳಲ್ಲಿ ಗುಣ ವಿಶೇಷಣವನ್ನು ಗುರುತಿಸಿ ಗೆರೆ ಹಾಕಿ ಎಂದು ವಿದ್ಯಾರ್ಥಿಗಳಿಗೆ ಚಟುವಟಿಕೆಯನ್ನು ಕೊಡಲಾಗಿದೆ.

**ಉದಾಹರಣೆಗೆ :** * ಹೂ ಸೊಗಸಾಗಿದೆ.

* ಇವರು ಒಳ್ಳೆಯವರು.

* ಮನೆ ಚಿಕ್ಕದಾಗಿದ್ದರೂ, ಚೊಕ್ಕವಾಗಿದೆ.

* ಹೊಲ ಹಚ್ಚ ಹಸುರಾಗಿದೆ. ........... ಇತ್ಯಾದಿ

ಇದರಿಂದ ವಿದ್ಯಾರ್ಥಿಗಳು ಕನ್ನಡದ ಗುಣವಿಶೇಷಣವನ್ನು ವಾಕ್ಯದಲ್ಲಿ ಗುರುತಿಸಲು ಪ್ರಯತ್ನಿಸುವರು.

ಕನ್ನಡವಾಕ್ಯ ರಚನೆಯ ಸಿದ್ಧಾಂತದ ನಿಯಮಗಳನ್ನು ತಿಳಿಸಲು ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಕೊಟ್ಟಿರುವ ವಾಕ್ಯ ಸರಿಪಡಿಸಿ ಬರೆಯಿರಿ ಎಂದು ಕೇಳಲಾಗಿದೆ.

ಉದಾಹರಣೆಗೆ :

* ಶಬರಿ ದೇವರಿಗಾಗಿ ಕಾಯುತ್ತಿದ್ದಳು
* ರಾಮ ಲಕ್ಷ್ಮಣರು ರೇಷ್ಮೆ ಧೋತರ ಉಟ್ಟು ಬಂದಿದ್ದರು.
* ಶಾಂತ ನಿಧಿಯನ್ನು ಕಾಣುವುದೇ ಶಬರಿಗೆ ಪರಮ ಅಶಾಂತಿಯಾಗಿತ್ತು.
* ರಾಮ ಲಕ್ಷ್ಮಣರು ಶಬರಿಯನ್ನು ಹುಡುಕಲು ಅಲೆಯುತ್ತಿದ್ದರು.
* ಸುಖಿ ದುಃಖಿಗೆ ಸಹಾಯ ಮಾಡುತ್ತಾನೆ ..............

ಈ ರೀತಿಯಲ್ಲಿ ವಾಕ್ಯಗಳನ್ನು ಕೊಡಲಾಗಿದೆ. ಇದರಿಂದ ಮಕ್ಕಳಿಗೆ ಕನ್ನಡ ವಾಕ್ಯರಚನೆಗಳು ಸಿದ್ಧಾಂತ ನಿಯಮಕ್ಕೆ ಒಳಪಟ್ಟು ರಚನೆಯಾಗುತ್ತವೆ ಎಂಬುದನ್ನು ತಿಳಿಯುವರು. ಇದರಿಂದ ವಿದ್ಯಾರ್ಥಿಗಳು ಕನ್ನಡ ವಾಕ್ಯವನ್ನು ಸರಿಪಡಿಸುತ್ತಾ ಕನ್ನಡ ವಾಕ್ಯರಚನೆಯ ಸರಳ ನಿಯಮವಾದ ಕರ್ತೃ, ಕರ್ಮ, ಕ್ರಿಯಾಪದದ ಮೂಲಕ ವಾಕ್ಯಗಳು ರಚನೆಯಾಗುತ್ತವೆ. ಎಂಬುದನ್ನು ತಿಳಿದು ವಾಕ್ಯರಚನೆಯನ್ನು ಸರಿಪಡಿಸುವಲ್ಲಿ ಪ್ರಯತ್ನಿಸುವರು.

ವಾಕ್ಯರಚನೆಯನ್ನು ವಿದ್ಯಾರ್ಥಿಗಳಲ್ಲಿ ಹೆಚ್ಚಿಸಲು ಪಾಠದ ಮುಖ್ಯ ವಾಕ್ಯಗಳನ್ನು ಕೊಟ್ಟು ಕೊಟ್ಟಿರುವ ಮಾತನ್ನು ಯಾರು ಯಾರಿಗೆ ಹೇಳಿದರು? ಎಂದು ಕೇಳಲಾಗಿದೆ. ಇದರಿಂದ ವಿದ್ಯಾರ್ಥಿಗಳು ಪಾಠದಲ್ಲಿ ಬರುವ ಘಟನೆಗಳನ್ನು ಚಿಕ್ಕ ಚಿಕ್ಕ ವಾಕ್ಯಗಳ ಮೂಲಕ ಪಾಠದಲ್ಲಿನ ವಿವರಣೆಯ ಸಂಭಾಷಣೆಯನ್ನು ಬರೆಯುವರು. ಈ ಕೌಶಲದ ಬೆಳವಣಿಗೆಗೆ ಈ ಕೆಳಗಿನ ಉದಾಹರಣೆಗಳನ್ನು ಗಮನಿಸಬಹುದು. ಈ ಚಟುವಟಿಕೆಯ ಬಹುಮುಖ್ಯ ಉದ್ದೇಶ ಮಕ್ಕಳು ತಮ್ಮ ತಮ್ಮ ಪರಿಸರದ ಕನ್ನಡ ಉಪಭಾಷೆಯನ್ನು ವೃದ್ಧಿಸುವ ಸಲುವಾಗಿ ಈ ಪ್ರಶ್ನೆಗಳನ್ನು ಕೇಳಲಾಗಿದೆ. ಮಗು ತಾನು ಪಾಠದಲ್ಲಿ ಗ್ರಹಿಸಿದ ಪದದ ಅರ್ಥವನ್ನು ತಮ್ಮ ಪರಿಸರದ ಉಪಭಾಷೆಯನ್ನು ಬರೆಯುವಲ್ಲಿ ಸಮರ್ಥರಾಗುವರು. ಇದೊಂದು ಉತ್ತಮವಾದ ಕೌಶಲವಾಗಿದೆ. ಆದರೆ ಶಿಕ್ಷಕರು ಇದನ್ನು ಹೇಗೆ ಬಳಸಿಕೊಳ್ಳುತ್ತಾರೆ ಎಂಬುದು ಮುಖ್ಯ ಸಂಗತಿಯಾಗಿದೆ.

ಮಾದರಿಯಲ್ಲಿ ಸೂಚಿಸಿರುವಂತೆ ಆಜ್ಞಾರೂಪ ವಾಕ್ಯ ರಚಿಸಿ ಎಂದು ಕೇಳಲಾಗಿದೆ.

ಮಾದರಿ : ನೀನು ಈ ಕೆಲಸ ಮಾಡುತ್ತೀಯಾ?

ನೀನು ಈ ಕೆಲಸ ಮಾಡಲೇಬೇಕು.

* ಈ ಪಾಠವನ್ನು ಬರೆಯುವೆಯಾ ?
* ಅವನು ನಾನು ಹೇಳಿದಂತೆ ಮಾಡಬಹುದೆ ?
* ನೀನು ನಾಳೆ ಬರುತ್ತೀಯಾ ?
* ಅವನು ಚೀಲ ಹೋರಬಲ್ಲನೆ ?

ಇದರಿಂದ ವಿದ್ಯಾರ್ಥಿಗಳು ಆಜ್ಞಾರೂಪದ ವಾಕ್ಯ ರಚನೆಯನ್ನು ಮಾಡುವ ವಿಧಾನವನ್ನು ಕಲಿಯುವರು. ಈ ಪದಗಳು ನಿಷೇಧರೂಪಗಳಾಗಿ ವಾಕ್ಯದಲ್ಲಿ ಪರಿವರ್ತನೆ ಹೊಂದಿದಾಗ ಆ ಪದಗಳು ಹೇಗೆ ಬದಲಾಗಿ ನಿಷೇಧರೂಪ ವಾಕ್ಯಗಳಾಗುತ್ತವೆ ಎಂಬುದನ್ನು ಕಲಿಸಲು ವಿದ್ಯಾರ್ಥಿಗಳಿಗೆ ಕೊಟ್ಟಿರುವ ವಾಕ್ಯಗಳನ್ನು ಗಮನಿಸಿ ಓದಿ ಎಂದು ಕೇಳಲಾಗಿದೆ. ಉದಾಹರಣೆಗೆ: (ಸೂಚನೆ : ಗೆರೆ ಹಾಕಿದ ಕ್ರಿಯಾಪದಗಳು 'ಇಲ್ಲ' ಎಂಬರ್ಥವನ್ನು ಸೂಚಿಸುತ್ತವೆ. ಇವೇ ನಿಷೇಧರೂಪಗಳು)

* ನಾನು ಹಣ್ಣನ್ನು ತಿನ್ನುತ್ತೇನೆ
* ನಾನು ಹಣ್ಣನ್ನು <u>ತಿನ್ನೇನು</u>
* ಬದುಕು ಸಾವುಗಳ ಮಧ್ಯೆ ನಮ್ಮವರು ಹೋರಾಡುತ್ತಿದ್ದಾರೆ?
* ಉಳ್ಳಾಲಕ್ಕೆ ಬಂದರೂ ಉಳಿಗಾಲವಿಲ್ಲದಾಯಿತು
* ಪ್ರಜೆಗಳ ಇಚ್ಚಾಶಕ್ತಿಯೇ ದೇಶದ ಶಕ್ತಿ
* ಗೌರವಾನ್ವಿತರಾಗಿ ಬದುಕಲು ಕಪ್ಪ-ಕಾಣಿಕೆ ಸಲ್ಲಿಸಬೇಕೆ?
* ಫಿರಂಗಿಗಳಿಗಿಂತ ಪ್ರಬಲವಾದ ಸ್ವಾಭಿಮಾನದ ಶಲ್ಯವಿದೆ.
* ಅಬ್ಬಕ್ಕರಾಣಿ ನಿನ್ನ ಮುಂದೆ ಸೆರಗೊಡ್ಡಿ ಅಂಗಲಾಚಬೇಕು?

ಸಂಖ್ಯಾವಾಚಕ ತಿಳುವಳಿಕೆ ಹಾಗೂ ಅವುಗಳ ವಾಕ್ಯಗಳನ್ನು ಪರಿಚಯಿಸಿ ಕಲಿಸುವುದಕ್ಕಾಗಿ ಕೊಟ್ಟಿರುವ ವಾಕ್ಯಗಳ ಸಂಖ್ಯೆಗಳನ್ನು ಸೂಚಿಸುವ ಸಂಖ್ಯಾವಾಚಕಗಳನ್ನು ಗುರುತಿಸಿ ಎಂದು ಭಾಷಾಭ್ಯಾಸ ಚಟುವಟಿಕೆಯಲ್ಲಿ ಕೊಡಲಾಗಿದೆ.

ಉದಾಹರಣೆಗೆ :

* ಶಂಕರನ ಹತ್ತಿರ ನೂರು ರೂಪಾಯಿಗಳಿಗೆ
* ೧,೨,೩ – ಇವು ಕನ್ನಡ ಅಂಕಿಗಳು
* ಭಾಷಣ ಕೇಳಲು ಸಹಸ್ರಾರು ಜನ ಸೇರಿದ್ದರು.

ಇದರ ಉದ್ದೇಶ ವಾಕ್ಯಗಳಲ್ಲಿ ಬರುವ ಸಂಖ್ಯಾವಾಚಕ ಹೇಗೆ ಬರುತ್ತವೆ ಎಂಬುದನ್ನು ತಿಳಿಸುವುದಾಗಿದೆ. ಅಲ್ಲದೇ ಕನ್ನಡದಲ್ಲಿ ಯಾವ ಮಾದರಿಯಲ್ಲಿ ಸಂಖ್ಯಾವಾಚಕ ವಾಕ್ಯಗಳನ್ನು ಮಕ್ಕಳಿಗೆ ಕಲಿಸುವುದಾಗಿದೆ.

ಕೊಟ್ಟಿರುವ ಪದ ಬಳಸಿ ಸ್ವಂತ ವಾಕ್ಯ ಬರೆಯಿರಿ ಎಂದು ಎಲ್ಲಾ ಪಠ್ಯಗಳಲ್ಲಿಯೂ ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿ ಪದಗಳನ್ನು ಕೊಟ್ಟು ಸ್ವಂತ ವಾಕ್ಯ ಬರೆಯಿರಿ ಎಂದು ಕೇಳಿದೆ.

**ಉದಾಹರಣೆಗೆ** :

* ತಲೆದೂಗು
* ಭಾವಪರವಶ
* ಆಕಸ್ಮಿಕ
* ಸದಾವಕಾಶ
* ವಿನಿಯೋಗಿಸು ......ಇತ್ಯಾದಿ
* ಅವನು ಸಿನಿಮಾ ನೋಡುತ್ತಾನೆ
* ಅವನು ಸಿನಿಮಾ ನೋಡನು
* ಅವನು ಶಾಲೆಗೆ ಹೋಗುವನು
* ಅವನು ಶಾಲೆಗೆ ಹೋಗನು
* ಅವಳು ಹಾಲನ್ನು ಕುಡಿಯುವಳು
* ಅವಳು ಹಾಲನ್ನು ಕುಡಿಯಳು

ಈ ಮೇಲಿನ ಉದಾಹರಣೆಗಳಿಂದ ಕ್ರಿಯೆ ನಡೆದಿರುವ ವಾಕ್ಯ ಕ್ರಿಯೆ ನಡೆಯದೇ ಇರುವ ವಾಕ್ಯ (ನಿಷೇಧರೂಪ) ಕೊಟ್ಟು ಇವೆರಡರ ವ್ಯತ್ಯಾಸ ಹೇಳಿಕೊಡುವ ಉದ್ದೇಶವನ್ನು ಹೊಂದಿದಂತೆ ಕಂಡುಬರುತ್ತದೆ. ಆದರೆ ವಿದ್ಯಾರ್ಥಿಗಳು ನಿಷೇಧರೂಪದ ವಾಕ್ಯಗಳಿಗೆ ನಿಷೇಧಾರ್ಥಕ ಮತ್ತು ವಿರುದ್ಧಾರ್ಥಕ ಪದಗಳಿಗೆ ಇರುವ ವ್ಯತ್ಯಾಸ ಹೇಳಿ ಕೊಡದೆ ಇಲ್ಲಿಯವರೆಗೂ ಬೋಧನೆ ಮಾಡಿಕೊಳ್ಳುತ್ತಾ ಬಂದಿದ್ದಾರೆ. ಕನ್ನಡ ಭಾಷೆಯಲ್ಲಿ ಈ ಎರಡು ಪರಿಕಲ್ಪನೆಗಳು ಬೇರೆ ಬೇರೆ ಎಂದು ಕಲಿಸಬೇಕಾಗಿರುವುದರಿಂದ ಪಠ್ಯದ ಬುನಾದಿಗಳ ಹಂತಗಳಲ್ಲಿ ಇವುಗಳನ್ನು ಕಲಿಸುವ ಚಟುವಟಿಕೆಗಳು ಪಠ್ಯದಲ್ಲಿ ಆಗಬೇಕಿದೆ. ಎರಡು ಚಟುವಟಿಕೆಗಳನ್ನು ಕೊಟ್ಟಿದೆ. ಆದರೆ ಇವುಗಳು ಹೇಗೆ ಭಿನ್ನ ಎಂಬುದನ್ನು ತಿಳಿಸಿಲ್ಲದೆ ಇರುವುದು ಎಲ್ಲಾ ಪಠ್ಯಗಳನ್ನು ವಿಶ್ಲೇಷಣೆಗೆ ಒಳಪಡಿಸಿದಾಗ ಸ್ಪಷ್ಟವಾಗುತ್ತದೆ.

ಕೊಟ್ಟಿರುವ ಪದಗಳಿಂದ ಸೂಕ್ತವಾದುದನ್ನು ಆರಿಸಿ ವಾಕ್ಯಪೂರ್ಣಗೊಳಿಸಿ ಘಟನೆ ರಚಿಸಿ ಎಂದು ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಕೊಟ್ಟಿರುವುದನ್ನು ಕಾಣುತ್ತೇವೆ.

**ಉದಾಹರಣೆಗೆ :**

* .................... ಹೊತ್ತು ತಂದಿತು
* ಹುಡುಗರು ಕಣ್ಣು ............. ಓಡಿದರು.
* ..................... ಬಯಲಿನಲ್ಲಿ ..............ಆಡುತ್ತಿದ್ದರು.
* ಗಾಳಿ ................. ಬೀಸಿತು.
* ಹುಡುಗರು ಮನೆ ಒಳಗೆ ..............

(ಹುಡುಗರು ಆಟವನ್ನು ಬಲವಾಗಿ, ಮಳೆಯನ್ನು ಬಲವಾಗಿ ಮಳೆಯನ್ನು ಒಮ್ಮೆಲೆ ಮುಚ್ಚಿ ಬರುತ್ತದೆ ಬನ್ನಿ ಹೋದರು.)

ಈ ಚಟುವಟಿಕೆಯ ಉದ್ದೇಶ ಮಕ್ಕಳಿಗೆ ಕನ್ನಡ ವಾಕ್ಯದಲ್ಲಿ ಕರ್ತೃ, ಕರ್ಮ, ಕ್ರಿಯಾಪದಗಳು ಯಾವ ವಿಧಾನದಲ್ಲಿ ಬರುತ್ತವೆ. ಎಂಬುದನ್ನು ತಿಳಿಸುವುದಾಗಿದೆ. ಇದರಿಂದ ವಿದ್ಯಾರ್ಥಿಗಳು ಕನ್ನಡ ವಾಕ್ಯರಚನೆಯ ಕ್ರಮವನ್ನು ಕೊಟ್ಟಿರುವ ವಿದ್ಯಾರ್ಥಿಗಳಲ್ಲಿ ಸೂಕ್ತವಾದುದನ್ನು ಆರಿಸಿ ತುಂಬುವುದರ ಮೂಲಕ ತಿಳಿಯುವರು.

ಮಕ್ಕಳ ಕನ್ನಡ ಉಪಭಾಷೆಯ ಮಾತಿನ ರೂಪವನ್ನು ಶಿಷ್ಟೀಕರಣ ಅಥವಾ ಬರಹದ ರೂಪದ ವಾಕ್ಯಗಳನ್ನು ಕಲಿಸಲು ಪಠ್ಯದ ಚಟುವಟಿಕೆ ಭಾಗಗಳಲ್ಲಿ ಕೊಟ್ಟಿರುವ ವಾಕ್ಯಗಳನ್ನು ಗ್ರಾಂಥಿಕ ರೂಪದಲ್ಲಿ ಬರೆಯಿರಿ ಎಂದು ಕೇಳಲಾಗಿದೆ.

**ಉದಾಹರಣೆಗೆ :** ಬರ್ರಿ ಬಾಯರ ಬರ್ರೀ, ಚೂಡ ತಿಂದು ಚಾ ಕುಡೀರೆಲ

ಅಮ್ಮಾವ್ರ ರೊಟ್ಟಿ ಕಾಳು ತಿನ್ರೀ, ಕೆನಿಮೊಸರು ಐತ್ರೀ ಈ ವಾಕ್ಯಗಳು ಕನ್ನಡ ಉಪಭಾಷೆ ವರ್ಗದಲ್ಲಿ ಮಾತನಾಡುವ ವಾಕ್ಯಗಳಾಗಿವೆ. ಇದನ್ನು ಗ್ರಹಿಸಿದ ಮಕ್ಕಳು ಗ್ರಾಂಥಿಕ ರೂಪದ ಬರಹದ ರೂಢಿ ಮಾಡುವ ಉದ್ದೇಶವನ್ನು ಹೊಂದಿದಂತೆ ತೋರುತ್ತದೆ. ಆದರೆ ಇದರ ಬಗ್ಗೆ ತಿಳಿದುಕೊಳ್ಳುವುದು ಈ ವಾಕ್ಯವನ್ನು ಬಳಸುವ ಉಪಭಾಷಾ ಮಕ್ಕಳಿಗೆ ಮಾತ್ರ ಸಹಾಯಕವಾದುದು. ಏಕೆಂದರೆ ಪಠ್ಯಗಳಲ್ಲಿ ಎಲ್ಲಾ ಉಪ ಭಾಷಾವರ್ಗದ ವಾಕ್ಯಗಳನ್ನು ನೀಡಿಲ್ಲ. ಈ ಚಟುವಟಿಕೆಗೆ ಆಧ್ಯತೆ ನೀಡಿದಾಗ ಎಲ್ಲಾ ಉಪಭಾಷೆಗಳ ವಾಕ್ಯಗಳನ್ನು ಪಠ್ಯಗಳಲ್ಲಿ ಕೊಡುವುದು ಮುಖ್ಯವೆನಿಸುತ್ತದೆ. ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಕೊಟ್ಟಿರುವ ಮಾದರಿ ವಾಕ್ಯಗಳನ್ನು ಓದಿ : ವಾಕ್ಯವನ್ನು ಸಂಕ್ಷಿಪ್ತಗೊಳಿಸುವ ವಿಧಾನ ತಿಳಿಯಿರಿ ಎಂದು ಪ್ರಶ್ನೆಯನ್ನು ಕೇಳಿದೆ.

ಉದಾಹರಣೆಗೆ : ಮಾದರಿ : ೧ ವಾಕ್ಯವಿವರ ವಿಧಾನ :

ಉಷೆ ಓಡಿದಳು, ಮತ್ತೆ ಓಡಿದಳು, ತನ್ನ ಗುರಿ ತಲುಪಿದಳು.

ವಾಕ್ಯ ಸಂಕ್ಷೇಪ ವಿಧಾನ : ಉಷೆ ಓಡೋಡಿ ಗುರಿ ತಲುಪಿದಳು

ಮಾದರಿ : ೨ ವಾಕ್ಯ ವಿವರ ವಿಧಾನ : ಮಳೆ ಬಂತು ಮಳೆ, ಜೋರು ಬಂತು ಮೇಲಿಂದ ಮೇಲೆ ಬಂತು.

ವಾಕ್ಯ ವಿವರ ವಿಧಾನ : ಮಳೆ ರಪಾ ರಪಾ ಬಂತು

ಮಾದರಿ : ೩ ವಾಕ್ಯ ವಿವರ ವಿಧಾನ : ಮಹಮ್ಮದ ಬಸ್ಸಿಗಾಗಿ ಕಾಯ್ದು ನಿಂತ ಬಹಳ ಹೊತ್ತು ನಿಂತ, ಅವನಿಗೆ ಕಾಲುನೋವು ಬಂತು.

ವಾಕ್ಯ ಸಂಕ್ಷೇಪ ವಿಧಾನ : ಮಹಮ್ಮದ ಬಸ್ಸಿಗಾಗಿ ಕಾಯ್ದು ನಿಂತು ನಿಂತು ಕಾಲುನೋವು ಬಂದಿತು. ಈ ಮಾದರಿಗಳನ್ನು ಗಮನಿಸಿದ ವಿದ್ಯಾರ್ಥಿಗಳಿಗೆ ಸಂಕ್ಷಿಪ್ತ ಸುಂದರ ವಾಕ್ಯರಚಿಸಿ ಎಂದು ಕೇಳಲಾಗಿದೆ.

ಉದಾಹರಣೆಗೆ :

* ಆಚೆ ವರುಷ ಬರಗಾಲ, ಹೋದ ವರುಷ ಬರಗಾಲ. ಈ ವರುಷ ಬರಗಾಲ, ಜನರು ಕಷ್ಟದಲ್ಲಿದ್ದಾರೆ.

* ಮಗು ಅತ್ತಿತು ಮತ್ತೆ ಅತ್ತಿತು, ಕೊನೆಗೆ ನಿದ್ದೆ ಹೋಯಿತು.

* ವಸಂತ ಋತುವಿನಲ್ಲಿ ಆ ಮರ ಚಿಗುರುತ್ತದೆ. ಈ ಮರ ಚಿಗುರುತ್ತದೆ. ಎಲ್ಲಾ ಮರಗಳು ಚಿಗುರುತ್ತವೆ....... ಇದರ ಉದ್ದೇಶ ಮೇಲಿನ ಮಾದರಿಯಲ್ಲಿ ವಾಕ್ಯಗಳು ಸಂಕ್ಷೇಪ ವಿಧಾನವನ್ನು ಅನುಸರಿಸಿಕೊಂಡು ಈ ಮೇಲಿನ ವಾಕ್ಯ ವಿವರ ವಿಧಾನವನ್ನು ವಾಕ್ಯ ಸಂಕ್ಷೇಪ ವಿಧಾನಕ್ಕೆ ಪರಿವರ್ತಿಸುವಂತೆ ಕಲಿಸುವುದಾಗಿದೆ. ಇದೊಂದು ಉತ್ತಮ ಕೌಶಲವಾಗಿದೆ. ಒಂದು ಘಟನೆ, ಒಂದು ವಸ್ತುವಿನ ವಿವರವನ್ನು ಸಂಕ್ಷಿಪ್ತ ಮಾದರಿಯಲ್ಲಿ ವಾಕ್ಯ ಮಾಡುವುದನ್ನು ಕಲಿಯುವರು. ವಾಕ್ಯರಚನೆಯ ಸಮೃದ್ಧಿಯ ಬೆಳವಣಿಗೆಗೆ ಮತ್ತು ಪದಗಳು ಸಂದರ್ಭನುಸಾರ ಅರ್ಥ ವ್ಯತ್ಯಾಸವಾದಾಗ ಆ ಪದಗಳ ಅರ್ಥಗಳ ವ್ಯಾತ್ಯಾಸ ವಾದಂತೆ ವಾಕ್ಯಗಳನ್ನು ರೂಪಿಸಲು ಕೆಲವೊಂದು ಚಟುವಟಿಕೆಯ ಭಾಗದಲ್ಲಿ ಭಿನ್ನ ಭಿನ್ನ ಅರ್ಥಕೊಡುವ ವಾಕ್ಯಗಳನ್ನು ರಚಿಸಿ ಎಂದು ಮಾದರಿ ತೋರಿಸಿ ಪ್ರಶ್ನಿಸಲಾಗಿದೆ.

ಉದಾಹರಣೆಗೆ : ಮಾದರಿ : ಘನ – ಶ್ರೇಷ್ಠ, ಆರು ಮುಖವುಳ್ಳದ್ದು

ಬಸವಣ್ಣ ಅವರು ನಾನು ಘನನಲ್ಲವೆಂದು ಹೇಳಿದರು.

ಘನಾಕೃತಿಗಳಿಗೆ ಆರು ಮುಖಗಳಿರುತ್ತವೆ.

* ತೊರೆ – ಬಿಟ್ಟುಬಿಡು, ಹಳ್ಳ

* ಬಿರಿ – ಅರಳು, ಸೀಳು

* ಎಣಿಕೆ – ಗಮನಿಸು, ಎಣಿಸು, ಆಲೋಚನೆ, ಭಾವಿಸು

ಈ ಮೇಲಿನ ಚಟುವಟಿಕೆ ಸೃಜನಶೀಲತೆಗೆ ನಿದರ್ಶನವಾಗಿದೆ. ವಿದ್ಯಾರ್ಥಿಗಳು ಸಂದರ್ಭನುಸಾರ ಜ್ಞಾಪಿಸಿಕೊಂಡು ಪದದ ಅರ್ಥಕ್ಕೆ ಅನುಗುಣವಾಗಿ ವಾಕ್ಯರಚನೆ ಮಾಡುವುದನ್ನು ಕಲಿಯುವರು.

ವಾಕ್ಯದಲ್ಲಿನ ಲೇಖನ ಚಿಹ್ನೆಗಳನ್ನು ಬಳಸುವುದು ಬಹಳ ಮುಖ್ಯವಾದುದು. ಇದರ ಬಳಕೆಯಲ್ಲಿ ವ್ಯತ್ಯಾಸವಾದರೆ ಅರ್ಥ ವ್ಯತ್ಯಾಸ ಇವೆ. ಅರ್ಥವೇ ಕೆಟ್ಟು ಹೋಗುವ ಸಂದರ್ಭವು ಬಂದರೂ ಬರಬಹುದು. ಮಕ್ಕಳಿಗೆ ವಾಕ್ಯರಚನೆಯ ತಿಳುವಳಿಕೆಯ ಸಂದರ್ಭದಲ್ಲಿ ಚಿಹ್ನೆಗಳ ಬಳಕೆಯ ವಿಧಾನವನ್ನು ಕಲಿಸುವುದು ಬಹಳ ಮುಖ್ಯ. ಇದರ ತಿಳುವಳಿಕೆಗಾಗಿ ಪಠ್ಯಗಳಲ್ಲಿ ಅವಕಾಶ ಮಾಡಿ ಕೊಟ್ಟಿರುವುದನ್ನು ಕಾಣುತ್ತೇವೆ.

**ಉದಾಹರಣೆಗೆ** : ಕೆಳಗಿನ ಭಾವನಾ ವಾಕ್ಯಗಳನ್ನು ಗಮನಿಸಿ ಓದಿ ಯಾವ ಭಾವನೆ ಪ್ರಮುಖವಾಗಿ ವ್ಯಕ್ತವಾಗಿದೆ ಎಂಬುದನ್ನು ಅರ್ಥೈಸಿ ಎಂದು ಪ್ರಶ್ನಿಸಲಾಗಿದೆ.

* ಮಗು, ಮಗು, ಹಾವು! ಇತ್ತ ಬಾ (ಅಂಜಿಕೆ)

* ಅಯ್ಯಯ್ಯೋ! ನನ್ನನ್ನು ಕೇಳುವವರು ಯಾರು ಇಲ್ಲವೆ? (ದುಃಖ)

* ದೇವ! ದೇವ! ನಮ್ಮನ್ನು ಕಷ್ಟದಿಂದ ಕಾಪಾಡು (ಪ್ರಾರ್ಥನೆ)

* ಭಲೇ ಭಲೇ! ನೀನು ದೇಶದ ಮಾನ ಕಾಪಾಡಿದೆ (ಮೆಚ್ಚುಗೆ)

* ಲೋ ತಮ್ಮಾ! ಓಡೋಡಿ ಬಾ– ಓಡಿಬಾ (ಆತುರ)

* ಸ್ವಾಮಿ! ಇಲ್ಲಿ ಕುಳಿತುಕೊಳ್ಳಿ (ಗೌರವ)

* ಅವನೇನಾ ದೊಡ್ಡ ಸಾಹುಕಾರ! ಸಾಹುಕಾರ! (ನಿಂದೆ)

* ಲೇ ಲೇ ಸಾಕು ಬಾಯಿ ಮುಚ್ಚು (ಕೋಪ)

* ಎಲಾ! ಈ ಕೆಲಸ ಮುಗಿಯಿತೆ? (ಅಚ್ಚರಿ)

* ಅಮ್ಮಾ ಅಮ್ಮಾ! ನಾನು ಓಟದಲ್ಲಿ ಗೆದ್ದೆ (ಸಂತೋಷ)

* ಈ ರೀತಿಯ ವಾಕ್ಯಗಳನ್ನು ಕೊಡಲಾಗಿದೆ. ಇದರಿಂದ ವಾಕ್ಯಗಳಲ್ಲಿ ಬಂದಿರುವ ಭಾವನಾತ್ಮಕ ಚಿಹ್ನೆಗಳನ್ನು ಬಳಸಿರುವುದನ್ನು ಗಮನಿಸುತ್ತಾರೆ. ಅಲ್ಲದೆ ವಿದ್ಯಾರ್ಥಿಗಳು ಅವುಗಳನ್ನು ಸಂದರ್ಭನುಸಾರ ಬಂದಾಗ ವಾಕ್ಯದಲ್ಲಿ ಬಳಸಿ ವಾಕ್ಯರಚನೆ ಮಾಡುವುದನ್ನು

ಕಲಿಯುವರು. ಕೆಲವು ವಾಕ್ಯಗಳನ್ನು ನೀಡಿ ಸೂಚನೆಯಂತೆ ಬದಲಾಯಿಸಿ ಎಂದು ಪ್ರಶ್ನಿಸಲಾಗಿದೆ.

ಉದಾಹರಣೆಗೆ :

* ತಂಗಾಳಿ ತೀಡುತ್ತಿತ್ತು (ವರ್ತಮಾನಕಾಲ)
* ದೇವರು ಒಳ್ಳೆಯದನ್ನು ಮಾಡುತ್ತಾನೆ (ವಿದ್ಯಾರ್ಥಕರೂಪ)
* ಜೀಮೂತವಾಹನನ ಮನಸ್ಸು ವಿಚಲಿತವಾಗಿತ್ತು
  (ನಿಶ್ಚಿತಾರ್ಥ ರೂಪ ಉಪಯೋಗಿಸಿ ನಿಷೇಧಾರ್ಥಕ ರೂಪ)
* ರಹೀಮ ಅನ್ನವನ್ನು ಉಂಡ (ಭವಿಷತ್ಕಾಲ)
* ಉಪಾಧ್ಯಯರು ಪಾಠ ಹೇಳುತ್ತಾರೆ. (ಭೂತಕಾಲ)
* ಅವನು ಕವಿತೆ ಬರೆದ (ಸಂಭಾವನಾರ್ಥ)

ಈ ಮೇಲಿನ ವಾಕ್ಯಗಳು ಸರಳ ವಾಕ್ಯಗಳಾಗಿವೆ. ಆವರಣದಲ್ಲಿ ಕೊಟ್ಟಿರುವಂತೆ ಬದಲಾಯಿಸಿ ಎಂದು ಕೇಳಲಾಗಿದೆ. ಇದರ ಉದ್ದೇಶ ಕಾಲವಾಚಗಳನ್ನು ತಿಳಿಸುವುದಾಗಿದೆ. ಇದರಿಂದ ಮಕ್ಕಳು ಭೂತಕಾಲ, ಭವಿಷತ್ಕಾಲ, ವರ್ತಮಾನ ಕಾಲ, ಸಂಭಾವನಾರ್ಥಕದಂತಹ ಇತ್ಯಾದಿ ವಾಕ್ಯಗಳನ್ನು ಕಲಿಯುವರು.

ಒಟ್ಟಾರೆಯಾಗಿ ಈ ಸ್ವರೂಪದ ಅಡಿಯಲ್ಲಿ ಕನ್ನಡಭಾಷಾ ಪಠ್ಯಗಳಲ್ಲಿ ವಾಕ್ಯರಚನೆಗೆ ಸಂಬಂಧಿಸಿದಂತೆ ವಿವರಿಸಿದ ರೀತಿಯಲ್ಲಿ ಹೇಳಿಕೊಡುವ ಕ್ರಮವನ್ನು ಕಾಣುತ್ತೇವೆ. ಈ ವಿವಿಧ ಚಟುವಟಿಕೆಯಲ್ಲಿ ಕಲಿತಿರುವ ಮಕ್ಕಳು ಕನ್ನಡಭಾಷೆಯ ವಾಕ್ಯರಚನೆಗೆ ಸಂಬಂಧಿಸಿದಂತೆ ಪರಿಪೂರ್ಣ ಮಾಹಿತಿಯನ್ನು ಪಡೆದವರಾಗಿದ್ದಾರೆ. ಅಥವಾ ಕಲಿತ ಚಟುವಟಿಕೆಗಳೆಲ್ಲ ಕನ್ನಡ ವಾಕ್ಯರಚನೆಗೆ ಸಂಬಂಧಿಸಿವೆಯೇ ಇಲ್ಲವೇ ಎಂಬುದನ್ನು ನೋಡಬೇಕಿದೆ. ಆಗಿದ್ದರೆ ವಾಕ್ಯರಚನೆಯ ಸ್ವರೂಪವನ್ನು ಹೇಳಿ ಕೊಡುವ ಪರಿಪಾಠ ನಮ್ಮ ಪಠ್ಯಗಳಲ್ಲಿ ಇಲ್ಲವೇ ಹಾಗಾದರೆ ಕನ್ನಡಭಾಷಾ ಪಠ್ಯಪುಸ್ತಕ ಎಂದು ಕರೆಯುವುದಾದರೂ ಏಕೆ ಎಂಬುದನ್ನು ನಮ್ಮನ್ನು ನಾವೇ ಪ್ರಶ್ನೆ ಮಾಡಿಕೊಳ್ಳುವ ಅಗತ್ಯತೆ ಇಂದು ಅವಶ್ಯವಿದೆ. ಇಲ್ಲಿನ ವಾಕ್ಯರಚನೆಯು ಕನ್ನಡ ಮತ್ತು ಸಂಸ್ಕೃತ ಭಾಷೆಯ ವಾಕ್ಯರಚನೆಯ ಕ್ರಮವನ್ನು ಹೇಳಿಕೊಡಲಾಗುತ್ತದೆ ಎಂದು ಆಧುನಿಕ ಚಿಂತಕರು ಅಭಿಪ್ರಾಯ ಪಡುವುದನ್ನು ಕಾಣುತ್ತೇವೆ. ಆದರೆ ವಾಕ್ಯರಚನೆಗೆ ಸಮಬಂಧಿಸಿದಂತೆ ಮಾತನಾಡಿದವರು ಬೆರಳೆಣಿಕೆಗಿಂತ ಕಡಿಮೆ ಎಂದೇ ಹೇಳಬಹುದು.

### ೬.೩. ಆಧುನಿಕ ಚಿಂತಕರ ಅಭಿಪ್ರಾಯಗಳ ವಿಶ್ಲೇಷಣೆ

**ಡಾ. ಕೆ.ವಿ. ನಾರಾಯಣ ಅವರ ಕನ್ನಡ ಜಗತ್ತು : ಅರ್ಧಶತಮಾನ** (ಪುಟ-೧೭೭ರಲ್ಲಿ) ಪದರಚನೆ ಎಂಬ ಲೇಖನದ ಕೊನೆಯ ಭಾಗದಲ್ಲಿ ವಾಕ್ಯರಚನೆಯ ನೆಲೆಯ ಬಗ್ಗೆ ಈ

ರೀತಿಯಾಗಿ ವಿವರಣೆ ನೀಡುತ್ತಾರೆ. 'ವಾಕ್ಯರಚನೆಯ ನೆಲೆಯಲ್ಲಿ ಹೊಸ ಪ್ರವೃತ್ತಿಗಳು ಕಂಡು ಬರುತ್ತಿರುವ ಬಗೆಗೆ ನಡೆದಿರುವ ಅಧ್ಯಯನಗಳು ತೀರಾ ಕಡಿಮೆ. ಸಾಮಾನ್ಯವಾಗಿ ಕನ್ನಡ ಅಂತಸ್ಥ ನಿಯಮಗಳನ್ನು ಯಾರೂ ಬದಲಾಯಿಸಲಾರರು. ಆದರೆ ಆ ನಿಯಮಗಳನ್ನು ಬಳಸಿ ರಚಿಸುವ ವಾಕ್ಯಗಳ ಹೊರ ರೂಪವನ್ನು ಅಗತ್ಯಕ್ಕನುಸಾರವಾಗಿ ಮಾರ್ಪಡಿಸಿಕೊಳ್ಳುವ ಸ್ವತಂತ್ರ ಭಾಷಿಕರಿಗೆ ಇರುತ್ತದೆ. ಕನ್ನಡದಲ್ಲಿ ಒಂದಕ್ಕಿಂತ ವಾಕ್ಯಗಳನ್ನು ಈಗ ಹೆಚ್ಚಿನ ಬರವಣಿಗೆಯ ಪ್ರಮಾಣದಲ್ಲಿ ರಚಿಸಲಾಗುತ್ತಿದೆ. ಹೀಗೆ ಕ್ರಿಯಾಪದಗಳು ಹೆಚ್ಚಿನ ಸಂಖ್ಯೆಯಲ್ಲಿ ಇರುವಾಗ ಸಾಮಾನ್ಯವಾಗಿ ಅವು ವಾಕ್ಯದಲ್ಲಿ ಬರುವ ಅನುಕ್ರಮವನ್ನು ನಿಯಂತ್ರಿಸುವ ನಿಯಮಗಳು ಕೆಲವು ಇರುತ್ತವೆ. ಸಾಮಾನ್ಯವಾಗಿ ಪೂರ್ಣ ಕ್ರಿಯಾಪದವು ವಾಕ್ಯದ ಪ್ರಧಾನ ಅಂಶವೆಂದು ನಾವು ತಿಳಿದರೂ ಸಂಯೋಜಿತ ವಾಕ್ಯಗಳಲ್ಲಿ ಗಮನ ಸೆಳೆಯಬೇಕಾದ ಅಂಶಗಳನ್ನು ವಾಕ್ಯದ ಮೊದಲಲ್ಲಿ ತಂದು ಅನಂತರ ಪ್ರಧಾನ ಕ್ರಿಯಾಪದವನ್ನು ಅದೆಷ್ಟೇ ಮುಖ್ಯವಾಗಿದ್ದರೂ ವಾಕ್ಯದ ಕೊನೆಗೆ ತರುವ ಪ್ರವೃತ್ತಿ ಈಚೆಗೆ ಹೆಚ್ಚಾಗುತ್ತಿದೆ. ನಿದರ್ಶನಕ್ಕಾಗಿ ಒಂದು ವಾಕ್ಯವನ್ನು ಗಮನಿಸೋಣ. 'ಕಾಲ್ ಸೆಂಟರ್ ಉದ್ಯೋಗಿ ಪ್ರತಿಭಾ ಹತ್ಯಯ ಪ್ರಕರಣದ ನೆನಪು ಇನ್ನೂ ಹಸಿರಾಗಿರುವಾಗಲೇ ಮತ್ತೊಬ್ಬ ಕಾಲ್‌ಸೆಂಟರ್ ಉದ್ಯೋಗಿಯನ್ನು ಕೊಲೆ ಮಾಡಲಾಗಿದೆ. ಈ ವಾಕ್ಯದಲ್ಲಿ ಈತ್ತೀಚಿನ ಘಟನೆಯೊಂದನ್ನು ವರದಿ ಮಾಡಬೇಕಾಗಿದೆ'. ಆದರೆ ಈ ಹಿಂದೆ ನಡೆದ ಘಟನೆಯೊಂದನ್ನು ವಾಕ್ಯದ ಮೊದಲಲ್ಲಿ ಉಲ್ಲೇಖಿಸಲಾಗಿದೆ. ಈ ವಾಕ್ಯದ ಉದ್ದೇಶ ಮತ್ತು ದೃಷ್ಟಿಕೋನಗಳ ಮಾತು ಪ್ರತ್ಯೇಕ ಚರ್ಚೆಯನ್ನು ಬಯಸುತ್ತದೆ. ನಮ್ಮ ಶಿಲ್ಪಿ ಎರಡು ಕ್ರಿಯೆಗಳನ್ನು ವಾಕ್ಯರಚನೆಯಲ್ಲಿ ಜೋಡಿಸಿರುವ ಕ್ರಮ ಮುಖ್ಯ ಈಚಿನ ಕನ್ನಡದಲ್ಲಿ ಈ ಬಗೆಯ ರಚನೆಗಳು ತುಂಬಾ ಹೆಚ್ಚಾಗುತ್ತಿವೆ.

ಕಿರಿಯ ಪ್ರಾಥಮಿಕ ಪಠ್ಯಪುಸ್ತಕಗಳನ್ನು ಗಮನಿಸಿದಾಗ ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿ ರಚನೆ ಮಾಡಲಾಗಿದೆ. ಹಾಗೆ ಮಾಡುವಾಗ ಕನ್ನಡಭಾಷೆಯ ರಚನೆಯನ್ನು ಮಕ್ಕಳಿಗೆ ಪರಿಚಯಿಸುವ ಉದ್ದೇಶದಿಂದ ವಿವಿಧ ಮಾದರಿಗಳಲ್ಲಿ ಅಭ್ಯಾಸ ಚಟುವಟಿಕೆಗಳನ್ನು ಪಠ್ಯಪುಸ್ತಕ ರಚನೆಯ ಸ್ವರೂಪದ ಭಾಗದಲ್ಲಿ ವಿವರಿಸಿದ್ದೇವೆ. ಇಷ್ಟಿದ್ದರೂ ಕೆಲವು ಭಾಷಿಕ ಅಂಶಗಳನ್ನು ವಾಕ್ಯದ ಹಂತದಲ್ಲಿ ಪರಿಚಯಿಸುವಾಗ ದಾರಿ ತಪ್ಪಿರುವುದು ಕಂಡುಬರುತ್ತದೆ. ಕನ್ನಡ ಕಲಿ-ನಲಿ ಒಂದನೇ ತರಗತಿಯ ಪುಟ ಸಂಖ್ಯೆ ೬ರಲ್ಲಿ ಕೊಟ್ಟಿರುವ ವಾಕ್ಯಗಳನ್ನು ಗಮನಿಸಿ ಸರಿ/ತಪ್ಪು ಹೇಳಿಸಿ ಎಂದು ಕೇಳಲಾಗಿದೆ. ಈ ಚಟುವಟಿಕೆ ಪಾಠ-೩ ಒಗ್ಗಟ್ಟಿನಲ್ಲಿ ಬಲವಿದೆ.

**ಉದಾಹರಣೆಗೆ :**

* ರಾಮಯ್ಯನ ಮಕ್ಕಳು ಯಾವಾಗಲೂ ಜಗಳವಾಡುತ್ತಿದ್ದರು.
* ಒಬ್ಬೊಬ್ಬರಿಗೂ ಒಂದೊಂದು ಕೋಲನ್ನು ಕೊಡಲಿಲ್ಲ
* ಮಕ್ಕಳು ಕೋಲಿನ ಕಟ್ಟನ್ನು ಸುಲಭವಾಗಿ ಮುರಿದರು. ಇತ್ಯಾದಿ ಈ ರೀತಿಯಲ್ಲಿ ನೀಡಿರುವ ಚಟುವಟಿಕೆಯು ಮಕ್ಕಳಿಗೆ ಇಲ್ಲಿ ಅರ್ಥಪೂರ್ಣ ಕಲಿಕೆಯಾಗದು.

ಮಗು ಇಲ್ಲಿ ಕಂಠಪಾಠದ ಮಾದರಿಯಲ್ಲಿ ಹೇಳುವುದು ಆದ್ದರಿಂದ ಮೊದಲು ಸರಳ ವಾಕ್ಯಗಳನ್ನೇ (ಪಾಠದಲ್ಲಿರುವಂತೆ) ಸರಿ ರೂಪದಲ್ಲಿನ ವಾಕ್ಯಗಳನ್ನೇ ಹೇಳಿಸುವುದು ಸೂಕ್ತವಾದ ಕ್ರಮವೆಂದು ಹೇಳಬಹುದು.

ಕನ್ನಡ ಕಲಿ–ನಲಿ ಎರಡನೇ ತರಗತಿಯ ಪುಟ ಸಂಖ್ಯೆ ೨೫ರಲ್ಲಿ ಗಮನಿಸಿ ಓದಿ ಎಂದು ಕೇಳಲಾಗಿದೆ.

**ಉದಾಹರಣೆಗೆ :** * ಅವನು ಊರಿಗೆ ಬಂದನು.

* ಅವಳು ಊರಿಗೆ ಬಂದಳು

* ಅವರು ಊರಿಗೆ ಬಂದರು.

* ಅದು ಊರಿಗೆ ಬಂದಿತು.

* ಅವು ಊರಿಗೆ ಬಂದವು. ಈ ಚಟುವಟಿಕೆಯು ಈ ತರಗತಿಯ ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿರದೆ ಸಾಮರ್ಥ್ಯಕ್ಕೆ ಮೀರಿ ಪ್ರಶ್ನೆಗಳನ್ನು ಕೊಡಲಾಗಿದೆ. ಇಲ್ಲಿ ಕೊಟ್ಟಿರುವುದೇನು ಸರಳ ವಾಕ್ಯಗಳು ಆದರೆ ಇವುಗಳ ಅರ್ಥವ್ಯತ್ಯಾಸ ತಿಳುವಳಿಕೆಗೆ ಕ್ಲಿಷ್ಟವಾದುದು. ಏಕೆಂದರೆ ಇಲ್ಲಿ ವಚನ ಲಿಂಗಗಳು ಎರಡರ ಅನುಪಾತದಡಿಯಲ್ಲಿ ವಾಕ್ಯ ರಚಿಸುವುದನ್ನು ನೋಡುತ್ತೇವೆ. ಮಗುವಿಗೆ ಈ ತರಹದ ಕಲಿಕೆಗೆ ಅವಕಾಶ ಮಾಡಿಕೊಡು ವುದರಿಂದ ಏನನ್ನೂ ಪರಿಪೂರ್ಣವಾಗಿ ಬೋಧಿಸಿದಂತೆ ಆಗುವುದಿಲ್ಲ. ಮಕ್ಕಳಿಗೆ ಮಾಹಿತಿ ಯನ್ನು ಹೇರುವುದಕ್ಕಿಂತ ಏನನ್ನು ಕಲಿಸಬೇಕು. ಎಷ್ಟನ್ನು ಕಲಿಸಿದರೆ ಒಳ್ಳೆಯದು ಎಂಬುದು ಮುಖ್ಯವಾಗುತ್ತದೆ. ಆದ್ದರಿಂದ ಇಂತಹ ಚಟುವಟಿಕೆಯು ಸಾಮಾನ್ಯವಾಗಿ ಐದನೇ ತರಗತಿಯ ಮಕ್ಕಳ ಮಾನಸಿಕ ಸಾಮರ್ಥ್ಯಕ್ಕೆ ಸರಿಯಾದುದು. ಆದ್ದರಿಂದ ಈ ಚಟುವಟಿಕೆಯು ಐದನೇ ತರಗತಿಯ ಮಕ್ಕಳಿಗೆ ಕಲಿಸುವುದು ಸೂಕ್ತ. (ಪುಟ–೬೬ ತರಗತಿ –೨) ಈ ಪದಗಳನ್ನು ಉಪಯೋಗಿಸಿಕೊಂಡು ವಾಕ್ಯ ಮಾಡಿರಿ. ಜೊತೆಗೆ ಎರಡು ವಾಕ್ಯಗಳಲ್ಲಿ ಉತ್ತರಿಸಿ ಎಂದು ಚಟುವಟಿಕೆಯ ಭಾಗದಲ್ಲಿ ಕೊಡಲಾಗಿದೆ. ಇದು ಈ ಮಕ್ಕಳ ತರಗತಿಗೆ ಸರಿಯಾದ ಚಟುವಟಿಕೆಯೇ? ಮಕ್ಕಳು ವಾಕ್ಯರಚನೆ ಮಾಡುವ ಮಟ್ಟಕ್ಕೆ ಬೋಧನೆ ಈ ಹಿಂದೆ ನಡೆದಿದೆಯೇ? ಅಲ್ಲದೆ ಎರಡು ವಾಕ್ಯಗಳ ಮೂಲಕ ಉತ್ತರಿಸುವ ಸಾಮರ್ಥ್ಯ ಈಗಾಗಲೇ ಬಂದು ಬಿಟ್ಟಿದೆಯೇ? ಎಂಬುದನ್ನು ತಿಳಿಯಬೇಕಿದೆ. ಈ ಚಟುವಟಿಕೆಯ ಪರಿಣಾಮ ಸಾಮಾನ್ಯವಾಗಿ ವಿದ್ಯಾರ್ಥಿಗಳಿಗೆ ಶಿಕ್ಷಕರು ಹೇಳುತ್ತಾರೆಯೇ? ಎಂಬುದು ಮುಖ್ಯ. ಬಹುತೇಕ ಶಿಕ್ಷಕರು ಪಾಠದಲ್ಲಿ ಗುರುತಿಸಿ ಕೊಡುತ್ತಾರೆ. ಅದನ್ನು ನೋಡಿ ನಕಲು ಮಾಡಿ ಮಕ್ಕಳು ಬರೆಯುತ್ತಾರೆ. ಈ ಚಟುವಟಿಕೆಯಿಂದ ಆಗುವ ಪ್ರಯೋಜನವಿಷ್ಟೆ. ಆದ್ದರಿಂದ ಈ ಚಟುವಟಿಕೆ ಗಳಿಗಿಂತ ಮಕ್ಕಳಿಗೆ ಪಾಠದಲ್ಲಿ ಬಂದಿರುವ ಹ್ರಸ್ವಸ್ವರ, ದೀರ್ಘಸ್ವರ, ಸಜಾತಿ, ವಿಜಾತಿ ಒತ್ತಕ್ಷರಗಳನ್ನು ಪದಾದಿ ಪದಮಧ್ಯ ಪದಂತ್ಯದಲ್ಲಿ ಬರುವ ಎರಡು, ಮೂರು, ನಾಲ್ಕು

ಅಕ್ಷರಗಳ ಪದಗಳನ್ನು ಬರೆಯಿರಿ ಎಂಬ ಚಟುವಟಿಕೆಗಳನ್ನು ಸೇರಿಸಿಕೊಳ್ಳುವುದು ಅಗತ್ಯವೆನಿಸಿದೆ. ಸರಳ ಪದದಿಂದ ಸಂಕೀರ್ಣ ಪದಗಳ ದಾರಿಯಲ್ಲಿ ಪಠ್ಯದುದ್ದಕ್ಕೂ ಕಲಿಸಬೇಕು. ಮೂರನೇ ತರಗತಿಯಿಂದ ಸರಳ ಮತ್ತು ಚಿಕ್ಕ ವಾಕ್ಯಗಳ ಪ್ರಶ್ನೆಗಳನ್ನು ಕೊಟ್ಟು ಉತ್ತರವನ್ನು ಬಯಸುವಂತಾಗಬೇಕು. ೧ ರಿಂದ ೨ನೇ ತರಗತಿಯಲ್ಲಿ ವರ್ಣ ಮತ್ತು ಸರಳ ಪದಗಳ ಪರಿಚಯವಾದಾಗ ಮಕ್ಕಳು ಸಹಜವಾಗಿ ಚಟುವಟಿಕೆಯಲ್ಲಿ ತೊಡಗಿ ಪರಿಣಾಮಕಾರಿಯಾಗಿ ಕಲಿತು ವರ್ಣ ಮತ್ತು ಪದಗಳೆರಡನ್ನು ನೆನಪಿನಲ್ಲಿಡುತ್ತಾರೆ. ಆದ್ದರಿಂದ ೧ ಮತ್ತು ೨ ತರಗತಿಯ ಪಠ್ಯದಲ್ಲಿ ವಾಕ್ಯರಚನೆಗೆ ಸಂಬಂಧಿಸಿದ ಪ್ರಶ್ನೆಗಳನ್ನು ಚಟುವಟಿಕೆಯಲ್ಲಿ ಕೊಡುವುದು ಸೂಕ್ತವಾದ ಕ್ರಮವಲ್ಲ. ಈ ಪಠ್ಯದಲ್ಲಿಯೇ ಮುಂದುವರಿದಂತೆ ಪುಟ ಸಂಖ್ಯೆ ೧೦೧ ರಲ್ಲಿ ಮೈಕೊಪ್ಲಾಸ್ಮಾ ಏನು ಮಾಡಿತು? ಎಂದು ಪ್ರಶ್ನೆ ಮಾಡಲಾಯಿತು. ಮಕ್ಕಳಿಗೆ ಮೈಕೋಪ್ಲಾಸ್ಮಾ ಎಂದರೆ 'ಚಿಕ್ಕಹುಳು' ಎಂದು ಪಾಠದಲ್ಲಿ ಹೇಳಿದೆ. ಈ ಪದಕ್ಕೆ ಸರಿಯಾದ ವಿವರಣೆಯನ್ನು ಅಂದರೆ ಸಮರ್ಪಕವಾಗಿ ದಾಖಲಿಸಿಲ್ಲ. ಅಷ್ಟಕ್ಕೂ ಇಂತಹ ಪದಗಳ ಅಥವಾ ವಾಕ್ಯಗಳ ಬಳಕೆ ಅವಶ್ಯಕತೆಯಾದರು ಏನು? ಮಗು ಈ ಪದವನ್ನಾಗಲಿ, ವಾಕ್ಯವನ್ನಾಗಲಿ ಜ್ಞಾಪಕದಲ್ಲಿಡಲು ಅಸಾದ್ಯ. ಆದ್ದರಿಂದ ಈ ತರಹದ ಪದ ವಾಕ್ಯಗಳನ್ನು ಕಿರಿಯ ಪ್ರಾಥಮಿಕ ಹಂತದ ಪಠ್ಯಗಳಲ್ಲಿನ ಪಾಠ/ಪದ್ಯ ಮತ್ತು ಚಟುವಟಿಕೆಯಿಂದ ಕೈಬಿಡುವುದು ಸೂಕ್ತವೆನಿಸುತ್ತದೆ.

ತರಗತಿ ಮೂರು ಪುಟ–೭೭ರಲ್ಲಿ ಕೊಟ್ಟಿರುವ ರಚನೆಯನ್ನು ಬಳಸಿಕೊಂಡು ಮಾದರಿಯಂತೆ ಪದ ಪುಂಜಗಳನ್ನು ರಚಿಸಿ ಪ್ರಶ್ನೆಗೆ ಉತ್ತರವಾಗಿ ಆವರಣದೊಳಗೆ ಬಲವಂತ, ಶೀಲವಂತ, ಗುಣವಂತ, ಹಣವಂತ, ಬುದ್ದಿವಂತ ಶಕ್ತಿವಂತ, ಧನವಂತ ಮುಂತಾದ ಪದಗಳನ್ನು ಕೊಡಲಾಗಿದೆ. **'ಮಾದರಿಯಲ್ಲಿ ಭೀಮ–ಬಲವಂತ ಅಕ್ಬರ್ ಬುದ್ಧಿವಂತ'** ಎಂದು ದಾಖಲಿಸಲಾಗಿದೆ. ಇಲ್ಲಿ ಗಮನಿಸಬೇಕಾದಂತಹ ಮುಖ್ಯ ಸಂಗತಿ ಎಂದರೆ ಮಕ್ಕಳಿಗೆ ಆಯಾ ಪಾಠದಲ್ಲಿ ಬಲವಂತ ಯಾರು? ಶೀಲವಂತ ಯಾರು? ಬುದ್ದಿವಂತ ಯಾರು? ಬೋಧನೆ ಮಾಡಿದ್ದರೆ ಮಾತ್ರ ಮೇಲಿನ ಮಾದರಿಯ ಪ್ರಶ್ನೆಗೆ ಉತ್ತರಿಸಲು ಸಾಧ್ಯವಿದೆ. ಉಳಿದಂತೆ ಆವರಣದಲ್ಲಿ ನೀಡಿರುವ ಪದಗಳನ್ನು ಯತಾವತ್ತಾಗಿ ದಾಖಲಿಸುವಲ್ಲಿ ಸಂಶಯವಿಲ್ಲ. ಇದರ ಬದಲು 'ಅ' ಪಟ್ಟಿ ಮತ್ತು 'ಬ'ಪಟ್ಟಿ ಒಳಗೆ ವ್ಯಕ್ತಿನಾಮಗಳು ಮತ್ತು ಆಯಾ ವ್ಯಕ್ತಿಯ ವಿಶೇಷಣಗಳನ್ನು ದಾಖಲಿಸಿ ನೀಡಿದರೆ ಮಕ್ಕಳು ಸುಲಭವಾಗಿ ಉತ್ತರಿಸಬಹುದು ಎಂದು ಹೇಳಬಹುದು.

ತರಗತಿ–೪, ಪುಟ–೨೮ ರಲ್ಲಿ ಕೊಟ್ಟಿರುವ ವಾಕ್ಯದಲ್ಲಿ ಗೆರೆ ಹಾಕಿದ ಪದದ ಗುಣ ವಿಶೇಷಣವನ್ನು ಆರಿಸಿ ಬರೆಯಿರಿ ಎಂದಿದೆ.

**ಉದಾಹರಣೆಗೆ** :

* ನಾವು <u>ಹತ್ತು</u> ಜನ ಪ್ರವಾಸಕ್ಕೆ ಹೊರಟೆವು
* <u>ಐದು</u> ಜನ ಪಾಂಡವರಿಗೆ ನೂರು ಜನ ಕೌರವರು ಶತೃಗಳಾಗಿದ್ದರು.

* ಇದು ಅವರಿಗೆ <u>ಎರಡನೆಯ</u> ಮಗು

* ನಮ್ಮ ಸೋದರರಲ್ಲಿ ನಾನು ಒಂದನೆಯವ .................

ಪುಟ ೧೪ರಲ್ಲಿ (ತರಗತಿ-೪) ಸಂಬಂಧಿಸಿದ ಪದಗಳನ್ನು ಬರೆದು ಅದರ ಸಹಾಯದಿಂದ ವಾಕ್ಯ ಮಾಡಿ ಎಂದು ಕೇಳಿದೆ.

**ಮಾದರಿ : ಬಿಲ್ವಿದ್ಯೆ : ಬಾಣ, ಬಿಲ್ಲು, ಏಕಲವ್ಯ, ಅರ್ಜುನ, ದ್ರೋಣಾಚಾರ್ಯ**

* ಏಕಲವ್ಯ ಬಿಲ್ವಿದ್ಯೆ ಕಲಿತು ಅರ್ಜುನನ್ನು ಸೋಲಿಸಿದ

* ದ್ರೋಣಾಚಾರ್ಯ ಏಕಲವ್ಯನ ಗುರು

ಈ ಮೇಲಿನ ಎರಡು ಮಾದರಿಗಳು ಕಿರಿಯ ಪ್ರಾಥಮಿಕ ಪಠ್ಯಗಳ ಚಟುವಟಿಕೆಗಳಲ್ಲಿ ಸೂಕ್ತವೆ ಎಂಬುದನ್ನು ಪರಾಮರ್ಶಿಸುವುದು ಅಗತ್ಯವಿದೆ. ಏಕೆಂದರೆ ಗುಣವಿಶೇಷಣ ಪದವಿ ಶೇಷಣದ ಅರ್ಥ ತಿಳಿಸದೆ ಪಾಠದಲ್ಲಿ ಈ ಪದಗಳನ್ನು ಬಳಸಿದ್ದೇವೆ ಎಂದ ಮಾತ್ರಕ್ಕೆ ಅನುಕೂಲಕ್ಕೆ ತಕ್ಕಂತೆ ಪಾಠದ ಅಭ್ಯಾಸ ಚಟುವಟಿಕೆಯಲ್ಲಿ ಕೇಳುವುದು ಸರಿಯಾದ ಕ್ರಮವೇ ಎಂಬುದನ್ನು ಚರ್ಚಿಸುವ ಅಗತ್ಯತೆ ಇದೆ. ಗುಣ ವಿಶೇಷಣದ ಮೊದಲ ಪ್ರಶ್ನೆಯನ್ನೇ ಗಮನಿಸೋಣ. ಮಕ್ಕಳು ಪಾಂಡವರು ಐದು ಜನ ಕೌರವರು ನೂರು ಜನ ಎಂಬುದನ್ನು ತಿಳಿದಿದ್ದಾರೆಯೇ ಅಥವಾ ಪಾಠಗಳಲ್ಲಿ ಇದರ ಬಗ್ಗೆ ಸರಿಯಾದ ವಿವರವಿದೆಯೆ? ಇಲ್ಲ ಅಲ್ಲಿ ಕೊಟ್ಟಿರುವ ಪಾಠವೇ ಬೇರೆ ಕೇಳಿರುವ ಚಟುವಟಿಕೆಯೇ ಬೇರೆ ಆಗಿದೆ. ಇದೇ ರೀತಿಯಾಗಿ ಸಂಬಂಧವಾಚಕ ಪ್ರಶ್ನೆಗಳನ್ನು ಪುಟ-೧೪ರಲ್ಲಿ ಕೊಟ್ಟಿದೆ.ಮಾದರಿಯಲ್ಲಿ ಅನುಸರಿಸಿ ಸಂಬಂಧವಾಚಕವನ್ನು ನೇರವಾಗಿ ಮಕ್ಕಳಿಗೆ ಹೇಳಿ ಕೊಡುವುದು ಎಷ್ಟೊಂದು ಸಮಂಜಸ ವಾದುದು. ಮೊದಲು ಸಂಬಂಧವಾಚಕ ಶಬ್ದ, ವಾಕ್ಯ, ಪರಿಕಲ್ಪನೆ ಪಾಠ, ಪಠ್ಯದಲ್ಲಿ ನೇರವಾಗಿ ಹೇಳಿಕೊಡಬೇಕು. ಈ ಕ್ರಮ ಕಿರಿಯ ಪ್ರಾಥಮಿಕ ಪಠ್ಯದಲ್ಲಿ ಆಗದು. ಆದ್ದರಿಂದ ಕಿರಿಯ ಪ್ರಾಥಮಿಕ ಪಠ್ಯ ಹಾಗೂ ಪಠ್ಯದ ಚಟುವಟಿಕೆಗಳಲ್ಲಿ ಗುಣವಿಶೇಷಣ ಮತ್ತು ಸಂಬಂಧವಾಚಕ ವಾಕ್ಯಗಳನ್ನು ಈ ತರಗತಿಗಳಲ್ಲಿ ಕೈಬಿಡುವುದು ಸೂಕ್ತವಾದುದು. ಇಲ್ಲಿ ಇದಕ್ಕೆ ಸಂಬಂಧಿಸಿದ ಪದಗಳ ಬಳಕೆಯನ್ನು ಕಲಿಸಬೇಕು. ೪ನೇ ತರಗತಿಯ ಮಕ್ಕಳಿಗೆ ಪಾಠ/ಪದ್ಯದಲ್ಲಿ ಬಂದಿರುವ ಅಥವಾ ಬರುವ ರೀತಿಯಲ್ಲಿ ಪಾಠಗಳನ್ನು, ಚಟುವಟಿಕೆಗಳನ್ನು ರಚಿಸಿ ಸರಳವಾಕ್ಯಗಳ ಮೂಲಕ ತರಗತಿಯ(೪) ಪಠ್ಯಗಳ ಕೊನೆಯ ಅಂಕಣದಲ್ಲಿ ಕಲಿಸು ವಂತಾಗಬೇಕು.

ಕನ್ನಡ ಕಸ್ತೂರಿ-೫ನೇ ತರಗತಿಯ ಪುಟ ಸಂಖ್ಯೆ ೪೦ರಲ್ಲಿ ಅನ್ಯಲಿಂಗ ಪದ ಬಳಸಿ ವಾಕ್ಯ ಬದಲಿಸಿ ಎಂಬ ಪ್ರಶ್ನೆಯನ್ನು ಕೇಳಲಾಗಿದೆ. ಕನ್ನಡದಲ್ಲಿ ಲಿಂಗವನ್ನು ಗುರುತಿಸುವ ಪ್ರಕ್ರಿಯೆ ತುಂಬಾ ಸುಲಭ ಮಾಡಬೇಕಾದಂತಹ ಸಂದರ್ಭದಲ್ಲಿ ಸಂಕೀರ್ಣಗೊಳಿಸುವುದು

ಆಶ್ಚರ್ಯವೆನಿಸಿದೆ. 'ಅನ್ಯಲಿಂಗ' ಎಂದರೆ ಕನ್ನಡಭಾಷೆಗೆ 'ಅನ್ಯಲಿಂಗವೋ' ಕನ್ನಡದೊಳಗೆ ಇರುವ ಮೂರು ಲಿಂಗದಲ್ಲಿ ಯಾವುದು 'ಅನ್ಯಲಿಂಗವೋ' ಎಂಬ ಪ್ರಶ್ನೆ ಎದುರಾಗುತ್ತದೆ. ಆದ್ದರಿಂದ ಮಕ್ಕಳಿಗೆ ನೇರವಾಗಿ ಕೆಳಗಿನ ವಾಕ್ಯಗಳಲ್ಲಿ ಲಿಂಗ ಬದಲಾಯಿಸಿ ಎಂದು ಸರಳವಾಗಿ ಪ್ರಶ್ನೆಯನ್ನು ಕೇಳಬಹುದೇನೋ ಎಂದೆನಿಸುತ್ತದೆ.

ತರಗತಿ ೬ ಪುಟ ಸಂಖ್ಯೆ೪೮ರಲ್ಲಿ ಒಂದು/ಪದ ವಾಕ್ಯದಲ್ಲಿ ಉತ್ತರ ಬರೆಯಿರಿ ಎಂದು ಪ್ರಶ್ನೆಯನ್ನು ಕೇಳಲಾಗಿದೆ. ಉದಾಹರಣೆಗೆ : ಸ್ಕೌಟ್ಸ್–ಗೈಡ್ಸ್‌ಗಳಿಗೆ ತಮ್ಮ ಮಕ್ಕಳನ್ನು ಸೇರಿಸಲು ತಂದೆ ತಾಯಿಯವರಿಗೆ ಏಕೆ ಮನಸ್ಸಾಯಿತು? ಎಂಬ ಪ್ರಶ್ನೆಗೆ ಒಂದು ಪದ ವಾಕ್ಯದಲ್ಲಿ ಉತ್ತರ ನಿರೀಕ್ಷಿಸಲಾಗಿದೆ. ಆದರೆ ಇದಕ್ಕೆ ಉತ್ತರ ಒಂದು ಸರಳ ವಾಕ್ಯದಿಂದ ಸಾಧ್ಯವೇ ಇಲ್ಲ.

ಒಂದು ಪದದಿಂದ ಉತ್ತರವನ್ನು ನಿರೀಕ್ಷಿಸುವ ಕ್ರಮದಿಂದ ಮಕ್ಕಳನ್ನು ಒಂದು ವಾಕ್ಯರಚನೆ ಮಾಡಲು ಅಥವಾ ಸಂಪೂರ್ಣವಾಗಿ ಸರಳ ವಾಕ್ಯ ಮಾಡಲು ಉತ್ತೇಜನ ನೀಡುವುದಿಲ್ಲ. ಈ ಸಮಸ್ಯೆಯನ್ನು ಮತ್ತೊಂದು ಸರಳ ಪ್ರಶ್ನೆಯಿಂದ ಅರ್ಥ ಮಾಡಿಕೊಳ್ಳ ಬಹುದಾಗಿದೆ. **ಉದಾಹರಣೆಗೆ : ಭಾರತದೇಶದ ಪ್ರಧಾನಮಂತ್ರಿ ಯಾರು?** ಎಂಬ ಪ್ರಶ್ನೆಗೆ ಉತ್ತರವನ್ನು ಒಂದು ಪದದಲ್ಲಿ ಮಾತ್ರ ಮೌಲ್ಯಮಾಪನ ಮಾಡಲಾಗುತ್ತಿದೆ. ಈ ವಿಧಾನದಿಂದ ಮಕ್ಕಳ ಪದಕೋಶವನ್ನು ಪರೀಕ್ಷೆ ಮಾಡುತ್ತಿದ್ದೇವೆ. ಈ ವಿಧಾನದಿಂದ ಮಕ್ಕಳ ಪದಕೋಶವನ್ನು ಪರೀಕ್ಷೆ ಮಾಡುತ್ತಿದ್ದೇವೆ. ಹೊರತು ವಾಕ್ಯರಚನೆಯನ್ನಲ್ಲ. ಅಂದರೆ ಭಾರತ ದೇಶದ ಪ್ರಧಾನಮಂತ್ರಿ ಡಾ.ಮನಮೋಹನಸಿಂಗ್ ಎಂದು ಒಂದು ಪೂರ್ಣ ವಾಕ್ತದಲ್ಲಿ ನಿರೀಕ್ಷಿಸಿದರೆ ಮಕ್ಕಳಿಗೆ ವಾಕ್ಯರಚನೆಯನ್ನು ಪರಿಕ್ಷಿಸಿದಂತೆ ಸರಿ. ಅದನ್ನು ಬಿಟ್ಟು ಕೇವಲ ಡಾ. ಮನಮೋಹನಸಿಂಗ್ ಎಂದು ಒಂದು ಪದದಿಂದ ಒಂದು ವಾಕ್ಯರಚನೆಯ ಉತ್ತರ ಎಂದು ಪರಿಗಣಿಸುವುದು ಸರಿಯಾದ ಕ್ರಮವಲ್ಲ ಎಂದೆನಿಸುತ್ತದೆ. ಇದರ ಬಗ್ಗೆ ಮತ್ತಷ್ಟು ಚರ್ಚೆ ಬೆಳೆಸಬಹುದಾಗಿದೆ. ನಮ್ಮ ಶಿಕ್ಷಣ ಪದ್ಧತಿಯಲ್ಲಿ ಮೂರು–ನಾಲ್ಕು ವಾಕ್ಯದಲ್ಲಿ ಉತ್ತರ ಬರೆಯಿರಿ ಎಂಬ ಪ್ರಶ್ನೆಯ ಸ್ಥಿತಿಯು ಇದೇ ರೀತಿ ಇದೆ ಎಂದೆನಿಸುತ್ತದೆ.

**ಉದಾಹರಣೆಗೆ** : ತರಗತಿ–೪ ರಲ್ಲಿ ಪುಟ ಸಂಖ್ಯೆ ೪೯ರಲ್ಲಿ ಕೊಟ್ಟಿರುವ ವಾಕ್ಯಗಳನ್ನು ಗಮನಿಸಿ ಎಂದು ಕೊಡಲಾಗಿದೆ. ಅವುಗಳು ಇಂತಿವೆ.

* ರಾಜ ಮರದ ನೆರಳಲ್ಲಿ ವಿಶ್ರಾಂತಿ ಪಡೆಯುತ್ತಾನೆ
* ರಾಜ ಮರದ ನೆರಳಿನಲ್ಲಿ ವಿಶ್ರಾಂತಿ ಪಡೆದನು.
* ರಾಜ ಮರದ ನೆರಳಲ್ಲಿ ವಿಶ್ರಾಂತಿ ಪಡೆಯುವನು ಎಂದಿದೆ.

ಈ ವಾಕ್ಯಗಳು ಕಾಲಸೂಚಕವನ್ನು ತಿಳಿಸುವ ವಾಕ್ಯಗಳಾಗಿವೆ. ಈ ತರಗತಿಯ ಮಕ್ಕಳು ಈ ಚಟುವಟಿಕೆಯಲ್ಲಿ ತೊಡಗುವರೇ, ತೊಡಗಿದರು ಇದರ ಬಗ್ಗೆ ಹಿಂದಿನ ಪಠ್ಯ

ಅಥವಾ ಪಾಠಗಳಲ್ಲಿ ತಿಳಿದುಕೊಂಡಿದ್ದಾರೆಯೇ, ಇಲ್ಲ ಈ ತರಹದ ವಿವರಣೆಗೆ ಎಲ್ಲಿ ಅವಕಾಶ ಮಾಡಿಕೊಟ್ಟಿಲ್ಲ. ಮಾಡಿಕೊಟ್ಟರೂ ಚಟುವಟಿಕೆಯಲ್ಲಿ ಮಾತ್ರ, ಅದು ನೇರವಾಗಿ ಎಲ್ಲಿ ಕಲಿಸಿಕೊಟ್ಟಿಲ್ಲ. ಕೊಟ್ಟರೂ ಹಿರಿಯ ಪ್ರಾಥಮಿಕ ಮಕ್ಕಳಿಗೆ ಈ ವ್ಯಾಕರಣದ ಅಂಶಗಳು ಪರಿಭಾಷೆ ಅರ್ಥವಾಗದು. ಆದ್ದರಿಂದ ಈ ತರಹದ ವ್ಯಾಕರಣಾಂಶಗಳು ಏನಿದ್ದರೂ ಹಿರಿಯ ಪ್ರಾಥಮಿಕ ಪಠ್ಯಗಳಲ್ಲಿ ಸರಳತೆಯಿಂದ ಕಲಿಸುವುದು ಸೂಕ್ತವೆನಿಸುತ್ತದೆ.

ಕನ್ನಡಕಸ್ತೂರಿ-೬ನೇ ತರಗತಿಯ ಪಠ್ಯ ಪುಸ್ತಕ ಪುಟ ಸಂಖ್ಯೆ ೮೧ರಲ್ಲಿ ಕೊಟ್ಟಿರುವ ವಾಕ್ಯಗಳನ್ನು ಗ್ರಾಂಥಿಕ ರೂಪದಲ್ಲಿ ಬರೆಯಿರಿ ಎಂದು ಕೇಳಲಾಗಿದೆ. ಆ ವಾಕ್ಯಗಳು ಇಂತಿವೆ.

* ಬರ್ರಿ ಬಾಯಾರ ಬರ್ರೀ, ಚೂಡಾ ತಿಂದು ಚಾ ಕುಡೀರೆಲ.

* ಅಮ್ಮಾವ್ರ ರೊಟ್ಟಿ ಕಾಳು ತಿನ್ರಿ, ಕೆನಿ ಮೊಸರು ಐತ್ರೀ, ....ಈ ಮಾದರಿಯ ಪ್ರಶ್ನೆಯ ಮುಖ್ಯ ಉದ್ದೇಶ ಮಕ್ಕಳಿಗೆ ಪ್ರಾದೇಶಿಕ ರೂಪಗಳನ್ನು ಪರಿಚಯ ಮಾಡಿಸುವುದಾಗಿದೆ. ಜೊತೆಗೆ ಆಡುಮಾತಿನ ರೂಪಗಳನ್ನು ಬರಹಕ್ಕೆ ತರುವ ಪ್ರಯತ್ನವು ಸಹ ನಡೆದಿದೆ. ಇಂತಹ ಪ್ರಯತ್ನ ಮಕ್ಕಳ ಕಲಿಕೆಗೆ ಪೂರಕವಾಗಿರಬೇಕೆ ವಿನಃ ಮಾರಕವಾಗಿರಬಾರದು. ಕಾರಣ ಕರ್ನಾಟಕದಲ್ಲಿರುವ ಹಿರಿಯ ಪ್ರಾಥಮಿಕ ಶಾಲೆಯ ಮಕ್ಕಳೆಲ್ಲರೂ ಒಂದೇ ಪ್ರದೇಶದಲ್ಲಿ ವಾಸಿಸುವುದಿಲ್ಲ. ಜೊತೆಗೆ ಒಂದೇ ಸಾಮಾಜಿಕ ವರ್ಗಕ್ಕೂ ಸೇರಿರುವುದಿಲ್ಲ. ಇಂತಹ ವೈವಿಧ್ಯತೆಯಿಂದ ಕೂಡಿರುವ ಮಕ್ಕಳಿಗೆ ಏಕಪ್ರಕಾರದ ಉತ್ತರವನ್ನು ನಿರೀಕ್ಷಿಸುವುದು ಎಷ್ಟು ಸಮಂಜಸ ಎಂಬುದನ್ನು ಅಧ್ಯಯನಕ್ಕೊಳಪಡಿಸಿದೆ. ಏಕೆಂದರೆ ಪಠ್ಯದೊಳಗಿನ ಪ್ರಾದೇಶಿಕ ರೂಪವಿರುವ ಪಾಠವನ್ನು ಅಳವಡಿಸಿದರೆ ಸೂಕ್ತವೆನಿಸುತ್ತದೆ. ಅಲ್ಲದೆ ಪಾಠದೊಳಗೆ ಬರುವ ಪ್ರಾದೇಶಿಕ ರೂಪಗಳನ್ನು ಪಟ್ಟಿ ಮಾಡಿ ಅವುಗಳಿಗೆ ಪರ್ಯಾಯವಾಗಿ ಬರಹ ರೂಪವನ್ನು ಕಲಿಸಬೇಕಾದ ಜವಾಬ್ದಾರಿ ಶಿಕ್ಷಕರ ಮೇಲಿದೆ. ಈಗಾದಾಗ ಮಾತ್ರ ಈ ಮಾದರಿ ಪ್ರಶ್ನೆಗೆ ಉತ್ತರ ನಿರೀಕ್ಷಿಸುವುದು ಸರಿಯಾದ ಕ್ರಮ ಎಂದೆನಿಸುತ್ತದೆ. ಇಲ್ಲವೆಂದರೆ ಹೊರಗಡೆಯಿಂದ ಪ್ರಶ್ನೆಯನ್ನು ಕೇಳಿದರೆ ಮಕ್ಕಳ ಕಲಿಕೆಗೂ ಕಷ್ಟವಾಗುತ್ತದೆ. ಜೊತೆಗೆ ಮೌಲ್ಯಮಾಪಕರಿಗೂ ಬೋಧನೆ ಮಾಡುವವರಿಗೂ ಸುಲಭವೆನಿಸಲಾರದು.

ಪಾಠದಲ್ಲಿರುವಂತೆ ವಾಕ್ಯ ಸರಿಪಡಿಸಿ ಎಂದು ತರಗತಿ ಏಳು ಪುಟಸಂಖ್ಯೆ-೬೫ರಲ್ಲಿ ಕೇಳಲಾಗಿದೆ. ಈ ಒಂದು ವಿಧಾನ ಸರಳವಾಗಿದೆ. ಏಳನೇ ತರಗತಿ ಮಕ್ಕಳಿಗೆ ಕಲಿಸುವ ಚಟುವಟಿಕೆ ಅಲ್ಲ ಎಂದೆನಿಸುತ್ತದೆ. ಏಕೆಂದರೆ ಮಕ್ಕಳು ಈಗಾಗಲೆ ವಾಕ್ಯರಚನೆ ಮಾಡುವ ವಿಧಾನ ಕಲಿತಿರುತ್ತಾರೆ. ಆದ್ದರಿಂದ ಈ ಚಟುವಟಿಕೆ ಕಿರಿಯ ಪ್ರಾಥಮಿಕ ಪಠ್ಯಗಳಿಗೆ ಕೊನೆಗೊಳ್ಳುವುದು ಸೂಕ್ತವಾದ ಕ್ರಮ ಎಂದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಏಳನೇ ತರಗತಿಯ ಪಠ್ಯದಲ್ಲಿ (ಪುಟಸಂಖ್ಯೆ -೧೨೭) ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ ಎಂದು ಹೇಳಲಾಗಿದೆ. ಆ ಪ್ರಶ್ನೆಗಳು ಇಂತಿವೆ.

* ಆಫೀಸರ್ ಪರ್ಸ್ ಎಲ್ಲಿತ್ತು?

* ಇಂಟರ್‌ನೇಟ ಎಂದರೇನು?

* ಆಲ್ ಇಂಡಿಯಾ ರೇಡಿಯೊ ಯಾವಾಗ ಆರಂಭವಾಯಿತು.(ಪು.ಸಂ ೯೩ಿತರಗತಿ-೬) ಈ ಪ್ರಶ್ನೆಗಳಲ್ಲಿನ ಪದಗಳನ್ನು ಗಮನಿಸಿದಾಗ ಕನ್ನಡ ಪದಗಳ ಬಳಕೆಯ ಮೂಲಕ ವಾಕ್ಯ ರಚನೆಯಾಗದೆ. ಇಂಗ್ಲೀಶ್ ಪದಗಳಿಂದ ವಾಕ್ಯರಚನೆ ಮಾಡಲಾಗಿದೆ. ಈ ವಾಕ್ಯದಲ್ಲಿ ಬಂದ ಪದಗಳಿಗೆ ಕನ್ನಡ ಪದಗಳಿಲ್ಲವೆ! ಇದೆ. ಈ ರೀತಿ ಕೊಡಲು ಪಾಠಗಳಲ್ಲಿಯೂ ಈ ಪದಗಳು ಬಳಕೆಯಾಗಿರುವುದರಿಂದ ನೇರವಾಗಿ ಆ ಪದಗಳನ್ನೇ ಬಳಸಿಕೊಂಡು ವಾಕ್ಯ ರಚನೆ ಮಾಡಿದೆ. ಈ ಕ್ರಮ ಎಷ್ಟೊಂದು ಸಮಂಜಸ ಎಂಬುದನ್ನು ಯೋಚಿಸಬೇಕಾಗಿದೆ. ಕನ್ನಡ ಪದಗಳಿದ್ದು ಇಂಗ್ಲೀಶ್ ಪದಗಳನ್ನು ಬಳಸಿ ವಾಕ್ಯ ರಚನೆ ಮಾಡುವ ಅಗತ್ಯತೆಯಾದರೂ ಏನು? ಎಂಬುದನ್ನು ಪಠ್ಯಪುಸ್ತಕ ರಚನಾ ಸಮಿತಿ ಪರಾಮರ್ಶಿಸುವ ಅಗತ್ಯತೆ ಇದೆ.

ಆಧುನಿಕ ಚಿಂತನೆಯಲ್ಲಿ ಧ್ವನಿಯಾಗಿರಬಹುದು, ಪದವಾಗಿರಬಹುದು ಮತ್ತು ವಾಕ್ಯವಾಗಿರಬಹುದು. ಇವುಗಳು ಮಕ್ಕಳ ಸಾಮಾಜಿಕ ಪರಿಸರದಲ್ಲಿ ಬಳಕೆಯಾಗುವ ರೂಪಗಳನ್ನು ಶಾಲೆಯ ಆವರಣದಲ್ಲಿ ಕಲಿಕೆಗೆ ಅವಕಾಶ ಮಾಡಿಕೊಟ್ಟರೆ ಮಕ್ಕಳ ಕಲಿಕೆ ಪರಿಣಾಮಕಾರಿಯಾಗುವುದರಲ್ಲಿ ಸಂಶಯವಿಲ್ಲ. ಸದ್ಯದ ಪರಿಸ್ಥಿತಿಯಲ್ಲಿ ಕನ್ನಡಭಾಷೆಯಲ್ಲಿ ಆಡುಮಾತಿನ ಮತ್ತು ಬರಹದ ನಡುವಿನ ಅಂತರ ಹೆಚ್ಚಾಗಿದೆ. ಈ ಹಿನ್ನೆಲೆಯಿಂದ ಕನ್ನಡ ಸರಳ ವಾಕ್ಯ ರಚನೆ ಆಡು ಮಾತಿನ ಸರಳ ವಾಕ್ಯರಚನೆಗಿಂತ ಭಿನ್ನವಾಗಿದೆ. ಮಕ್ಕಳು ಅವರವರ ಸಾಮಾಜಿಕ ಪರಿಸರದಲ್ಲಿ ಬಳಕೆಯಾಗುವ ವಾಕ್ಯ ಮಾದರಿಗಳನ್ನು ಶಾಲಾ ಆವರಣದಲ್ಲಿ ಪರಿಗಣಿಸದಿದ್ದರೆ ಈ ಸಮಸ್ಯೆ ಸಮಸ್ಯೆಯಾಗಿಯೇ ಉಳಿಯುವುದರಲ್ಲಿ ಯಾವ ಅನುಮಾನವಿಲ್ಲವೆಂದು ಈ ಪಠ್ಯಗಳಿಂದ ಸ್ಪಷ್ಟವಾಗುತ್ತದೆ.

ಒಟ್ಟಾರೆ ಇಂತಹ ಸಮಸ್ಯೆಗಳನ್ನು ಹೊರತುಪಡಿಸಿದರೆ ಉಳಿದಂತೆ ಕಿರಿಯ/ಹಿರಿಯ ಪ್ರಾಥಮಿಕ ಪಠ್ಯಪುಸ್ತಕಗಳು ವಿದ್ಯಾರ್ಥಿಗಳ ವಯೋಮಾನವನ್ನು ಗಮನದಲ್ಲಿಟ್ಟುಕೊಂಡು ಭಾಷಾ ಚಟುವಟಿಕೆಗಳನ್ನು ಭಾಷಾಭ್ಯಾಸವನ್ನು ಭಾಷಾಶಾಸ್ತ್ರದ ಹಿನ್ನೆಲೆಯಿಂದ ರಚನೆಯಾಗಿದೆ. ಏಕೆಂದರೆ ಪಠ್ಯಪುಸ್ತಕ ರಚನಾ ಸಮಿತಿಯೊಳಗೆ ಭಾಷಾ ವಿಜ್ಞಾನಿಗಳು ಕಾರ್ಯ ನಿರ್ವಹಿಸಿದ್ದಾರೆ. ಈ ಹಿನ್ನೆಲೆಯಿಂದ ವಿದ್ಯಾರ್ಥಿಗಳು ಓದಿ ಅಲ್ಲೇ ಬರೆಯುವುದಕ್ಕೆ ಅವಕಾಶ ಕಲ್ಪಿಸಲಾಗಿದೆ. ಬೋಧನೆ ಮತ್ತು ಕಲಿಕೆಯಲ್ಲಿ ಕ್ರಿಯಾಶೀಲಗೊಳಿಸುವ ದೃಷ್ಟಿಯಿಂದ ಓದಿ-ತಿಳಿ ಗಮನಿಸಿ ತಿಳಿ, ಅಭ್ಯಾಸ, ಅಭ್ಯಾಸಚಟುವಟಿಕೆ, ಭಾಷಾಭ್ಯಾಸ ಭಾಷಾಭ್ಯಾಸ ಚಟುವಟಿಕೆ, ಹಿಮಮಣಿ ಮತ್ತು ಅರ್ಥಸಹಿತ ಪದಕೋಶ ಇತ್ಯಾದಿ ವೈವಿದ್ಯತೆಯಿಂದ ಕನ್ನಡದ ಕಿರಿಯ ಮತ್ತು ಹಿರಿಯ ಕನ್ನಡಭಾಷಾ ಪಠ್ಯಪುಸ್ತಕಗಳು ಕಲಿಕೆಗೆ ಪರಿಣಾಮಕಾರಿಯಾಗಿವೆ ಎಂಬುದು ಅಧ್ಯಯನದಿಂದ ತಿಳಿದು ಬರುತ್ತದೆ.

**೬.೪. ಪ್ರಾಥಮಿಕ ಕನ್ನಡಭಾಷಾ ಪಠ್ಯಗಳಲ್ಲಿನ ಅರ್ಥಸಹಿತ ಪದಕೋಶಿಯ ವಿಶ್ಲೇಷಣೆ**

ಇದು ಮಕ್ಕಳ ಪದಕೋಶ ಅಭಿವೃದ್ಧಿಗೆ ಪೂರಕವಾದ ಭಾಗವಾಗಿದೆ. ಇಷ್ಟೇ ಅಲ್ಲದೆ ಪ್ರಸ್ತುತ ಪಾಠ/ಪದ್ಯದಲ್ಲಿ ಹೊಸ ಪದಗಳ ಅರ್ಥ ಕೊಡಲಾಗಿದೆ. ಅವುಗಳನ್ನೇ ಇಲ್ಲಿ 'ಅ'ಕಾರಾದಿಯಾಗಿ ಜೋಡಿಸಿ ಪ್ರತಿಪುಸ್ತಕದ ಕೊನೆಭಾಗದಲ್ಲಿ ನೀಡಿವುದನ್ನು ಕಾಣುತ್ತೇವೆ. ಈ ಅರ್ಥಸಹಿತ ಪದಕೋಶಿಯಿಂದ ಮಕ್ಕಳು ಪಠ್ಯದಲ್ಲಿ ಬಂದಿರುವ ಪದಗಳ ಅರ್ಥವನ್ನು ಸುಲಭವಾಗಿ ತಿಳಿದುಕೊಳ್ಳಲು ಸಹಾಯಕವಾಗಿದೆ. ಈ ಅರ್ಥಸಹಿತ ಪದಕೋಶಿಯಲ್ಲಿ ತರಗತಿಗಳ ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿ ಕೊಡಲಾಗಿದೆ ಎಂದು ಹೇಳಲಾಗಿದೆ. ಆದರೆ ಇಲ್ಲಿ ಕೊಟ್ಟಿರುವ ಪದಗಳೆಲ್ಲವು ಮಕ್ಕಳ ಸಾಮಾಜಿಕ ಸಂವಹನದಲ್ಲಿ ಎಷ್ಟರಮಟ್ಟಿಗೆ ಬಳಕೆಯಲ್ಲಿವೆ ಎಂಬುದನ್ನು ತಿಳಿಯಬೇಕಿದೆ. ಮಗು ಕಲಿತ ಪದ ಸಂವಹನದಲ್ಲಿ ಬಳಸುತ್ತಿದ್ದರೆ ಸರಿಯಾದ ಕ್ರಮವೆಂದು ಹೇಳಬಹುದು. 'ಐ' ಎಂಬ ಒಂದು ವರ್ಣವನ್ನು ಪರಿಚಯಿಸಲು ನಾವು ಮೊದಲು 'ಐದು' ಎಂಬ ಸಂಖ್ಯಾ ಪದವನ್ನು ಕೊಟ್ಟು ಕಲಿಕೆಗೆ ಅವಕಾಶ ಮಾಡಿಕೊಟ್ಟಿರುವುದನ್ನು ಕಾಣುತ್ತೇವೆ. ೧೯೮೬ರಲ್ಲಿನ ಪಠ್ಯಪುಸ್ತಕ ರಚನಾ ಸಮಿತಿಯವರು ಪಠ್ಯದಲ್ಲಿ 'ಐ' ವರ್ಣವನ್ನು ಪರಿಚಯಿಸುವ ಮಾದರಿಯನ್ನು ಬದಲಾಯಿಸಿರುವುದನ್ನು ಕಾಣುತ್ತೇವೆ. ಈಗ 'ಐ' ವರ್ಣವನ್ನು ಪರಿಚಯಿಸಲು 'ಐದಳ' ಪದದ ಅರ್ಥ ಐದು ಹೂವಿನ ಎಸಳು ಎಂದಾಗುತ್ತದೆ. ಈ ಪದದ ಬಳಕೆ ಮಗು ಹಿಂದೆ ಎಂದಾದರು ಸಾಮಾಜಿಕ ಸಂವಹನದಲ್ಲಿ ಬಳಸಿದೆಯೇ ಎಂಬುದನ್ನು ತಿಳಿಯಬೇಕಾಗಿದೆ ಅಥವಾ ಮುಂದೆ ಎಂದಾದರು ಈ ಪದದ ಬಳಕೆಯಾಗಬಲ್ಲದೆ? ಸಮಾಜದಲ್ಲಿ ಎಂಬುದನ್ನು ತಿಳಿದು ಕಲಿಸುವುದು ಅಗತ್ಯವೆನಿಸುತ್ತದೆ. ತಿಳುವಳಿಕೆಯ ಪ್ರಕಾರ ಈ ಪದದ ಬಳಕೆ ಈ ಪಠ್ಯದಲ್ಲಿ ಬಿಟ್ಟರೆ ಬೇರೆಲ್ಲೂ ಕಾಣಿಸುವುದಿಲ್ಲ. ಕಾಣಿಸಿಕೊಂಡರೂ ಸೃಜನಶೀಲ ಬರಹಗಳಲ್ಲಿ ಇದ್ದರೂ ಇರಬಹುದು. ಇಂತಹ ಪದಗಳ ಬಳಕೆ ಎಲ್ಲಾ ಪಠ್ಯಗಳಲ್ಲಿ ಕಾಣತೇವೆ. ಇಂತಹ ಪದಗಳಿಂದ ಪದದ ಅಭಿವೃದ್ಧಿಯಾಗುತ್ತದೆಯೇ ಎಂಬುದನ್ನು ಯೋಚಿಸಬೇಕಿದೆ. ಹಾಗಾದರೆ 'ಐ' ವರ್ಗ ಪಠ್ಯದಲ್ಲಿ ಕಲಿಸುವುದಾದರೂ ಹೇಗೆ ? ಎಂಬ ಪ್ರಶ್ನೆ ಬರಬಹುದು. ಇದಕ್ಕೆ 'ಐ' ಗೆ ಐದುನೂರು ಎಂಬ ಪದವನ್ನು ಕಲಿಕೆಯ ಸಂದರ್ಭದಲ್ಲಿ ಬಳಸಬಹುದು. ಇದು ಸರಳವಾಗುತ್ತದೆ. ಏಕೆಂದರೆ ಇಂದಿನ ಮಕ್ಕಳಲ್ಲಿ ಈ ಪದದ ಬಳಕೆಯನ್ನು ಸಾಮಾಜಿಕ ಸಂವಹನದ ಸಂದರ್ಭದಲ್ಲಿ ಹಲವು ಬಾರಿ ಕೇಳಿರುತ್ತಾರೆ. ಇದರಿಂದ ಕಲಿಕೆ ಸುಲಭವಾಗುತ್ತದೆ. ಇದೇ ರೀತಿಯಾಗಿ ಔಜಸ ಎಂಬ ಇತ್ಯಾದಿ ಪದ ಕೊಟ್ಟಿರುವುದನ್ನು ಕಾಣುತೇವೆ.

ಈ ಅರ್ಥಸಹಿತ ಪದಕೋಶಿ ಮಕ್ಕಳ ಸಾಮರ್ಥ್ಯಕ್ಕೆ ಮತ್ತು ಸರಳ ಪದಗಳನ್ನು ಕಲಿಸುತ್ತಿದೆಯೇ ಎಂಬುದನ್ನು ಮನಗಾಣಬೇಕಿದೆ. ಒಂದನೇ ತರಗತಿಯಲ್ಲಿನ ಪದಕೋಶಿ ಭಾಗವನ್ನು ಗಮನಿಸಿದಾಗ ಕೆಲವೊಂದು ಸಂದರ್ಭದಲ್ಲಿ ಕ್ಲಿಷ್ಟವಾದ ಪದಗಳನ್ನು ಬಳಸಲಾಗಿದೆ. **ಉದಾಹರಣೆಗೆ** : ಷಟ್, ಪರ್ಣ ಇತ್ಯಾದಿ ಈ ಪದಗಳ ಅರ್ಥವನ್ನು ಕೊಟ್ಟಿರುವುದನ್ನು ಕಾಣುತ್ತೇವೆ. ಈ ಪದಗಳನ್ನು ಮಗು ಕಲಿಯುವ ಸ್ಥಿತಿಯಲ್ಲಿ ಇದೆಯೇ ಎಂಬುದನ್ನು ಯೋಚಿಸಬೇಕಿದೆ. ಒಂದು ಪಕ್ಷ ಸಿದ್ದವಿದ್ದರು ಆ ಪದಗಳನ್ನು ಕಲಿಯುವ ಮಕ್ಕಳ ಸಂಖ್ಯೆಯ ಪ್ರಮಾಣವೆಷ್ಟು ಎಂಬುದನ್ನು ಯೋಚಿಸುವ ಅಗತ್ಯ ತುಂಬಾ ಇದೆ. ಈ

ತರಗತಿಯ ಪಠ್ಯದ ಶಿರೋನಾಮೆಯಂತೆ ಕಲಿ-ನಲಿ ಪದಕೋಶಗಳಿಗೆ ಒಳ್ಳೆಯದು. ಏಕೆಂದರೆ ಕಲಿಕೆ ಶಾಶ್ವತವಾಗಿ ಉಳಿಯಬೇಕಾದರೆ ಈ ವಿಧಾನದಲ್ಲಿ ಸರಳ ಪದಗಳ ಬಳಕೆ ಅನಿವಾರ್ಯವೆಂದು ಹೇಳಬಹುದು.

೨ನೇ ತರಗತಿಯ ಪಠ್ಯದಲ್ಲಿ ಪದಕೋಶಿಯನ್ನು ಮಾತ್ರ ಕೂಡಲಾಗಿದೆ. ಇಲ್ಲಿ ಪದಗಳಿಗೆ ಅರ್ಥವನ್ನು ಕೊಟ್ಟಿಲ್ಲ. ಇದು ಒಂದು ಒಳ್ಳೆಯ ವಿಧಾನವೆಂದರೆ ಹೇಳಬೇಕು ಏಕೆಂದರೆ ಮೊದಲು ಪದಕೋಶಿ ಮಕ್ಕಳಲ್ಲಿ ಸಂಗ್ರಹವಾಗಬೇಕು ನಂತರ ಅವುಗಳ ಬಳಕೆಯ ಸಂದರ್ಭಾನುಸಾರ ಮಕ್ಕಳು ಪದದ ಅರ್ಥವನ್ನು ತಿಳಿಯುತ್ತಾರೆ. ಆದ್ದರಿಂದ ಒಂದನೇ ತರಗತಿಯಲ್ಲೂ ಸರಳಪದಗಳ ಅಂದರೆ ಅವರ ಪರಿಸರದಲ್ಲಿನ ಬಳಕೆಯ ಪದಕೋಶಿಯನ್ನು ಕಲಿಸುವುದು ಒಳ್ಳೆಯದು. ಮಕ್ಕಳ ಮನಸಿಕ ಸಾಮರ್ಥ್ಯ ಒಂದನೆ ತರಗತಿಯಲ್ಲಿ ಸಾಮಾನ್ಯ ವಾಗಿರುವುದರಿಂದ ಅರ್ಥಸಹಿತ ಪದಕೋಶಿ ಸಂಗ್ರಹ ಸರಳವಾಗಿದ್ದರೆ ಒಳ್ಳೆಯದೆನಿಸುತ್ತದೆ. ಈ ವಿಧಾನವನ್ನು ೧ರಿಂದ ೩ನೇ ತರಗತಿಯ ಮಕ್ಕಳಿಗು ಅನುಸರಿಸಲಾಗಿದೆ. ನಂತರ ೪, ೫, ೬, ೭ನೇ ತರಗತಿಯ ಮಕ್ಕಳಗೆ ಪದದ ವಿವಿಧ ಅರ್ಥವನ್ನು ಸರಳತೆಯಿಂದ ವಿಶಿಷ್ಟತೆಯ ಅನುಪಾತದಡಿಯಲ್ಲಿ ಅರ್ಥಸಹಿತ ಪದಕೋಶಿಯನ್ನು ಗ್ರಹಿಸುವ ಜ್ಞಾನ ಮಕ್ಕಳಿಗೆ ಇರುತ್ತದೆ ಎಂದೆನಿಸುತ್ತದೆ. ಆದ್ದರಿಂದ ಈ ಅರ್ಥಸಹಿತ ಪದಕೋಶಿಯ ಬಗ್ಗೆ ಪಠ್ಯಪುಸ್ತಕ ರಚನಾ ಸಮಿತಿ ಪರಾಮರ್ಶಿಸುವ ಅಗತ್ಯತೆ ತುಂಬಾ ಇದೆ ಎಂದೆನಿಸುತ್ತದೆ.

• • •

## ಅಧ್ಯಾಯ : ಏಳು

# ಪ್ರಚಲಿತ ಪ್ರಾಥಮಿಕ ಶಿಕ್ಷಣ ವ್ಯವಸ್ಥೆ

## ಅಧ್ಯಾಯ : ಏಳು

# ಪ್ರಚಲಿತ ಪ್ರಾಥಮಿಕ ಶಿಕ್ಷಣ ವ್ಯವಸ್ಥೆ

ಭಾಷೆ ಮತ್ತು ಶಿಕ್ಷಣದ ಸಂಬಂಧ ತಾತ್ವಿಕ ನೆಲೆಯಲ್ಲಿ ರೂಪಿತವಾಗಿದೆ. ಶಿಕ್ಷಣದಲ್ಲಿ ಭಾಷೆ ಎಂದರೆ ಹಲವು ಆಯಾಮಗಳಲ್ಲಿ ಬಳಕೆಯಾಗುವ ಸಾಧ್ಯತೆಯ ಕ್ರಮ. ಅಂದರೆ ಭಾಷಾ ಬೋಧನೆ, ಭಾಷಾ ಕಲಿಕೆ ಮತ್ತು ಶಿಕ್ಷಣ ಮಾಧ್ಯಮವಾಗಿ ಬಳಸಿಕೊಳ್ಳುವ ಕ್ರಮಗಳು ಎಂದು ಹೇಳಬಹುದು. ಈ ಭಾಷಾ ಬಳಕೆಯ ಪ್ರಕ್ರಿಯೆಯು ಔಪಚಾರಿಕ ನೆಲೆಯಲ್ಲಿ ಪ್ರಥಮ, ದ್ವಿತೀಯ ಮತ್ತು ತೃತಿಯ ಭಾಷೆಯಾಗಿ ಕನ್ನಡವನ್ನು ಕಲಿಯುವ, ಬೋಧಿಸುವ ಸಂದರ್ಭದಲ್ಲಿ ರೂಢಿಸಿಕೊಳ್ಳಬಹುದಾದ ಪಠ್ಯಕ್ರಮ, ಪಠ್ಯಮಸ್ತಕ ಮತ್ತು ಕಲಿಕೆ ಬೋಧನೆಯ ವಿಧಾನಗಳನ್ನು ಆಶ್ರಯಿಸಿಕೊಂಡಿರುವುದು. ಪ್ರಾಥಮಿಕ ಹಂತದಲ್ಲಿ ಕನ್ನಡವನ್ನು ಪ್ರಥಮ ಭಾಷೆಯಾಗಿ ಬೋಧಿಸುವ, ಕಲಿಯುವ ಪ್ರಕ್ರಿಯೆಯಲ್ಲಿ ಅನುಸರಿಸಲಾದ ಭಾಷಾ ಶೈಕ್ಷಣಿಕ ನಿಲುವುಗಳೇನು? ಮತ್ತು ಸಾಧ್ಯತೆಗಳು ಯಾವುವು? ಅದರ ತೊಡಕುಗಳೇನು? ಎಂಬುದನ್ನು ಪ್ರಚಲಿತ ಪ್ರಥಮ ಕನ್ನಡ ಭಾಷಾ ಪಠ್ಯಗಳನ್ನು ಬಳಸಿಕೊಂಡು ಈ ಭಾಗದಲ್ಲಿ ವಿಶ್ಲೇಷಿಸಲಾಗಿದೆ.

ಶಿಕ್ಷಣದ ಅರ್ಥವನ್ನು ನಮ್ಮ ಕನ್ನಡ ಭಾಷೆಯಲ್ಲಿ ಬಳಸುವ 'ಶಿಕ್ಷಣ' ಎಂಬ ಸಂಸ್ಕೃತ ಭಾಷೆಯ 'ಶಿಕ್ಷಾ' ಎಂಬ ಶಬ್ದದಿಂದ ಬಂದಿದೆ. 'ಶಿಕ್ಷಾ' ಎಂದರೆ ನಿಯಂತ್ರಿಸು ಅಥವಾ ಕಲಿಸು, ಬೋಧಿಸು ಎಂದು ಅರ್ಥವಾಗುತ್ತದೆ. ಅದರಂತೆ 'ಶಿಕ್ಷಣ' ಎನ್ನುವ ಶಬ್ದಕ್ಕೆ ಸಮನಾಗಿ ಇಂಗ್ಲೀಶ್ ಭಾಷೆಯ Education ಎಂಬ ಶಬ್ದವನ್ನು ಸಂವಾದಿಯಾಗಿ ಬಳಸುತ್ತಿದ್ದೇವೆ. ಈ ಶಬ್ದವು ಲ್ಯಾಟೀನ್ ಭಾಷೆಯ Educare ಮತ್ತು Educere ಎಂಬ ಶಬ್ದಗಳಿಂದ ಬಂದಿದೆ.

Educare = to Bring up to nurish, to raise ಎಂದರ್ಥ. ಅಂದರೆ ಬೆಳೆಸು ಎಂದಾಗುತ್ತದೆ. Educare to Bring Forth to Lead out to Drauout ಎಂದರ್ಥ. ಅಂದರೆ ದಾರಿ ತೋರಿಸು ಎಂದಾಗುತ್ತದೆ. ಆದ್ದರಿಂದ ಶಿಕ್ಷಣವೆಂದರೆ ವ್ಯಕ್ತಿಯನ್ನು ಸುಸಂಸ್ಕೃತನ ನ್ನಾಗಿ ಮಾಡುವುದು, ಸನ್ಮಾರ್ಗ ತೋರಿಸುವುದು. ವ್ಯಕ್ತಿಯಲ್ಲಿರುವ ವಿಶಿಷ್ಟ ಶಕ್ತಿಯನ್ನು ಹೊರಗೆ ಹಾಕುವುದು ಎಂದು ಮುಂತಾಗಿ ತಿಳಿಯಬಹುದು. ('ಶಿಕ್ಷಣ ತತ್ವಗಳು ವ್ಯಕ್ತಿಗೆ

ಧರ್ಮ, ಜನಾಂಗ, ಜಾತಿ, ಭಾಷೆ, ಇವುಗಳ ನೆಲೆಯಲ್ಲಿ ಅಥವಾ ಇವುಗಳಲ್ಲಿ ಯಾವುದಾದರೂ ಒಂದರ ನೆಲೆಯಲ್ಲಿ ಸರಕಾರಿ ಸಾಹಮ್ಯದ ಅಥವಾ ಸರಕಾರಿ ಅನುದಾನ ಸ್ವೀಕರಿಸುವ ಸಂಸ್ಥೆಯಲ್ಲಿ ಪ್ರವೇಶವನ್ನು ನಿರಾಕರಿಸಕೂಡದು") ಇದು ವ್ಯಕ್ತಿಯ ಮೂಲಭೂತ ಹಕ್ಕು ಎಂದು ಹೇಳಿದೆ. ಇದರಿಂದ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಅಲ್ಪಸಂಖ್ಯಾತ ಮಕ್ಕಳ ಅಭಿವೃದ್ಧಿಗೆ ಈ ಅಧಿನಿಯಮ ಸಹಾಯಕವಾಗಬಲ್ಲದು. ಇದಕ್ಕೆ ಪೂರಕವಾಗಿ ಸಂವಿಧಾನದ ೪೬ನೇ ವಿಧಿಯು ದುರ್ಬಲ ವರ್ಗಗಳ ಅದರಲ್ಲೂ ಮುಖ್ಯವಾಗಿ ಪರಿಶಿಷ್ಟಜಾತಿ ಹಾಗೂ ಪರಿಶಿಷ್ಟಪಂಗಡಗಳ ಮಕ್ಕಳ ಅಭಿವೃದ್ಧಿಗಾಗಿ ಶ್ರಮಿಸಬೇಕಿದೆ ಎಂದು ಹೇಳಿದೆ. ಆದರೆ ಹಲವು ತೊಂದರೆಗಳಿಂದ ಈ ಮಸೂದೆಗಳು ನಿಷ್ಕ್ರೀಯವಾಗಿದೆ. ಇತ್ತೀಚಿನ ವರ್ಷಗಳಲ್ಲಿ ರಾಷ್ಟ್ರೀಯಶಿಕ್ಷಣ ಸಂಶೋಧನೆ ಮತ್ತು ತರಬೇತಿ ಮಂಡಳಿಯು ಕಡ್ಡಾಯ ಪರಿಕಲ್ಪನೆಯನ್ನು ಕೈ ಬಿಟ್ಟಿದ್ದು ಪ್ರಾಥಮಿಕ ಶಿಕ್ಷಣದ ಸಾರ್ವತ್ರಿಕರಣ ಎಂದು ಘೋಷಣೆ ಹೊರ ಬಿದ್ದಿರುವುದನ್ನು ಕಾಣುತ್ತೇವೆ. ಈ ಬದಲಾವಣೆಯಿಂದ ಕ್ರಿ.ಶ. ೨೦೦೫ರ ವೇಳೆಗೆ ಎಲ್ಲರಿಗೂ ಶಿಕ್ಷಣ (ಇ.ಎಫ್.ಎ) ನೀಡಬೇಕೆಂಬ ಕಳವಳವು ಅಥವಾ ಕಾಳಜಿಯು ವ್ಯಕ್ತವಾಗಿದೆ. ಪ್ರಾಥಮಿಕ ಶಿಕ್ಷಣದ ಸಾರ್ವತ್ರಿಕರಣ ಎಂಬ ಪದ ಪುಂಜವನ್ನು ಬಳಸುವುದು ಶೋಕಿಗಾಗಿಯ ಭಾರತೀಯ ಸಂದರ್ಭದಲ್ಲಿ ಶಿಕ್ಷಣವನ್ನು ಕಡ್ಡಾಯಗೊಳಿಸಲು ಸಾಧ್ಯವಿಲ್ಲ. (ಪಿಯ್ನರ್ ಮೈರನ್-೧೯೯೨) ಶಿಕ್ಷಣವನ್ನು ಕಡ್ಡಾಯಗೊಳಿಸಿದಾಗ ಬಾಲಕಾರ್ಮಿಕ ನಿಷೇಧ ಕಾನೂನನ್ನು ಕಟ್ಟುನಿಟ್ಟಾಗಿ ಜಾರಿಗೆ ತರ ಬೇಕಾಗುತ್ತದೆ. ಈ ರೀತಿಯ ಸಂವಿಧಾನದಲ್ಲಿ ಪ್ರಾಥಮಿಕ ಶಿಕ್ಷಣ ಕುರಿತು ಕಾನೂನನ್ನು ಹಾಕಿಕೊಂಡು ಮುಂದುವರೆಸುವ ಪ್ರಯತ್ನ ಕಳೆದ ೫೦ ವರ್ಷಗಳಿಂದಲೂ ನಡೆಯುತ್ತಾ ಬಂದಿದೆ. ಆದರೆ ಪ್ರಾಥಮಿಕ ಶಿಕ್ಷಣ ಪರಿಣಾಮಾತ್ಮಕವಾಗಿ, ಗುಣಾತ್ಮಕವಾಗಿ ಪ್ರಭಾವಿತವಾದ ಗುರಿಯನ್ನು ತಲುಪಿದೆ ಎಂದು ಹೇಳುವಂತಿಲ್ಲ. ಹತ್ತಾರು ಆಯೋಗಗಳು ಬಂದರೂ ಶಿಕ್ಷಣದ ಸಾರ್ವತ್ರಿಕರಣದ ಕನಸು ಕನಸಾಗಿಯೇ ಉಳಿದಿದೆ ಎಂದು ಹೇಳಬಹುದು. (ಗ್ರಂಥಸೂಚಿ : ಆಧುನಿಕ ಶಿಕ್ಷಣದ ಒಲವುಗಳು ಡಾ. ಮಹಾಬಲೇಶ್ವರರಾವ್)

ಈ ಮೇಲಿನ ನಿಯಮಗಳನ್ನು ಗಮನಿಸಿದಾಗ ಶಿಕ್ಷಣ ರಾಜ್ಯಾಂಗದ ನಿರ್ದೇಶಕ ತತ್ವಗಳ ಪ್ರಕಾರ ಶಿಕ್ಷಣವು ನಿರ್ದಿಷ್ಟ ವಯೋಮಾನದ ಎಲ್ಲಾ ಮಕ್ಕಳಿಗೂ ದೊರಕಬೇಕಾದದ್ದು ಅಗತ್ಯ ಎಂಬ ಅಂಶ ಸ್ಪಷ್ಟವಾಗಬಲ್ಲದು. ಈ ಕಾರಣದಿಂದಲೇ ರಾಜ್ಯಸರ್ಕಾರಗಳು ಇಂಥಹ ಜವಾಬ್ದಾರಿಯನ್ನು ನಿಭಾಯಿಸಬೇಕೆಂದು ಸೂಚಿಸಲಾಗಿದೆ. ಆದ್ದರಿಂದ ಶಿಕ್ಷಣ ವ್ಯವಸ್ಥೆಯಲ್ಲಿ ಏನನ್ನು ಕಲಿಯಬೇಕು ಮತ್ತು ಹೇಗೆ ಕಲಿಯಬೇಕು ಎಂಬುದು ತಾತ್ವಿಕವಾದ ವಿಚಾರ. ಕೆಲವು ಚಾರಿತ್ರಿಕ ಐತಿಹಾಸಿಕ ಕಾರಣಗಳಿಂದ ಶಿಕ್ಷಣದ ಮುಖ್ಯ ಗುರಿಗಳಲ್ಲಿ ಭಾಷೆಯನ್ನು ಕಲಿಯುವುದು ಒಂದಾಗಿದೆ. ಹಾಗಾದರೆ ಶಾಲೆಗೆ ಬರುವ ಮುನ್ನ ಭಾಷೆಯನ್ನು ಕಲಿತಿರು ವುದಿಲ್ಲವೇ ಎಂದು ಕೇಳಬಹುದು. ಶಾಲೆಗೆ ಸೇರುವ ಮುನ್ನವೇ ಮಕ್ಕಳು ಮಾತನಾಡುವುದು, ಕೇಳಿ ಅರ್ಥಮಾಡಿಕೊಳ್ಳುವುದು. ಈ ಎರಡು ಅಂಶಗಳನ್ನು ಸಾಮಾಜಿಕ ಪರಿಸರದಲ್ಲಿ

ಈಗಾಗಲೇ ಕಲಿತಿರುತ್ತವೆ. ಹಾಗಾದರೆ ಶಾಲೆಯಲ್ಲಿ ಭಾಷೆಯನ್ನು ಕಲಿಯುವುದೆಂದರೇನು? ಎಂಬ ಪ್ರಶ್ನೆ ಮುಂದೆ ಬರುತ್ತದೆ. ಮೇಲಿನ ಎರಡು ಅಂಶಗಳು ಭಾಷೆಯ ಸ್ವರೂಪವನ್ನು ಹೆಚ್ಚು ಪ್ರಮಾಣಬದ್ಧ ಭಾಷೆಗೆ ಪರಿವರ್ತಿಸುವುದು ಜೊತೆಗೆ ಓದುವುದು, ಬರೆಯುವುದನ್ನು ರೂಢಿಸಿ ವೃದ್ಧಿಸುವುದರ ಮೂಲಕ ಶಾಲೆಯಲ್ಲಿ ಭಾಷೆಯನ್ನು ಕಲಿಸುವುದಾಗಿದೆ. ಜೊತೆಗೆ ಪ್ರಮಾಣಿತ ಭಾಷೆಯನ್ನು ಕೇಳಿ ಅರಿಯಲು ಮತ್ತು ಮಾತನಾಡಲು ಕಲಿಯುವಂತೆ ಮಾಡುವುದಾಗಿದೆ. ಕರ್ನಾಟಕ ಸರ್ಕಾರ ಪ್ರಾಥಮಿಕ ಶಿಕ್ಷಣದ ಸುಧಾರಣೆಗಾಗಿ ಕೆಲವು ವರ್ಷಗಳಲ್ಲಿ ಅನೇಕ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದನ್ನು ಗಮನಿಸಿದ್ದೇವೆ. ಆದರೆ ಇಲ್ಲಿ ಅವುಗಳನ್ನು ವಿವರವಾಗಿ ಕೊಡುವ ಪ್ರಯತ್ನ ಮಾಡುವುದಿಲ್ಲ. ಏಕೆಂದರೆ ಹಾಕಿಕೊಂಡ ಯೋಜನೆಗಳ ಪಟ್ಟಿಯನ್ನು ಸ್ಥೂಲವಾಗಿ ಗಮನಿಸಲಾಗಿದೆ. ಅವುಗಳಲ್ಲಿ ತ್ರೈಮಾಸಿಕ ಯೋಜನೆ, ಅಂಕಗಳ ಬದಲಿಗೆ ದರ್ಜೆ ನೀಡಿಕೆ ಯೋಜನಾ ಕಾರ್ಯ ಹಾಗೂ ಜೀವನ ಕೌಶಲಗಳ ತರಬೇತಿಯನ್ನು ಕಳೆದ ಐದು ವರ್ಷಗಳಲ್ಲಿ ಕಾಣುತ್ತೇವೆ. (೨೦೦೪ರಿಂದ ೨೦೦೭) 'ಚೈತನ್ಯ' ಚಟುವಟಿಕೆಗಳ ಆಧಾರಿತ ಬೋಧನಾ ತರಬೇತಿ ಎಜುಸ್ಯಾಟ್ ಮೂಲಕ ನಡೆಯುತ್ತಿರುವುದನ್ನು ಕಾಣುತ್ತೇವೆ. ಶಿಕ್ಷಣದಲ್ಲಿ ರಂಗಕಲೆ, ಕಲಿಕೆಯಲ್ಲಿ ವಿದ್ಯಾರ್ಥಿ ಸಂತೋಷದಿಂದ ಚಟುವಟಿಕೆಯಲ್ಲಿ ತೊಡಗಲು 'ನಲಿ-ಕಲಿ' ಕಾರ್ಯಕ್ರಮವನ್ನು ಹಾಕಿಕೊಂಡಿದೆ. ಬಹುವರ್ಗ ಬೋಧನೆಯ ಪರಿಣಾಮಕಾರಿಯಾಗಲು 'ಬಹುಮುಖಿ' ಕೇಳಿ ಕಲಿ 'ಬಾನ್ದನಿ' 'ಚುಕ್ಕಿಚಿನ್ನ' 'ಚಿಣ್ಣರಚುಕ್ಕಿ' ಶಿಕ್ಷಣ ಸಂವಾದ ಇತ್ಯಾದಿಗಳನ್ನು ಪ್ರಯೋಗ ಮಾಡಲಾಗಿದೆ. ಬಾನುಲಿ ಆಧಾರಿತ ಕಾರ್ಯಕ್ರಮದ ವ್ಯವಸ್ಥೆ, ಸಮುದಾಯದತ್ತಶಾಲೆ, ಸರ್ವಶಿಕ್ಷ ಅಭಿಯಾನ ಕಾರ್ಯಕ್ರಮಗಳನ್ನು ಹಾಕಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಕೆಲವು ಪ್ರಾಥಮಿಕ ಶಾಲೆಗಳಲ್ಲಿ ಗಣಕಯಂತ್ರದ ಅಳವಡಿಕೆ, ನೂತನವಾಗಿ ನೇಮಕಗೊಂಡ ಶಿಕ್ಷಕರ ತರಬೇತಿ ಕಾರ್ಯಕ್ರಮ, ಶಾಲಾಭಿವೃದ್ಧಿ ಹಾಗೂ ಮೇಲ್ವಿಚಾರಣಾ ಸಮಿತಿ ಸದಸ್ಯರಿಗಾಗಿ 'ಸ್ಪಂದನ' ಹಾಗೂ ಸಂಕಲ್ಪ ತರಬೇತಿ ಕಾರ್ಯಕ್ರಮಗಳು ನಡೆಯುತ್ತಾ ಬಂದಿವೆ. ಮಕ್ಕಳ ಸಾಧನೆಯ ಪರೀಕ್ಷೆಗಾಗಿ ಗುಣಮೌಲ್ಯಾಂಕನ ಸಂಸ್ಥೆ ಪ್ರಾರಂಭ, ಹೆಣ್ಣುಮಕ್ಕಳ ಶಿಕ್ಷಣ ಸುಧಾರಣೆಗಾಗಿ ಕಸ್ತೂರಿಬಾ ಬಾಲಿಕಾ ವಿದ್ಯಾಲಯ ಸ್ಥಾಪನೆ, ಮಕ್ಕಳ ಶೈಕ್ಷಣಿಕ ಪ್ರವಾಸಕ್ಕಾಗಿ ಚಿಣ್ಣರ ಕರ್ನಾಟಕದರ್ಶನ, ಬಾಲಸ್ನೇಹಿ ಶಾಲೆಗಳು, ಸುಧಾರಿತ ಶಾಲಾ ಪರಿವೀಕ್ಷಣೆ, ಚೈತನ್ಯ ತರಿಣಿ-ಬೋಧನೆ - ಕಲಿಕೆ ಸಾಮಗ್ರಿಗಳ ತಯಾರಿಕೆ ಕುರಿತು ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಶಿಕ್ಷಕರಿಗೆ ಯೋಗ ತರಬೇತಿ, ಕ್ರಿಯಾಸಂಶೋಧನೆ, ಸಮನ್ವಯ ಶಿಕ್ಷಣ ಹೀಗೆಯೇ ಹತ್ತಾರು ಯೋಜನೆಗಳು ಜಾರಿಗೆ ಬಂದಿವೆ. ಆದರೆ ಇವು ಪ್ರಾಯೋಗಿಕವಾಗಿ ಎಷ್ಟರಮಟ್ಟಿಗೆ ಸಫಲತೆಯನ್ನು ಕಂಡಿವೆ ಎಂಬುದನ್ನು ನಾವು ಕೂಲಂಕುಶವಾಗಿ ನೋಡಬೇಕಾಗಿದೆ. ಕಾಲಕ್ಕೆ ತಕ್ಕಂತೆ ಭಾಷಾನಿಯಮಗಳು ಬದಲಾವಣೆಯಾಗುವುದು ಅನಿವಾರ್ಯ. ಹಾಕಿಕೊಂಡ ಸಿದ್ಧಾಂತದ ತತ್ವಗಳು ಮಾತ್ರ ವೈಫಲ್ಯ ಹೊಂದುತ್ತಿವೆ. ಅದಕ್ಕೆ ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿನ ತೊಂದರೆಗಳೇ

ಕಾರಣ ಎಂದು ಹೇಳಬಹುದು. ಈ ತೊಂದರೆ ನಿಯಮದಲ್ಲಾಗಿರಬಹುದು, ಶಿಕ್ಷಕರಿಂದಾಗಿರ ಬಹುದು, ಪೋಷಕರಿಂದಾಗಿರಬಹುದು ಅಥವಾ ಪಠ್ಯಕ್ರಮ ರಚನೆಯಲ್ಲಿನ ತೊಂದರೆಯಿಂದಾಗಿರ ಬಹುದು ಇಲ್ಲವೇ ಕಾನೂನಿನ ತೊಡಕಿರಬಹುದು. ಈ ಎಲ್ಲಾ ತೊಂದರೆಗಳಿಂದಾಗಿಯೇ ಇಂದಿನ ಶಿಕ್ಷಣ ವ್ಯವಸ್ಥೆ (ಔಪಚಾರಿಕ) ಸಂಕುಚಿತ ಅರ್ಥದಲ್ಲಿ ಬಳಕೆಯಾಗುತ್ತಿದೆ ಎಂದು ಹೇಳಬಹುದು.

ಈ ಪ್ರಕ್ರಿಯೆ ಸುಮಾರು ಹತ್ತು ವರ್ಷಗಳ ಕಾಲ ಅಭಿವೃದ್ಧಿ ಮಾಡುವ ಗುರಿಯನ್ನು ಶಿಕ್ಷಣ ಕ್ರಮದಲ್ಲಿ ಕಾಣುತ್ತೇವೆ. ಇಲ್ಲಿ ಕಲಿಯುವ ವಿಷಯ ಅಥವಾ ಭಾಷೆ ನಿರ್ಣಯವೆನಿಸಿದ್ದರೂ, ವಿದ್ವಾಂಸರಿಂದ ಕಲಿಯುವ ಮಗುವಾಗಲಿ ಇಲ್ಲವೇ ಆ ಮಗುವಿನ ಪೋಷಕರಿಂದಾಗಲಿ ಏನನ್ನು ಬಯಸುತ್ತಾರೆ ಎಂಬುದನ್ನು ಗಮನಿಸಿ ಉತ್ತರವನ್ನು ನಿರ್ಧರಿಸುವಂತಿಲ್ಲ. ಇಲ್ಲಿ ಏನಿದ್ದರು ಸರ್ಕಾರದ ಭಾಷಾ ನೀತಿಯ ಪಾತ್ರ ದೊಡ್ಡದು. ಕರ್ನಾಟಕ ಸರ್ಕಾರ, ಕೇಂದ್ರಸರ್ಕಾರ ನಿರೂಪಿಸಿದ ತ್ರಿಭಾಷಾಸೂತ್ರ ಎಂಬ ನಿರ್ದೇಶಕ ಮಾದರಿಯನ್ನು ಅನುಸರಿಸುತ್ತದೆ. ಒಂದು 'ಮಾತೃಭಾಷೆ' ಎರಡು 'ರಾಷ್ಟ್ರಭಾಷೆ,' ಮೂರು 'ಅಂತರಾಷ್ಟ್ರೀಯ ಭಾಷೆ' ಹೀಗಾಗಿ ಕರ್ನಾಟಕ ರಾಜ್ಯದಲ್ಲಿ ಕನ್ನಡ, ಹಿಂದಿ, ಇಂಗ್ಲೀಶ್ ಭಾಷೆಗಳನ್ನು ಕಲಿಸುವ ಪರಿಪಾಠ ಬೆಳೆದು ಬಂದಿದೆ. ಈ ಭಾಷೆಯನ್ನು ವಿದ್ಯಾರ್ಥಿಗಳು ಕಲಿಯುವುದು ಕಡ್ಡಾಯವೂ ಆಗಿದೆ. ಈ ವ್ಯವಸ್ಥೆಯನ್ನು ಗಮನಿಸಿದಾಗ ಮಗುವಿನ ಆಯ್ಕೆಗಳಿಗೆ ಅವಕಾಶ ಕಡಿಮೆ. **ಉದಾಹರಣೆಗೆ :** ಲಂಬಾಣಿ, ತುಳು, ಭಾಷೆಗಳನ್ನು ಮಾತನಾಡುವ ಮಕ್ಕಳಿಗೆ ಏನು ಮಾಡಬೇಕು. ಶಾಲೆಗೆ ಬರುವ ಮುನ್ನ ಕಲಿತ ಭಾಷೆಗೂ ಮತ್ತು ಕುಶಲಿಯಾಗಿರುವ ಭಾಷೆಗೂ ಈ ಚೌಕಟ್ಟಿನಲ್ಲಿ ಯಾವ ಸ್ಥಾನ ಇಲ್ಲದಂತಾಗಿದೆ. ಇದರಿಂದ ಮಗು ಪ್ರಾದೇಶಿಕವಾಗಿ ಕಲಿತ ಭಾಷೆಯನ್ನು ಶಾಲಾಶಿಕ್ಷಣದ ವ್ಯವಸ್ಥೆಯಲ್ಲಿ ಬಿಟ್ಟು, ಕನ್ನಡವನ್ನು ಕಲಿಯುವುದು ಕಡ್ಡಾಯ. ಇಲ್ಲಿ ಮೂರು ಭಾಷೆಗಳನ್ನು ಶಿಕ್ಷಣದಲ್ಲಿ ಕಲಿಸಲು ವ್ಯವಸ್ಥೆ ಇದ್ದರೂ ಮಗು ಇನ್ನೊಂದು ಭಾಷೆಯನ್ನು ಮನೆಯ ಪರಿಸರದಲ್ಲಿ ಕಲಿಯುತ್ತಲೇ ಇರುತ್ತದೆ. ಆದರೆ ಇಲ್ಲಿ ಆಲಿಸುವ ಮತ್ತು ಮಾತನಾಡುವ ಕೌಶಲ ಅಭಿವೃದ್ಧಿಯನ್ನು ಮಾತ್ರ ಕಾಣುತ್ತೇವೆ.

ಕರ್ನಾಟಕ ಸರ್ಕಾರದ ಶಿಕ್ಷಣ ವ್ಯವಸ್ಥೆಯಲ್ಲಿ ತ್ರಿಭಾಷಾ ಸೂತ್ರ ಉಲ್ಲಂಘನೆ ಸ್ಪಷ್ಟವಾಗಿ ನಡೆಯುತ್ತಿರುವುದನ್ನು ಕಾಣುತ್ತೇವೆ. ಕರ್ನಾಟಕ ರಾಜ್ಯದ ಶಿಕ್ಷಣ ವ್ಯವಸ್ಥೆಯ ವ್ಯಾಪ್ತಿಯಿಂದ ಹೊರಗುಳಿದ ಎರಡು ಮುಖ್ಯವಾಹಿನಿಗಳು ಈ ರಾಜ್ಯದಲ್ಲಿ ಜಾರಿಯಾಗಿರುವುದನ್ನು ಕಾಣುತ್ತೇವೆ. ಒಂದು ಕೇಂದ್ರ ಸರ್ಕಾರದ ನಿಯಂತ್ರಣದಲ್ಲಿ ಬರುವ ಕೇಂದ್ರಿಯ ವಿದ್ಯಾಲಯಗಳು ಮತ್ತೊಂದು ಐಸಿಎಸ್ಸಿ ಎಂದು ಕರೆಯಲಾಗುವ ಶಾಲೆಗಳು, ಈ ಪದ್ಧತಿಯನ್ನು ಕ್ರೈಸ್ಥಮಿಷನ್ ಹಾಗೂ ಖಾಸಗಿ ಶಾಲೆಗಳ ವ್ಯವಸ್ಥೆಯಲ್ಲಿ ಕಾಣುತ್ತೇವೆ. ಕೇಂದ್ರೀಯ ಶಾಲೆಗಳಲ್ಲಿ ಕನ್ನಡಕ್ಕೆ ಅವಕಾಶವಿಲ್ಲ. ಇಲ್ಲಿ ಹಿಂದಿ, ಇಂಗ್ಲೀಶ್ ಮಾತ್ರ ಕಲಿಯುತ್ತಾರೆ. ಈ ನಿಯಮವನ್ನು ರಾಜ್ಯದಲ್ಲಿ ನವೋದಯ ಶಾಲೆಗಳು ಅನುಸರಿಸುತ್ತವೆ.

ತ್ರಿಭಾಷಾ ಸೂತ್ರದ ಈ ಗೊಂದಲಗಳನ್ನು ಕರ್ನಾಟಕ ಸರ್ಕಾರ ಮೇಲಿಂದ ಮೇಲೆ ನಿಯಮಗಳಲ್ಲಿ ತಿದ್ದುಪಡಿ ಹಾಗೂ ಬದಲಾವಣೆಯನ್ನು ಮಾಡುತ್ತಾ ಬಂದಿರುವುದನ್ನು ಕಾಣುತ್ತೇವೆ. ಆದರೂ ಕಳೆದ ೬೦ ವರ್ಷದಿಂದಲೂ ಜನಸಂಖ್ಯೆಯ ಕಾಲು ಭಾಗದಷ್ಟು ಮಕ್ಕಳು ಈ ಗೊಂದಲಮಯ ನೀತಿ ನಿಯಮಕ್ಕೆ ಒಳಗಾಗುತ್ತಲೆ ಬಂದಿದ್ದಾರೆ. ಈ ಸಮಸ್ಯೆಯನ್ನು ಸುಮಾರು ೪೦ವರ್ಷಗಳ ಹಿಂದೆಯೇ ಬಹುಭಾಷೆ, ದ್ವಿಭಾಷೆ ಎಂಬ ಸೂತ್ರವನ್ನು ಕುವೆಂಪು ಅವರು ಸೂಚಿಸಿರುವುದು ನಮಗೆಲ್ಲಾ ತಿಳಿದ ವಿಷಯ. ಈ ಸೂತ್ರವು ಕಲಿಯುವ ಮಕ್ಕಳಿಗೆ ಕಲಿಕೆಯ ಭಾರವನ್ನು ಕಡಿಮೆ ಮಾಡುವುದಲ್ಲದೆ ವ್ಯರ್ಥ ಕಲಿಕೆಯನ್ನು ನಿವಾರಿಸುತ್ತದೆ ಎಂಬುದು ಅವರ ಉದ್ದೇಶವಾಗಿತ್ತು. ಇದರಿಂದ ಮಕ್ಕಳಿಗೆ ಅಥವಾ ಪೋಷಕರಿಗೆ ದೊರೆಯುವ ಸವಲತ್ತು ಹೆಚ್ಚಾಗಿವೆ. ಇವರ ಸೂತ್ರದಿಂದ ಔಪಚಾರಿಕ ವಾಗಿ ಕಲಿಯುವ ಸಾಧ್ಯತೆಯು ಕೂಡ ಕಡಿಮೆಯಾಗುತ್ತದೆ. ಏಕೆಂದರೆ ಯಾವುದಾದರೂ ಎರಡು ಭಾಷೆಗಳಲ್ಲಿ ಕನ್ನಡ ಇರಲೇಬೇಕೆಂಬ ಕಡ್ಡಾಯವಿಲ್ಲ. ಈ ಸೂತ್ರ ಪರಿಪೂರ್ಣ ಎಂಬ ಉತ್ಸಾಹಕಗಳು ಸಾಮಾಜಿಕ ಚಿಂತನೆಯಲ್ಲಿ ಬಂದವು, ಆದರೆ ಇದು ಇಂದಿಗೂ ಜಾರಿಗೆ ಬಂದಿಲ್ಲ. ಈ ಸೂತ್ರದಿಂದ ಇಂಗ್ಲೀಶ್ ಪ್ರಭಾವಿತವಾಗಲು ಸಹಾಯಕವೆಂದರೆ ತಪ್ಪಾಗಲಾರದು. ಏಕೆಂದರೆ ಕನ್ನಡ ಹಾಗೂ ಇಂಗ್ಲೀಶ್ ಮಾಧ್ಯಮ ಎರಡರಲ್ಲೂ ಕಡ್ಡಾಯವಾಗಿ ಇಂಗ್ಲೀಶ್ ತೆಗೆದುಕೊಳ್ಳುವುದು ಅನಿವಾರ್ಯ. ಆದರೆ ಕೆಲವೇ ಕೆಲವು ಶಾಲೆಗಳಲ್ಲಿ ಮಾತ್ರ ಸತತವಾಗಿ ಹತ್ತುವರ್ಷ ಕನ್ನಡ ಹಾಗೂ ಇಂಗ್ಲೀಶ್ ಜೊತೆಗೆ ಆರು ವರ್ಷ ಹಿಂದಿಯನ್ನು ಕಲಿತು ಹೊರ ಬರುತ್ತಿರುವ ಎಸ್.ಎಸ್.ಎಲ್.ಸಿ. ಪಾಸಾದ ವಿದ್ಯಾರ್ಥಿಗಳು ಭಾಷಾ ಕೌಶಲಗಳನ್ನು ಗ್ರಹಿಸುವ ರೀತಿಯಲ್ಲಿ ಭಾಷಾ ಕೌಶಲಗಳು ವೃದ್ಧಿಯಾಗುವುದಕ್ಕಿಂತ ವಿಷಯಾಧಾರಿತವಾಗಿರುತ್ತವೆ. ಇದರಿಂದ ಕನ್ನಡವನ್ನು ಶಿಕ್ಷಣದ ಹಿನ್ನೆಲೆಯಲ್ಲಿ ಏನನ್ನು ಹೇಳಿ ಕೊಟ್ಟಂತೆ ಆಗುವುದಿಲ್ಲ. ಹತ್ತನೇ ತರಗತಿ ಪಾಸಾದ ವಿದ್ಯಾರ್ಥಿ ಧ್ವನಿ, ಪದ, ವಾಕ್ಯ, ವ್ಯಾಕರಣ, ಲೇಖನ ಚಿಹ್ನೆಯ ಬಗೆಗೆ ಸರಿಯಾದ ಪ್ರತಿಕ್ರಿಯೆ ಬರದಿದ್ದರೆ ಕಲಿಸಿದ ಪಾಠ, ಶಿಕ್ಷಣದಲ್ಲಿ ಹಾಕಿಕೊಂಡ ಭಾಷಾಕೌಶಲ ವಿಫಲವಾದಂತೆಯೇ ಎಂದು ಹೇಳಬಹುದು. ಹಾಗಾದರೆ ಶಿಕ್ಷಣದಲ್ಲಿ ಕನ್ನಡವನ್ನು ಕಲಿಸುವ ಬಗೆಯಾದರು ಹೇಗೆ? ಎಂಬ ಪ್ರಶ್ನೆ ಹುಟ್ಟಿಕೊಳ್ಳುತ್ತದೆ. ಮೊದಲು ಮಾತೃಭಾಷಾ ಶಿಕ್ಷಣದ ಕಡೆಗೆ ಗಮನ ಹರಿಸುವುದು ಮುಖ್ಯ. ತುಳು, ಲಂಬಾಣಿ ಮಕ್ಕಳಿಗೆ ಮಾತೃಭಾಷೆಯಲ್ಲಿ ಅಗತ್ಯ ಶಿಕ್ಷಣ ಕಲಿಸುವ ಪ್ರತಿಯೊಂದು ವಿಷಯಗಳು ಪ್ರಾದೇಶಿಕ ಭಾಷೆಯಾನುಸಾರ ಪಾಠ, ಪಠ್ಯಗಳು ರಚನೆಯಾಗಿರುವುದು ಮುಖ್ಯವೆನಿಸುತ್ತವೆ. ಕನ್ನಡ ಮಾತನಾಡುವ ಪ್ರಾದೇಶಿಕತೆಯ ಅನುಸಾರ ಪಠ್ಯಗಳು ರಚನೆಯಾದಾಗ ಸರಳವಾದ ಹಾಗೂ ಅರ್ಥಪೂರ್ಣವಾಗಿ ಬೋಧನೆ ನಡೆದು ಕಲಿಕೆ ಸುಧಾರಿಸಬಲ್ಲದು. ನಮ್ಮ ಸಾಮಾಜಿಕ ರಚನಾ ವಿನ್ಯಾಸದಡಿಯಲ್ಲಿ ಪಠ್ಯಗಳು ರಚನೆಯಾಗಬೇಕು. ಶಿಷ್ಟೀಕರಣ ಅಥವಾ ಪ್ರಮಾಣೀಕರಣಗೊಳಿಸಿ ಪಠ್ಯಗಳು ರಚನೆಯಾದರೆ ಮಾತನಾಡುವ ಮತ್ತು ಶಾಲೆಯಲ್ಲಿ ಕಲಿಯುವ ಭಾಷೆ ಬೇರೆ ಬೇರೆಯಾದಾಗ ಕಲಿಕೆ ಪರಿಪೂರ್ಣವಾಗಲಾರದು. ಆದರೆ ಇಂಗ್ಲೀಷನ್ನು ಒಂದು ಭಾಷೆಯನ್ನಾಗಿ ಕಲಿಸಿದರೆ ತಪ್ಪಾಗಲಾರದು. ಮೊದಲು

ನಮ್ಮ ಪಠ್ಯಗಳು ಪ್ರಾದೇಶಿಕ ಭಾಷಾ ಹಿನ್ನೆಲೆಯಲ್ಲಿ ರಚನೆಯಾದಾಗ ಕನ್ನಡ ಉಪಭಾಷೆಗಳನ್ನು ಬೆಳೆಸಿ ಉಳಿಸಿದಂತಾಗುತ್ತದೆ. ಶಿಕ್ಷಣದಲ್ಲಿ ಕನ್ನಡ ಸದೃಢವಾಗಿ ನೆಲೆಯನ್ನು ಕಾಣಬಲ್ಲದು. ಆದರೆ ಇದನ್ನು ಜಾರಿಗೊಳಿಸಬೇಕೆಂದು ಕೆಲವು ಶೈಕ್ಷಣಿಕ ಮನೋವಿಜ್ಞಾನಿಗಳ, ಶಿಕ್ಷಣ ತಜ್ಞರ, ಭಾಷಾಶಾಸ್ತ್ರಜ್ಞರ ಅಭಿಪ್ರಾಯವಾಗಿತ್ತು. ಆದರೆ ಕೆಲವು ಉಪಭಾಷಾ ಪಂಗಡದ ಜನರೇ ಇದನ್ನು ವಿರೋಧಿಸಿದ್ದನ್ನು ಕಾಣುತ್ತೇವೆ. ಉದಾಹರಣೆಗೆ. ಸೋಲಿಗರ ಕನ್ನಡದ ಮಕ್ಕಳಿಗೆ ಪ್ರಾದೇಶಿಕ ಭಾಷಾ ಚೌಕಟ್ಟಿನಲ್ಲಿ ಶಿಕ್ಷಣ ಚಟುವಟಿಕೆಗಳು ಅರ್ಥಪೂರ್ಣವಾಗಿ ಬೋಧನೆ ನಡೆಯಬೇಕೆಂದು ಅಭಿಪ್ರಾಯಪಟ್ಟಾಗ ಸೋಲಿಗರ ಕನ್ನಡದ ಜನತೆಯೇ ಅದನ್ನು ವಿರೋಧಿಸಿತು. ಕಾರಣ ಕೇಳಿದರೆ ನಮ್ಮನ್ನು ನೀವು ಇನ್ನಷ್ಟು ಸಂಕುಚಿತ ಹಾಗೂ ಒಂದು ಭಾಗದ ಜನತೆ ಎಂದು ಪರಿಗಣಿಸಿದಾಗ ನಮ್ಮ ಮಕ್ಕಳು ಪ್ರತಿಭಾವಂತರಾಗುವುದಿಲ್ಲ ಎಂಬ ಮಾತುಗಳು ಕೇಳಿ ಬಂದವು. (ಸಮಕಾಲೀನ ವ್ಯಾಕರಣ ಕಾರ್ಯಾಗಾರದ ಮಾತು-೨೦೦೭) ಆದರೂ ಕೂಡ ಶಿಕ್ಷಣದಲ್ಲಿ ಕನ್ನಡದ ಸುಧಾರಣೆ ಮತ್ತು ಅರ್ಥಪೂರ್ಣ ಕಲಿಕೆಗೆ ಈ ಯೋಜನೆ ಜಾರಿಗೆ ಬಂದರೆ ಒಳ್ಳೆಯದು ಎಂದು ಹೇಳಬಹುದು. ಅಲ್ಲದೆ ತಮ್ಮ ಸಾಂಸ್ಕೃತಿಕ ಬೇರುಗಳನ್ನು ಉಳಿಸಿಕೊಳ್ಳುವಲ್ಲಿ ಸಹಾಯಕವಾಗಬಲ್ಲದು. ಆದ್ದರಿಂದ ಪಠ್ಯಪುಸ್ತಕ ರಚನಾ ಸಮಿತಿಯವರು ಭಾಷಾ ಕಲಿಕೆಯ ಬಗೆಗೆ ಈಗ ಲಭ್ಯವಿರುವ ಹೊಸ ಶೋಧಗಳ ನೆರವನ್ನು ಪಡೆಯಬೇಕಾದುದು ಅಗತ್ಯವಾದುದಾಗಿದೆ. ಇಲ್ಲವಾದಲ್ಲಿ ಮಗುವಿಗೆ ಚಾರಿತ್ರಿಕ, ಸಾಂಸ್ಕೃತಿಕ, ಆಧ್ಯಾತ್ಮಿಕ, ರಾಷ್ಟ್ರೀಯ, ಅಂತರಾಷ್ಟ್ರೀಯ, ತಿಳುವಳಿಕೆ ಹಾಗೂ ಭಾಷಾ ಕೌಶಲಗಳನ್ನು ಕಲಿಕೆಯಲ್ಲಿ ಪ್ರೇರೇಪಿಸುವುದು ಅಸಾಧ್ಯವಾದುದು ಎಂದೇ ಹೇಳಬಹುದು. ಆದ್ದರಿಂದ ಕಾಲಕ್ಕೆ ತಕ್ಕಂತೆ ಸಾಂಸ್ಕೃತಿಕ ಸಾಮಾಜಿಕ ರಚನಾ ವಿನ್ಯಾಸದಂತೆ ಭಾಷಾ ಕೌಶಲಗಳನ್ನು ವೃದ್ಧಿಸುವ ಮತ್ತು ಶಾಶ್ವತ ಅರ್ಥಪೂರ್ಣ ಕಲಿಕೆಗಾಗಿ ಸೈದ್ಧಾಂತಿಕವಾಗಿ ಮತ್ತು ಕನ್ನಡ ಭಾಷಾ ಪಠ್ಯಕ್ರಮ ರಚನಾ ದೃಷ್ಟಿಯಿಂದ ನಿಯಮಗಳು ಮತ್ತು ಶಿಕ್ಷಣದ ವಿಧಿ ವಿಧಾನಗಳು ಬದಲಾಗುವುದು ಅನಿವಾರ್ಯವಾಗಿದೆ.

## ೭.೧. ಬೋಧನೆ

ತರಗತಿಯಲ್ಲಿ ವಿದ್ಯಾರ್ಥಿಗಳಿಗೆ ಶಿಕ್ಷಕರಾದವರು ಪಾಠ/ಪದ್ಯವನ್ನು ಹೇಳಿಕೊಡುವುದನ್ನೇ ಬೋಧನೆ ಎಂದು ಸಾಮಾನ್ಯವಾಗಿ ಹೇಳುತ್ತೇವೆ. ಹಾಗಾದರೆ ಔಪಚಾರಿಕ ನೆಲೆಯಲ್ಲಿ ನಡೆಯುವ ಎಲ್ಲಾ ಚಟುವಟಿಕೆಗಳನ್ನು ಹೇಳಿಕೊಡುವ ವಿಧಾನವೆಲ್ಲ ಬೋಧನೆ ಎಂದಾಯಿತು. ಆದರೆ ಈ ಒಂದು ಹಂತವನ್ನು ಮಾತ್ರ ಬೋಧನೆ ಎಂದರೆ ಸಂಕುಚಿತವಾಗುತ್ತದೆ. ಈ ಬೋಧನೆ ಸಾಮಾಜಿಕವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಒಂದಲ್ಲ ಒಂದು ರೀತಿಯಲ್ಲಿ ಬೋಧನೆ ನಡೆಯುತ್ತಿರುತ್ತದೆ. ಈ ಬೋಧನೆ ಸಮಾಜಕ್ಕೆ ಒಳ್ಳೆಯ ಮಾರ್ಗದರ್ಶನವಾಗಬಲ್ಲದು. ಇಲ್ಲವೇ ಕೆಲವೊಂದು ಸಂದರ್ಭದಲ್ಲಿ ಬೋಧನೆ ಸಾಮಾಜಿಕ ಕಳಂಕಕ್ಕೆ ದಾರಿ ಮಾಡಿಕೊಡ ಬಹುದು. ಆದರೆ ಕಳಂಕದ ಪ್ರಚೋದನೆಯಾದರೆ ಅದನ್ನು ಬೋಧನೆ ಎಂಬ ಶಬ್ದ ಬಳಸುವುದು ಸರಿಯಾದುದಲ್ಲವೆನಿಸುತ್ತದೆ.

ತರಗತಿಯಲ್ಲಿ ನಡೆಯುವ ಬೋಧನೆ ವಿದ್ಯಾರ್ಥಿಗಳ ಮಾನಸಿಕ ಸಾಮರ್ಥ್ಯಕ್ಕೆ ಅನುಗುಣವಾಗಿ ಪಠ್ಯಗಳ ವಿಷಯಾನುಸಾರ ಬೋಧನೆ ನಡೆಯುವುದನ್ನು ಶಾಲೆಯ ವಾತವರಣದಲ್ಲಿ ನೋಡುತ್ತೇವೆ. ಈ ಬೋಧನೆ, ವಿಷಯಾನುಸಾರ ಪಾಠಯೋಜನೆಯ ಹಿನ್ನೆಲೆಯಲ್ಲಿ ಬೋಧನೆ ಹಾಕಿಕೊಂಡಿರುವುದನ್ನು ಕಾಣುತ್ತೇವೆ. ಈ ಪಾಠಯೋಜನೆಯ ಬೋಧನೆಯ ಕ್ರಮ ಭಾಷಾ ಪಠ್ಯಗಳಿಗೆ ಒಂದು ರೀತಿ ಇದ್ದರೆ ಐಚ್ಛಿಕ ವಿಷಯಗಳಿಗೆ ಇನ್ನೊಂದು ರೀತಿಯಲ್ಲಿರುತ್ತದೆ. ಕನ್ನಡ ಭಾಷಾ ಬೋಧನೆಯನ್ನು ಮಾಡುವಾಗ ಮುಖ್ಯವಾಗಿ ಆಲಿಸುವ, ಮಾತನಾಡುವ, ಬರೆಯುವ, ಓದುವ ಕೌಶಲಗಳನ್ನು ವೃದ್ಧಿಸುವ ನಿಟ್ಟಿನಲ್ಲಿ ಬೋಧನೆ ಮತ್ತು ಚಟುವಟಿಕೆಯ ವ್ಯವಸ್ಥೆಯನ್ನು ಕನ್ನಡ ಭಾಷಾ ಪಠ್ಯ ಪುಸ್ತಕಗಳಲ್ಲಿ ಇರುವುದನ್ನು ಕಾಣುತ್ತೇವೆ. ಒಂದು ತರಗತಿಯ ಕನ್ನಡ ಭಾಷಾ ಬೋಧನೆ ವಾರ್ಷಿಕವಾಗಿ ಭಾಷಾ ಕೌಶಲಗಳನ್ನು ವಿದ್ಯಾರ್ಥಿಗಳಿಗೆ ಭಾಷಾ ಕೌಶಲಗಳನ್ನು ಬೆಳೆಸುವ ನಿಟ್ಟಿನಲ್ಲಿ ಪಾಠ/ ಪದ್ಯಗಳನ್ನು ಬೋಧನೆ ಮಾಡುವ ಕ್ರಮಗಳ ಯೋಜನೆ ಒಂದರಿಂದ ಹತ್ತನೇ ತರಗತಿಯವರೆಗೂ ಜಾರಿಯಲ್ಲಿದೆ. ಬೋಧನೆಗೆ ಹೋಗುವ ಮುನ್ನ ಶಿಕ್ಷಕರು ಇದಕ್ಕೆ ತಯಾರಾಗಿ ಪಾಠ ಯೋಜನೆಯನ್ನು ರಚಿಸಿಕೊಂಡು ಹೋಗುವುದು ಅನಿವಾರ್ಯವಾಗಿದೆ.

**ಬೋಧನೆಯ ಅರ್ಥ**

'ಬೋಧನೆ' ಎಂಬ ಪದಕ್ಕೆ ಸಂಕ್ಷಿಪ್ತ ಕನ್ನಡ ನಿಘಂಟು (ಪುಟ೨೭೭)ವಿನಲ್ಲಿ ಕಲಿಸುವುದು ಹೇಳಿಕೊಡುವುದು, ಎಂಬ ಇತ್ಯಾದಿ ಅರ್ಥವನ್ನು ಕೊಡಲಾಗಿದೆ. ಅಂದರೆ ಗೊತ್ತಿಲ್ಲದ ವಿಚಾರವನ್ನು ಗೊತ್ತು ಮಾಡುವ ಪ್ರಕ್ರಿಯೆಗೆ ಬೋಧನೆ ಮಾಡುವುದು ಎಂದಾಯಿತು. ಡಾ. ಮಹಾಬಲೇಶ್ವರರಾವ್‌ರ 'ಪಠ್ಯಕ್ರಮ ಕಾರ್ಯಾಚರಣೆಯ ತತ್ವಗಳು' ಎಂಬ ಪುಸ್ತಕದಲ್ಲಿ ಬೋಧನೆ ಮತ್ತು ಬೋಧನ ತಂತ್ರಜ್ಞಾನ ಎಂಬ ಘಟಕದಲ್ಲಿ ಬೋಧನೆಯ ಅರ್ಥವನ್ನು ಹೀಗೆ ವಿಶ್ಲೇಷಿಸುತ್ತಾರೆ.(ಪು.ಸಂ.೫೧) 'ಬೋಧನೆ ಎಂಬುದು ಮಾನವ ತಂತ್ರಜ್ಞಾನ ಹಾಗೂ ಆತ್ಮದ ವೈದ್ಯಕೀಯು' ಈ ಹೇಳಿಕೆಯ ಪ್ರಕಾರ ಬೋಧನೆಯು ತಾಂತ್ರಿಕ ಸ್ವರೂಪದ್ದಾಗಿರುವಂತೆಯೇ ಉದಾತ್ತವಾದುದೂ ಆಗಿದೆ. ಅಂದರೆ ಬೋಧನೆಯು ಮಾನವ ವ್ಯಕ್ತಿತ್ವದ ಪುನರ್ ನಿರ್ಮಾಣ ಹಾಗೂ ಅಂತರಾತ್ಮದ ಪೋಷಣೆಗೆ ಸಂಬಂಧಿಸಿದ ಕ್ರಿಯೆ, ವಿದ್ಯಾರ್ಥಿಗಳನ್ನು ಅಪೇಕ್ಷಣೀಯ ಕಲಿಕೆಯತ್ತ ಕರೆದೊಯ್ಯಲು ಶಿಕ್ಷಕನು ಕೈಗೊಳ್ಳುವ ಬಹುಮುಖ ಕಾರ್ಯಗಳು ಎಂದೂ ಬೋಧನೆಯನ್ನು ಬಣ್ಣಿಸಲಾಗಿದೆ. ಈ ಹೇಳಿಕೆಯ ಪ್ರಕಾರ ವಿದ್ಯಾರ್ಥಿಗಳಿಗೆ ಶಿಕ್ಷಕರು ಹಲವಾರು ಕಾರ್ಯಗಳನ್ನು ಕೈಗೊಳ್ಳುತ್ತಾರೆ. ಕಲಿಯುವವರು ಏನನ್ನು ಕಲಿಯಬೇಕು ಎಂಬುದನ್ನು ಶಿಕ್ಷಕರೆ ನಿರ್ಧರಿಸುತ್ತಾರೆ ಮತ್ತು ಅವರು ಕಲಿಯುವಂತೆ ಮಾಡುತ್ತಾರೆ ಎಂದು ಕ್ರೂಢೀಕರಿಸಬಹುದು.

ಎಂ.ಎಂ.ಹ್ಯೂಸ್ : (೧೯೬೩) ಅವರ ಪ್ರಕಾರ 'ಬೋಧನೆಯು ಒಂದು ಪಾರಸ್ಪರಿಕ ಕ್ರಿಯೆ, ಪರಸ್ಪರ ಪ್ರಭಾವ ಬೀರುವ ಕ್ರಿಯೆ.' ಪ್ರೌಢ ವ್ಯಕ್ತಿತ್ವ ಹಾಗೂ ಅಪಕ್ವ ವ್ಯಕ್ತಿತ್ವದ

ವ್ಯಕ್ತಿಗಳ ನಡುವಣ ಸಂಪರ್ಕ ಈ ಸಂಪರ್ಕದಿಂದ ಅಪಕ್ವ ವ್ಯಕ್ತಿತ್ವದ ವ್ಯಕ್ತಿಯ ಶಿಕ್ಷಣವು ರೂಪಿಸಲ್ಪಡುತ್ತದೆ.'

**ಲೋರಿಸನ್** : (೧೯೩೭) ಅವರ ಪ್ರಕಾರ 'ಬೋಧನೆ ಎಂದರೆ ಒಂದು ಮನಸ್ಸು ಇನ್ನೊಂದು ಮನಸ್ಸನ್ನು ಪ್ರಭಾವಿಸುವ ಕ್ರಿಯೆ.' ಬೋಧನೆ ಎಂದರೆ ವಿದ್ಯಾರ್ಥಿಗಳನ್ನು ಮುಟ್ಟಿ ತಟ್ಟುವ ಮಾನವೀಯ ಕ್ರಿಯೆ. ಬೋಧನೆ ಎಂಬುದು ತಿಳಿದವನು ತಿಳಿಯದವನಿಗೆ ತಿಳುವಳಿಕೆ ನೀಡುವ ಕ್ರಿಯೆ. ಗುರುವು ಅಜ್ಞಾನಿಯನ್ನು ಜ್ಞಾನಿಯನ್ನಾಗಿ, ಎಚ್ಚರಿಸುವ ಕ್ರಿಯೆ. ಬುದ್ಧಿ ನೀಡುವ ಕ್ರಿಯೆಯೇ ಬೋಧನೆ.

**ಪ್ರಿನ್ಸ್** : ಅವರ ಪ್ರಕಾರ; 'ಪರಿಣಾಮಕಾರಿಯಾದ ಬೋಧನೆಯು ಮಕ್ಕಳ ಮೇಲೆ ಪ್ರಭಾವ ಬೀರುವುದು ಹಾಗೂ ಅವರ ಭೌತಿಕ ವಿಕಾಸಕ್ಕೆ ಪರಿಣಾಮಕಾರಿಯನ್ನುಂಟು ಮಾಡುವುದೇ ಬೋಧನೆ.'

**ಸಿಂಪ್ಲನ್ನರು** : ಹೇಳಿರುವ ಪ್ರಕಾರ, 'ಇಂದಿನ ಭಾವಿ ನಾಗರೀಕರಿಗೆ ಸೂಕ್ತವಾದ ತರಬೇತಿ ಹಾಗೂ ಬೋಧನೆಯನ್ನು ಕ್ರಮವಾಗಿ ಬೋಧಿಸುವ ವಿಧಾನವೇ ಬೋಧನೆ.' ಎಂದು ಅಭಿಪ್ರಾಯಪಡುತ್ತಾರೆ.

ಈ ಮೇಲಿನ ಅಭಿಪ್ರಾಯಗಳನ್ನು ಗಮನಿಸಿದಾಗ ಮಗುವಿನ ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗಾಗಿ ಗೊತ್ತಿಲ್ಲದ ವಿಚಾರಗಳನ್ನು ತಿಳಿಸಿಕೊಡುವುದೇ ಬೋಧನೆ ಎಂಬ ಅರ್ಥವನ್ನು ಗ್ರಹಿಸಬಹುದು. ಬೋಧನೆಯನ್ನು ಕನ್ನಡಭಾಷಾ ಬೋಧನೆಗೆ ಅನ್ವಯಿಸಿ ಹೇಳುವುದಾದರೆ ಧ್ವನಿ, ಪದ, ವಾಕ್ಯ, ವ್ಯಾಕರಣಾಂಶಗಳು, ಜೊತೆಗೆ ಕನ್ನಡಭಾಷಾ ವೈವಿಧ್ಯತೆಯನ್ನು ಕನ್ನಡ ಸಾಹಿತ್ಯ ಅಥವಾ ಕನ್ನಡ ಭಾಷೆಯ ವಿವಿಧ ಚಟುವಟಿಕೆಗೊಳಪಡಿಸಿ ಪಠ್ಯ ಮತ್ತು ಪಠ್ಯೇತರ ಚಟುವಟಿಕೆಗಳ ವಿಧಾನಗಳನ್ನು ಬಳಸಿಕೊಂಡು ವಿದ್ಯಾರ್ಥಿಗಳಿಗೆ ಹೇಳಿಕೊಡುವುದೇ ಬೋಧನೆ ಎಂದಾಯಿತು.

ಈ ಕನ್ನಡಭಾಷಾ ಬೋಧನೆಯು ಅನುಗಮನ, ನಿಗಮನ, ಪ್ರದರ್ಶನ ಪದ್ಧತಿ, ಸಮಸ್ಯಾ ಪರಿಹಾರಪದ್ಧತಿ, ಯೋಜನಾಪದ್ಧತಿ, (ಪ್ರಾಜೆಕ್ಟ್) ಮಾರ್ಗದರ್ಶಿತ ಅನ್ವೇಷಣ, ಘಟಕಪದ್ಧತಿ ವಿಧಾನಗಳಿಂದ ಬೋಧನೆಯು ನಡೆಯುತ್ತಿರುವುದನ್ನು ಕಾಣುತ್ತೇವೆ. ಬೋಧನೆಯ ವ್ಯವಸ್ಥೆಯಲ್ಲಿ ಈ ಎಲ್ಲಾ ಯೋಜನೆಯ ಅಂಶಗಳು ಕಾಲದಿಂದ ಕಾಲಕ್ಕೆ ಬದಲಾವಣೆಯಾಗುತ್ತಾ ಬಂದಿರುವುದನ್ನು ಕಾಣುತ್ತೇವೆ. ಇದರಿಂದ ಔಪಚಾರಿಕ ಶಿಕ್ಷಣ ಸುಧಾರಣೆಯ ದಾರಿಯಲ್ಲಿ ಇರುವುದನ್ನು ಒಪ್ಪಿಕೊಳ್ಳಬೇಕು. ಆದರೆ ಈ ಮೇಲೆ ವಿವರಿಸಿದ ಪಾಠಯೋಜನೆಯ ಕ್ರಮ ಅಥವಾ ಬೋಧನೆಯ ಕ್ರಮಗಳು ನಡೆಯುತ್ತಿವೆ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ. ಈ ಕ್ರಮವು ಜಾರಿಯಲ್ಲಿರುವುದು ನಿಜ. ಆದರೆ ಮಕ್ಕಳು ಏಕೆ ಕಾಲದಿಂದ ಕಾಲಕ್ಕೆ ಕನ್ನಡ ಭಾಷೆಯ ಕೌಶಲಗಳಲ್ಲಿ ಜಾಗರೂಕತೆಯ ಪ್ರಭಾವ ಬೀರುತ್ತಿಲ್ಲ, ಬಿದ್ದರು ಈ ಚಟುವಟಿಕೆಗಳು

ಸಾಮಾಜಿಕ ಸಂವಹನದಲ್ಲಿ ಬಳಕೆಯ ಪ್ರಮಾಣ ಹೆಚ್ಚಾಗುತ್ತಿಲ್ಲ ಎಂಬುದನ್ನು ಯೋಚಿಸ ಬೇಕಾಗಿದೆ. ಪ್ರಾರಂಭದಿಂದಲೂ ನಮ್ಮ ಕನ್ನಡಭಾಷಾ ರಚನೆಯ ಮತ್ತು ಉಚ್ಚಾರಣೆಯ ವಿಧಾನವನ್ನು ಕಲಿಸಲಾಗುತ್ತದೆ. ಆದರೆ ಈ ತಿಳುವಳಿಕೆ ಉನ್ನತ ವ್ಯಾಸಂಗಕ್ಕೆ ಹೋದರೂ ಭಾಷಾ ಕೌಶಲ ತಿಳುವಳಿಕೆಯ ಸುಧಾರಣೆ ಇರುವುದಿಲ್ಲ. ಬೋಧನೆಯ ಸುಧಾರಣೆಗಾಗಿ ಹಾಕಿಕೊಂಡ ಯೋಜನೆ ಮತ್ತು ಚಟುವಟಿಕೆಗಳು ಏನನ್ನು ಸುಧಾರಿಸಿದವು? ಬೋಧನೆ ಕಲಿಸಿದ್ದಾದರು ಏನು? ಎಂಬುದನ್ನು ಯೋಚಿಸುವ ಅಗತ್ಯತೆ ಇದೆ. ಕನ್ನಡ ಭಾಷೆಯನ್ನು ಕಲಿಸುವ ಕೌಶಲಗಳು, ಪಠ್ಯದಲ್ಲಿ ಬರುವ ಪಾಠ/ಪದ್ಯಗಳು ಮಗುವಿನ ಶ್ರೇಯಸ್ಸನ್ನು ಬಯಸುತ್ತವೆಯೋ ಅಥವಾ ಜೀವನದಲ್ಲಿ ಅವುಗಳ ಉಪಯೋಗವೇನು ಎಂಬ ಇತ್ಯಾದಿ ಪ್ರಶ್ನೆಗಳು ಬೋಧನೆ ಬಗ್ಗೆ ವಿಚಾರ ಮಾಡಿದಾಗ ಹತ್ತಾರು ಪ್ರಶ್ನೆಗಳು ಉದ್ಭವವಾಗುವುದು ಸಾಮಾನ್ಯ. ಬೋಧಿಸುವ ಕನ್ನಡಭಾಷೆ ಅದು ಸಾಮಾಜಿಕ ಸಂವಹನದ ಸಂದರ್ಭದಲ್ಲಿ ಬಳಕೆಯಾಗುತ್ತಿದೆಯಾ, ಬಳಕೆಯಾದರೂ ಅದು ಯಾವ ಸಂದರ್ಭದಲ್ಲಿ ಬಳಕೆಯಾಗುತ್ತದೆ. ಈ ಬಳಕೆಯನ್ನು ಬೋಧನೆ ಮಾಡಿದವರು ಮಾತ್ರ ಬಳಸುತ್ತಾರೆಯೇ ಅಥವಾ ಬೇರೆಯವರು ಆ ಕೌಶಲವನ್ನು ಪಡೆದಿರುತ್ತಾರೆಯೇ ಪಡೆದಿರುವ ಬಗ್ಗೆ ನಿದರ್ಶನಗಳನ್ನು ಕಾಣುತ್ತೇವೆ. ಹಾಗಾದರೆ ಅದನ್ನು ಔಪಚಾರಿಕ ಶಿಕ್ಷಣದಲ್ಲಿ ಏಕೆ ಬೋಧಿಸಬೇಕು ಎಂಬ ಪ್ರಶ್ನೆಗಳು ಸಹಜವಾಗಿ ಮುಂದೆ ಬಂದು ನಿಲ್ಲುತ್ತವೆ. ಈ ಮೇಲಿನ ಪ್ರಶ್ನೆಗಳನ್ನು ನೋಡಿದಾಗ ನಮಗೆ ಪ್ರಾಥಮಿಕ ಹಂತದಲ್ಲಿಯೆ ಬೋಧನೆಯ ಕೊರತೆ ಇದೆ. ಆ ಕೊರತೆ ಯಾವ ಯಾವ ವಿಧಾನದಲ್ಲಿದೆ ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಬೇಕಾಗಿದೆ. ಹಾಗಾದಾಗ ಮಾತ್ರ ಬೋಧನೆ ಮಾಡಿದ ವಿಚಾರ ಸಾಮಾಜಿಕ ಸಂವಹನದಲ್ಲಿ ಎಷ್ಟರ ಮಟ್ಟಿಗೆ ಬಳಕೆಯಾಗುತ್ತಿದೆ ಎಂಬುದಕ್ಕೆ ಉತ್ತರ ಸರಳವಾಗಿ ದೊರೆಯುತ್ತದೆ. ಪಠ್ಯದ ಭಾಷೆ, ಮಾತನಾಡುವ ಭಾಷೆಯ ಭಿನ್ನತೆಯನ್ನು ಹೋಗಲಾಡಿಸಿದಾಗ ಬೋಧನೆ ಮಕ್ಕಳಿಗೆ ಸರಳವಾಗಿ ಅರ್ಥವಾಗುತ್ತದೆ ಎಂಬುದನ್ನು ಯೋಚಿಸಬೇಕಿದೆ. ನಾವು ಬೋಧನೆ ಮಾಡುವ ವರ್ಣಗಳು, ಪದಗಳು, ವಾಕ್ಯಗಳು, ಚಟುವಟಿಕೆಗಳು, ಪಾಠ/ಪದ್ಯಗಳು ಕೇವಲ ಪಾಠದಲ್ಲಿಯೇ ಬಂದು ಹೋಗುವ ವಿಷಯ ಮತ್ತು ಬೋಧನೆ ಮಾಡುತ್ತೇವೆ ಎಂಬುದನ್ನು ಮರೆಯುವಂತಿಲ್ಲ. ಉದಾಹರಣೆಗೆ ಹೇಳುವುದಾದರೆ, ಕನ್ನಡ ಕಲಿ-ನಲಿ ಒಂದನೇ ತರಗತಿಯ ಪಠ್ಯಪುಸ್ತಕ (ಪು.ಸಂ.-೧) ಪದ್ಯಪಾಠ ಠಣ್!ಠಣ!ಠಣ! ಶಿರೋನಾಮೆ. ಈ ಪದ್ಯದಲ್ಲಿ ಝಣ!ಝಣ!ಝಣ!... ತಕಾ!ತಕ್ಕ!ತಕ್ಕ!... ತಾನ!ನಾನ!ನನ....ಎಂಬ ಸಾಲುಗಳ ವಾಕ್ಯಗಳನ್ನು ಕಾಣುತ್ತೇವೆ.

ಶಿಕ್ಷಣದ ದೃಷ್ಟಿಯಿಂದ ಈ ಪಾಠ ಕಲಿಸುತ್ತಾ ಮಗುವನ್ನು ನಲಿಸುವ ದಾರಿಯಲ್ಲಿ ಈ ಪಾಠ ಪರಿಚಯಿಸಲಾಗುತ್ತದೆ ಎಂದು ಹೇಳಲಾಗಿದೆ. ಆದರೆ ಈ ಪಾಠದಲ್ಲಿ ೧೪ಬಾರಿ ಆಶ್ಚರ್ಯಕರ ಚಿಹ್ನೆ ಬಳಕೆಯಾಗಿರುವುದುನ್ನು ಕಾಣುತ್ತೇವೆ. ಮಗುವಿಗೆ ಪ್ರಾರಂಭದಲ್ಲಿಯೇ ಇಂತಹ ಚಿಹ್ನೆಗಳನ್ನು ಬಳಸಿ ಕಲಿಸುವುದು ಎಷ್ಟರ ಮಟ್ಟಿಗೆ ಸಮಂಜಸವಾದುದು.

ವಿಶ್ವಾಸನೀಯವಾದುದು, ಉಪಯುಕ್ತವಾಗಬಲ್ಲದು ಎಂಬುದನ್ನು ಪರಾಮರ್ಶಿಸುವ ಅಗತ್ಯತೆ ಕಂಡು ಬರುತ್ತದೆ. ಬೋಧನೆ ಮಾಡುವ ಶಿಕ್ಷಕರು ವಿದ್ಯಾರ್ಥಿಗಳಿಗೆ ಈ ಪಾಠವನ್ನು ಹೇಗೆ ಉಚ್ಚಾರಣೆಯ ಮೂಲಕ, ಆಶ್ಚರ್ಯಕರ ಚಿಹ್ನೆಯ ಅನುಸಾರ ಬೋಧಿಸಬಲ್ಲರು. ಬೋಧಿಸಿದರೂ ಮಕ್ಕಳು ಅದನ್ನು ಹೇಗೆ ಗ್ರಹಿಸಬಲ್ಲರು ಎಂಬುದನ್ನು ತಿಳಿಯಬೇಕಾಗಿದೆ. ಆದ್ದರಿಂದ ಇಂತಹ ವಾಕ್ಯಗಳನ್ನು ಪರಿಚಯಕ್ಕೆ ಈ ತರಗತಿಯಲ್ಲಿ ಅದರಲ್ಲೂ ಪ್ರಾರಂಭದ ಹಂತದಲ್ಲಿ ಕೊಡುವುದು ಅಷ್ಟೊಂದು ಸಮಂಜಸವಾಗಲಾರದು. ಅದೇ ರೀತಿ ಈ ತರಗತಿಯ ಪಾಠಗಳ ಕೊನೆಯ ಭಾಗವಾದ ಪದಕೋಶಿಯಲ್ಲಿ (**ಪು.ಸ. ೮೮**) ಸಭಾಪತಿಗೆ ಸಭಾಧ್ಯಕ್ಷ, ಸಭೆಯ ಮುಖ್ಯಸ್ಥರು ಎಂದು ಪದದ ವಿವಿಧ ಅರ್ಥವನ್ನು ಕೊಡಲಾಗಿದೆ. ಸರಸರ–ಬೇಗಬೇಗ ಎಂದು ಕೊಟ್ಟು ಪ್ರತಿಧ್ವನಿತ ಪದ ಎಂದು ಹೇಳಿದೆ. ಈ ಎಲ್ಲಾ ಅಂಶಗಳನ್ನು ಗ್ರಹಿಸುವ ಶಕ್ತಿ ಮಕ್ಕಳಿಗೆ ಇದೆಯೇ? ಎಂಬುದನ್ನು ಪಠ್ಯಕ್ರಮ ರಚನೆ ಮಾಡುವವರು ಶೈಕ್ಷಣಿಕ ಮನೋವಿಜ್ಞಾನಿಗಳ ಜೊತೆಗೆ ಪರಾಮರ್ಶಿಸಿ ಕೊಡುವುದು ಸೂಕ್ತವೆನಿಸುತ್ತದೆ. ತರಗತಿ–೨ ಕನ್ನಡ ಕಲಿ–ನಲಿ ಪಠ್ಯಪುಸ್ತಕದಲ್ಲಿ ಪಾಠ–೨ ಗಡಿಯಾರ ಎಂಬ ಪಾಠವನ್ನು ಕೊಟ್ಟಿದೆ. ಕನ್ನಡ ಪಠ್ಯದಲ್ಲಿ ಈ ಪಾಠ ಮಾಡುವ ಉದ್ದೇಶವಾದರು ಏನು ಈ ಪಾಠದಿಂದ ಮಕ್ಕಳು ಕನ್ನಡ ಅಂಕೆಗಳನ್ನು ಬಳಸುವುದನ್ನು ಕಲಿಸುವುದೊಂದು ಬಿಟ್ಟರೆ ಇದರಿಂದ ಕನ್ನಡ ಭಾಷೆಯನ್ನು ಕಲಿಸುವುದಕ್ಕೆ ಈ ಪಾಠ ಸರಿಯಾದುದಲ್ಲ. ಸಮಯ ಪ್ರಜ್ಞೆಯಂತಹ ವಿಷಯಗಳನ್ನು ಬೇರೆ ಪಠ್ಯಗಳಲ್ಲಿ ಸೇರಿಸಿ ಬೋಧನೆ ಮಾಡುವುದು ಸೂಕ್ತವೆನಿಸುತ್ತದೆ. ಅಷ್ಟೇ ಅಲ್ಲದೆ ಈ ಪಾಠದ ವಿಷಯಕ್ಕೂ ಅಭ್ಯಾಸ ಚಟುವಟಿಕೆಗೂ ಭಿನ್ನವಾದುದಾಗಿದೆ. ಪಾಠ–ಗಡಿಯಾರ ಅಂದರೆ ಸಮಯ ಪ್ರಜ್ಞೆಯನ್ನು ಮಕ್ಕಳಿಗೆ ತಿಳಿಸುವುದು. ಆದರೆ ಚಟುವಟಿಕೆ (**ಪುಟ–೬**) ಯಲ್ಲಿ ಚಿತ್ರಕ್ಕೆ ಪದ ಹೊಂದಿಸಿ ಓದಿ ಬರೆಯಿರಿ ಎಂದು ಕೇಳಿದೆ. ಆಮೆ, ಐರಾವತ, ಔಷಧ, ಉಳಿ, ಇನ ಎಂಬ ಪದಗಳನ್ನು ಕೊಟ್ಟಿದೆ. ಇವುಗಳ ಸಹ ಚಿತ್ರಗಳನ್ನು ಕೊಡಲಾಗಿದೆ. ಪಾಠಕ್ಕೂ ಚಟುವಟಿಕೆಗಳಿಗೂ ಇರುವ ಸಂಬಂಧವಾದರೂ ಏನು? ಎಂದರೆ ಪಠ್ಯೇತರ ಚಟುವಟಿಕೆ ಎಂದು ಹೇಳಿ ಜಾರಿಕೊಳ್ಳಬಹುದು. ಆದರೆ ಇದು ಸಲ್ಲದು. ಇಂತಹ ಚಟುವಟಿಕೆಗಳು ಪ್ರಾಥಮಿಕ ಹಂತದ ಎಲ್ಲಾ ಪಠ್ಯಗಳಲ್ಲೂ ಅಲ್ಲೊಂದು ಇಲ್ಲೊಂದರಂತೆ ಸೇರಿರುವುದನ್ನು ಕಾಣುತ್ತೇವೆ. ಇದು ಸರಿಯಾದ ಕ್ರಮವಲ್ಲವೆನಿಸುತ್ತದೆ. ಬೋಧನೆ ಏನು ನಡೆದಿರುತ್ತದೆಯೋ ಅದಕ್ಕೆ ಸಂಬಂಧಿಸಿದ ಚಟುವಟಿಕೆ ಪಾಠಕ್ಕೆ ಸಂಭಂಧಿಸಿದಂತೆ ನೇರವಾಗಿರಬೇಕು. ಇಲ್ಲವೆ ಪಠ್ಯೇತರ ಚಟುವಟಿಕೆಯಲ್ಲೂ ಈ ಕ್ರಮವನ್ನು ಸೇರಿಸಿದರೆ ಮಕ್ಕಳಿಗೆ ಉಪಯುಕ್ತವಾಗಬಲ್ಲದು.

ಕನ್ನಡ ಕಲಿ–ನಲಿ ೩ನೇತರಗತಿಯ ಪಠ್ಯದಲ್ಲಿ ಪಾಠ–೪' ನಿಯಮ ಪಾಲನೆ' ಎಂಬ ಶಿರೋನಾಮೆಯನ್ನು ಕೊಟ್ಟು ರಸ್ತೆಯನ್ನು ದಾಟುವಾಗ ಅನುಸರಿಸಬೇಕಾದ ನಿಯಮಗಳನ್ನು ಹೇಳಿಕೊಡುವ ಅಂಶವನ್ನು ಕಾಣುತ್ತೇವೆ. ಆದರೆ ಇಲ್ಲಿ ಬಳಸಿದ ಪದಗಳು

ನೇರವಾಗಿ ಇಂಗ್ಲೀಷ್ ರೂಪದ ಪದಗಳನ್ನೇ ಬಳಸಿದೆ. ಈ ಇಂಗ್ಲೀಷ್ ಪದ ಬಳಕೆಯಾದರು ಆ ಪದಗಳು ಕನ್ನಡಕ್ಕೆ ಸ್ವೀಕೃತಗೊಂಡಿಲ್ಲ. ಜೊತೆಗೆ ಸಾಮಾಜಿಕ ಸಂವಹನದಲ್ಲಿಯೂ ಬಳಕೆ ಇಲ್ಲದ ಪದಗಳನ್ನು ಈ ಪಾಠದಲ್ಲಿ ಬಳಸಿರುವುದನ್ನು ಕಾಣುತ್ತೇವೆ.

**ಉದಾಹರಣೆಗೆ** : 'ಝೀಬ್ರಾ ಪಟ್ಟಿ' ಈ ಪದ ಬಳಕೆಯನ್ನು ಮಗು ಎಲ್ಲಿಯೂ ಕೇಳಿರುವುದಿಲ್ಲ. ಮುಂದೆ ಕೇಳುವ ಸಂದರ್ಭಗಳು ಬರುವುದಿಲ್ಲ. ಏಕೆಂದರೆ ಈ ಪದ ಬಳಕೆ ಸಾಮಾಜಿಕ ಸಂವಹನದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಪಾಠದಲ್ಲಿ ಬಳಸಿದ ವಾಕ್ಯವನ್ನಾಗಲಿ ಪದವನ್ನಾಗಲಿ, ಬಳಸಿಕೊಂಡು ಉತ್ತರವನ್ನು ನೀಡಬಲ್ಲದು. ಆದರೆ ಈ ಪದವನ್ನು ಕಲಿಸುವುದರಿಂದ ಆಗುವ ಪ್ರಯೋಜನವಾದರು ಏನು? ಕಲಿತ ಪದಗಳು ಎಷ್ಟು ದಿನಗಳ ಕಾಲ ಉಳಿಯ ಬಲ್ಲವು ಎಂಬುದನ್ನು ಯೋಚಿಸಬೇಕಿದೆ. ಭಾಷಾ ಶಾಸ್ತ್ರಜ್ಞರು, ಭಾಷಾ ಚಿಂತಕರು ಇಂತಹ ಪದಗಳನ್ನು ಪಾಠದಲ್ಲಿ ಕೊಡುವ ಮುಂಚೆ ಈ ಪದವನ್ನು ಮಗುವಿಗೆ ಕಲಿಸುವುದರಿಂದ ಆಗುವ ಪ್ರಯೋಜನವಾದರೂ ಏನು ಎಂಬುದನ್ನು ಯೋಚಿಸಬೇಕಾದುದು ಬಹಳ ಮುಖ್ಯವೆನಿಸುತ್ತದೆ. ಇಲ್ಲವಾದಲ್ಲಿ ಇಂತಹ ಪದಗಳ ಬಳಕೆಯಿಂದ ಮಕ್ಕಳು ಈ ಪಾಠದಿಂದ ನೀತಿಪಾಠವನ್ನು ಕಲಿಯುತ್ತಾರೆ. ಆದರೆ ತತ್‌ಕ್ಷಣದಲ್ಲಿ ಮರೆಯುತ್ತಾರೆ. ಆದ್ದರಿಂದ ನೀತಿಪಾಠ ಪರಿಚಯಿಸುವಾಗ ಪಠ್ಯ ಪುಸ್ತಕಗಳಲ್ಲಿ ಸಾಮಾಜಿಕ ಸಂವಹನದಲ್ಲಿನ ಪದಗಳನ್ನು ಬಳಸುವುದು ಪ್ರಾಥಮಿಕ ಹಂತದಲ್ಲಿ ಮುಖ್ಯವೆನಿಸುತ್ತದೆ.

ಕನ್ನಡ ಕಸ್ತೂರಿ–೫ನೇ ತರಗತಿಯ ಎರಡನೆಯ ಸೆಮಿಸ್ಟರ್‌ನ ಕರಡಿಯ ಕುಣಿತ **(ಪುಟ ಸಂಖ್ಯೆ–೮)** ದ 'ಕುಣಿಯಲೆ ಮಗನೆ' ನೀ ಅನ್ನೊದೊಂದೇ ತಡ ತನ್ನನ ತಾನನsss ತಂದಾನ....sss ಎಂದು ಪದ್ಯದಲ್ಲಿ ನೀಡಿದೆ. ಈ ವಾಕ್ಯದಲ್ಲಿ ಬಳಕೆಯಾದ ವ್ಯಾಕರಣಂಶ (s)ತಿಳುವಳಿಕೆ ಈ ತರಗತಿಯ ಅಥವಾ ಹಿಂದಿನ ತರಗತಿ ಪಾಠ/ಪದ್ಯ/ ಚಟುವಟಿಕೆಯಲ್ಲಿಯೂ ಪರಿಚಯಿಸಿ ಇದರ ಬಗ್ಗೆ ಕನ್ನಡ ಶಿಕ್ಷಕರಿಗೂ ಸಮರ್ಪಕವಾಗಿ ತಿಳುವಳಿಕೆ ಇರುವುದಿಲ್ಲ. ಇದನ್ನು ಈ ತರಗತಿಯ ಮಟ್ಟದಲ್ಲಿ ಕಲಿಸಿ ಕೊಡುವುದರಿಂದ ಆಗುವುದಾದರೂ ಏನು? ಎಂಬುದನ್ನು ಯೋಚಿಸಬೇಕಿದೆ. ಇದನ್ನು ಯಾಕೆ ಬಳಸುತ್ತಾರೆ. ಬಳಸಲು ಕಾರಣವನ್ನು ಮಕ್ಕಳಿಗೆ (ಹಿರಿಯ ಪ್ರಾಥಮಿಕ) ತಿಳಿಸಿ, ನಂತರ ಪಾಠದಲ್ಲಿ ಬಳಕೆ ಮಾಡಿಕೊಂಡು ಬೋಧಿಸುವಂತಾದರೆ ಕಲಿಕೆ ಸ್ಪಷ್ಟವಾಗಬಲ್ಲದು. ಜೊತೆಗೆ ಮಗು ವ್ಯಾಕರಣಾಂಶವನ್ನು ಸ್ಪಷ್ಟವಾಗಿ ಹಂತಹಂತವಾಗಿ ಕಲಿಯಲು ಅವಕಾಶ ಮಾಡಿಕೊಟ್ಟಂತಾಗುತ್ತದೆ.

ಕನ್ನಡ ಕಸ್ತೂರಿ–೬ನೇ ತರಗತಿಯ ಪಠ್ಯದಲ್ಲಿ 'ಕರಾವಳಿ ಕೇಸರಿ'(ಪು.ಸಂ.೧) ಎಂಬ ಪಾಠವನ್ನು ಕೊಡಲಾಗಿದೆ. ಈ ಪಾಠ ಭಾಗದ ಕೊನೆಗೆ ಅಭ್ಯಾಸದಲ್ಲಿ ಭಾಷಾ ಚಟುವಟಿಕೆಯಲ್ಲಿ ವರ್ಣಮಾಲೆಯನ್ನು ಕೊಟ್ಟು ಅವುಗಳ ವಿವಿಧ ಪಂಗಡಗಳ ಮೇಲೆ ಪ್ರಶ್ನೆ ಕೇಳಲಾಗಿದೆ. ಈ ಪಾಠದ ಉದ್ದೇಶ ಕರಾವಳಿ ಪ್ರದೇಶದ ಇತಿಹಾಸವನ್ನು ತಿಳಿಸುವುದುನ್ನು ನೋಡುತ್ತೇವೆ.

ಇದರ ಜೊತೆಗೆ ಕರಾವಳಿ ಪ್ರದೇಶ ಪದ, ವಾಕ್ಯಗಳನ್ನು ಬಳಸಬೇಕು. ಇದರಿಂದ ಕನ್ನಡಭಾಷೆಯ ಉಪಭಾಷೆಗಳನ್ನು ಪರಿಚಯಿಸಿ 'ಕನ್ನಡಕಸ್ತೂರಿ' ಎಂಬ ಶಿರೋನಾಮೆಗೆ ನ್ಯಾಯ ಒದಗಿಸಿದಂತಾಗುತ್ತದೆ. ಈ ವಿಧಾನ ಕರ್ನಾಟಕದ ಎಲ್ಲಾ ಭಾಗದ ಭಾಷೆಯಲ್ಲಿನ ಪದ ವಾಕ್ಯ ಪರಿಚಯಕ್ಕೆ ಪಾಠಗಳಲ್ಲಿ ತರಗತಿಯ ಅನುಸಾರವಾಗಿ ಎಲ್ಲಾ ಭಾಗದ ಮಕ್ಕಳಿಗೂ ಕರ್ನಾಟಕದ ವಿವಿಧ ಭಾಗಗಳ ಕನ್ನಡ ಉಪಭಾಷೆಯ ಪರಿಚಯವಾಗುತ್ತದೆ. ಜೊತೆಗೆ ಆ ಭಾಗದ ಇತಿಹಾಸ ಪರಂಪರೆಯನ್ನು ಹೇಳಿಕೊಟ್ಟಂತೆ ಆಗುತ್ತದೆ. ಆದರೆ ಈ ಪಾಠದಲ್ಲಿ ನಡೆದಿರುವುದು ಕರಾವಳಿ ಇತಿಹಾಸವೇ ಹೊರತು ಅಲ್ಲಿನ ಪದ, ವಾಕ್ಯಗಳ ಬಳಕೆ ಹಿನ್ನೆಲೆಯಲ್ಲಿ ಪಾಠ ರಚನೆಯಾಗಿಲ್ಲ. ಆದ್ದರಿಂದ ಇದನ್ನು ಇತಿಹಾಸದಲ್ಲಿ ಸೇರಿಸಿ ಮಕ್ಕಳಿಗೆ ಕಲಿಸುವುದು ಸೂಕ್ತವಾಗಬಲ್ಲದು.

ಈ ಪಠ್ಯದ ಮುಂದಿನ ಭಾಗದಲ್ಲಿಯೇ (ಪು.ಸಂ.೨೪) 'ಪಂಡಿತ ತಾರನಾಥರ' ಪಾಠವನ್ನು ಕೊಡಲಾಗಿದೆ. ಇವರು ಕರ್ನಾಟಕಕ್ಕೆ ನೀಡಿದ ಕೊಡುಗೆ ಶ್ಲಾಘನೀಯ ಮತ್ತು ಮಾದರಿಯೂ ಹೌದು. ಇವರ ಕೊಡುಗೆಯನ್ನು ಕನ್ನಡ ಜನತೆಗೆ ತಿಳಿಸುವುದು ಅವಶ್ಯಕ. ಆದರೆ ಇವರ ಕೊಡುಗೆಯನ್ನು ಕನ್ನಡಭಾಷಾ ಪಠ್ಯದಲ್ಲಿ ಪರಿಚಯಿಸುವುದು ಸೂಕ್ತವಲ್ಲ. ಐಚ್ಛಿಕ ಪಠ್ಯಗಳಲ್ಲಿ ಇವರನ್ನು, ಇವರ ಕೊಡುಗೆಯನ್ನು ಪರಿಚಯಿಸುವುದು ಸೂಕ್ತ. ಕನ್ನಡ ಸಾಹಿತ್ಯವನ್ನು ಪರಿಚಯಿಸುವುದು ಕನ್ನಡ ಭಾಷಾ ಪಠ್ಯಗಳ ಮುಖ್ಯ ಉದ್ದೇಶವಾಗಬಾರದು. ಕನ್ನಡ ಭಾಷೆಗೆ ಸಂಬಂಧಿಸಿದವರ ಪರಿಚಯ ಮಾಡಿಕೊಡುವುದು ಸೂಕ್ತವೆನಿಸುತ್ತದೆ.

ಕನ್ನಡ ಕಸ್ತೂರಿ ೭ನೇತರಗತಿಯಲ್ಲಿ (ಪು.ಸಂ.೧೮೮) ಪುಷ್ಪರಗಳೆ, ಪದ್ಯ ಪಾಠವನ್ನು ಬೋಧನೆ ಮಾಡಲು ಅವಕಾಶ ಮಾಡಿಕೊಡಲಾಗಿದೆ. ಈ ಪದ್ಯದಲ್ಲಿ ಹಳಗನ್ನಡ ವರ್ಣಗಳನ್ನು ಬಳಸಿದ ಪದಗಳನ್ನು ಕೊಡಲಾಗಿದೆ. ಹಾಗೆಯೇ ಈ ವರ್ಣಗಳ ಬಗೆಯಾಗಲಿ, ಪುಷ್ಪರಗಳೆ ಎಂದರೇನು? ಎಂಬುದನ್ನು ಎಲ್ಲಿಯೂ ಹೇಳಿಕೊಟ್ಟಿಲ್ಲ. ಆದರೆ ಹಳೆಗನ್ನಡ ವರ್ಣಗಳನ್ನು ಮಾತ್ರ ನೇರವಾಗಿ ಬಳಸಿದೆ. ಇದರಿಂದ ಮಕ್ಕಳಿಗೆ ಅರ್ಥಪೂರ್ಣ ಕಲಿಕೆಯಾಗಬಲ್ಲದೇ ಎಂಬುದನ್ನು ಪಠ್ಯಪುಸ್ತಕ ರಚನಾ ಸಮಿತಿ ಯೋಚಿಸುವ ಅಗತ್ಯವಿದೆ. ಹಳೆಗನ್ನಡ ವರ್ಣಗಳನ್ನು ಪರಿಚಯಿಸದೇ ಪದ್ಯದಲ್ಲಿ ಕೊಡುವುದರಿಂದ ಕಂಠಪಾಠ ಕಲಿಕೆಯಾಗಬಲ್ಲದೇ ವಿನಃ ಅರ್ಥಪೂರ್ಣ ಕಲಿಕೆಯಾಗದು.

ಒಟ್ಟಾರೆಯಾಗಿ ೧ ರಿಂದ ೭ ತರಗತಿಯಲ್ಲಿ ಬೋಧಿಸುವ ವಿಷಯ ಮತ್ತು ಬೋಧನೆಯ ಕ್ರಮಗಳೆರಡು ಹಾಗೂ ಕನ್ನಡ ಭಾಷೆಯಲ್ಲಿ ಬರುವ ವರ್ಣಗಳು, ಪದ್ಯಗಳು, ವಾಕ್ಯ ವ್ಯಾಕರಣಗಳನ್ನು ತಿಳಿಸುವ ವಿಧಾನವೇನೋ ಇದೆ. ಆದರೆ ಅದು ಪಾಠ/ಪದ್ಯಗಳಲ್ಲಿ ನೇರವಾಗಿ ಇರದೆ ಗೌಪ್ಯವಾಗಿದೆ. ಇಲ್ಲಿನ ಬೋಧನೆಯ ಅಂಶಗಳೆಲ್ಲವೂ ಕನ್ನಡ ಭಾಷೆಯ ರಚನೆ, ಕನ್ನಡ ಸಾಹಿತ್ಯ, ಜಾನಪದ, ನಾಡಿಗಾಗಿ ದುಡಿದವರ ಪರಿಚಯ, ನಾಡಿನ

ಸಂಗೀತ, ಕಲೆ, ಕರ್ನಾಟಕದ ಇತಿಹಾಸವನ್ನು ಪರಿಚಯಿಸುವ ಪಾಠ ಬೋಧನೆಯನ್ನು ವಿಷಯದಡಿಯಲ್ಲಿ ಕಲಿಸಲಾಗುತ್ತಿದೆ. ಇಲ್ಲಿ ಬಳಕೆಯಾದ ವಿಷಯಗಳು ಹೆಚ್ಚಾಗಿ ನೇರವಾಗಿ ಕನ್ನಡ ಭಾಷೆಯನ್ನು ಮಕ್ಕಳಿಗೆ ಪರಿಚಯಿಸುವ ವಿಚಾರದಲ್ಲಿ ಪಾಠ/ಪದ್ಯಗಳು ವಿಫಲವಾದ ದಾರಿಯನ್ನು ಅನುಸರಿಸಿವೆ. ಕನ್ನಡಭಾಷಾ ಪಠ್ಯಗಳೆಂದರೆ ಕನ್ನಡ ನಾಡಿನ ಸಾಹಿತ್ಯ, ಕಲೆ, ಸಂಗೀತ, ಇತ್ಯಾದಿ ಅಂಶಗಳನ್ನು ಬಿತ್ತರಿಸುವಂತಹ ಬೋಧನೆಯಾಗಬಾರದು.

ಕನ್ನಡ ಭಾಷಾ ಪಠ್ಯಗಳು ಮಗುವಿಗೆ ತಾನು ಬಳಸುವ ಕನ್ನಡ ವರ್ಣಪದ, ವಾಕ್ಯ, ವ್ಯಾಕರಣಕ್ಕೆ ಆದ್ಯತೆ ನೀಡಬೇಕು. ಈ ಆದ್ಯತೆಯು ಕನ್ನಡ ಸಂಸ್ಕೃತಿಯನ್ನು ಉಳಿಸುವ ಬೆಳೆಸುವ ಹಾಗೂ ನೈತಿಕ ಮೌಲ್ಯಗಳನ್ನು ಬಿತ್ತುವಂತಹ ವಿಷಯಾಧಾರಿತ ಹಿನ್ನೆಲೆಯಲ್ಲಿ ಕನ್ನಡ ಕಲಿಕೆ ನಡೆಯಬೇಕು. ಇದರಿಂದ ಕನ್ನಡ ಭಾಷೆಯ ಪರಿಚಯ ಮೊದಲಾಗಿ ಅದರಿಂದ ಮಗು ಸಂಸ್ಕೃತಿಯ ರೂಢಿಯನ್ನು ತಂದು ಕೊಳ್ಳುವಂತಿರಬೇಕು. ಜೊತೆಗೆ ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಲು ಸಹಾಯವಾಗಿರಬೇಕು. ಹಾಗಾದಾಗ ಮಾತ್ರ ಕನ್ನಡಭಾಷಾ ಬೋಧನೆ ಎಂಬ ಪದಗಳಿಗೆ ನ್ಯಾಯಯುತವಾಗಿ ಪಠ್ಯಗಳಲ್ಲಿ ಅವಕಾಶ ಮಾಡಿ ಕೊಟ್ಟಂತಾಗುತ್ತದೆ. ಮಕ್ಕಳಿಗೆ ವಿವಿಧ ಮಾದರಿಗಳನ್ನು ಇಟ್ಟುಕೊಂಡು ಬೋಧನೆಯನ್ನು ಮಾಡಲಾಗುತ್ತಿದೆ, ಆದರೂ ಬೋಧನೆಯಲ್ಲಿ, ಬೋಧನೆಯ ವಿಷಯದಲ್ಲಿ ಮಕ್ಕಳಿಗೆ ಗೊಂದಲವನ್ನುಂಟು ಮಾಡಿದೆ, ಬೋಧನೆಯನ್ನು ಭಾಷಾ ದೃಷ್ಟಿಯಿಂದ ನೇರವಾಗಿ ಕಲಿಸುವ ಪಠ್ಯಗಳು ರಚನೆಯ ದಾರಿಯಲ್ಲಿ ನಡೆಯುತ್ತಿರುವ ಅಂಶ ಮಾತ್ರ ಸತ್ಯಕ್ಕೆ ಸಮೀಪವಾಗಿದೆ. ಆದರೆ ಬೋಧನೆಯಲ್ಲಿ ಮತ್ತು ವಿಷಯದಲ್ಲಿ ಸರಳತೆಯ ಮೌಲ್ಯಗಳನ್ನು ಸೇರಿಸುವ ಅಗತ್ಯತೆಯಂತೂ ಇದ್ದೇ ಇದೆ.

### ೭.೨. ಶಿಕ್ಷಕ

ತರಗತಿಯ ಕೊಠಡಿಗಳಲ್ಲಿ ವಿದ್ಯಾರ್ಥಿಗಳ ಮಾನಸಿಕ ಸಾಮರ್ಥ್ಯಕ್ಕೆ ಅನುಸಾರವಾಗಿ ಗೊತ್ತಿಲ್ಲದ ವಿಷಯಗಳನ್ನು ತಿಳಿಸಿಕೊಡುವವನೆ ಶಿಕ್ಷಕ ಎಂದು ಸರಳ ಮಾತಿನಲ್ಲಿ ಹೇಳಬಹುದು. ವಿದ್ಯಾರ್ಥಿಗಳ ಸರ್ವತೋಮುಖ ಬೆಳವಣಿಗೆಗೆ ಪೋಷಕರ ನಂತರದ ಸ್ಥಾನ ಶಿಕ್ಷಕರಿಗೆ ಸಲ್ಲಬೇಕಾಗಿದೆ. ಮಕ್ಕಳು ಪೋಷಕರಿಂದ ತಿಳಿಯದ ವಿಷಯಗಳನ್ನು ಶಿಕ್ಷಕರಿಂದ ತಿಳಿದು ಕಲಿಯುತ್ತಾರೆ. ಆದ್ದರಿಂದ ಪ್ರಾಚೀನ ಕಾಲದಿಂದ ಇಂದಿನವರೆಗು ಶಿಕ್ಷಕರಿಗೆ ಸಮಾಜದಲ್ಲಿ ಒಳ್ಳೆಯ ಗೌರವದ ಸ್ಥಾನವನ್ನು ಕೊಟ್ಟಿರುವುದನ್ನು ಕಾಣುತ್ತೇವೆ. ಅದರಲ್ಲೂ ಪ್ರಾಥಮಿಕ ಶಿಕ್ಷಣದ ಶಿಕ್ಷಕರ ಜವಾಬ್ದಾರಿ ಮಕ್ಕಳ ಮೇಲೆ ತುಂಬಾ ಇರುತ್ತದೆ.

ಬೋಧನೆಯನ್ನು ಮಾಡುವ ಶಿಕ್ಷಕ ಸರಿಯಾದ ವಿವರಣೆಯ ಮೂಲಕ ನಿದರ್ಶನಗಳ ಮೂಲಕ ದೃಕ್‌ಶ್ರವಣೋಪಕರಣಗಳನ್ನು, ಪಾಠೋಪಕರಣಗಳನ್ನು ಬಳಸಿಕೊಂಡು ವಿಷಯಾ ನುಸಾರ ಬೋಧಿಸಬೇಕಾದ ಜವಾಬ್ದಾರಿ ಇವರಲ್ಲಿ ಬೇಕಾಗುತ್ತದೆ. ಒಬ್ಬ ಶಿಕ್ಷಕ ಒಂದು

ತಪ್ಪು ಮಾಹಿತಿ ನೀಡಿದರೆ ತರಗತಿಯ ವಿದ್ಯಾರ್ಥಿಗಳೆಲ್ಲರು ತಪ್ಪಿನ ಮಾಹಿತಿಯನ್ನು ಗ್ರಹಿಸುತ್ತಾರೆ, ಉದಾಹರಣೆಗೆ ಹೇಳುವುದಾದರೆ ಗಣಿತ ಶಿಕ್ಷಕನೊಬ್ಬ ಸಂಕಲನ ಬೋಧನೆ ಮಾಡುತ್ತಾರೆ ಎಂದು ಕೊಳ್ಳೋಣ. ಬೋಧನೆ ಮಾಡುವಾಗ ೨+೨=೪ ಎಂದು ಹೇಳುವುದು ಸರಿಯಾದ ರೂಪ. ಇದಕ್ಕೆ ಬದಲಾಗಿ ೨+೨=೬ ಎಂದು ಶಿಕ್ಷಕರು ಪ್ರಾಥಮಿಕ ಮಕ್ಕಳಿಗೆ ಬೋಧಿಸಿದರೆ ಆಗುವ ಅನಾಹುತವೇ ಬೇರೆ. ಮಗು ಈ ವಯಸ್ಸಿನಲ್ಲಿ ಏನನ್ನು ಹೇಳಿದರೂ ಗ್ರಹಿಸುವ ಶಕ್ತಿ ಇರುತ್ತದೆ. ಶಿಕ್ಷಕರು ಇದನ್ನು ಬೋಧಿಸಿದರೆ ಮಗು ಅದನ್ನೇ ಅನುಸರಿಸುತ್ತದೆ. ಅಷ್ಟೇ ಏಕೆ ಪೋಷಕರು ಈ ಸಂಕಲನ ಮಾಡಿರುವುದು ತಪ್ಪು ಎಂದು ಹೇಳಿದರೂ ಕೇಳುವ ಮನಸ್ಸು ವಿದ್ಯಾರ್ಥಿಯಲ್ಲಿ ಕಾಣದೆ ಇರಬಹುದು. ಆದ್ದರಿಂದ ಶಿಕ್ಷಕರಾದವರು ಮಗುವಿಗೆ ತಪ್ಪು ಮಾಹಿತಿ ನೀಡುವ ಅಥವಾ ಸ್ಪಷ್ಟವಾಗಿ, ನಿಖರವಾಗಿ ವಿಷಯವನ್ನು ವಿಶಾಲಾರ್ಥದಲ್ಲಿ ಹೇಳದೆ. ಪಾಠ/ಪದ್ಯವನ್ನು ಸಂದರ್ಭಾನುಸಾರ ಸಂಕುಚಿತವಾಗಿ ಹೇಳುವುದರಿಂದ ಕಲಿತ ಪಾಠ ಪರೀಕ್ಷೆಗೆ ಮಾತ್ರ ಮೀಸಲಾಗುತ್ತದೆ. ಆದ್ದರಿಂದ ಜೀವನದಲ್ಲಿ ಅಂತಹ ಕೆಲವು ಉತ್ತಮ ವಿಚಾರಾಂಶಗಳನ್ನು ಅಳವಡಿಸಿಕೊಂಡು ಬೆಳೆಯುವ ರೀತಿಯಲ್ಲಿ ಬೋಧನೆಯನ್ನು ಮಾಡಬೇಕಾಗಿದೆ. ಹಾಗೆಯೇ ಅರ್ಥಪೂರ್ಣ, ಶಾಶ್ವತ ಕಲಿಕೆಯಾಗುವಂತಹ ಬೋಧನೆಯನ್ನು ಶಿಕ್ಷಕರಾದವರು ಬೋಧಿಸಿ ಶಿಕ್ಷಕರಿಗೆ ಇರುವ ಸ್ಥಾನಮಾನಗಳನ್ನು ಉಳಿಸುವ ಪ್ರಯತ್ನಗಳನ್ನು ಶಿಕ್ಷಣದಲ್ಲಿ ಮಾಡಬೇಕಾಗಿದೆ. ಮಕ್ಕಳ ಬೌದ್ಧಿಕ ಬೆಳವಣಿಗೆಗೆ ಮಾದರಿಯಾಗಿರವಂತಹ ಶಿಕ್ಷಕರು ಇಂದು ಅವಶ್ಯಕವಾಗಿ ಬೇಕಾಗಿದೆ. ಮೇಲಿನ ಅಂಶವನ್ನು ಗಮನಿಸಿದಾಗ ಶಿಕ್ಷಕರಿದ್ದಂತೆ ವಿದ್ಯಾರ್ಥಿ ಎಂಬ ಅಂಶ ಕಂಡು ಬರುತ್ತದೆ. ಶಿಕ್ಷಕ ಒಬ್ಬ ಮಾದರಿ ಹಾಗೂ ಮಾರ್ಗದರ್ಶಿ ಎಂಬುದನ್ನು ಸಹ ಸ್ಪಷ್ಟಪಡಿಸುತ್ತದೆ. ಶಿಕ್ಷಕರನ್ನು ಮಕ್ಕಳು ಅನುಕರಣೆ ಮಾಡುವದು ಸಹಜ. ಇತರರಿಗೂ ಕೂಡ ಇವರು ಮಾದರಿ. ಶಿಕ್ಷಕ ದೇಶದ ಆಧಾರ ಸ್ಥಂಭ. ಇವರ ಶ್ರೇಷ್ಠ ಗುಣಗಳ ಬಗ್ಗೆ ಸೌಜನ್ಯ ವರ್ತನೆಗಳ ಬಗ್ಗೆ ಹಲವಾರು ತತ್ವಚಿಂತಕರು, ಶಿಕ್ಷಣ ತಜ್ಞರು ತಮ್ಮದೇ ಆದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಬಿ. ಭರತ್‌ಭೂಷಣ್‌ರವರು ಬರೆದಿರುವ 'ಶಿಕ್ಷಣದ ತಾತ್ವಿಕ ಹಾಗೂ ಸಾಮಾಜಿಕ ಆಧಾರಗಳು' ಪುಸ್ತಕದಲ್ಲಿ (ಪು.ಸಂ. ೬೨)ಶಿಕ್ಷಕರ ಬಗ್ಗೆ ನೀಡಿದ ವ್ಯಾಖ್ಯಾನಗಳನ್ನು ಈ ಕೆಳಗಿನಂತೆ ನೋಡಬಹುದು.

* ಸ್ವಾಮಿ ವಿವೇಕಾನಂದರು ಹೇಳುವಂತೆ ತ್ಯಾಗಿಯಾದವನು ಮಾತ್ರ ನಿಜವಾದ ಶಿಕ್ಷಕನಾಗಬಲ್ಲನು. ಶಿಕ್ಷಕ ಪರಿಶುದ್ದ ಹೃದಯವುಳ್ಳವನೂ, ನಿಸ್ವಾರ್ಥಿಯೂ, ನಿರ್ಮಲ ಮನಸ್ಸಿನವನು ಆಗಿರಬೇಕು.

* ಆದರ್ಶವಾದಿಗಳು ಮತ್ತು ಪ್ರಕೃತಿವಾದಿಗಳು ಶಿಕ್ಷಕನೂಬ್ಬ ಮಾರ್ಗದರ್ಶಿ ಎಂದು ತಿಳಿಸುತ್ತಾ ಜೀವನದಲ್ಲಿ ಅವನ ಸ್ಥಾನಕ್ಕೆ ವಿಶೇಷ ಪ್ರಾಧಾನ್ಯತೆ ನೀಡಿದ್ದಾರೆ.

* ಠಾಕೂರ್, ಗಾಂಧೀಜಿ, ರಾಧಕೃಷ್ಣನ್, ಪ್ರೋಬೆಲ್, ಮಾಂಟೆಸರಿ ಮುಂತಾದವರು ಶಿಕ್ಷಕರಲ್ಲಿ ಆದರ್ಶ ಗುಣಗಳು ಹೊರಹೊಮ್ಮಿರಬೇಕು ಎಂಬ ವಿಚಾರವನ್ನು ತಮ್ಮ ಶೈಕ್ಷಣಿಕ ತತ್ವ ಸಿದ್ಧಾಂತಗಳಲ್ಲಿ ವ್ಯಕ್ತಪಡಿಸಿರವುದನ್ನು ಕಾಣುತ್ತೇವೆ.

ಈ ಮೇಲಿನ ವ್ಯಾಖ್ಯಾನಗಳನ್ನು ಪುಷ್ಟೀಕರಿಸಿ ಹೇಳುವುದಾದರೆ ವಿದ್ಯಾರ್ಥಿಗಳ ದೃಷ್ಟಿಯಿಂದ, ಸಾಮಾಜಿಕ ದೃಷ್ಟಿಯಿಂದ ಶಿಕ್ಷಕ ಮಾದರಿಯಾಗಿರಬೇಕು. ಆದರ್ಶ ಶಿಕ್ಷಕ ತನ್ನವೃತ್ತಿಯನ್ನು ಗೌರವಿಸಬೇಕು. ವಿದ್ಯಾರ್ಥಿಗಳಿಗೆ ತತ್ವಜ್ಞಾನಿಯೂ, ಮಾರ್ಗದರ್ಶಿಯೂ, ಸ್ನೇಹಿತನೂ, ಪೋಷಕನಾಗಿಯೂ ಸದಾ ಹೊಸದನ್ನು ಕಲಿಯುತ್ತಿರಬೇಕು. ಅದನ್ನು ವಿದ್ಯಾರ್ಥಿ ಮಿತ್ರರರಿಗೆ ಕಲಿಸುವ ಪ್ರವೃತ್ತಿ ಇವರಲ್ಲಿ ಬಂದಿರಬೇಕು. ಜಾಗರೂಕರಾಗಿ, ಜವಾಬ್ದಾರಿಯುತರಾಗಿ, ಕಾರ್ಯತತ್ಪರರಾಗಿ, ಪ್ರಜ್ಞಾಪೂರ್ಣರೂ ಆಗಿರಬೇಕು. ಮಕ್ಕಳೊಂದಿಗೆ ಬೆರೆತು ಅವರ ಸಮಸ್ಯೆಗಳನ್ನು ಅರಿಯುವ ಗುಣ ಸ್ವಭಾವದವರಾಗಿರಬೇಕು. ಮನೋವಿಜ್ಞಾನಿಯಂತೆ ಮಕ್ಕಳ ಮನಸ್ಸನ್ನು ಅರ್ಥಮಾಡಿಕೊಂಡು ಅವರ ಮಟ್ಟಕ್ಕೆ ನಿಂತು ಬೋಧಿಸುವವರಾಗಿರಬೇಕು. ನಿಷ್ಪಕ್ಷಪಾತಿಯೂ, ಸ್ನೇಹಪರನೂ ಆಗಿರಬೇಕು. ತಾಳ್ಮೆ, ಸಹಕಾರ, ಪ್ರೀತಿವಾತ್ಸಲ್ಯ, ಕರುಣೆ, ಮಮತೆ ಮುಂತಾದ ಗುಣಗಳನ್ನು ಹೊಂದಿದ್ದವನಾಗಿರಬೇಕು. ಮಕ್ಕಳಲ್ಲಿ ಬೆರೆಯುವಾಗ ಸಮಯ ಸಂದರ್ಭಾನುಸಾರ ಬೆರೆತು ಮಕ್ಕಳ ಮನಸ್ಸಿಗೆ ಸ್ಪಂದಿಸಬೇಕು. ಮಕ್ಕಳಿಗೆ ಕಲಿಸುವ ವಿಷಯದಲ್ಲಿ ಆಸಕ್ತಿ ತೋರಿಸುವುದು ಮುಖ್ಯ. ಮಕ್ಕಳ ವ್ಯಕ್ತಿತ್ವವನ್ನು ಗೌರವಿಸುವ ಮತ್ತು ಶ್ರೇಯಸ್ಸನ್ನು ಬಯಸಿ ಸಂಧರ್ಭಾನುಸಾರ ಕಲಿಕೆಗೆ ಪ್ರೇರೇಪಿಸುವ ಗುಣ ಸ್ವಭಾವದವಾ ನಾಗಿರಬೇಕು. ಮಕ್ಕಳ ವೈಯಕ್ತಿಕ ಭಿನ್ನತೆಗಳನ್ನು ಗುರುತಿಸಿಕೊಂಡು, ಅವುಗಳ ವಿಕಾಸನಕ್ಕೆ ಸೂಕ್ತ ಪ್ರೇರಣೆ ನೀಡುವ ಮನೋಭಾವನೆ ಹೊಂದಿರಬೇಕು. ಶೀಘ್ರ ಕೋಪಿಯಾಗಿರದೆ, ಸಂಯಮದಿಂದ ಮಕ್ಕಳ ತಪ್ಪುಗಳನ್ನು ಕ್ಷಮಿಸಿ, ತಿದ್ದಿ ಅವರ ಮಾನಸಿಕ ಪರಿವರ್ತನೆಗೆ ನೆರವಾಗಬೇಕು. ಸುಸಂಸ್ಕೃತ ನಾಗರಿಕರಾಗಿದ್ದು, ರಾಷ್ಟ್ರ, ಅಂತರಾಷ್ಟ್ರೀಯ ಮನೋಭಾವನೆ ಹೊಂದಿದವನಾಗಿರಬೇಕು. ಪರಧರ್ಮ ಸಹಿಷ್ಣುತೆಯುಳ್ಳವನಾಗಿದ್ದು ಇಂತಹ ಗುಣ ಮೌಲ್ಯಗಳನ್ನು ಮಕ್ಕಳಲ್ಲಿ ಸೃಜನಶೀಲ ರೀತಿಯಲ್ಲಿ ಬೆಳೆಸುವಂತಹ ಗುಣವುಳ್ಳವನಾಗಿರಬೇಕು ಎಂಬುದನ್ನು ಈ ಮೇಲಿನ ವಾಕ್ಯಗಳನ್ನು ನೋಡಿದಾಗ ಸಷ್ಟವಾಗುತ್ತದೆ. ಆದ್ದರಿಂದ ರಾಧಕೃಷ್ಣರವರು A real Teacher Is he, Who makes The child to Learn [ಮಕ್ಕಳನ್ನು ಕಲಿಯುವಂತೆ ಪ್ರಚೋದಿಸುವವನೇ ನಿಜವಾದ ಶಿಕ್ಷಕ] ಎಂದು ಹೇಳಿರುವ ಮಾತು ಸರಿಯಾದುದಾಗಿದೆ.

* **ಆಧುನಿಕ ಭಾರತೀಯ ಶಿಕ್ಷಣ : ತಿರುವುಗಳು ಮತ್ತು ಸಮಸ್ಯೆಗಳು** ಎಂಬ ಪುಸ್ತಕದಲ್ಲಿ (ಲೇಖಕರು:–ಎಂ.ಎನ್.ರಾಮಚಂದ್ರ ಜೋಯಿಸ್. ವಿ.ನರಹರಿ) ಶಿಕ್ಷಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನ ಎಂಬ ಲೇಖನದಲ್ಲಿ **(ಪು.ಸಂ.೧೫೪)** ಬೋಧನೆಯು ಒಂದು ಪ್ರಯಾಸದ, ನಿರಂತರವಾದ, ಕಷ್ಟ ಸಾಧ್ಯವಾದ ಕಾರ್ಯವಾಗಿದ್ದು. ಶಿಷ್ಯನನ್ನು ಪ್ರೇಮ, ಗಮನಿಸುವಿಕೆ, ಎಚ್ಚರಿಕೆ, ಆದೇಶಿಸುವಿಕೆ, ಪ್ರಶಂಶಿಸುವಿಕೆಗಿಂತ ಹೆಚ್ಚಾಗಿ ಜವಬ್ದಾರಿ ಶಿಕ್ಷಣ ನೀಡಬೇಕು ಎಂದು ರಸ್ಕಿನ್ ಹೇಳಿದ ಮಾತು ಅಕ್ಷರಶಃ ಸತ್ಯವಾಗಿದ್ದು ಶಿಕ್ಷಕನ ಸ್ಥಾನಮಾನ ಗಳಿಕೆಗೆ ಇವೆ ತಳಹದಿಯಾಗುತ್ತವೆ ಎಂದು ವಿವರಿಸಿದ್ದಾರೆ. ಎಳೆಯ ಮಕ್ಕಳ ಶಿಕ್ಷಣದಿಂದ

ದೇಶದ ಭವಿಷ್ಯವನ್ನೇ ರೂಪಿಸಬಲ್ಲ ಶಿಕ್ಷಕನ ವೃತ್ತಿ ಎಲ್ಲ ವೃತ್ತಿಗಿಂತಲೂ ಶ್ರೇಷ್ಟವಾದುದೆಂಬ ಸಮಾಜದ ನಂಬಿಕೆಯನ್ನು ಈ ವೃತ್ತಿ ಲೌಕಿಕ ಉದ್ಯೋಗವೆಂದು ಭಾವಿಸುವ ಶಿಕ್ಷಕ ಉಳಿಸಿಕೊಳ್ಳಲಾರ. ಅಂತಹವರು ಈ ವೃತ್ತಿಗೆ ಕಳಂಕ ತರುವ ಸಂಭವ ಹೆಚ್ಚು ಎಂಬ ಮಾತುಗಳನ್ನು ಹೇಳುತ್ತಾರೆ. ಶಿಕ್ಷಣ ವೃತ್ತಿಯ ಬಗ್ಗೆ ಇರುವ ಗುಣದ ಮೌಲ್ಯವನ್ನು, ಗೌರವವನ್ನು ಶಿಕ್ಷಕರಾದವರಿಗೆ ಹೇಳುವಂತಹ ಮಾತು ಇದಾಗಿದೆ ಎಂದು ಅಭಿಪ್ರಾಯ ಪಡುತ್ತಾರೆ.

ಪ್ರಾಥಮಿಕ ಶಿಕ್ಷಣದ ಶಿಕ್ಷಕರಾಗಿ ನೇಮಿಸಿಕೊಳ್ಳಲು ಪದವಿ ಪೂರ್ವ ಶಿಕ್ಷಣ (P.U.C) ಹಂತದ ೨ನೇ ವರ್ಷದ ಶಿಕ್ಷಣ ನಂತರ ಶಿಕ್ಷಕರ ತರಬೇತಿ(D.ED.) ಹೊಂದಿದವರಿಗೆ ಶಿಕ್ಷಕರಾಗಲು ಅರ್ಹರು. ಆದರೆ ಇಂದು ಸರ್ವಶಿಕ್ಷಣ ಅಭಿಯಾನದಡಿಯಲ್ಲಿ B.ED. ಆದವರನ್ನು ಹಿರಿಯ ಪ್ರಾಥಮಿಕ ಶಾಲೆಗಳಿಗೆ ತುಂಬುವ ಪ್ರಕ್ರಿಯೆ ನಡೆಸಿರುವುದನ್ನು ಇತ್ತೀಚಿನ ದಿನಮಾನಗಳಲ್ಲಿ ಕಂಡಿದ್ದೇವೆ. ಆಧುನಿಕ ಸಂಧರ್ಭದಲ್ಲಿ ಪ್ರಾಥಮಿಕ ಶಿಕ್ಷಣದ ತೊಂದರೆ ನಿಭಾಯಿಸಲು ಕಳೆದ ಎರಡು, ಮೂರು ವರ್ಷಗಳಲ್ಲಿ ಒಂದು ಸಾವಿರಕ್ಕೂ ಹೆಚ್ಚು D.ED. ತರಬೇತಿ ಕೇಂದ್ರಗಳು ಸ್ಥಾಪನೆಯಾಗಿರುವುದನ್ನು ಕಾಣುತ್ತೇವೆ. ಅದೇನೇ ಇರಲಿ ಇದು ಸರ್ಕಾರದ ಒಂದು ನಿಯಮ. ಇಂದಿನ ಜನತೆಯಲ್ಲಿ ಶಿಕ್ಷಕರಿಗೆ ಮೊದಲಿದ್ದ ಗೌರವವಿಲ್ಲ ಎಂಬ ಮಾತನ್ನು ಸಹ ನಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಕೇಳಿ ಬರುತ್ತಿರುವುದನ್ನು ಗಮನಿಸಬಹುದು. ಇದಕ್ಕೆ ಸುಶಿಕ್ಷಿತವಾದ ಪ್ರತಿ ಶಿಕ್ಷಣ ತರಬೇತಿಯ ಕೊರತೆಯು ಇದೆ. ಅಲ್ಲದೇ ಅಲ್ಲಿ ನಡೆಯುವ ಚಟುವಟಿಕೆಗಳು ಸಹಜವಾಗಿಬಿಟ್ಟಿವೆ. ಇದಕ್ಕೆ ಕಾರಣ ಹೆಚ್ಚಾದ ತರಬೇತಿ ಕೇಂದ್ರಗಳು ಹಾಗೂ ಅವು ಸೌಲಭ್ಯದ ಕೊರತೆ ಎಂದು ಹೇಳಬಹುದು. ಅಲ್ಲಿ ಏನನ್ನು ಹೇಳಿ ಕೊಡದೇ ಇರುವುದಕ್ಕೆ ಕಾರಣವಿರಬಹುದು. ಆದರೆ ಕೆಲವು ಡಿ.ಇಡಿ ತರಬೇತಿ ಕೇಂದ್ರಗಳು ಮಾತ್ರ ಪ್ರ ಶಿಕ್ಷಕರಿಗೆ ನ್ಯಾಯ ಒದಗಿಸಿ ಕೊಟ್ಟಿರುವುದನ್ನು ಕಾಣುತ್ತೇವೆ. ಅಲ್ಲಿ ಕಲಿತ ಬೋಧನಾ ಚಟುವಟಿಕೆಗಳನ್ನು ಶಿಕ್ಷಕರು ತಮ್ಮ ದಿನನಿತ್ಯದ ಚಟುವಟಿಕೆಗಳಲ್ಲಿ ರಾಷ್ಟ್ರೀಯ, ಅಂತರಾಷ್ಟ್ರೀಯ ಅಭಿಮಾನದ ಕೊರತೆ ಅಲ್ಲದೆ ವಿಷಯದಲ್ಲಿ ಸಂಪೂರ್ಣ ಜ್ಞಾನ ಇಲ್ಲದವರ ಸಂಖ್ಯೆ ಹೆಚ್ಚಾಗುತ್ತಿದೆ. ಇದಕ್ಕೆ ಕಾರಣ ವೃತ್ತಿಯಲ್ಲಿ ಶ್ರದ್ಧೆ ಇಲ್ಲದಿರುವುದು. ಓದುವ ಹವ್ಯಾಸದ ಕೊರತೆ. ಬೋಧನೆಗೆ ಹೋಗುವ ಮುನ್ನ ವಿಷಯದಲ್ಲಿ ಪರಿಣಿತಿ ಇಲ್ಲದೆ ಬೋಧಿಸುವ ಶಿಕ್ಷಕರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದೆ. ಇದರಿಂದ ವಿದ್ಯಾರ್ಥಿಗಳಿಗೆ ಯಾವ ವಿಷಯದ ಜ್ಞಾನ ಸ್ಪಷ್ಟವಾಗಲಾರದು. ನಾಗರೀಕತೆ ಮತ್ತು ಸಂಸ್ಕೃತಿಯಿಂದಲೂ ದೂರ ಉಳಿದು ಮಾನವೀಯ ಮೌಲ್ಯಗಳೆಂದರೇನು? ಎಂಬ ಪ್ರಶ್ನೆ, ಪ್ರಶ್ನೆಯಾಗಿಯೇ ಉಳಿಯುತ್ತಿರುವ ದಿನಗಳು ಇಂದು ಬಂದೊದಗಿದೆ. ತರಬೇತಿಯಲ್ಲಿ ಕಲಿತ ಚಟುವಟಿಕೆಗಳನ್ನು ವೃತ್ತಿ ಜೀವನದಲ್ಲಿ ಬೋಧಕರು ಅವುಗಳನ್ನು ಅಳವಡಿಸಿಕೊಳ್ಳದೆ ಕೈ ಬಿಟ್ಟಿರುವುದೇ ಇದಕ್ಕೆ ಕಾರಣ ಎಂಬ ಅಂಶಗಳು ಕೇಳಿಬರುತ್ತಿವೆ. ಕನ್ನಡ ಭಾಷಾ

ಶಿಕ್ಷಕರನ್ನು ನೇಮಿಸಿಕೊಳ್ಳುವಾಗ ನಮ್ಮ ಸರ್ಕಾರ ತರಬೇತಿ ಹೊಂದಿದ ಅಂಕಪಟ್ಟಿ ಉತ್ತೀರ್ಣದ ಪ್ರವೇಶ ಪತ್ರಗಳನ್ನು ನೋಡಿ ಕನ್ನಡ ಭಾಷಾ ಶಿಕ್ಷಕರನ್ನು ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ನೇಮಕಾತಿ ಮಾಡಿಕೊಳ್ಳುತ್ತದೆ. ಇಂದಿನ ಕನ್ನಡ ಭಾಷಾ ಶಿಕ್ಷಕರಿಗೆ ಧ್ವನಿ, ಪದ, ವಾಕ್ಯ ತಿಳುವಳಿಕೆ ಎಷ್ಟಿದೆ ಎಂಬುದನ್ನು ತಿಳಿಯದೇ ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ ಕನ್ನಡ ಸಾಹಿತ್ಯ ಮತ್ತು ಚರಿತ್ರೆ ಹಾಗೂ ಅಲ್ಪಸ್ವಲ್ಪ ಭಾಷೆಯ ಬಗೆಗೆ ಪ್ರಶ್ನೆಗಳನ್ನು ಕೇಳಲಾಗಿರುತ್ತದೆ. ಇದರಲ್ಲಿ ಯಾರು ಹೆಚ್ಚು ಅಂಕಗಳನ್ನು ಪಡೆದಿರುತ್ತಾರೋ ಅವರು ಶಿಕ್ಷಕರು. ಅವರ ಮಾತನಾಡುವಿಕೆ, ಆಲಿಸುವಿಕೆ ಅಲ್ಲದೆ ಅವರು ಕನ್ನಡ ಭಾಷೆಯ ಬಗೆಗೆ ಏನನ್ನು ತಿಳಿದಿದ್ದಾರೆ ಎಂಬ ಯಾವುದೇ ಪ್ರಶ್ನೆಗಳು ಸರ್ಕಾರದ ಮುಂದೆ ಬರುವುದಿಲ್ಲ. ಇಂತಹ ಪರಿಸ್ಥಿತಿ ಇದ್ದಾಗ ಈ ಮೇಲಿನ ಅಂಶಗಳಲ್ಲಿ ಕೊರತೆ ಇರುವಂತಹ ಶಿಕ್ಷಕರು ವೃತ್ತಿಯಲ್ಲಿ ಬೋಧಿಸುವುದಾದರೂ ಏನು? ಭಾಷೆ ಎಂದರೇನು? ಅಲ್ಪಪ್ರಾಣ, ಮಹಾಪ್ರಾಣ, ಒತ್ತಕ್ಷರಗಳನ್ನು ಬಳಸುವಾಗ ಶಿಕ್ಷಕರು ಸರಿಯಾಗಿ ಬಳಸುತ್ತಿದ್ದಾರೆಯೇ ಎಂಬುದನ್ನು ಯೋಚಿಸಿದರೆ ಇದರ ಕೊರತೆ ನಮ್ಮ ಶಿಕ್ಷಣದ ವ್ಯವಸ್ಥೆಯಲ್ಲಿ ತುಂಬಾ ಇದೆ ಎನ್ನುವುವುದು ಅರ್ಥವಾಗುತ್ತದೆ. ಹಾಗಿದ್ದಾಗ ಕನ್ನಡ ಭಾಷೆಯ ಬಗ್ಗೆ ತಿಳುವಳಿಕೆ, ಅದರ ರಚನಾ ವಿನ್ಯಾಸ, ಉಚ್ಚಾರಣೆಯ ಕ್ರಮ ಆಲಿಸುವ, ಮಾತನಾಡುವ ಕ್ರಮ ಇನ್ನು ಎಲ್ಲಿಂದ ಬರಬೇಕು ಎಂಬುದನ್ನು ಯೋಚಿಸಬೇಕಿದೆ. ಇಂದಿನ ಶಿಕ್ಷಕರಿಗೆ ಜವಾಬ್ಧಾರಿಯ ಕೊರತೆ ಹೆಚ್ಚಾಗಿದೆ ಎಂಬ ಅಂಶಗಳು ನಮ್ಮ ದಿನನಿತ್ಯದ ಪರಿಸರದ ಜನತೆಯಲ್ಲಿ ಸಾಕಷ್ಟು ಕೇಳಿಬರುತ್ತಿದೆ. ಆದ್ದರಿಂದ ಈ ಕ್ರಮ ಬದಲಾವಣೆ ಅಗತ್ಯತೆ ತುಂಬಾ ಇದೆ. ಇಲ್ಲವಾದಲ್ಲಿ ಶಿಕ್ಷಣದಲ್ಲಿ ಮಗುವಿನ ಸರ್ವತೋಮುಖ ಅಭಿವೃದ್ಧಿ ಅಸಾಧ್ಯವಾಗಿ ಬೋಧನೆ ಏನಿದ್ದರೂ ಪರೀಕ್ಷೆಗಾಗಿ ಎಂಬ ಇಂದಿನ ತಿಳುವಳಿಕೆ ಮುಂದುವರಿಯುತ್ತಲೇ ಇರುತ್ತದೆ. ಇದರಿಂದ ಮಗುವಿಗೆ ಶಾಶ್ವತ ಕಲಿಕೆ ಕುಂಠಿತವಾಗುತ್ತಿದೆ ಎಂಬುದನ್ನು ಮನಗಾಣಬೇಕಿದೆ.

ಇಂದಿನ ಶಿಕ್ಷಕರಿಗೆ ತತ್ವಶಾಸ್ತ್ರದ ಮತ್ತು ತಾತ್ವಿಕ ಸಿದ್ಧಾಂತದ ತಿಳುವಳಿಕೆಯ ಅಗತ್ಯತೆ ತುಂಬಾ ಇದೆ. ಏಕೆಂದರೆ ತತ್ವಶಾಸ್ತ್ರವು ಜೀವನದಲ್ಲಿ ವ್ಯಕ್ತಿಯ ಕೆಲವು ಆದರ್ಶ ವಿಚಾರಗಳನ್ನು ಇಟ್ಟುಕೊಂಡು ಶಿಕ್ಷಣವನ್ನು ಪಡೆಯುವಂತೆ ಮಾಡುತ್ತದೆ. ಅದರಂತೆ ತತ್ವಶಾಸ್ತ್ರವು ಶಿಕ್ಷಣದಲ್ಲಿಯ ಗುರಿಗಳನ್ನು ನಿರ್ದಿಷ್ಟ ಪಡಿಸಿದರೆ ಅವುಗಳನ್ನು ಕಾರ್ಯಗತಗೊಳಿಸುವಂತೆ ಮಾಡುತ್ತದೆ. ಶಿಕ್ಷಣ ಆದ್ದರಿಂದ ತತ್ವಶಾಸ್ತ್ರಕ್ಕೂ ಹಾಗೂ ಶಿಕ್ಷಣಕ್ಕೂ ನಿಕಟವಾದ ಸಂಬಂಧವಿರುವುದರಿಂದ ಇದನ್ನು ಶಿಕ್ಷಕ ಪರಿಪೂರ್ಣವಾಗಿ ಅರಿತಾಗ ಮಾತ್ರ ಬೋಧನೆಯು ಯಶಸ್ವಿಯಾಗಿ ಮುನ್ನೆಡೆಯನ್ನು ಸಾಧಿಸಬಲ್ಲದು. ಇಲ್ಲವಾದಲ್ಲಿ ತತ್ವಶಾಸ್ತ್ರವಿಲ್ಲದ ಶಿಕ್ಷಣ ಮತ್ತು ಬೋಧನೆ ಕಲಾಪೂರ್ಣವಾಗಲಾರದು. ಸಂಸ್ಕೃತಿಯನ್ನು ಮಕ್ಕಳಲ್ಲಿ ಬೆಳೆಸಲಾರದು. ರವೀಂದ್ರನಾಥ ಠಾಗೋರ ಹೇಳುವಂತೆ ನಮ್ಮ ದೇಶದ ಸಂಸ್ಕೃತಿಯನ್ನು ಮರೆತು ಎಷ್ಟೇ ಮೊತ್ತದ ಶಿಕ್ಷಣ ಪಡೆದಾಗ್ಯೂ ಅದು ನಿರರ್ಥಕ. ಇಂತಹ ವಾತಾವರಣ ನಮ್ಮ ಶಿಕ್ಷಣ ರಂಗದಲ್ಲಿ

ಹೆಚ್ಚಾಗುತ್ತಿರುವುದು ಆತಂಕದ ಸಂಗತಿ. ಆದ್ದರಿಂದ ಶಿಕ್ಷಕರಾದವರು ಕನ್ನಡ ಭಾಷಾ ಬೋಧನೆ ಮಾಡುವಾಗ ಧ್ವನಿಗಳ ಹುಟ್ಟು, ಉಚ್ಚಾರಣೆ ಹಾಗೂ ಪದ, ವಾಕ್ಯ, ಮೌಲ್ಯ, ಸಂಸ್ಕೃತಿ, ನಾಡು ನುಡಿಯ ಬಗೆಗೆ ಪ್ರಾಥಮಿಕ ಶಿಕ್ಷಣಕ್ಕೆ ಅನುಗುಣವಾಗಿ ಬೋಧಿಸುವ ಜವಾಬ್ಧಾರಿ ಶಿಕ್ಷಕರದಾಗಿರಬೇಕು. ಅಲ್ಲದೆ ಕನ್ನಡ ಬೋಧನೆ ಶಿಕ್ಷಕರಿಗೆ ಧ್ವನಿಗಳ ಹುಟ್ಟು ಮತ್ತು ಬೆಳವಣಿಗೆಯ ತಿಳುವಳಿಕೆಗೆ ಭಾಷಾ ಪ್ರಯೋಗಾಲಯಗಳು ಧ್ವನಿ ವಿತರಣಾ ಸೆಟ್ಟುಗಳು ಬೇಕಾಗಿವೆ. ಇಂತಹ ಅಂಶಗಳ ಪೂರಕವಾದ ಮಾಹಿತಿ ಕೊಡುವಂತಹ ಭಾಷಾ ಪ್ರಯೋಗಾಲಯದಲ್ಲಿ ತರಬೇತಿ ನೀಡುವ ಕೆಲಸವಾಗಬೇಕಾಗಿದೆ. ಇಲ್ಲವಾದಲ್ಲಿ ಶಿಕ್ಷಕರು 'ಆಧುನಿಕ' ಎಂಬ ಪದವನ್ನು ಉಚ್ಚಾರಣೆಯಲ್ಲಿ 'ಅದುನಿಕ' ಎಂದು ಬಳಸಿದರೆ ಕಲಿಯುವ ಮಕ್ಕಳು ಇದನ್ನೇ ಅನುಸರಿಸಿದರೆ ಇಂತಹ ತಪ್ಪುಗಳು ನಡೆಯುತ್ತಲೇ ಇರುತ್ತವೆ. ಆದ್ದರಿಂದ ಭಾಷಾ ಶಿಕ್ಷಕರಾದವರು ಮೊದಲು ಸ್ಪಷ್ಟ ಉಚ್ಚಾರಣೆ ಹಾಗೂ ಪದ, ವಾಕ್ಯ ರಚನೆಯ ನಿಯಮಗಳು ಲೇಖನ ಚಿಹ್ನೆಗಳ ಬಳಕೆಯ ವಿಧಾನವನ್ನು ತಿಳಿಸಬೇಕಿದೆ. ಅದನ್ನು ಶಿಕ್ಷಕರು ಬೋಧನೆಯ ಸಂದರ್ಭದಲ್ಲಿ ಅನುಸರಿಸಿದಾಗ ಈ ಪಠ್ಯದಲ್ಲಿ ಹಾಕಿಕೊಂಡ ಯೋಜನೆಗಳು ಕಾರ್ಯಗತವಾಗಿ ಯಶಸ್ಸಿನ ಮೆಟ್ಟಿಲನ್ನು ಕಾಣಬಹುದು. ಈ ಮೇಲಿನ ಎಲ್ಲಾ ಅಂಶಗಳ ಜೊತೆಗೆ ಶಿಕ್ಷಕರಿಗೆ ವೃತ್ತಿಯ ಬಗೆಗೆ ಗೌರವ ಹಾಗೂ ಕಲಿಯುವ ಮತ್ತು ಕಲಿಸುವ ವಿಚಾರದಲ್ಲಿ ಆಸಕ್ತಿ ಬಂದಾಗ ಪಠ್ಯ ಪುಸ್ತಕದಲ್ಲಿ ಹಾಕಿಕೊಂಡ ಕಲಿಕೆಯ ಯೋಜನೆಗಳು ಪರಿಪೂರ್ಣವಾಗಿ ಯಶಸ್ಸನ್ನು ಕಾಣಬಲ್ಲವು. ಈ ಮೇಲಿನ ಭಾಷಾ ಬೋಧನೆಯ ಶಿಕ್ಷಕರ ಪರಿಸರದ ವ್ಯವಸ್ಥೆಯ ಅಂಶಗಳನ್ನು ನೋಡಿದರೆ ಭಾಷೆಯನ್ನು ಎಲ್ಲಾ ಶಿಕ್ಷಕರು ಬೋಧಿಸಬಹುದಾದ ಇಲ್ಲವೇ ಭಾಷೆ ಬೋಧಿಸುವ ಶಿಕ್ಷಕರಿಗೆ ವಿಶೇಷ ಕೌಶಲಗಳು, ಸಾಮರ್ಥ್ಯಗಳು ಬೇಕೆ? ಭಾಷಾ ಶಿಕ್ಷಕರು ಹೇಗಿರಬೇಕು ಎಂಬುದರ ಬಗ್ಗೆ ತಿಳಿಸುವ ಅಗತ್ಯತೆ ತುಂಬಾ ಇದೆ. ಅನಸೂಯ ವಿ. ಪರಗಿ 'ಮಾತೃಭಾಷೆ ಕನ್ನಡ ತತ್ವ ಮತ್ತು ಬೋಧನಾ ಮಾರ್ಗ' ಎಂಬ ಪುಸ್ತಕದಲ್ಲಿ (ಪು.ಸಂ ೪೨೬) ಈ ಕೆಳಗಿನಂತೆ ಅಭಿಪ್ರಾಯ ಪಡುತ್ತಾರೆ. ಭಾಷಾ ಶಿಕ್ಷಕರು ಮಕ್ಕಳ ಶಿಕ್ಷಣದ ಪ್ರಥಮ ಹಂತದ ಶಿಲ್ಪಿಗಳಾಗಿರುತ್ತಾರೆ. ಶಾಲೆಗೆ ಬಂದ ಮಗುವಿಗೆ ಮೊದಲು ಕಲಿಸಬೇಕಾದುದು ಭಾಷೆಯನ್ನೇ ಹೊರತು ವಿಷಯವನ್ನಲ್ಲ. ಭಾಷೆಯಲ್ಲಿ ಸಾಮರ್ಥ್ಯಗಳಿಸಿದ ವಿದ್ಯಾರ್ಥಿ ಬೇರೆ ಏನನ್ನು ಕಲಿಯಲಾರ. ವಿದ್ಯಾರ್ಥಿಗಳಿಗೆ ಆತನ ಪ್ರಾಥಮಿಕ ಹಂತದಲ್ಲಿ ಭಾಷೆಯಲ್ಲಿ ಉತ್ತಮ ತಳಹದಿ ಹಾಕಿದರೆ ಮುಂದೆ ಅವನ ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಜೀವನ ಗಟ್ಟಿಗೊಳ್ಳುತ್ತದೆ. ಪ್ರತಿಯೊಬ್ಬ ವ್ಯಕ್ತಿಯಲ್ಲಿ ಆಲೋಚನೆ ಮತ್ತು ಅಭಿವ್ಯಕ್ತಿ ಅವನ ಭಾಷೆಯ ಮೂಲಕ ಪ್ರಾರಂಭವಾಗುತ್ತದೆ. ವ್ಯಕ್ತಿಯ ಔಪಚಾರಿಕ ಶಿಕ್ಷಣ ಪ್ರಾರಂಭವಾಗುವುದು ಭಾಷೆಯ ಮೂಲಕವೇ. ಮಗುವಿನ ಅಂತಃಸತ್ವಗಳು, ಸೃಜನಶೀಲತೆ ಭಾಷೆಯ ಪಾತ್ರ ಮಹತ್ವದ್ದಾಗಿದ್ದು ಭಾಷಾ ಶಿಕ್ಷಕರ ಹೊಣೆ ಹೆಚ್ಚಿನದು ಎಂದು ಅಭಿಪ್ರಾಯ ಪಡುತ್ತಾರೆ. ಇವರ ಮಾತುಗಳನ್ನು

ನೋಡಿದರೆ ಭಾಷಾ ಶಿಕ್ಷಕರು ವಿದ್ಯಾರ್ಥಿ ಜೀವನವನ್ನು ಪ್ರಾರಂಭಿಸಿ ನಿರ್ಮಾಣ ಮಾಡುವಲ್ಲಿ ಬಹಳ ಪ್ರಮುಖವಾದ ಪಾತ್ರ ವಹಿಸುತ್ತಾರೆ ಎಂಬ ಮಾತು ಸ್ಪಷ್ಟವಾಗುತ್ತದೆ. ಶಿಕ್ಷಕರೆಲ್ಲರೂ ಭಾಷೆಯ ಕೌಶಲಗಳೆಲ್ಲವನ್ನು ಬಳಸಿಕೊಂಡು ಕನ್ನಡ ಭಾಷಾ ಬೋಧನೆ ಮಾಡಲಾರರು ಎಂಬ ಮಾತಿಗೆ ಈ ವಾಕ್ಯದಿಂದ ಪುಷ್ಟೀಕರಣ ಸಿಗುತ್ತದೆ. ಆದ್ದರಿಂದ ಭಾಷಾ ಶಿಕ್ಷಕ ವೃತ್ತಿಯಲ್ಲಿ ಆಸಕ್ತಿ ಆದರ್ಶ ಮಾದರಿಗಳನ್ನು ಅಳವಡಿಸಿಕೊಂಡು ಬೋಧನೆ ಮಾಡುವಂತಾಗಬೇಕು. ಇಲ್ಲವಾದಲ್ಲಿ ಭದ್ರವಾದ ಬುನಾದಿ ಇಲ್ಲದೆ ಮನೆ ನಿರ್ಮಾಣ ಮಾಡಿದಂತೆ ಆಗುತ್ತದೆ ಎಂಬ ಅಂಶಗಳು ಇಲ್ಲಿ ವ್ಯಕ್ತವಾಗುತ್ತದೆ.

ಪ್ರಚಲಿತ ಪ್ರಾಥಮಿಕ ಶಿಕ್ಷಕರನ್ನು ಸಂದರ್ಶನ ಮಾಡಿದ ಮಹಾಂತೇಶ ಕೆ. ವೀರಭದ್ರ ಕೆ. ಮಂಜುಳ, ಕ್ರಿಯಾಲಿಂಗಯ್ಯ, ಅಕ್ಕಮಹಾದೇವಿ, ರುದ್ರಮುನಿ ಶಿಕ್ಷಕರು ಅಭಿಪ್ರಾಯ ಪಡುವಂತೆ ಇಂದಿನ ಶಿಕ್ಷಕರು ವೃತ್ತಿಯಲ್ಲಿ ಆಸಕ್ತಿ ತೋರುತ್ತಿಲ್ಲ. ಜೊತೆಗೆ ಮಕ್ಕಳಿಗೆ ಕಲಿಸಬೇಕು ಎಂಬ ಕುತೂಹಲ ಇಂದು ಕಡಿಮೆಯಾಗುತ್ತಿದೆ. ಅಲ್ಲದೆ ಇಂದು ಶಿಕ್ಷಕರಾಗಿ ನೇಮಕಗೊಳ್ಳುವವರಿಗೆ ಧ್ವನಿ, ಪದ, ವಾಕ್ಯ ಹಾಗೂ ವ್ಯಾಕರಣ ತಿಳುವಳಿಕೆ ಕಡಿಮೆಯಾಗಿರುತ್ತದೆ. ಉಚ್ಚಾರಣೆಯ ಸ್ಪಷ್ಟತೆ ಇರುವುದಿಲ್ಲ. ಇದಕ್ಕೆ ಕಾರಣ ಅವರೊಬ್ಬರೇ ಅಲ್ಲ. ಶಿಕ್ಷಣದಲ್ಲಿನ ವ್ಯವಸ್ಥೆಯು ಸಹ ಇದಕ್ಕೆ ಕಾರಣವಾಗಿದೆ ಎಂದು ಅಭಿಪ್ರಾಯ ಪಡುತ್ತಾರೆ.

### ೭.೩. ವಿದ್ಯಾರ್ಥಿ

ವಿದ್ಯಾರ್ಥಿ ಎಂಬ ಪದಕ್ಕೆ 'ಸಂಕ್ಷಿಪ್ತ ಕನ್ನಡ ನಿಘಂಟು'(ಪು.ಸಂ.೧೧೫೭)ವಿನಲ್ಲಿ ವಿದ್ಯೆಯನ್ನು ಕಲಿಯಲು ಬಯಸುವವನು. ವಿದ್ಯಾಭ್ಯಾಸ ಮಾಡುವವನು ಎಂಬರ್ಥವನ್ನು ಕೊಡಲಾಗಿದೆ. ಹಾಗಾದರೆ ವಿದ್ಯೆ ಎಂದರೇನು? ಎಂಬುದಕ್ಕೆ ಈ ನಿಘಂಟುವಿನಲ್ಲಿ (ಪು.ಸಂ. ೧೧೫೭) ತಿಳುವಳಿಕೆ ಜ್ಞಾನ ಶಿಕ್ಷಣ ಎಂದು ಅರ್ಥೈಸಲಾಗಿದೆ. ಯಾವ ತಿಳುವಳಿಕೆ ಯಾವ ಜ್ಞಾನ ಎಂದು ಹೇಳುವುದಾದರೆ ಮಗುವಿಗೆ ತನಗೆ ಗೊತ್ತಿಲ್ಲದ ವಿಚಾರವನ್ನು ತಿಳಿದುಕೊಳ್ಳಲು ಬಯಸುವವನು ಎಂದಾಗುತ್ತದೆ. ಅಂದರೆ ಸಾಮಾಜಿಕ, ಸಾಂಸ್ಕೃತಿಕ, ನೈತಿಕ, ಶೈಕ್ಷಣಿಕ, ಆಧ್ಯಾತ್ಮಿಕ ಹಾಗೂ ಧಾರ್ಮಿಕ ಮೌಲ್ಯಗಳನ್ನು ಜೊತೆಗೆ ದೈಹಿಕ ಬೆಳಗಣಿಗೆಯ ಬಗೆಗೆ ಕಲಿಯಲು ಉತ್ಸಾಹಕನಾಗಿ ಮುಂದೆ ಬರುವ ಮಗುವೇ ವಿದ್ಯಾರ್ಥಿ ಎಂದಾಯಿತು.

ವಿದ್ಯಾರ್ಥಿ ಎಂದು ಕರೆಯಿಸಿಕೊಂಡವನು ನಡೆ, ನುಡಿ, ಆಚಾರ, ವಿಚಾರ, ಹಾಗೂ ಕೃತಿಗಳಲ್ಲಿ ಪರಿಶುದ್ಧತೆಯನ್ನು ಕಂಡುಕೊಂಡವನಾಗಿರಬೇಕು. ವಿದ್ಯಾರ್ಥಿಗಳು ಎಷ್ಟು ಆಸಕ್ತಿಯಿಂದ ಕಲಿಯಲು ಮುಂದಾಗುತ್ತಾರೋ ಕಲಿಸುವ ಶಿಕ್ಷಕರು ಸಹ ಉತ್ಸುಕರಾಗಿ ಕಲಿಸಲು ಮುಂದಾಗುತ್ತಾರೆ. ಇದರಿಂದ ಕಲಿಯುವ ವಿಷಯ ಅರ್ಥಪೂರ್ಣವಾಗಬಲ್ಲದು. ಇದರಿಂದ ವಿದ್ಯಾರ್ಥಿಗಳ ಜ್ಞಾನದಾಹ ಹೆಚ್ಚಾಗಿ, ಕಲಿಯಲು ಸದಾ ಪ್ರಯತ್ನದಲ್ಲಿ ತೊಡಗುತ್ತಾರೆ.

ವಿದ್ಯಾರ್ಥಿಗಳು ನಿರಂತರ ಹೋರಾಟ ಸ್ಪರ್ಧೆ ಗುರಿ ಮುಟ್ಟಲೇಬೇಕೆಂಬ ಹಠ ಖಂಡಿತವಾಗಿ ಅವನ ಕಾರ್ಯಗಳಲ್ಲಿ ಯಶಸ್ವಿಯಾಗುವಂತೆ ಮಾಡುತ್ತವೆ ಎಂಬುದು ವಿವೇಕಾನಂದರ ವಿಚಾರ ವಾಗಿದೆ. ನಯ, ವಿನಯ, ಶ್ರದ್ಧೆ, ಏಕಾಗ್ರತೆ, ಬ್ರಹ್ಮಚರ್ಯ, ಪ್ರಾಮಾಣಿಕತೆ, ವಿಧೇಯತೆ ಇವು ವಿದ್ಯಾರ್ಥಿಗಳಲ್ಲಿರಬೇಕಾದ ಗುಣಯುತ ಮೌಲ್ಯಗಳು ಸತ್ಯಾಂಶವನ್ನು ಕಂಡುಕೊಳ್ಳುವ ತವಕ ವಿದ್ಯಾರ್ಥಿಗಳಲ್ಲಿರಬೇಕು. ಮಹಾದಾಸೆ, ಪಂಚೇದ್ರಿಯಗಳನ್ನು ತಮ್ಮ ಹತೋಟಿ ಯಲ್ಲಿಟ್ಟುಕೊಳ್ಳುವ ಶಕ್ತಿ ಒಳ್ಳೆಯದನ್ನು ಹಾಗೂ ಕೆಟ್ಟದ್ದನ್ನು ಅಂದರೆ ತೃಪ್ತಿ ಹಾಗೂ ಅತೃಪ್ತಿ ಎರಡನ್ನೂ ಒಂದೇ ರೀತಿಯಲ್ಲಿ ತೆಗೆದುಕೊಳ್ಳುವ ಗುಣಗಳು ವಿದ್ಯಾರ್ಥಿಗೆ ಅವಶ್ಯಕವಾಗಿ ಬೇಕು. ಶಿಕ್ಷಕರನ್ನು ಅತಿಯಾಗಿ ನಂಬುವುದು, ವಿದ್ಯಾರ್ಥಿಯನ್ನು ಶಕ್ತಿಹೀನನ್ನಾಗಿಸಿ ಕೇವಲ ಮೂರ್ತಿ ಆರಾಧಕನನ್ನಾಗಿಸುತ್ತದೆ. 'ಶಿಕ್ಷಕರಿಗೆ ದೇವರ ಸ್ಥಾನ ನೀಡಿ ಪೂಜಿಸಿ ಆದರೆ ಕುರುಡನಂತೆ ಎಲ್ಲದಕ್ಕೂ ತಲೆದೂಗಬೇಡಿ ಸ್ವತಃ ವಿಚಾರ ಮಾಡಲು ಪ್ರಯತ್ನಿಸಿ ಎನ್ನುತ್ತಾರೆ ವಿವೇಕಾನಂದರು. ಇವರ ಮಾತು ಸರಿಯಾದುದು. ಎಲ್ಲ ವಿಷಯಗಳನ್ನು, ಚಟುವಟಿಕೆಗಳನ್ನು ಶಿಕ್ಷಕರು ಹೇಳಿದ ಮೇಲೆ ಕಲಿಕೆಯಾದರೆ ವಿದ್ಯಾರ್ಥಿ ಸ್ವಪ್ರಯತ್ನದಿಂದ ಏನನ್ನು ಕಲಿತಂತೆ ಆಗುವುದಿಲ್ಲ. ಶಿಕ್ಷಕನ ಬೋಧನೆ ಅಥವಾ ಚಟುವಟಿಕೆಗಳು ಮಾದರಿಯೇ ಹೊರತು ಅವರ ಮಾತುಗಳೇ ಪರಿಪೂರ್ಣವಲ್ಲ. ಅದರ ಅನುಸಾರ ವಿದ್ಯಾರ್ಥಿಯೆ ಹೊಸ ಹೊಸ ವಿಷಯಗಳನ್ನು ತಿಳಿದುಕೊಳ್ಳಲು ಮುಂದಾಗಿ ಗೊತ್ತಿಲ್ಲದ ವಿಚಾರಗಳನ್ನು ಮಾತ್ರ ಶಿಕ್ಷಕನನ್ನು ಸಂಪರ್ಕಿಸಬೇಕು. ಇದರಿಂದ ವಿದ್ಯಾರ್ಥಿ ಸ್ವ ಚಟುವಟಿಕೆಯ ಮೂಲಕ ಕಲಿತಂತಾಗಿ ಅರ್ಥಪೂರ್ಣವಾಗಿ ಕಲಿಯುತ್ತಾನೆ ಎಂದು ಹೇಳಬಹುದು.

ಒಂದನೇ ತರಗತಿಗೆ ಸೇರುವ ಮಗು (ವಿದ್ಯಾರ್ಥಿ) ಆಗ ತಾನೇ ತನ್ನ ಮನೆಯ ಸುತ್ತ ಮುತ್ತಲಿನ ಪರಿಸರದಿಂದ, ತಾಯಿಯ ಮಡಿಲಿನಿಂದ ದೂರವಾಗಿ ಬಂದಿರುತ್ತದೆ. ಈ ವಿದ್ಯಾರ್ಥಿಗಳಿಗೆ ಆಟದಿಂದ ಪಾಠದ ವ್ಯವಸ್ಥೆಯಾಗಬೇಕು. ಕಲಿಸುವ ವಿಷಯ ಸರಳವಾದರೆ ಉಚ್ಚಾರಣೆ ಮತ್ತು ಬರಹಗಳೆರಡೂ ಸರಳವಾಗುತ್ತವೆ. ಇದರಿಂದ ಆಲಿಸುವ, ಮಾತನಾಡುವ, ಕೌಶಲ ಸರಳವಾಗಬಲ್ಲದು. ಹಿಂದಿನ ಪಠ್ಯಗಳು ಮತ್ತು ಇಂದಿನ ಪಠ್ಯಗಳನ್ನು ಗಮನಿಸಿದರೆ, ಪಠ್ಯಗಳೆಲ್ಲವು ಸರಳತೆಯ ಮಾರ್ಗವನ್ನು ಕಂಡುಕೊಳ್ಳುವ ಪ್ರಯತ್ನಗಳು ನಡೆಯುತ್ತಿವೆಯೇ ಹೊರತು ಪರಿಪೂರ್ಣವಾಗಿಲ್ಲ ಎಂದೆನಿಸುತ್ತದೆ. ಒಂದನೇ ತರಗತಿಯಿಂದ ಏಳನೇ ತರಗತಿಯ ಪಠ್ಯಗಳನ್ನು ಗಮನಿಸಿದಾಗ ಇದು ಸ್ಪಷ್ಟವಾಗುತ್ತದೆ. ಒಂದನೇ ತರಗತಿಯ ಪಠ್ಯದಲ್ಲಿ 'ಕಲ್ಲು ಬೀರಿದ ಹುಡುಗಿ' (ಪು.ಸಂ ೭೩) ಎಂಬ ಪಾಠದಿಂದ ಉಪಾಯ ಬಲ್ಲವರಿಗೆ ಅಪಾಯವಿಲ್ಲ ಎಂಬ ನೀತಿಯನ್ನು ಈ ಪಾಠ ಪ್ರತಿಬಿಂಬಿಸುತ್ತದೆ. ಆದರೆ ಈ ತರಗತಿಗೆ ನೀತಿಪಾಠ ಅರಗಿಸಿಕೊಳ್ಳುವ ಶಕ್ತಿ ಇದೆಯೋ ಇಲ್ಲವೋ? ಎನ್ನುವುದು ಕುತೂಹಲದ ಪ್ರಶ್ನೆಯಾಗಿದೆ. ನೀತಿ ಪಾಠ ಎಂದು ಬೋಧಿಸುವ ಶಿಕ್ಷಕರ ಸಂಖ್ಯೆ ಎಷ್ಟು ಎಂಬುದನ್ನು ಯೋಚಿಸಬೇಕಿದೆ. ಇದು ಈ ತರಗತಿಯ ಕನ್ನಡ ರಚನೆಯ ಕ್ರಮವನ್ನಾಗಲಿ, ಕನ್ನಡ ನುಡಿಯ ಬಗೆಗೆ

ತಿಳಿಸುವ ವಿಧಾನ ಎರಡು ಅಸಾಧ್ಯ. ಆದ್ದರಿಂದ ಇಂತಹ ಪಾಠಗಳು ಮೂರನೇ ತರಗತಿಯ ನಂತರ ಇರಬೇಕು. ಈ ವಯಸ್ಸಿನ ಮಕ್ಕಳು ಈ ಪಾಠದಿಂದ ಏನನ್ನು ಕಲಿಯದೇ ರೂಡಿಸಿಕೊಂಡು ಓದುವ ಪರಿಪಾಠ ಮಾತ್ರ ಸುಧಾರಿಸಬಲ್ಲದು. ಆದ್ದರಿಂದ ಇಲ್ಲಿಯ ಪಾಠ/ಪದ್ಯಗಳು ಭಾಷಾಭ್ಯಾಸ ಚಟುವಟಿಕೆಗಳಲ್ಲಿ ಸರಳ ಮಾರ್ಗ ಹಾಗೂ ಸ್ಪಷ್ಟ ಉಚ್ಚಾರಣೆಗೆ ಅನುಕೂಲವಾಗುವ ರೀತಿಯಲ್ಲಿ ಪಠ್ಯಗಳು ರಚನೆಯಾಗಬೇಕಾದ ಅಗತ್ಯತೆ ಇದೆ ಎನಿಸುತ್ತದೆ. ಇಲ್ಲವಾದಲ್ಲಿ ಕನ್ನಡ ರಚನೆಯ ಕ್ರಮವನ್ನು ವಿದ್ಯಾರ್ಥಿಗಳು ಕಲಿಯುತ್ತಾರೆ. ಹೊರತು ಅರ್ಥವನ್ನು ಗ್ರಹಿಸಲಾರರು. ಇದರಿಂದ ವಿದ್ಯಾರ್ಥಿಗಳಿಗೆ ತಾತ್ಕಾಲಿಕವಾಗಿ ಸ್ಮೃತಿಗೆ ಹೋಗಿ ನಂತರದ ದಿನಮಾನಗಳಲ್ಲಿ ಸುಲಭವಾಗಿ ಮರೆಯುತ್ತಾರೆ. ಇದರಿಂದ ವಿದ್ಯಾರ್ಥಿ ಕಲಿಕೆ ಪರಿಪೂರ್ಣವಾಗಲಾರದು. ಪ್ರಾಥಮಿಕ ಹಂತದಲ್ಲಿ ಕಥೆಯನ್ನು, ನಾಟಕವನ್ನು ಮಾಡಿ ತರಗತಿಯಲ್ಲಿ ಅಭಿನಯಿಸಿ ಮತ್ತು **(ತರಗತಿ ೨ ಪು.ಸಂ. ೧೩)** ಪ್ರತಿಧ್ವನಿತ ಪದಗಳನ್ನು ಹೇಳಿಸಿ ಪದಬಂಧ ಇತ್ಯಾದಿ ಚಟುವಟಿಕೆ ಕಲಿಸುವುದನ್ನು ಇಲ್ಲಿ ಕಾಣುತ್ತೇವೆ. ಇಂತಹ ಚಟುವಟಿಕೆಯನ್ನು ನಿಭಾಯಿಸುವ ಶಕ್ತಿ ಮತ್ತು ವಾತಾವರಣ ೪ನೇ ತರಗತಿಯಿಂದ ಪ್ರಾರಂಭವಾಗಬೇಕು. ಇಲ್ಲವಾದಲ್ಲಿ ಶಿಕ್ಷಕರು ನೋಟ್ಸ್ ಬರೆಸುತ್ತಾರೆ. ವಿದ್ಯಾರ್ಥಿಗಳು ಇದನ್ನು ಬರೆದುಕೊಳ್ಳುತ್ತಾರೆ. ಕಲಿಯುವುದಾದರೂ ಏನು ಎಂದರೆ ಶೂನ್ಯ. ವಿದ್ಯಾರ್ಥಿಗಳಿಗೆ ಇದರಿಂದ ದ್ವಂದ್ವವಾಗಿ ಏನನ್ನು ಕಲಿಯಲಾರರು. ಕಲಿತರೂ ಅದು ಕಂಠಪಾಠವೇ ಆಗಬಲ್ಲದೇ ಹೊರತು, ಅರ್ಥಪೂರ್ಣವಾಗಲಾರದು. ಆದ್ದರಿಂದ ಕಿರಿಯ ಮತ್ತು ಹಿರಿಯ ಪ್ರಾಥಮಿಕ ಪಠ್ಯಗಳನ್ನು ರಚಿಸುವಾಗ ಶಿಕ್ಷಣ ತಜ್ಞರು ಮನೋವಿಜ್ಞಾನಿಗಳು ಭಾಷಾ ಶಾಸ್ತ್ರಜ್ಞರು ನೀಡುವ ನಿರ್ಣಯಗಳು ಬಹು ಮುಖ್ಯವಾಗಬಲ್ಲದು. ಆದ್ದರಿಂದ ಇವರು ತೀರ್ಮಾನ ತೆಗೆದುಕೊಳ್ಳುವಾಗ ವಿದ್ಯಾರ್ಥಿ ವಯೋಮಾನವನ್ನು ಗಂಭೀರವಾಗಿ ಯೋಚಿಸಿ ನಿರ್ಣಯವನ್ನು ತೆಗೆದುಕೊಳ್ಳುವುದು ಮುಖ್ಯವೆನಿಸುತ್ತದೆ.

ಕಲಿತ ಕಲಿಕೆ ಯಾವ ರೀತಿಯಲ್ಲಿ ಪರಿಣಾಮ ಬೀರಬಲ್ಲದು ಎಂಬ ಅಂಶ ಬಹಳ ಮುಖ್ಯವೆನಿಸುತ್ತದೆ. ಕಲಿತ ಪಾಠ ಜೀವನದುದ್ದಕ್ಕೂ ಬಳಕೆಯಾದಾಗ ಮಾತ್ರ ಕಲಿಕೆ ಎಂಬ ಪದಕ್ಕೆ ಪರಿಪೂರ್ಣ ಅರ್ಥ ಒದಗಬಲ್ಲದು. ಆದ್ದರಿಂದ ಕಿರಿಯ ಮತ್ತು ಹಿರಿಯ ಪ್ರಾಥಮಿಕ ಪಠ್ಯಗಳು ವಿದ್ಯಾರ್ಥಿಗಳಿಗೆ ಆಸಕ್ತಿ, ಆಕರ್ಷಣೀಯವಾಗಿರುವಂತೆ ರಚನೆಯಾದರೆ ಒಳ್ಳೆಯದು. ಶಿಕ್ಷಕರಾದವರು ಇದನ್ನು ಸರಳ ರೀತಿಯಲ್ಲಿ, ಅವರು ತಪ್ಪುಗಳನ್ನು ಸರಿ ಪಡಿಸುವಂತೆ ಕೇಳಿದಾಗ ತಾಳ್ಮೆಯಿಂದ ಶಿಕ್ಷಕರಾದವರು ಹೇಳಿಕೊಡುವುದನ್ನು ಬೋಧಕರ ಮನಸ್ಸಿನಲ್ಲಿ ಬರಬೇಕು. **ಸಿ.ಎಚ್. ಕೃಷ್ಣಶಾಸ್ತ್ರಿ ಬಾಳಿಲ ಅವರು 'ಶಿಕ್ಷಕ ವಿದ್ಯಾರ್ಥಿ'** ಎಂಬ ಪುಸ್ತಕದುದ್ದಕ್ಕೂ ಕಲಿಕೆಗೆ ವಿದ್ಯಾರ್ಥಿಗೆ ಬೋಧಕನಾದವನು ತಾಳ್ಮೆಯಿಂದ ವಿದ್ಯಾರ್ಥಿಗೆ ನೆರವಾಗಿ, ಅವನ ಕಲಿಕೆಯಲ್ಲಿ ಸಮಸ್ಯೆಗಳನ್ನು ಗುರುತಿಸಿ ಅವುಗಳಿಗೆ ಪರಿಹಾರೋಪವಾಗಿ ಹೇಳಿ ಕೊಡುವುದನ್ನು ವಿವರಿಸಿ ಅಳವಡಿಸಿಕೊಂಡಿರಬೇಕು ಎಂದಿದ್ದಾರೆ. **'ಪಠ್ಯಕ್ರಮ ಕಾರ್ಯಾಚರಣೆಯ ತತ್ವಗಳು'**

ಎಂಬ ಪುಸ್ತಕವನ್ನು ಬರೆದ ನಂಜೇಗೌಡ, ಸಿ.ಜಿ.ಪ್ರಸಾದ್ ಮತ್ತು ಶೇಖರ್ ಅವರು ಮಗುವಿನ ಸಾಮರ್ಥ್ಯಕ್ಕೆ ಅನುಗುಣವಾಗಿ ಪಠ್ಯಗಳು ರಚನೆ ಮಾಡುವುದರ ಬಗ್ಗೆ ವಿವರವಾಗಿ ವಿವರಿಸುವ ಪ್ರಯತ್ನ ಮಾಡಿದ್ದಾರೆ. ಇದರಿಂದ ಮಗುವಿಗೆ ಮಾನಸಿಕ ಮತ್ತು ದೈಹಿಕ ಆಯಾಸವಾಗದಂತೆ ಪಠ್ಯಗಳು ರಚನೆಯಾದಾಗ ಕಲಿಕೆಯಲ್ಲಿ ಆಸಕ್ತಿ ಮೂಡಿಸುತ್ತದೆ. ವಿದ್ಯಾರ್ಥಿಗಳಿಗೆ ಕಲಿಕೆಯಲ್ಲಿ ಪರಿಣಾಮಾತ್ಮವಾಗಿ ಮೂಡಬಲ್ಲದು ಎಂಬುದನ್ನು ವಿವರಿಸಿದ್ದಾರೆ. ಕನ್ನಡ ಗಾದೆ ಗ್ರಂಥ ಮಾಲೆಯಿಂದ ಪ್ರಕಟವಾದ **'ವಿದ್ಯಾರ್ಥಿಗಳು'** ಎಂಬ ಪುಸ್ತಕದಲ್ಲಿ (ಸಂ.ಮೋ.ಕ.ಗಾಂಧಿ) ವಿದ್ಯಾರ್ಥಿಗಳು ನಾಡಿನ ನಾಳಿನ ಪ್ರಜೆಗಳು ಅವರುಗಳಿಗೆ ಕೇವಲ ಔಪಚಾರಿಕ ಶಿಕ್ಷಣವನ್ನು ಕೊಡದೇ ವಿದ್ಯಾರ್ಥಿಗಳ ಸರ್ವತೋಮುಖ ಅಭಿವೃದ್ಧಿ ಮುಖದತ್ತ ಕರೆದುಕೊಂಡು ಹೋಗು ವಂತಹ ಪಠ್ಯಗಳು, ಬೋಧಕರು, ಪೋಷಕರದಾಗಬೇಕು ಎಂದು ಈ ಪುಸ್ತಕ ಎಲ್ಲಾ ಲೇಖನಗಳ ಸಂಗ್ರಹದ ಒಟ್ಟು ಸಾರಾಂಶದಿಂದ ತಿಳಿದು ಬರುತ್ತದೆ. ಆದ್ದರಿಂದ ಮೊದಲು ವಿದ್ಯಾರ್ಥಿಯ ವಯೋಮಾನಕ್ಕೆ ತಕ್ಕಂತೆ ಪಠ್ಯ, ಬೋಧಕ, ಪಾಠೋಪಕರಣಗಳು ಕಲಿಕಾರ್ಥಿಗಳಿಗೆ ಬೇಕು. ಅಂದಾಗ ಮಾತ್ರ ವಿದ್ಯಾರ್ಥಿ, ಬೋಧಕ, ಪಠ್ಯಕ್ರಮ ಎಂಬ ಪದಗಳಿಗೆ ವಿಶಾಲಾರ್ಥ ಬರುತ್ತದೆ ಎಂಬುದನ್ನು ಇವರ ಮಾತುಗಳಿಂದ ಸ್ಪಷ್ಟವಾಗುತ್ತದೆ. ಒಟ್ಟಾರೆಯಾಗಿ ವಿದ್ಯಾರ್ಥಿಯ ಮೂರು ವರ್ಷ ಬುದ್ದಿ ನೂರು ವರ್ಷ ಎಂಬ ಗಾದೆಯಂತೆ ನಾವು ಮೂರು ವರ್ಷದಿಂದ ವಿದ್ಯಾರ್ಥಿಯನ್ನು ಮಾನಸಿಕ, ದೈಹಿಕವಾಗಿ ಸಮಾಜದ ಜವಾಬ್ದಾರಿಯನ್ನು ತಿಳಿಸುವ ಶಿಕ್ಷಣವನ್ನು ಕೊಡಬೇಕಾಗಿದೆ. ಇಂದಿನ ವಿದ್ಯಾರ್ಥಿಗಳಲ್ಲಿ ಇಂತಹ ಅಂಶಗಳನ್ನು ಕಾಣುವುದು ಕಡಿಮೆಯಾಗುತ್ತಿದೆ. ನಾವು ವಿದ್ಯಾರ್ಥಿಯನ್ನು ಔಪಚಾರಿಕ ಶಿಕ್ಷಣದ ಶ್ರೇಯಸ್ಸನ್ನು ಬಯಸಿ ಅದರಲ್ಲಿ ಯಶಸ್ಸನ್ನು ಕಾಣಿಸಲು ಪ್ರಯತ್ನಿಸುತ್ತಿದ್ದೇವೆ. ಆದರೆ ಅವನ ಚಾರಿತ್ರಿಕ, ಸಾಂಸ್ಕೃತಿಕ ಹಾಗೂ ನೈತಿಕ ಶಿಕ್ಷಣದ ಪ್ರಗತಿಯಲ್ಲಿ ಇಂದಿನ ಶಿಕ್ಷಣ ವಿದ್ಯಾರ್ಥಿಗಳಿಗೆ ಒದಗಿಸುತ್ತಿಲ್ಲ. ಅಂತಹ ಪರಿಸರ ಶಾಲೆಯಲ್ಲೂ ಇಲ್ಲ, ಮನೆಯ ಕುಟುಂಬದಲ್ಲೂ ಇಲ್ಲ. ಇದರಿಂದ ಶಿಕ್ಷಣ ಸಂಕುಚಿತ ಅರ್ಥವನ್ನು ಪಡೆದುಕೊಳ್ಳುತ್ತಿದೆ. ಶಿಕ್ಷಣ ಎಂದರೆ ಇಂದಿನ ವಿದ್ಯಾರ್ಥಿಗಳು ಸಮಾಜ ಆರ್ಥಿಕತೆಯಲ್ಲಿ ಮುಂದೆ ಬರುವುದು ಎಂಬ ಅರ್ಥವನ್ನು ಪಡೆದು ಕೊಂಡಿರುವುದು ವಿಷಾದನೀಯ ಸಂಗತಿಯಾಗಿದೆ. ಈ ಬೆಳವಣಿಗೆಯಿಂದ ಆರ್ಥಿಕವಾಗಿ ಭದ್ರತೆಯನ್ನು ಪಡೆದು ಕೊಳ್ಳಬಹುದು. ಆದರೆ ಚಾರಿತ್ರಿಕವಾಗಿ, ಸಾಂಸ್ಕೃತಿಕವಾಗಿ, ಆಧ್ಯಾತ್ಮಿಕ ತಿಳುವಳಿಕೆಯಿಂದ ವಿದ್ಯಾರ್ಥಿಗಳನ್ನು ದೂರವಿಡಲು ಸಹಾಯಕ. ಇಂದಿನ ಸಮೂಹ ಮಾಧ್ಯಮಗಳು, ಸಮಾಜ, ಶಿಕ್ಷಕ, ಶಾಲೆಯ ಪರಿಸರ ಅದರ ಜೊತೆಗೆ ಪೋಷಕರೆಲ್ಲರೂ ಸಹಕರಿಸುವ ಪ್ರಯತ್ನಕ್ಕೆ ಬಂದು ನಿಂತಿದ್ದಾರೆ. ಇದರಿಂದ ಭಾವಿ ಭವಿಷ್ಯತ್ತಿಗೆ ತೊಡಕು ಹೆಚ್ಚಾಗುವಲ್ಲಿ ನಾವುಗಳೇ ಸಹಕಾರ ಮಾಡಿಕೊಡುವ ಪ್ರಯತ್ನದಲ್ಲಿದ್ದೇವೆ. ಇದು ಇಂದಿನ ಶಿಕ್ಷಣ ಪದ್ಧತಿಯಿಂದ ಮತ್ತು ಸಮಾಜದಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ವಿದ್ಯಾರ್ಥಿಗಳನ್ನು ಸರ್ವತೋಮುಖ ಬೆಳವಣಿಗೆಗೆ ದಾರಿ ಮಾಡಿ ಕೊಡುವಂತಹ ಶಿಕ್ಷಕ, ಪಠ್ಯಕ್ರಮ, ಬೋಧನೆ, ಪರೀಕ್ಷಾ

ಪದ್ಧತಿ, ಮೌಲ್ಯಮಾಪನ ಹಾಗೂ ಸಮಾಜದ ಪರಿಸರದಲ್ಲಿ ಬರಬೇಕಾದ ಅಗತ್ಯತೆ ತುಂಬಾ ಇದೆ ಎಂದು ಹೇಳಬಹುದು.

## ೭.೪. ಪರೀಕ್ಷೆ

ಪರೀಕ್ಷೆ ಎಂಬ ಪದಕ್ಕೆ ಸಂಕ್ಷಿಪ್ತ ಕನ್ನಡ ನಿಘಂಟುವಿನಲ್ಲಿ (ಪು.ಸಂ.೭೪೦) ಆಳವಾದ ಪರಿಶೀಲನೆ ತಪ್ಪು-ಒಪ್ಪುಗಳ ವಿಮರ್ಶೆ, ಮೌಲ್ಯಮಾಪನ ಕ್ರಮ ಎಂದು ಹೇಳಲಾಗಿದೆ. ಔಪಚಾರಿಕ ಶಿಕ್ಷಣ ವ್ಯವಸ್ಥೆಯಲ್ಲಿ ಈ ಪರೀಕ್ಷೆಯನ್ನು ಮಕ್ಕಳ ಕಲಿಕೆಯನ್ನು ಅಳೆಯಲು ಈ ವಿಧಾನವನ್ನು ಅನುಸರಿಸಲಾಗುತ್ತಿದೆ. ಪರೀಕ್ಷೆಯಲ್ಲಿ ಮುಖ್ಯವಾಗಿ ಎರಡು ವಿಧಗಳಿವೆ. ೧ ಲಿಖಿತ ಪರೀಕ್ಷೆ ೨. ಮೌಖಿಕ ಪರೀಕ್ಷೆ ಎಂದು. ಈ ಎರಡು ಕ್ರಮಗಳನ್ನು ಅನುಸರಿಸಿಕೊಂಡು ಪ್ರಾಥಮಿಕ ಶಿಕ್ಷಣದಲ್ಲಿ ಕಲಿತ ವಿಷಯಗಳನ್ನು ವಿದ್ಯಾರ್ಥಿಗಳಿಂದ ತಿಳಿಯುವುದೇ ಪರೀಕ್ಷೆಯಾಗಿದೆ. ಈ ವಿಧಾನ ಮೊದಲು ಲಿಖಿತವಾಗಿರದೇ ಮೌಖಿಕವಾಗಿತ್ತು. ಈ ಅಂಶವನ್ನು ಪ್ರಾಚೀನ ಭಾರತೀಯ ಶಿಕ್ಷಣ ಪರಂಪರೆಯು ಸ್ಪಷ್ಟಪಡಿಸುತ್ತದೆ. ಮಕ್ಕಳು ಕಲಿತ ಪಾಠವನ್ನು ಕಂಠಪಾಠದ ಮೂಲಕ ಗುರುಗಳಿಗೆ ಒಪ್ಪಿಸುವುದೇ ಅಂದಿನ ಪರೀಕ್ಷೆಯಾಗಿತ್ತು. ಇಂದು ಈ ವಿಧಾನವನ್ನು ಬದಲಾಯಿಸಿಕೊಂಡು ಪರೀಕ್ಷೆಯನ್ನು ಲಿಖಿತ ಮತ್ತು ಮೌಖಿಕವಾಗಿ ಎರಡು ರೀತಿಯಲ್ಲಿ ನಡೆಯುತ್ತಿರುವುದನ್ನು ಪ್ರಾಥಮಿಕ ಮತ್ತು ಉನ್ನತ ಶಿಕ್ಷಣದವರೆಗೂ ಕಾಣುತ್ತೇವೆ. ಇದು ವಿಷಯಾನುಸಾರ ಬದಲಾವಣೆಗಳಿಂದ ಪರೀಕ್ಷೆಗಳು ನಡೆಯುತ್ತವೆ. ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಲ್ಲಿ ಮಾಸಿಕ, ತ್ರೈಮಾಸಿಕ, ಅರ್ಧವಾರ್ಷಿಕ ಹಾಗೂ ವಾರ್ಷಿಕ ಪರೀಕ್ಷೆ ಎಂದು ಮಾಡಿ ವಿಭಜಿಸಿಕೊಳ್ಳಲಾಗಿದೆ. ಮಕ್ಕಳ ಕಲಿಕೆಯಾದಂತೆ ಪರೀಕ್ಷೆಯ ಮೂಲಕ ಕಲಿಕೆಯನ್ನು ಅಳೆದು ದೋಷಗಳು ಕಂಡು ಬಂದರೆ ಪುನರಾವರ್ತಿಸುವುದಾಗಿದೆ. ಮಾಸಿಕ, ತ್ರೈಮಾಸಿಕ, ಅರ್ಧವಾರ್ಷಿಕ ಪರೀಕ್ಷೆಯ ಉದ್ದೇಶ ಕಲಿತ ಪಾಠವನ್ನು ಪರೀಕ್ಷೆ ಮಾಡಿ ಕಲಿಯದೇ ಇರುವ ಪಾಠಗಳನ್ನು ಪುನರಾವರ್ತಿಸಿಕೊಳ್ಳಲು ಈ ವಿಧಾನ ಅಗತ್ಯವೆನಿಸಿದೆ. ಇದರಿಂದ ಮಗುವಿಗೆ ಪರೀಕ್ಷೆ ಎಂಬ ಬೂತವನ್ನು ಹೋಗಲಾಡಿಸಬಹುದು. ಅಲ್ಲದೆ ವಾರ್ಷಿಕ ಪರೀಕ್ಷೆಗೆ ಸುಲಭವಾಗಿ ಬರೆಯಲು ಸಹಾಯಕವಾಗಬಲ್ಲದು. ಪ್ರಶ್ನಾವಳಿಯಲ್ಲಿ ವಿದ್ಯಾರ್ಥಿಗಳು ಗಳಿಸಿರುವ ಅಂಕಗಳ ಆಧಾರದ ಮೇಲೆ ವ್ಯಕ್ತಿಗತವಾಗಿ ಅವರ ಸಾಧನೆ, ದೌರ್ಬಲ್ಯಗಳನ್ನು ಗುರುತಿಸಲು ಅನುಕೂಲ. ಅಲ್ಲದೆ ಸಾಧನೆಯಲ್ಲಿ ಹಿಂದುಳಿದ ವಿದ್ಯಾರ್ಥಿಗಳಿಗೆ ಪರಿಹಾರ ಬೋಧನೆಯನ್ನು ಕೈಗೊಳ್ಳಬಹುದು. ಮೌಖಿಕ ಪರೀಕ್ಷೆ ಇತರ ವಿಷಯಗಳ (ವಿಜ್ಞಾನ, ಗಣಿತ, ಇತ್ಯಾದಿ) ಮೌಲ್ಯಮಾಪನಕ್ಕಿಂತ ಭಾಷಾ ಮೌಲ್ಯಮಾಪನದಲ್ಲಿ ಮೌಖಿಕ ಪರೀಕ್ಷೆಯ ಪಾತ್ರ ಬಹಳ ಹೆಚ್ಚಿನದು. ಏಕೆಂದರೆ ಈ ಪರೀಕ್ಷೆಯಿಂದ ಭಾಷಾ ಕೌಶಲ್ಯಗಳನ್ನು ಲಿಖಿತ ಪರೀಕ್ಷೆಗಳಿಂದ ನೇರವಾಗಿ ಮೌಲ್ಯಮಾಪನ ಮಾಡಲು ಬರುವುದಿಲ್ಲ. ಪರೀಕ್ಷಾರ್ಥಿಯ ಅಥವಾ ವಿದ್ಯಾರ್ಥಿಯ ಎದುರು ಮುಖಾ ಮುಖಿಯಾಗಿ ಪ್ರಶ್ನಿಸುವ ವಿಧಾನವೇ ಮೌಖಿಕ ಪರೀಕ್ಷೆ. ಭಾಷಾ ಬೋಧನೆಯ ಮುಖ್ಯ ಕಲಿಕೆಯ ಫಲಗಳಾದ ಉಚ್ಚಾರಣಾ ಸ್ಪಷ್ಟತೆ,

ಮೌಖಿಕ ಅಭಿವ್ಯಕ್ತಿ, ನಿರರ್ಗಳತೆಯಿಂದ ನಿರ್ದಿಷ್ಟವಾಗಿ ಓದುವಿಕೆ, ಹೇಳಿದುದನ್ನು ಗ್ರಹಿಸುವ ಸಾಮರ್ಥ್ಯಗಳನ್ನು ಗುರುತಿಸಬಹುದು. ನಿರ್ದಿಷ್ಟವಾಗಿ ನಿರ್ದೇಶನ ಹಾಗೂ ಸೂಚನೆಗಳ ಗ್ರಹಿಕೆ ಈ ಎಲ್ಲಾ ಸಾಮರ್ಥ್ಯಗಳನ್ನು ಮೌಖಿಕ ಪರೀಕ್ಷೆ ಭಾಷಾ ಮೌಲ್ಯಮಾಪನ ಮಾಡುವಲ್ಲಿ ಸಹಾಯಕವಾಗಬಲ್ಲದು.

'ಕನ್ನಡ ಸಂಪದ' ಎಂಬ ಪುಸ್ತಕವನ್ನು ಡಿ.ಇಡಿ. ಪ್ರಥಮ ತರಗತಿಯ ಮಕ್ಕಳಿಗಾಗಿ ರಾಜ್ಯ ಶಿಕ್ಷಣ ಸಂಶೋಧನಾ ಮತ್ತು ತರಬೇತಿ ನಿರ್ದೇಶನಾಲಯ ೨೦೦೫ ರಲ್ಲಿ ಪ್ರಕಟಿಸಿದೆ. ಇದರಲ್ಲಿ ಮೌಖಿಕ ಪರೀಕ್ಷೆ ಆಗುವ ಪ್ರಯೋಜನಗಳನ್ನು ಈ ಕೆಳಗಿನಂತೆ ವಿವರಿಸಿದ್ದಾರೆ. **(ಪು.ಸಂ. ೩೬೯)** ಓದುಗಾರಿಕೆ ಕೌಶಲ, ಉಚ್ಚಾರಣೆ, ಅಭಿವ್ಯಕ್ತಿ ವಿಧಾನಗಳಿಗೆ ಸಂಬಂಧಿಸಿದಂತೆ ವಿದ್ಯಾರ್ಥಿಗಳಲ್ಲಿ ದೋಷವಿದ್ದರೆ ತಿಳಿದು ಪರಿಹಾರ ಕ್ರಮ ಅಳವಡಿಸಿಕೊಂಡು ಪ್ರಶ್ನೆಗಳ ಸಂದಿಗ್ಧತೆಯನ್ನು ನಿವಾರಿಸಲು ಸಹಾಯಕ. ಸ್ಥಳದಲ್ಲಿಯೇ ಮೌಲ್ಯಮಾಪನ ಮಾಡುವುದರಿಂದ ಈ ಪರೀಕ್ಷೆ ಭಾಷಾ ಪಠ್ಯಗಳಲ್ಲಿ ಮುಖ್ಯವಾದುದಾಗಿದೆ ಎಂದು ಅಭಿಪ್ರಾಯ ಪಡುತ್ತಾರೆ.

ಪರೀಕ್ಷೆಯ ಇನ್ನೊಂದು ವಿಧಾನ ಲಿಖಿತ ರೂಪದ್ದಾಗಿದೆ. ಕೇಳಲಾದ ಲಿಖಿತ ಪರೀಕ್ಷೆಗಳಿಗೆ ಲಿಖಿತ ರೂಪದಲ್ಲಿ ಉತ್ತರವನ್ನು ನಿರೀಕ್ಷಿಸುವ ಪರೀಕ್ಷೆಗಳಿಗೆ ಲಿಖಿತ ಪರೀಕ್ಷೆಗಳು ಎನ್ನುವರು. ಭಾಷಾ ಮೌಲ್ಯಮಾಪನದಲ್ಲಿ ಇವುಗಳ ಬಳಕೆ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆಯಲ್ಲಿ ಬಳಕೆಯಾಗಿದೆ. ತರಗತಿಯ ವಿದ್ಯಾರ್ಥಿಗಳೆಲ್ಲರಿಗೂ ಒಟ್ಟಿಗೆ ಪರೀಕ್ಷಿಸುವ ವಿಧಾನ ಇದಾಗಿದೆ. ಭಾಷೆಗೆ ಸಂಬಂಧಿಸಿದಂತೆ ವಿದ್ಯಾರ್ಥಿಗಳ ಬರವಣಿಗೆಯಲ್ಲಿ ವರ್ಣಗಳು, ಸಮರ್ಪಕ ಪದಗಳ, ಬಳಕೆ ಹೇಗೆ ನಡೆದಿದೆ. ವಾಕ್ಯರಚನಾ ಸಾಮರ್ಥ್ಯ, ಸರಳ ಶೈಲಿ ಪರಿಣಾಮಕಾರಿ ವಿವರಣಾ ಅಥವಾ ನಿರೂಪಣಾ ವಿಧಾನ, ವಿಷಯ ಪ್ರತಿಪಾದನೆಯಲ್ಲೂ ನಿಖರತೆ, ವಾಕ್ಯಗಳ ನಡುವೆ ಇರುವ ಅನ್ಯೋನ್ಯತೆಯ ಸಂಬಂಧ ಹೀಗೆ ಹಲವಾರು ಅಂಶಗಳಿಗೆ ಸಂಬಂಧಿಸಿದ ಸಾಮರ್ಥ್ಯ ಗಳನ್ನು ಮೌಲ್ಯಮಾಪನ ಮಾಡಬಹುದು. ಬಾಯ್ದೆರೆ ಪರೀಕ್ಷೆಯಷ್ಟು ಭಯ ಆತಂಕಗಳು ಈ ಪರೀಕ್ಷೆಯಲ್ಲಿ ಕಾಣದೇ ವಿದ್ಯಾರ್ಥಿ ತನಗೆ ಸರಳವಾದ ಪ್ರಶ್ನೆಯನ್ನು ಮೊದಲು ಉತ್ತರಿಸಿ ನಂತರ ಬೇರೆ ಪ್ರಶ್ನೆಗಳಿಗೆ ಉತ್ತರಿಸಲು ಇಲ್ಲಿ ಅವಕಾಶವಿರುತ್ತದೆ.

ಈ ಎರಡೂ ಮಾದರಿಗಳನ್ನು ಒಳಗೊಂಡ ಪರೀಕ್ಷೆಯ ವಿಧಾನ ಮತ್ತು ಚಟುವಟಿಕೆ ಗಳೆರಡನ್ನು ಪಠ್ಯಗಳಲ್ಲಿ ಕಾಣುತ್ತೇವೆ. ಪ್ರಾಥಮಿಕ ಶಿಕ್ಷಣದಲ್ಲಿ ಈ ಪರೀಕ್ಷೆಗಳ ಸ್ಥಿತಿಗಳೇನು? ಹಾಕಿಕೊಂಡ ಯೋಜನೆಗಳು ಎಷ್ಟರಮಟ್ಟಿಗೆ ಸಫಲವಾಗಿವೆ. ಕಲಿಸುವ ಶಿಕ್ಷಕ ಕಲಿಸುತ್ತಿದ್ದಾನೆಯೇ ಎಂಬುದನ್ನು ಯೋಚಿಸಬೇಕಿದೆ. ಮೌಖಿಕ ಪರೀಕ್ಷೆಯ ವಿಧಾನದಿಂದ ಪ್ರಾಥಮಿಕ ಹಂತದಲ್ಲಿನ ಮಗು ತಕ್ಷಣವೇ ಉತ್ತರಿಸ ಬೇಕಾಗುತ್ತದೆ. ಆದರೆ ಇದು ಕಷ್ಟ ಸಾಧ್ಯ. ಮಗು (ಕಿರಿಯ ಪ್ರಾಥಮಿಕ) ಪಾಠಕ್ಕಿಂತ ಆಟಕ್ಕೆ ಗಮನ ಕೊಡುವ ಕಾಲ ಇದಾಗಿದೆ. ನೆನಪಿನಲ್ಲಿ ಉಳಿಯದೆ ಹೋಗುವ ಸಂಭವ ಹೆಚ್ಚು ಎಂದು ಹೇಳಬಹುದು. ಇಲ್ಲಿ ಕೇಳುವ ಪ್ರಶ್ನೆಗಳೆಲ್ಲವು

ಸಮಂಜಸತೆ, ವಸ್ತುನಿಷ್ಠತೆ, ವಿಶ್ವಾಸನೀಯತೆ, ವ್ಯಾಪಕತೆ ಇರುವುದಿಲ್ಲ. ಇದರಿಂದ ಸಮಗ್ರವಾಗಿ ಪರೀಕ್ಷಿಸಲು ಕಷ್ಟ ಸಾಧ್ಯವಾಗಬಲ್ಲದು. ಲಿಖಿತ ಪರೀಕ್ಷೆಯಲ್ಲೂ ತೊಂದರೆಗಳನ್ನು ಕಾಣಬಹುದು. ವರ್ಷಪೂರ್ತಿ ಕಲಿತ ಪಾಠಗಳನ್ನು ಮೂರು ಗಂಟೆಗಳಲ್ಲಿ ಉತ್ತರಿಸುವ ಪರೀಕ್ಷೆ ಇದು. ಈ ವಿಧಾನದಿಂದ ಪರೀಕ್ಷೆ ಮಾಡಿ ಮೌಲ್ಯಮಾಪನ ಮಾಡುವುದು ಒಳ್ಳೆಯ ಬೆಳವಣಿಗೆಯೇ ಎಂದು ಯೋಚಿಸಬೇಕಿದೆ. ಇದರಿಂದ ಮಗುವಿನ ಸರ್ವತೋಮುಖ ಬೆಳವಣಿಗೆಯನ್ನು ಮೌಲ್ಯಮಾಪನ ಮಾಡುವುದು ಅಸಾಧ್ಯ. ವಿಷಯಕ್ಕೆ ಆದ್ಯತೆ ನೀಡಿ ಭಾಷಾ ನಿಯಮಗಳ ಹಿನ್ನೆಲೆಯಲ್ಲಿ ಪರೀಕ್ಷೆ ಮಾಡುವುದು ಅಸಾಧ್ಯ. ಇಲ್ಲಿ ವಿದ್ಯಾರ್ಥಿ ನಕಲು ಮಾಡಬಹುದು. ಪರೀಕ್ಷೆ ವಸ್ತು ನಿಷ್ಠತೆಯನ್ನು ಸಂಪೂರ್ಣವಾಗಿ ಕಾಪಾಡಿಕೊಳ್ಳಲು ಬರುವುದಿಲ್ಲ. ವಿಷಯಗಳ ಜ್ಞಾನವನ್ನು ಅಪೇಕ್ಷಿತ ಕಲಿಕೆಯ ಫಲಗಳ ಜೊತೆಗೆ ಅವನ್ನು ಬಿಂಬಿಸುವ ಸಾಮರ್ಥ್ಯವನ್ನು ಬೆಳಸಿಕೊಳ್ಳಬೇಕಾಗುತ್ತದೆ. ಇದು ಪ್ರಾಥಮಿಕ ಶಿಕ್ಷಣದ ಮಕ್ಕಳಿಗೆ ಅಸಾಧ್ಯವಾಗಬಲ್ಲದು.

ಆಧುನಿಕತೆಯ ಸಂದರ್ಭದ ಪರೀಕ್ಷೆಗಳು ನಡೆಯುವುದನ್ನು ನೋಡಿದರೆ ಅದರ ಮೌಲ್ಯ ಕಳೆದು ಕೊಂಡಿದೆ ಎಂದು ಹೇಳಬಹುದು. ಪರೀಕ್ಷೆ ಎನ್ನುವುದು ಔಪಚಾರಿಕ ಶಿಕ್ಷಣ ವ್ಯವಸ್ಥೆಯಲ್ಲಿ ಅಂಕಗಳನ್ನು ಪಡೆಯುವ ದಾರಿಯಲ್ಲಿ ನಡೆಯುತ್ತದೆ. ಪ್ರಾಥಮಿಕ ಕನ್ನಡ ಭಾಷಾ ಪಠ್ಯಗಳನ್ನು ಕಲಿತ ವಿದ್ಯಾರ್ಥಿಯನ್ನು ಪರೀಕ್ಷಿಸುವ ನಾವು ವಿಷಯ ಆಧಾರಿತವಾಗಿ ಪರೀಕ್ಷೆಗಳು, ಪ್ರಶ್ನೆಪತ್ರಿಕೆ ಇರುವುದನ್ನು ಕಾಣುತ್ತೇವೆ. ಇಲ್ಲಿ ವರ್ಣಗಳ ಧ್ವನಿಗಳು, ವಾಕ್ಯಗಳ ರಚನೆಯ ಕ್ರಮವನ್ನು ಕಾಣುತ್ತೇವೆ. ಅಲ್ಲಿ ವರ್ಣಗಳು ಧ್ವನಿಗಳು, ವಾಕ್ಯಗಳು ರಚನೆಯ ಕ್ರಮವನ್ನು ನೇರವಾಗಿ ಕೇಳದೆ ವಿಷಯಾಧಾರಿತವಾಗಿ ಕೇಳಿರುವುದನ್ನು ಕಾಣಬಹುದು. ಇದರಿಂದ ಮಕ್ಕಳು ಪರೀಕ್ಷೆಯಲ್ಲಿ ವಿಷಯಾಧಾರಿತವಾಗಿ ಉತ್ತರ ನೀಡುತ್ತಾರೆ. ಇದರಿಂದ ವಿಷಯ ತಿಳಿಸಿ ಪರೀಕ್ಷೆ ಮಾಡಿದಂತಾಗುತ್ತದೆ. ವಿನಃ ಭಾಷಾ ಚಟುವಟಿಕೆಗಳಾಗಲಿ, ಭಾಷಾ ನಿಯಮವಾಗಲಿ, ಭಾಷಾ ರಚನಾ ಕ್ರಮವನ್ನಾಗಲಿ ಸ್ಪಷ್ಟವಾಗಿ ಪರೀಕ್ಷಿಸುವುದಿಲ್ಲ. ಇದರಿಂದ ವಿದ್ಯಾರ್ಥಿಗಳು ವಂಚಿತರಾಗಿ ಯಾವುದನ್ನು ಸ್ಪಷ್ಟವಾಗಿ ಕಲಿಯಲಾರರು. ಆದ್ದರಿಂದ ನಮ್ಮ ಪ್ರಾಥಮಿಕ ಶಿಕ್ಷಣದಲ್ಲಿ ನಡೆಯುವ ಭಾಷಾ ಪಠ್ಯಗಳಿಗೆ ಸಂಬಂಧಿಸಿದಂತೆ ಬೋಧನೆ, ಪಠ್ಯಕ್ರಮ, ಶಿಕ್ಷಕ, ಪರೀಕ್ಷೆ, ಮೌಲ್ಯಮಾಪನದ ಬದಲಾವಣೆ ಅಗತ್ಯತೆ ಇರುವುದು ಕಂಡು ಬರುತ್ತದೆ.

## ೭.೫. ಪ್ರಶ್ನಾವಳಿ

ಪ್ರಶ್ನೆಗಳ ಸಂಗ್ರಹ ಪಟ್ಟಿಯನ್ನು ಪ್ರಶ್ನಾವಳಿ ಎಂದು ಕರೆಯಲಾಗುತ್ತದೆ. ಪ್ರಶ್ನೆ ಎಂದರೆ ವ್ಯಕ್ತಿ/ಮಗು ಗೊತ್ತಿಲ್ಲದ ವಿಚಾರ ಅಥವಾ ಸಂಶಯವನ್ನು ತಿಳಿದವರ ಹತ್ತಿರ ಕೇಳಲು ಬಳಸುವ ಮಾತಿನ ರೂಪಗಳೆ ಪ್ರಶ್ನೆ ಎಂದು ಹೇಳಬಹುದು. ಪ್ರಶ್ನೆಗಳಲ್ಲಿ ಮೌಖಿಕ ಮತ್ತು ಲಿಖಿತ ಪ್ರಶ್ನೆಗಳೆಂದು ಎರಡು ಕ್ರಮಗಳನ್ನು ನೋಡಬಹುದು. ಈ ಚಟುವಟಿಕೆ ಔಪಚಾರಿಕ

ಮತ್ತು ಅನೌಪಚಾರಿಕ ಎರಡೂ ಹಂತಗಳಲ್ಲಿ ನಡೆಯುತ್ತಾ ಬಂದಿರುವುದನ್ನು ಕಾಣುತ್ತೇವೆ. ಔಪಚಾರಿಕ ಶಿಕ್ಷಣ ವ್ಯವಸ್ಥೆಯಲ್ಲಿ ವಿವಿಧ ಮಾದರಿಗಳ ಹಿನ್ನೆಲೆಯಲ್ಲಿ ಮಕ್ಕಳ ಮಾನಸಿಕ ವಯಸ್ಸಿಗೆ ಅನುಗುಣವಾಗಿ ಪಠ್ಯಪುಸ್ತಕದ ಅಭ್ಯಾಸ ಮತ್ತು ಭಾಷಾಭ್ಯಾಸ ಚಟುವಟಿಕೆಯಲ್ಲಿ ಕೊಡಲಾಗಿದೆ. ಈ ಚಟುವಟಿಕೆಗಳಲ್ಲಿ ನೀಡಿರುವ ಪ್ರಶ್ನಾವಳಿಗಳು ವಸ್ತುನಿಷ್ಠತೆ, ಸಮಂಜಸನೀಯತೆ, ವಿಶ್ವಾಸನೀಯತೆ ಹಾಗೂ ಉಪಯೋಗಾರ್ಹತೆ ಎಂಬ ಅಂಶಗಳ ಆಧಾರಿತವಾಗಿ ರಚನೆಯಾದವುಗಳಾಗಿವೆ. ಈ ಒಂದು ಚೌಕಟ್ಟಿನಲ್ಲಿ ಪ್ರಶ್ನೆಗಳನ್ನು ವಿಷಯಾ ನುಸಾರ ರಚನೆಯಾಗಿರಬೇಕೆಂದು ಶಿಕ್ಷಣ ತಜ್ಞರು, ಶೈಕ್ಷಣಿಕ ಮನೋವಿಜ್ಞಾನಿಗಳು ಭಾಷಾ ಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಈ ರೀತಿಯ ರಚನೆಯಿಂದ ವಿದ್ಯಾರ್ಥಿಗಳ ಕಲಿಕೆಯ ಸುಧಾರಣೆಯ ಬಗೆಗೆ ಸುಲಭವಾಗಿ ತಿಳಿಯಬಹುದು. ಈ ಮಾದರಿಗಳ ಅನುಸಾರ ಹಲವು ವಿಧಗಳಲ್ಲಿ ಪ್ರಶ್ನೆಗಳನ್ನು ಕೇಳಿದೆ. ಸರಳ ಸಂಕ್ಷಿಪ್ತ ಮಕ್ಕಳ ಮಾನಸಿಕ ಸಾಮರ್ಥ್ಯ ಅನುಸಾರ ಮಗು ಕಲಿತ ವಿಷಯಕ್ಕೂ ಕೇಳಿದ ಪ್ರಶ್ನೆಗಳಿಗೂ ನಿಕಟ ಸಂಬಂಧವಿರಬೇಕು. ಪ್ರಶ್ನೆಗಳ ಮಾದರಿಗಳನ್ನು ನೋಡಿದಾಕ್ಷಣ ಗೊಂದಲವಾಗಬಾರದು. ಸೃಜನಶೀಲ ಚಟುವಟಿಕೆ, ಸರ್ವತೋಮುಖ ಅಭಿವೃದ್ಧಿಯನ್ನು ಬಯಸುವಂತಿರಬೇಕು. ಕೇವಲ ವಿಷಯಾಧಾರಿತವಾಗಿರದೆ ಪಠ್ಯದ ಮುಖ್ಯ ಉದ್ದೇಶದ ಹಿನ್ನೆಲೆಯಲ್ಲಿ ಪ್ರಶ್ನೆಗಳ ಮಾದರಿಗಳು ರಚನೆಯಾಗಿರಬೇಕು. ಇದರಿಂದ ಮಗುವಿಗೆ ಮಾನಸಿಕ ಹೊರೆ, ಗೊಂದಲ ವಾಗದ ರೀತಿಯಲ್ಲಿ ರಚನೆ ಮಾಡಬೇಕೆಂದು ನಿಯಮದಲ್ಲಿ ಹೇಳಲಾಗಿರುತ್ತದೆ. ಉತ್ತರಕ್ಕಿಂತ ಪ್ರಶ್ನೆಗಳು ದೊಡ್ಡದಾಗಿರಬಾರದು. ಇದರಿಂದ ಮಗುವಿಗೆ ಪ್ರಶ್ನೆ ಅರ್ಥವಾಗದೆ ಇರಬಹುದು. ಪ್ರಾಥಮಿಕ ಶಿಕ್ಷಣದ ಪ್ರಶ್ನೆಗಳು ಚಿಕ್ಕ ಮತ್ತು ಚೊಕ್ಕವಾಗಿದ್ದು ಸರಳ ನೀತಿಯನ್ನು ಅನುಸರಿಸಿ ಪ್ರಶ್ನೆಗಳನ್ನು ಕೇಳಿರಬೇಕು. ಪ್ರಶ್ನೆ ಪತ್ರಿಕೆಯನ್ನು ತಯಾರಿಸುವವರು ನೀಲ ನಕ್ಷೆಯಲ್ಲಿ ಅನುಭವ ಹೊಂದಿದವರಾಗಿರಬೇಕು. ಇಲ್ಲವಾದಲ್ಲಿ ಪ್ರಶ್ನೆಪತ್ರಿಕೆ ರಚನೆಯಲ್ಲಿ ವ್ಯತ್ಯಾಸವಾಗುವ ಸಂಭವ ಹೆಚ್ಚಾಗಿರುತ್ತದೆ. ಬೋಧನಾ ಕೌಶಲಗಳಾದ ಜ್ಞಾನ, ತಿಳುವಳಿಕೆ, ಪ್ರಶಂಸೆ, ಗುರುತಿಸುವಿಕೆ, ಅಭಿವ್ಯಕ್ತಿ ಅಂಶಗಳ ಆಧಾರಿತವಾಗಿ ಪ್ರಶ್ನೆಗಳಿಗೆ ಸಮಾನ ಅವಕಾಶದಡಿಯಲ್ಲಿ ರಚನೆಯಾಗಿರಬೇಕು. ಇದರಿಂದ ಕಲಿತ ಪಾಠದಿಂದ ಎಲ್ಲಾ ಕೌಶಲ್ಯಗಳ ಅಭಿವೃದ್ಧಿಯನ್ನು ಪರೀಕ್ಷಿಸಲು ಸಹಾಯಕ. ಈ ಮೇಲಿನ ಅಂಶಗಳಿಂದಲೇ ನಮ್ಮ ಔಪಚಾರಿಕ ಶಿಕ್ಷಣದ ವ್ಯವಸ್ಥೆಯ ಪ್ರಶ್ನೆಪತ್ರಿಕೆಯ ಅಭ್ಯಾಸ ಚಟುವಟಿಕೆಗಳು ರಚನೆಯಾಗಿರುವ ವ್ಯವಸ್ಥೆಯನ್ನು ಕಾಣುತ್ತೇವೆ.

ಈ ವಿಧಾನವನ್ನು ಕನ್ನಡಭಾಷಾ ಚಟುವಟಿಕೆಗಳಲ್ಲಿ ಭಾಷಾ ಕೌಶಲಗಳಲ್ಲಿ ಹೇಳಿ ಕೊಡಬೇಕು. ಮಕ್ಕಳ ಮೌಲ್ಯಮಾಪನಕ್ಕಾಗಿ ಭಾಷಾ ಕೌಶಲಗಳ ಹಿನ್ನೆಲೆಯಲ್ಲಿ ಪ್ರಶ್ನೆಪತ್ರಿಕೆ ರಚನೆಯಾಗುತ್ತಾ ಬಂದಿದೆ ಎಂದು ಹೇಳಲಾಗುತ್ತಿದೆ.

ಡಾ. ಮಹಾಬಲೇಶ್ವರರಾವ್ ಬರೆದಿರುವ **'ಪ್ರಶ್ನೆಪತ್ರಿಕೆ ರಚನೆಯ ವಿಧಿ ವಿಧಾನಗಳು'** ಎಂಬ ಪುಸ್ತಕದ ಪ್ರಶ್ನೆ ಪತ್ರಿಕೆಯ ವಿಶ್ಲೇಷಣೆ (ಪು.ಸಂ. ೯೯) ಎಂಬ ಲೇಖನದಲ್ಲಿ

ಪ್ರಶ್ನೆಗಳ ಗುಣಮಟ್ಟ ಪರಿಶೀಲನೆಯಾಗಬೇಕು ಎಂದು ಅಭಿಪ್ರಾಯ ಪಡುತ್ತಾರೆ. ಪ್ರಶ್ನೆಯನ್ನು ರಚಿಸಲು ಬಳಸಿದ ಭಾಷಾ ಶೈಲಿ ಸರಳವಾಗಿದೆಯೆ? ನೇರವಾಗಿದೆಯೇ, ಸಂಕ್ಷಿಪ್ತವಾಗಿದೆಯೇ, ನಿಖರವಾಗಿದೆಯೇ ಸ್ಪಷ್ಟವಾಗಿದೆಯೇ? ಪುನರುಕ್ತಿ ಇದೆಯೇ? ಅನಗತ್ಯ ಪದ ಪ್ರಯೋಗ ಮಾಡಲಾಗಿದೆಯೇ? ಸುತ್ತು ಬಳಸಿ ಕೇಳಲಾಗಿದೆಯೇ, ವಿದ್ಯಾರ್ಥಿಗಳಿಗೆ ಅರ್ಥವಾಗದಂತಿದೆಯೆ? ಸುಲಭದಲ್ಲಿ ಅರ್ಥವಾಗದೆ ಭಾರಿ ಭಾರಿ ಪದಗಳು, ಅನಗತ್ಯ ವಿಶೇಷಣಗಳು ಬಳಕೆಯಾಗಿವೆಯೆ? ಏಕರೂಪತೆ ಇದೆಯೆ? ವ್ಯಾಕರಣಬದ್ಧವಾಗಿದೆಯೆ? ಪ್ರಶ್ನೆಯ ರಚನೆ ಹೇಗಿದೆ? ಉತ್ತರದ ವಿಸ್ತಾರ ಮತ್ತು ವ್ಯಾಪ್ತಿಯನ್ನು ಸೂಚಿಸಲಾಗಿದೆಯೆ? ವಿದ್ಯಾರ್ಥಿಗಳಿಗೆ ಸ್ಪಷ್ಟ ನಿರ್ದೇಶನವನ್ನು ಪ್ರಶ್ನೆ ಒಳಗೊಂಡಿದೆಯೆ? ಎಂಬುದನ್ನು ಪರಿಶೀಲಿಸಬೇಕು ಎಂದು ಹೇಳಿದ್ದಾರೆ. ಪ್ರಶ್ನೆಯಲ್ಲಿ ಒಳಗೊಂಡಿರುವ ವಿಷಯವು ಕರಾರುವಕ್ಕಾಗಿದೆಯೆ? ಕಲಿಕೆಯ ಪ್ರಸ್ತುತ ವಿಷಯವನ್ನು ಒಳಗೊಂಡಿದೆಯೆ? ಪ್ರಶ್ನೆಯ ರೂಪ ಹೇಗಿದೆ? ನಾವೀನ್ಯತೆ ಇದೆಯಾ ವೈವಿಧ್ಯತೆ ಇದೆಯಾ? ಪ್ರಶ್ನೆಗಳ ಕ್ಲಿಷ್ಟತೆಯ ಮಟ್ಟ ಹೇಗಿದೆ? ಎಂಬುದನ್ನು ಅರಿತು ಅದರಲ್ಲಿನ ದೋಷಗಳನ್ನು ಸರಿಪಡಿಸಿಕೊಂಡು ಮುಂದಿನ ಪ್ರಶ್ನೆ ಪತ್ರಿಕೆಯಲ್ಲಿ ಸುಧಾರಣೆಯಾಗಬೇಕು ಎಂಬ ಅಂಶಗಳನ್ನು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸುತ್ತಾರೆ.

ಪ್ರಸ್ತುತ ಸಂದರ್ಭದಲ್ಲಿ ಪ್ರಶ್ನೆ ಪತ್ರಿಕೆಯನ್ನು ತಯಾರಿಸುವವರು ಒಂದು ಪ್ರಶ್ನೆಗೆ ಒಂದೇ ಉತ್ತರ ಬರುವಂತಹ ಸ್ಪಷ್ಟವಾದ ಪ್ರಶ್ನೆಗಳನ್ನು ಕೇಳಲಾಗುತ್ತಿಲ್ಲ ಎಂಬ ಅಭಿಪ್ರಾಯಗಳು ಅಲ್ಲಲ್ಲಿ ಕೇಳಿ ಬರುತ್ತಿವೆ. ಇಂದಿನ ಪ್ರಶ್ನೆ ಪತ್ರಿಕೆಯಲ್ಲಿ ಮತ್ತು ಕನ್ನಡಭಾಷಾ ಪಠ್ಯಗಳಲ್ಲಿ ಲೋಪ ದೋಷಗಳನ್ನೊಳಗೊಂಡ ಪ್ರಶ್ನೆಗಳನ್ನು ಕಾಣುತ್ತೇವೆ. ಉದಾಹರಣೆಗೆ : ಒಂದು ವಾಕ್ಯದಲ್ಲಿ ಉತ್ತರಿಸಿ ಎಂಬ ಪ್ರಶ್ನೆಯಲ್ಲಿ ಭಾರತ ದೇಶದ ಪ್ರಧಾನಮಂತ್ರಿ ಯಾರು? **(೧೯೯೬ ೩ನೇ ತರಗತಿ ಪ್ರಶ್ನೆ ಪತ್ರಿಕೆ ಕೂಡ್ಲಿಗಿ ತಾಲೂಕು)** ಎಂದು ಕೇಳಲಾಗಿದೆ. ಇಲ್ಲಿ ಇದುವರೆಗು ಪ್ರಧಾನಿಗಳಾದವರ ಹೆಸರನ್ನು ಬರೆದರು ಇದಕ್ಕೆ ಉತ್ತರ ಸರಿಯಾಗಬಲ್ಲದು. ಇದರಿಂದ ಮಕ್ಕಳು ಯಾವುದನ್ನು ಬರೆಯಬೇಕು? ಯಾರ ಹೆಸರು ಸರಿಯಾಗಬಲ್ಲದು ಹಿಂದಿನ ಪ್ರಧಾನಿ ಹೆಸರೆ? ಅಥವಾ ಇಂದಿನ ಪ್ರಧಾನ ಮಂತ್ರಿಯ ಹೆಸರು ಬರೆಯಬೇಕೆ? ಎಂಬ ಗೊಂದಲ ಉಂಟಾಗುತ್ತದೆ. ಆದ್ದರಿಂದ ಪ್ರಶ್ನೆಗೆ ಒಂದೇ ಉತ್ತರ ಬರುವಂತಹ ವಸ್ತು ಸ್ಥಿತಿಯ ಮಾದರಿಯಲ್ಲಿ ಪ್ರಶ್ನೆಗಳು ರಚನೆಯಾಗಬೇಕು.

**ರಾಜ್ಯ ಶಿಕ್ಷಣ ಸಂಶೋಧನಾ ಮತ್ತು ತರಬೇತಿ ಇಲಾಖೆ** (೨೦೦೫ರಲ್ಲಿ) ನೀಲಿನಕ್ಷೆ, **ಪ್ರಶ್ನೆಪತ್ರಿಕೆ** ಎಂಬ ಪುಸ್ತಕದಲ್ಲಿ ಈ ರೀತಿ ಅಭಿಪ್ರಾಯ ಪಡುತ್ತಾರೆ. ಪಠ್ಯ ವಿಷಯಕ್ಕೆ ಸಹಾಯಕವಾಗುವಂತಹ ಉದ್ದೇಶ, ಪಠ್ಯವಸ್ತು ಮತ್ತು ಪ್ರಶ್ನೆ ವಿಧಾನಗಳನ್ನು ಸರಿಪಡಿಸುವ ಯೋಜನೆಯೇ ನೀಲಿ ನಕ್ಷೆ. ಪ್ರಶ್ನೆ ಪತ್ರಿಕೆ ತಯರಿಸುವ ಮುನ್ನ ನೀಲಿನಕ್ಷೆ ತಯಾರಿಕೆ ಅಗತ್ಯ. ವಿಷಯದ ಒತ್ತು ಗೊತ್ತುಗಳನ್ನು ತಿಳಿದುಕೊಳ್ಳಲು ಎಲ್ಲಾ ಸಾಮರ್ಥ್ಯಗಳಿಗೂ ಒತ್ತು ಕೊಟ್ಟಿದ್ದೇವೆಯೆ ಇಲ್ಲವೇ ಎಂಬುದನ್ನು ತಿಳಿದುಕೊಳ್ಳಲು ಸಹಾಯಕ. ಕಲಿಸುವವರಿಗೆ

ಕಲಿಯುವವರ ಹಿಮ್ಮಾಹಿತಿ ಒದಗಿಸಲು ಹಾಗೂ ಕಲಿಕೆ ಫಲಪ್ರದವಾಗಲು ನೀಲಿ ನಕ್ಷೆ ಅಗತ್ಯವಾಗಿದೆ. ಈ ಮೇಲಿನ ವಿವರಣೆಯನ್ನು ಗಮನಿಸಿದಾಗ ಪ್ರಶ್ನೆಪತ್ರಿಕೆಯ ನೀಲಿನಕ್ಷೆಯನ್ನು ಸುವ್ಯವಸ್ಥಿತವಾಗಿ ಗುಣಾತ್ಮಕ ಹಾಗೂ ಪರಿಮಾಣಾತ್ಮಕವಾಗಿ ತಯಾರಿಸುವಲ್ಲಿ ಸಹಾಯಕ ವಾಗುತ್ತದೆ. ಒಟ್ಟಾರೆಯಾಗಿ ನೀಲಿನಕ್ಷೆ ಪ್ರಶ್ನಾವಳಿ ತಯಾರಿಕೆಯಲ್ಲಿ ಬಹಳ ಮುಖ್ಯವಾದುದಾಗಿದೆ ಎಂದು ಹೇಳಬಹುದು.

ಮಾತೃಭಾಷೆ ಕನ್ನಡ ಮತ್ತು ತತ್ವ ಮತ್ತು ಬೋಧನಾ ಮಾರ್ಗ ಬರೆದಿರುವ ಅನುಸೂಯ ವಿ. ಪರಗಿಯವರು **(ಪಿ.ಸಂ.೫೨೮)** ಪ್ರಶ್ನೆ ಪತ್ರಿಕೆಯ ಕರಡು ರಚನೆಯ ನಂತರದ ಪ್ರಶ್ನೆಪತ್ರಿಕೆಯನ್ನು ವಿಮರ್ಶಿಸಿ. ಉದ್ದೇಶಗಳು ಉಪ ಘಟಕಗಳು ಮತ್ತು ಪ್ರಶ್ನೆಗಳ ತೂಕ ಹಾಗೂ ವಿವಿಧ ರೀತಿಯ ಪ್ರಶ್ನೆಗಳ ನಿರ್ದಿಷ್ಟ ಸಂಖ್ಯೆ, ಪ್ರಶ್ನೆಗಳ ಜೋಡಣಾ ಕ್ರಮ, ಸೂಚನೆಗಳು, ಭಾಷಾ ಸುಸಂಭದ್ಧತೆ ಇತ್ಯಾದಿ ಅಂಶಗಳನ್ನು ವೈಜ್ಞಾನಿಕವಾಗಿ ಪರಿಶೀಲಿಸಿ ಪ್ರಶ್ನೆಪತ್ರಿಕೆಯನ್ನು ಅಂತಿಮವಾಗಿ ರಚಿಸಬೇಕು ಎಂದಿದ್ದಾರೆ. ಈ ಮೇಲಿನ ವಿವರಣೆಯು ಪ್ರಶ್ನೆಪತ್ರಿಕೆ ರಚನೆಯಾದರೂ ಅಂತಿಮವಾಗಿ ಪ್ರಶ್ನೆಪತ್ರಿಕೆ ಸಿದ್ಧಪಡಿಸಿದಾಗ ನೋಡಬೇಕಾದ ಅಂಶಗಳನ್ನು ತಿಳಿಸಿ ಕೊಡುತ್ತದೆ.

ಕನ್ನಡ ಕಲಿ ನಲಿ ೨ನೇ ತರಗತಿಯ ಪಠ್ಯಪುಸ್ತಕದ **'ಮೂರು ಕೊಡಲಿಗಳು'** ಎಂಬ ಪಾಠದ ಅಭ್ಯಾಸ ಚಟುವಟಿಕೆಯಲ್ಲಿ **(ಪು.ಸಂ ೧೨)** ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ ಎಂಬ ಭಾಗದಲ್ಲಿ 'ರಂಗಪ್ಪನ ಚಿಂತೆ ಪರಿಹರಿಸಲು ಯಾರು ಬಂದರು? ಎಂಬ ಪ್ರಶ್ನೆಯನ್ನು ಕೇಳಲಾಗಿದೆ. ಇದರ ಬದಲಾಗಿ 'ರಂಗಪ್ಪನ ಚಿಂತೆಯನ್ನು ಯಾರು ಪರಿಹರಿಸಿದರು? ಎಂದು ಸರಳವಾಗಿ ಸಂಕ್ಷಿಪ್ತವಾಗಿ ಕೇಳಬಹುದಿತ್ತು. ಈ ತರಗತಿಯಲ್ಲಿಯೇ ಮುಂದುವರೆದಂತೆ **(ಪು.ಸಂ ೯೬)** 'ಜೇನುನೊಣ'ಗಳು ಮಕ್ಕಳನ್ನು ಮುತ್ತಿದವು. ಎಂಬುದು ಸರಿಯಾದ ರೂಪ. ಆದರೆ ಇಲ್ಲಿ ಜೇನುನೂಣಗಳು ಮಕ್ಕಳನ್ನು ಮುತ್ತಿದವು ಎಂದು ಕೊಡಲಾಗಿದೆ. ಇದರಿಂದ ವಿದ್ಯಾರ್ಥಿಗಳಿಗೆ ಪ್ರಶ್ನೆ ಸ್ಪಷ್ಟವಾಗುವುದಿಲ್ಲ. ತೊಂಭತ್ತೇಳನೇ ಪುಟದಲ್ಲಿ ನಾಲ್ಕು ಪ್ರಶ್ನೆಗಳನ್ನು ಕೊಡಲಾಗಿದೆ. ಇವುಗಳು ಯಾವ ಪ್ರಶ್ನೆಗಳು ಯಾವ ರೀತಿಯಲ್ಲಿ ಉತ್ತರ ಬರೆಯಬೇಕು ಎಂದು ಹೇಳಿಲ್ಲ. ಇದರಿಂದ ವಿದ್ಯಾರ್ಥಿಗಳು ಉತ್ತರ ಬರೆಯಲು ಗೊಂದಲ ಆಗುತ್ತದೆ. ಕನ್ನಡ ಕಲಿ ನಲಿ ಮೂರನೇ ತರಗತಿ ಪು.ಸಂ ೬೦ ರಲ್ಲಿ ಕೊಟ್ಟಿರುವ ಪದ ಪುಂಜಗಳಲ್ಲಿ ಸರಿಯಾದ ಪದಪುಂಜ ಆರಿಸಿ ಬಿಟ್ಟ ಸ್ಥಳದಲ್ಲಿ ಬರೆಯಿರಿ ಎಂದು ಪ್ರಶ್ನೆ ಮಾಡಲಾಗಿದೆ. ಮೂರನೇ ಪ್ರಶ್ನೆಯಲ್ಲಿ ಮಾತ್ರ ಪದಪುಂಜಗಳಿಗೆ ಸಂಖ್ಯೆಗಳನ್ನು ಸರಿಯಾಗಿ ಕೊಡದೆ ಎರಡು ಪದ ಪುಂಜಗಳಿಗೂ ಒಂದೇ ಸಂಖ್ಯೆಯನ್ನು ಕೊಡಲಾಗಿದೆ. ಉತ್ತರವನ್ನು ಮಗು ಗುರುತಿಸುವಾಗ ಗೊಂದಲವಾಗುತ್ತದೆ.

ಕನ್ನಡ ಕಸ್ತೂರಿ ಪ್ರಥಮ ಭಾಷೆ ೫ನೇ ತರಗತಿಯ ಪಠ್ಯಪುಸ್ತಕ ಮೊದಲನೆಯ ಸೆಮಿಸ್ಟರ್‌ನ 'ಜಲಪಾತ' ಎಂಬ ಪಾಠವನ್ನು (ಪು.ಸಂ.೨೧) ಕೊಡಲಾಗಿದೆ. ಕನ್ನಡ ನಾಡಿನಲ್ಲಿ

ಪ್ರಸಿದ್ಧಿ ಪಡೆದ ಜೋಗ ಜಲಪಾತ ವರ್ಣನೆಯನ್ನು ಮಾಡಲಾಗಿದೆ. ಆದರೆ ಅಭ್ಯಾಸ ಚಟುವಟಿಕೆಯಲ್ಲಿ ಮಾತ್ರ ಬೇರೆ ಪ್ರಶ್ನೆಗಳನ್ನು ಕೇಳಲಾಗಿದೆ. ಪಾಠದಲ್ಲಿ ಕಲಿಯದ ವಿದ್ಯಾರ್ಥಿಗಳು ಈ ಪ್ರಶ್ನೆಯನ್ನು ಉತ್ತರಿಸುವುದಾದರೂ ಹೇಗೆ. **ಉದಾಹರಣೆಗೆ : ಶೃಂಗೇರಿ ಎಲ್ಲಿದೆ?** ಎಂದು ಕೇಳಲಾಗಿದೆ. ವಿವರಣೆ ಮಾತ್ರ ಪಾಠದಲ್ಲಿ ಸಿಗುವುದಿಲ್ಲ. ಇಂತಹ ಪ್ರಶ್ನೆಗಳನ್ನು ಕೇಳುವುದರಿಂದ ಮಕ್ಕಳು ವಿಶ್ವಾಸನೀಯವಾಗಿ, ಸಮಂಜಸನೀಯವಾಗಿ ಉತ್ತರವನ್ನು ನೀಡಲಾರರು. ಇದರಿಂದ ಅರ್ಥಪೂರ್ಣ ಕಲಿಕೆ ಆಗದು. ಅಲ್ಲದೆ ಈ ಪ್ರಶ್ನೆಯಿಂದ ಎರಡು ಉತ್ತರಗಳನ್ನು ಬರೆಯಬಹುದು. ಹೇಗೆಂದರೆ ೧. **ಕರ್ನಾಟಕ ರಾಜ್ಯದಲ್ಲಿದೆ ೨ ಜಿಲ್ಲೆ ಅಥವಾ ತಾಲೂಕಿನಲ್ಲಿ ಇದೆ ಎಂದು ಬರೆಯಲು ಸಾಧ್ಯವಿದೆ.** ಈ ಮೇಲಿನ ಉತ್ತರಗಳೆಲ್ಲವು ಸರಿಯಾಗುತ್ತವೆ. ಇದರಿಂದ ಗೊಂದಲ ಸೃಷ್ಟಿಯಾಗುತ್ತದೆ. ಆದ್ದರಿಂದ ಚಟುವಟಿಕೆಯಲ್ಲಿ ನೀಡುವ ಪ್ರಶ್ನೆಗಳು ಮಕ್ಕಳಿಗೆ ಸರಳ ರೀತಿಯಲ್ಲಿ ಉತ್ತರಿಸುವಂತಿರಬೇಕು. ಇಂತಹ ಪ್ರಶ್ನೆಗಳನ್ನು ಪಠ್ಯಗಳಿಂದ ಕೈಬಿಡುವ ಪ್ರಯತ್ನಗಳು ನಡೆಯ ಬೇಕಿದೆ. ಕನ್ನಡ ಕಸ್ತೂರಿ-೬ನೇ ತರಗತಿಯ ಪಠ್ಯದಲ್ಲಿ ಚುಟುಕುಗಳು ಎಂಬ ಪದ್ಯಪಾಠದ ಅಭ್ಯಾಸ ಚಟುವಟಿಕೆಯಲ್ಲಿ ಈ ರೀತಿ ಕೊಡಲಾಗಿದೆ. ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ ಪ್ರಶ್ನೆ ಸಂಖ್ಯೆ ೬ರಲ್ಲಿ **(ಪು.ಸಂ.೧೦೩)** ಪ್ರತಿಯೊಂದು ಹಾದಿಯಲ್ಲೂ ಉಂಟು ಹಾವು ಇದರ ಅರ್ಥವೇನು? ಎಂದು ಕೇಳಲಾಗಿದೆ. ಇದಕ್ಕೆ ಉತ್ತರವನ್ನು ಒಂದು ಪದ ಅಥವಾ ಒಂದು ವಾಕ್ಯದಲ್ಲಿ ಉತ್ತರಿಸಲು ಅಸಾಧ್ಯ. ಏಕೆಂದರೆ ಅಲ್ಲಿ ಕೇಳಿರುವುದು ವಾಕ್ಯದ ಅರ್ಥ. ಆದ್ದರಿಂದ ಇಂತಹ ಪ್ರಶ್ನೆಗಳನ್ನು ಈ ಚಟುವಟಿಕೆಯಲ್ಲಿ ಕೊಡುವುದು ಸಮಂಜಸವಲ್ಲ. ತರಗತಿ ೨ ಪುಟಸಂಖ್ಯೆ ೧೦ 'ಮೂರು ಕೊಡಲಿಗಳು' ಎಂಬ ಪಾಠವನ್ನು ಕೊಡಲಾಗಿದೆ. ಅಭ್ಯಾಸ ಚಟುವಟಿಕೆಗಳಲ್ಲಿ ಬರುವ ಒಂದು ವಾಕ್ಯದಲ್ಲಿ ಉತ್ತರಿಸಿ ಪ್ರಶ್ನೆಯಲ್ಲಿ ಒಣ ಮರವನ್ನು ಎಲ್ಲಿ ಕಂಡನು.? ಎಂದು ಪ್ರಶ್ನೆ ಮಾಡಲಾಗಿದೆ. ಆದರೆ ಇಲ್ಲಿ ಒಣ ಮರದ ದೃಶ್ಯ ಕೊಡದೆ ಹಸಿರು ಮರದ ದೃಶ್ಯ ಕೊಟ್ಟು ಒಣ ಮರ ಕಡಿಯುತ್ತಾನೆ ಎಂದು ವಿವರಿಸಿದೆ. ದೃಶ್ಯಕ್ಕೂ ವಿವರಿಸಿದ ವಿವರಣೆಗೂ ಪ್ರಶ್ನೆಗೂ ಸಾಮ್ಯತೆ ಇಲ್ಲದಿರುವುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಇಂತಹ ಹತ್ತಾರು ಸಮಸ್ಯೆಗಳು ಪ್ರಾಥಮಿಕ ಪಠ್ಯಗಳಲ್ಲಿ ಕಾಣಿಸಿಕೊಳ್ಳುತ್ತವೆ. ಇದರ ಜೊತೆಗೆ ಪ್ರಶ್ನೆಗಳಿಗೆ ಕೊಟ್ಟಿರುವ ಸಂಖ್ಯೆಗಳು ಪುನರಾವರ್ತನೆಯಾಗುವುದು, ಪ್ರಶ್ನೆ ಪುನಃ ಮುದ್ರಣಗೊಂಡಿರುವುದು, ಪ್ರಶ್ನೆಗಳ ಶಿರೋನಾಮೆ ಸರಿಯಾಗಿ ಮುದ್ರಣಗೊಳ್ಳದೆ ಇರುವುದನ್ನು ಸಹ ಕಾಣುತ್ತೇವೆ. ಹೀಗೆಯೇ ವರ್ಣ, ಪದ, ವಾಕ್ಯ, ವ್ಯಾಕರಣದಲ್ಲಿ ಹಲವು ರೀತಿಯಲ್ಲಿ ಮುದ್ರಣ ದೋಷಗಳು ಕಂಡು ಬರುತ್ತವೆ. ಇದರಿಂದ ಅರ್ಥಕ್ಕೆ ಚ್ಯುತಿ ಬರಬಹುದು. ಇಲ್ಲವೆ ಅರ್ಥ ವ್ಯತ್ಯಾಸವಾಗಬಹುದು. ಪ್ರಶ್ನಾವಳಿಯನ್ನು ಕೊಡುವಾಗ ಸಂಖ್ಯಾನುಕ್ರಮಣಿಕೆ ಮುದ್ರಣ ದೋಷವಿಲ್ಲದಂತೆ ಪಠ್ಯಪುಸ್ತಕದ ಚಟುವಟಿಕೆಗಳು ಮುದ್ರಣವಾಗುವುದು ಬಹಳ ಮುಖ್ಯವಾದುದಾಗಿದೆ. ಇಂತಹ ದೋಷಗಳು ಮೂರು ನಾಲ್ಕು ವಾಕ್ಯ ಹಾಗೂ ಪ್ರಬಂಧ

ಮಾದರಿಯ ಪ್ರಶ್ನೆಗಳಲ್ಲಿ ಕಾಣಿಸಿಕೊಳ್ಳುತ್ತವೆ. ಕೆಲವೊಂದು ಸಂದರ್ಭದಲ್ಲಿ ಸರಿಯಾದ ವಿವರಣೆ ಕೊಡದೆ ಪ್ರಶ್ನೆಗಳನ್ನು ಕೊಟ್ಟಿರುವುದನ್ನು ಕಾಣಬಹುದು. ಉಳಿದಂತೆ ಪಠ್ಯಪುಸ್ತಕಗಳು ಸರಿಯಾದ ಮಾರ್ಗವನ್ನು ಅನುಸರಿಸಲಾಗಿದೆ. ಪ್ರಶ್ನೆಪತ್ರಿಕೆ ರಚನೆಯ ವಿದಿ ವಿಧಾನಗಳು ಎಂಬ ಪುಸ್ತಕವನ್ನು ಬರೆದಿರುವ ಮಹಾಬಲೇಶ್ವರರಾವ್ ಅವರು 'ವೈವಿದ್ಯಮಯ ಪ್ರಶ್ನೆಗಳು' ಎಂಬ ಲೇಖನದಲ್ಲಿ ಪ್ರಶ್ನೆಗಳಲ್ಲಿ ನಾನಾ ಬಗೆಗಳಿವೆ, ನಾನಾ ರೂಪಗಳಿವೆ. ವಿದ್ಯಾರ್ಥಿಯ ನಿರ್ವಹಣೆಯನ್ನು ಪರೀಕ್ಷಿಸುವಲ್ಲಿ ಮತ್ತು ಪ್ರಶ್ನೆಪತ್ರಿಕೆ ರಚಿಸುವಲ್ಲಿ ಸರಿಯಾದ ಪ್ರಶ್ನಾರೂಪವನ್ನು ನಿರ್ಧರಿಸುವುದು ಮಹತ್ತರ ಹೆಜ್ಜೆ. ಪ್ರಶ್ನೆ ಪತ್ರಿಕೆಯ ಸ್ವರೂಪ, ಉದ್ದೇಶ ಹಾಗೂ ಗುಣಮಟ್ಟವನ್ನು ಎತ್ತರಿಸ ಬೇಕೆಂದಿದ್ದರೆ ವಿವಿಧ ಮಾದರಿಯ ಪ್ರಶ್ನೆಗಳನ್ನು ಅಳವಡಿಸಿಕೊಳ್ಳಬೇಕು. ಪ್ರತಿಯೊಂದು ಬಗೆಯ ಪ್ರಶ್ನೆಯು ಯಾವುದೇ ಒಂದು ನಿರ್ದಿಷ್ಟ ಪಠ್ಯ ವಿಷಯ ಹಾಗೂ ಸಾಮರ್ಥ್ಯವನ್ನು ಅಳೆಯುತ್ತದೆ. ಇನ್ನೊಂದು ಬಗೆಯ ಸಾಮರ್ಥ್ಯವನ್ನು ಅದು ಅಳೆಯಲಾರದು. ಆದುದರಿಂದಲೇ ಪ್ರಶ್ನೆಗಳ ಆಯ್ಕೆಯಲ್ಲಿ ವೈವಿಧ್ಯತೆಗೆ ಆದ್ಯತೆ ನೀಡಬೇಕು. ಎಂದು ಅಭಿಪ್ರಾಯ ಪಡುತ್ತಾರೆ. ಇದರಿಂದ ಪ್ರಶ್ನೆಪತ್ರಿಕೆಯನ್ನು ತಯಾರಿಸುವವರು ಗಮನಿಸಬೇಕಾದ ಅಂಶವಾಗಿದೆ. ಆದ್ದರಿಂದ ಪ್ರಾಥಮಿಕ ಶಾಲೆಯ ಮಕ್ಕಳ ಮನಸ್ಸು ಮುಗ್ಧವಾಗಿರುತ್ತದೆ. ಅವರ ಮಾನಸಿಕ ಸಾಮರ್ಥ್ಯದ ಅನುಸಾರ ಪಠ್ಯದಲ್ಲಿ ಪ್ರಶ್ನೆಗಳು ರಚನೆಯಾಗಿರಬೇಕು. ಪುಸ್ತಕದ ಉದ್ದೇಶದ ಹಿನ್ನೆಲೆಯಲ್ಲಿ ಪಾಠಗಳು, ಪ್ರಶ್ನೆಗಳು ರಚನೆಯಾದಾಗ ಕಲಿಕೆ ವಿಷಯಾನುಸಾರ ನಡೆಯುತ್ತದೆ. ಇಲ್ಲವಾದಲ್ಲಿ ಕಲಿಸುವ ಮುಖ್ಯ ಉದ್ದೇಶವನ್ನು ಬಿಟ್ಟು ಬೇರೆ ಪ್ರಶ್ನೆಗಳ ಚಟುವಟಿಕೆಯಲ್ಲಿ ತೊಡಗಿಸಿ ದಂತಾಗುತ್ತದೆ. ಉದಾ: ಭಾಷಾ ಚಟುವಟಿಕೆಯ ಪ್ರಶ್ನೆಗಳು ಭಾಷೆಯ ವಿವಿಧ ಆಯಾಮಗಳನ್ನು ಕಲಿಸುವಂತಹ ಪ್ರಶ್ನೆಗಳನ್ನು ರಚನೆ ಮಾಡಬೇಕು. ವಿಷಯಾನುಸಾರ ರಚನೆ ಯಾದರೆ ವಿಷಯವನ್ನು ತಿಳಿದು ಉತ್ತರಿಸಬಲ್ಲರೇ ವಿನಃ ಭಾಷೆಯ ಬಗೆಗೆ ಪ್ರತ್ಯಕ್ಷವಾಗಿ ಕಲಿಕೆಗೆ ಅವಕಾಶ ದೊರೆಯದೇ ಪರೋಕ್ಷವಾಗಿ ಪ್ರೇರೆಪಿಸಿದಂತಾಗಿ ಕಲಿಕೆಯಲ್ಲಿ ಸ್ಪಷ್ಟವಾಗದೇ ಇರಬಹುದು.

ಈ ಪ್ರಶ್ನೆ ಪತ್ರಿಕೆಯನ್ನು ಸಿದ್ಧಪಡಿಸುವವರು ಮಕ್ಕಳ ಸಾಮರ್ಥ್ಯಾನುಸಾರ ತರಗತಿಗೆ ಅನುಗುಣವಾಗಿ ತಪ್ಪಿಲ್ಲದಂತೆ ರಚಿಸ ಬೇಕಾಗುತ್ತದೆ. ಅಲ್ಲದೆ ಮಕ್ಕಳ ಸಾಮರ್ಥ್ಯಾನುಸಾರ ಬೋಧಿಸಬೇಕಿದೆ. ವಿಷಯ ಪಠ್ಯಪುಸ್ತಕದ ಅನ್ವಯ ಭಾಷಾ ಕೌಶಲಗಳನ್ನು ಗಮನದಲ್ಲಿಟ್ಟು ಕೊಂಡು ರಚಿಸಬೇಕಾದ ಅಗತ್ಯತೆಯೂ ಸಹ ಇದೆ. ಆದರೆ ಪ್ರಚಲಿತ ಕನ್ನಡ ಭಾಷಾ ಪಠ್ಯದ ಪ್ರಶ್ನೆ ಪತ್ರಿಕೆಯನ್ನು ಗಮನಿಸಿದಾಗ ತಪ್ಪುಗಳು ಕಾಣಿಸಿಕೊಳ್ಳುತ್ತವೆ. ವಿಷಯಕ್ಕೆ ಆದ್ಯತೆ ಇರುವ ಪ್ರಶ್ನೆಗಳನ್ನು ಕೇಳಲಾಗಿದೆ. ಜೊತೆಗೆ ನಿಖರವಾದ ಉತ್ತರ ಬರದೆ ಇರುವ ಪ್ರಶ್ನೆಯನ್ನು ಕೇಳಲಾಗಿದೆ. ಉದಾ: ಮೂರನೇ ತರಗತಿಯ ೧೯೯೮ರ ಪ್ರಶ್ನೆ ಪತ್ರಿಕೆಯಲ್ಲಿ ಪ್ರಧಾನಮಂತ್ರಿ ಯಾರು? ಎಂದು ಕೇಳಿದೆ. ಮಗು ಉತ್ತರವಾಗಿ ಪ್ರಚಲಿತ ಪ್ರಧಾನಿ ಹೆಸರನ್ನೋ ಅಥವಾ ಹಿಂದಿನ ಪ್ರಧಾನಮಂತ್ರಿಯ ಹೆಸರು ಬರೆದರೂ ಉತ್ತರ ಸರಿಯಾಗುತ್ತದೆ. ಇಂತಹ ಹಲವಾರು ಪ್ರಶ್ನೆಗಳಲ್ಲೂ ಸಹ ಕೆಲವು ಸಮಸ್ಯೆಗಳನ್ನು ಗುರುತಿಸಬಹುದಾಗಿದೆ.

ಉದಾ: ಕುಷ್ಟಗಿ ತಾಲೂಕಿನ ೧ರಿಂದ ೭ನೇ ತರಗತಿಯ ಪ್ರಶ್ನೆ ಪತ್ರಿಕೆಗಳಿಂದ ಸ್ಪಷ್ಟವಾಗುತ್ತದೆ. ಮೂರನೇ ತರಗತಿಯ ಕನ್ನಡ (೨೦೦೯) ಪ್ರಶ್ನೆ ಪತ್ರಿಕೆಯನ್ನು ಈ ಕೆಳಗಿನಂತೆ ಗಮನಿಸ ಬಹುದಾಗಿದೆ. *** ಒಂದು ಪದ/ವಾಕ್ಯದಲ್ಲಿ ಉತ್ತರ ಬರೆಯಿರಿ.**

೧. ಕಡಲ ತೀರಕ್ಕೊಂದು ಕಾಂತಿ ಯಾವುದು?

೨. ಚಿತ್ರದುರ್ಗದ ಕೋಟೆಗೆ ಯಾರು ಮುತ್ತಿಗೆ ಹಾಕಿದರು?

೩. ಜನವರಿ ತಿಂಗಳಲ್ಲಿ ಆಚರಿಸುವ ರಾಷ್ಟ್ರೀಯ ಹಬ್ಬ ಯಾವುದು?

೪. ರೈತರು ಹೊಲದಲ್ಲಿ ಯಾವಾಗ ಕುಣಿಯುವರು?

೫. ಬಸವಣ್ಣನವರ ಅಂಕಿತ ನಾಮ ಯಾವುದು?

*** ಕೊಟ್ಟಿರುವ ಮಾತನ್ನು ಯಾರು ಯಾರಿಗೆ ಹೇಳಿದರು.**

೧. "ಕೊಲ್ಲುವುದಕ್ಕಿಂತ ಕಾಪಾಡುವುದು ರಾಜಧರ್ಮ"

೨. "ನಾನು ತಳಿರು ತಂದು ತೋರಣ ಕಟ್ಟಿ ಸಿಂಗರಿಸುತ್ತೇನೆ"

೩. "ನಿನ್ನಂತಹ ತಾಯಿಯನ್ನು ಪಡೆದ ಅವನೇ ಧನ್ಯನು"

೪. ಈ ಕಾಡಿಗೆ ರಾಜನಾಗುವ ಯೋಗ್ಯತೆ ನಿನಗೆ ಇದೆ"

೫. "ನಿನ್ನಂತವರಿಗೆ ಸಹಾಯ ಮಾಡುವುದೆ ನನಗೆ ತೃಪ್ತಿ"

*** ಎರಡು ಮೂರು ವಾಕ್ಯದಲ್ಲಿ ಉತ್ತರ ಬರೆಯಿರಿ**

೧. ಸಾಗರದ ಮರಳಿನ ರಾಶಿಯ ಮೇಲೆ ಏನನ್ನು ಕಾಣುತ್ತೇವೆ ?

೨. ವಿಶ್ವನಾಥ ದತ್ತರು ಮಗ ಏನಾಗಬಹುದೆಂದು ಯೋಚಿಸಿದರು ?

೪. ಅಕ್ಬರ್ ಮುದುಕಿಯನ್ನು ದಡ ಸೇರಿಸಿದುದು ಹೇಗೆ ? ಎಂಬ ಇತ್ಯಾದಿ ಪ್ರಶ್ನೆಗಳನ್ನು ಕೊಡಲಾಗಿದೆ. ಇದರಿಂದ ಭಾಷಾ ದೃಷ್ಟಿಯಿಂದ ಮೌಲ್ಯಮಾಪನ ಮಾಡು ವುದಾದರೂ ಹೇಗೆ ಎಂದು ಪ್ರಶ್ನೆ ಮಾಡಿದಾಗ ಶಿಕ್ಷಕರಾದವರು ಇದಕ್ಕೆ ಸರಿಯಾಗಿ ಉತ್ತರಿಸದೇ ಇರುವುದನ್ನು ಅಧ್ಯಯನದ ಸಂದರ್ಭದಲ್ಲಿ ಕಂಡು ಕೊಳ್ಳಲಾಗಿದೆ. ಇದರಿಂದ ಶಿಕ್ಷಕರಾದವರು ಅಥವಾ ಪ್ರಶ್ನೆಪತ್ರಿಕೆ ತಯಾರಿಸುವವರು ಪ್ರಶ್ನೆಯನ್ನು ವಿಷಯಾಧಾರಿತವಾಗಿ ಕೊಡಲಾಗುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಹೇಗೆಂದರೆ ಇಲ್ಲಿ ಕಲಿಸುವ ವಿಧಾನವು ಸಹ ವಿಷಯಾಧಾರಿತವಾಗಿರುತ್ತದೆ ಎಂಬುದು ಮೌಲ್ಯಮಾಪನದಿಂದ ತಿಳಿಯುತ್ತದೆ. ಅಲ್ಲದೆ ಕೆಲವು ಶಿಕ್ಷಕರ ಸಂದರ್ಶನದಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ಭಾಷೆಗೆ ಸಂಬಂಧಿಸಿದಂತೆ ಪ್ರಶ್ನೆಪತ್ರಿಕೆ ತಯಾರಿಸುವ ವಿಧಾನವನ್ನು ಕಂಡುಕೊಳ್ಳುವ ಅಗತ್ಯತೆ ಇದೆ ಎಂಬುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಪ್ರಚಲಿತ ಪ್ರಶ್ನೆಪತ್ರಿಕೆಯನ್ನು ಗಮನಿಸಿದಾಗ ಕೆಲವು ವಾಕ್ಯಗಳಲ್ಲಿ, ಪದಗಳಲ್ಲಿ ಮುದ್ರಣ ದೋಷಗಳನ್ನು ಕಾಣಬಹುದಾಗಿದೆ. ಉದಾಃ ಒಂದನೇ ತರಗತಿಯ ಕನ್ನಡ ಪ್ರಶ್ನೆಪತ್ರಿಕೆ (೨೦೦೯)ಯಲ್ಲಿ ಪ್ರಶ್ನೆ ೯ರಲ್ಲಿ ಚಿತ್ರ ನೋಡಿ ಮಾದರಿಯಂತೆ ಬರೆಯಿರಿ ಎಂದು ಕೇಳಿದೆ. ಮಾದರಿಯಲ್ಲಿ ದೀಮ ಹಲ್ಲುಜ್ಜಿದನು ಎಂದು ಕೇಳಿ ಚಿತ್ರ ಕೊಟ್ಟಿದೆ. ಆದರೆ ಇದು ದೀಪು ಹಲ್ಲುಜ್ಜಿದನು ಎಂದಾಗ ಬೇಕಾಗಿದೆ. ಪ್ರಶ್ನೆ ೬ರಲ್ಲಿ ಚಿತ್ರ ನೋಡಿ ಉಚ್ಚಾರ ಸರಿಪಡಿಸಿ ಬರೆಯಿರಿ ಎಂದು ಕೇಳಿದೆ. ಆದರೆ ಇಲ್ಲಿ ಕೊಟ್ಟಿರುವ ಚಿತ್ರಗಳು ಮಾತ್ರ ಸರಿಯಾಗಿಲ್ಲ ಉದಾ: ಕಡಗ, ಔಷಧ, ಪದ ಕೇಳಿದೆ. ಪಕ್ಕದಲ್ಲಿ ಚಿತ್ರ ಮಾತ್ರ ಕಡಗ, ಔಷಧಗಳ ಚಿತ್ರಗಳಾಗಿ ಕಾಣುತ್ತಿಲ್ಲ. ಮೂರನೇ ತರಗತಿಯ ಕನ್ನಡ ಪ್ರಶ್ನೆಪತ್ರಿಕೆಯ ಮುಖ್ಯ ಪ್ರಶ್ನೆ ಸಂಖ್ಯೆ ಒಂದರ ಭಾಗದ ಮೂರನೇ ಪ್ರಶ್ನೆಯಲ್ಲಿ ಜನವರಿ ತಿಂಗಳಲ್ಲಿ ಕೊಡಬೇಕಾದಲ್ಲಿ ಜನೇವರಿ ಎಂದು ಕೊಟ್ಟಿರುವುದನ್ನು ಕಾಣುತ್ತೇವೆ. ನಾಲ್ಕನೇ ತರಗತಿಯ ಮೊದಲನೇ ಸೆಮಿಸ್ಟರ್ ಪ್ರಶ್ನೆ ಪತ್ರಿಕೆಯಲ್ಲಿ ಪ್ರಶ್ನೆ ಐದರಲ್ಲಿ ನೇಗಿಲಾ ಹಿಡಿದ ಹೊಲದೊಳು ಹಾಡುತ ಎಂದಿದೆ ಆದರೆ ಅದು ನೇಗಿಲ ಹಿಡಿದ ಹೊಲದೊಳು ಹಾಡುತ ಎಂದಾಗಬೇಕಾಗಿದೆ.

ಆರನೇ ತರಗತಿಯ ದ್ವಿತೀಯ ಸೆಮಿಸ್ಟರ್‌ನಲ್ಲಿ ಕನ್ನಡ ಪ್ರಶ್ನೆಪತ್ರಿಕೆ ಗಮನಿಸಿದಾಗ (೨೦೦೯) ಕೆಲವು ತಪ್ಪುಗಳನ್ನು ಗುರುತಿಸಬಹುದಾಗಿದೆ. ಉದಾ: ನಾನು ಆಕಾಶವಾಣಿ 'ಕೇಳುವದಿಲ್ಲ' ಎಂದಿದೆ. ಅದು ಕೇಳುವುದಿಲ್ಲ ಎಂದಾಗಬೇಕಿತ್ತು. ಇನ್ನು ಮುಖ್ಯ ಪ್ರಶ್ನೆ ೬ ಕ್ರ.ಸಂ. ೧೪ರ ಪ್ರಶ್ನೆ 'ಅದಷ್ಟು ಶೀಘ್ರವೇ ಕಳ್ಳರನ್ನು ಪತ್ತೆ ಹಚ್ಚಲಾಗುವುದು ಎಂದಿದೆ ಆದರೆ ಇದು ಆದಷ್ಟು ಶೀಘ್ರವೇ ಕಳ್ಳರನ್ನು ಪತ್ತೆ ಹಚ್ಚಲಾಗುವುದು' ಎಂದಾಗಬೇಕಿತ್ತು. ಇದರಲ್ಲಿಯೇ ಪ್ರಶ್ನೆ ೧೩ರಲ್ಲಿ 'ಸಾರ್ ನೀವಾದರೂ ನೆರವಾಗುತ್ತಿರಿ ಎಂದು ಭಾವಿಸಿದ್ದೇವು' ಎಂದಿದೆ. ಆದರೆ ಇದು 'ಸಾರ್ ನೀವಾದರೂ ನೆರವಾಗುತ್ತೀರಿ ಎಂದು ಭಾವಿಸಿದ್ದೇವು' ಎಂದಾಗಬೇಕಿತ್ತು. ಇನ್ನು ಏಳನೇ ತರಗತಿಯ ಕನ್ನಡ ಪ್ರಶ್ನೆಪತ್ರಿಕೆಯಲ್ಲಿ ಮುಖ್ಯ ಪ್ರಶ್ನೆ ಸಂಖ್ಯೆ ೪ ಮತ್ತು೨೦ರ ಪ್ರಶ್ನೆಯಲ್ಲಿ ವಾಕ್ಯದಲ್ಲಿರುವ ಸಂಖ್ಯೆವಾಚನ ಪದ ಆರಿಸಿ ಬರೆಯಿರಿ ಎಂದಿದೆ. ಆದರೆ ಇದು ವಾಕ್ಯದಲ್ಲಿರುವ ಸಂಖ್ಯಾವಾಚಕ ಪದ ಆರಿಸಿ ಬರೆಯಿರಿ ಎಂದಾಗ ಬೇಕಿತ್ತು.

ಒಟ್ಟಾರೆಯಾಗಿ ಪ್ರಚಲಿತ ಪ್ರಶ್ನೆಪತ್ರಿಕೆಗಳನ್ನು ಗಮನಿಸಿದಾಗ ಕೆಲವು ಪ್ರಶ್ನೆಗಳು ಭಾಷಾ ದೃಷ್ಟಿಯ ಹಿನ್ನೆಲೆಯಲ್ಲಿ ಮೌಲ್ಯಮಾಪನ ಮಾಡಲು ಪ್ರಶ್ನೆ ಕೇಳಲಾಗಿದೆ. ಜೊತೆಗೆ ವಿಷಯಕ್ಕೆ ಆದ್ಯತೆ ಅನುಸಾರ ಪ್ರಶ್ನೆಯನ್ನು ಸಹ ಕೇಳಲಾಗಿದೆ. ಇಲ್ಲಿ ನಡೆಯುವ ಮೌಲ್ಯಮಾಪನದ ಅಂಕಗಳು ಸಹ ವಿಷಯಾಧಾರಿತವಾಗಿ ಕೊಟ್ಟಿರುವುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ಪ್ರಶ್ನಾವಳಿ ಮತ್ತು ಪರೀಕ್ಷೆ ಮೌಲ್ಯಮಾಪನದಲ್ಲಿ ಭಾಷಿಕ ಅಂಶಗಳ ಆಧಾರಿತವಾಗಿ ನಡೆಯುವಂತಹ ಹೊಸ ಪ್ರಯತ್ನಗಳನ್ನು ಕಂಡುಕೊಳ್ಳುವುದು ಅಗತ್ಯತೆ ಇದೆ ಎಂಬುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಜೊತೆಗೆ ಪ್ರಶ್ನೆ ಪತ್ರಿಕೆಯ ರಚನೆಯ ಸಂದರ್ಭದಲ್ಲಿ ಸರಿಯಾದ ಮುದ್ರಣವಾಗದಿದ್ದರೆ ಅರ್ಥಗಳು ಬೇರೆಯಾಗಿ ವಿದ್ಯಾರ್ಥಿಗಳಿಗೆ ಗೊಂದಲವಾಗುವ

ಸಾಧ್ಯತೆ ಹೆಚ್ಚಾಗಿರುತ್ತದೆ. ಆದ್ದರಿಂದ ಮುದ್ರಣ ಸಂದರ್ಭದಲ್ಲಿ ಗಮನ ಕೊಡುವ ಅಗತ್ಯತೆ ಇದೆ ಎಂಬುದು ತಿಳಿದು ಬರುತ್ತದೆ.

## ೭.೬. ಮೌಲ್ಯಮಾಪನ

ಒಂದು ವಸ್ತು ಅಥವಾ ವ್ಯಕ್ತಿ/ಮಗುವಿನ ಬೆಲೆಯನ್ನು ಅಳೆಯುವಿಕೆಗೆ ಯೋಗ್ಯತೆಯನ್ನು ನಿರ್ಣಯ ಮಾಡಲು ಬಳಸುವ ಸಾಧನವೇ ಮೌಲ್ಯಮಾಪನ ಎಂದು ಹೇಳಬಹುದು. ಶೈಕ್ಷಣಿಕವಾಗಿ ಮೌಲ್ಯಮಾಪನವನ್ನು ಶಾಲಾ ಕಾಲೇಜು ವಿದ್ಯಾರ್ಥಿಗಳ ಪರೀಕ್ಷೆಯ ಉತ್ತರ ಪತ್ರಿಕೆಗಳನ್ನು ಪರಿಶೀಲಿಸಿ ಅಂಕಗಳನ್ನು ನೀಡುವಿಕೆಗೆ ಶೈಕ್ಷಣಿಕ ಮೌಲ್ಯಮಾಪನ ಎಂದು ಕರೆಯಬಹುದು. ಪ್ರಾಚೀನ ಕಾಲದ ಶಿಕ್ಷಣದ ಪರಂಪರೆಯಲ್ಲಿ 'ಮೌಲ್ಯಮಾಪನ' ಎಂಬುದು ಬಳಕೆ ಇರಲಿಲ್ಲ. ಇದರಿಂದಾಗಿ ಅಳತೆ ಎಂಬ ಪದದಿಂದ ವಿದ್ಯಾರ್ಥಿಯ ಕಲಿಕೆ ನಿರ್ಧಾರವಾಗುತ್ತಿತ್ತು. ಈ ಅಳತೆ ಎಂಬ ಪದಕ್ಕೆ ಬೆಲೆ ಕಟ್ಟುವ ಅಥವಾ ಬೆಲೆ ನಿರ್ಧರಿಸುವುದು ಎಂದಾಗುತ್ತದೆ. ಈ ವಿಧಾನವನ್ನು ತೀರಾ ಸಂಕುಚಿತವಾದ ಮತ್ತು ಸಾಮಾನ್ಯ ಸರಳ ಉದ್ದೇಶಗಳ ಪರಿಮಿತಿಯನ್ನು ಅನುಸರಿಸಿ ಅಳತೆಯನ್ನು ಮಾಡಲಾಗುತ್ತಿತ್ತು ಎಂಬುದು ಶಿಕ್ಷಣ ಇತಿಹಾಸದ ಪುಟಗಳನ್ನು ತಿರುವಿ ಹಾಕಿದಾಗ ಸ್ಪಷ್ಟವಾಗುತ್ತದೆ. ಆದರೆ ಹಿಂದಿನ ಅಳತೆಯ ಮಾಪನ ಆಧುನಿಕ ಸಂದರ್ಭದಲ್ಲಿ ಮೌಲ್ಯಮಾಪನದ ರೀತಿಯಲ್ಲಿ ಬಳಕೆ ಪ್ರಾರಂಭವಾಗಿದೆ. ಇದರ ಬಳಕೆ ಮತ್ತು ಅರ್ಥ ದಿನದಿಂದ ದಿನಕ್ಕೆ ವಿಶಾಲಾರ್ಥವನ್ನು ಪಡೆಯುತ್ತಾ ಬಂದಿರುವುದನ್ನು ಶಿಕ್ಷಣದ ವ್ಯವಸ್ಥೆಯಲ್ಲಿ ಕಾಣುತ್ತೇವೆ. ಇದು ಇಂದು ಮಗುವಿನ ಸರ್ವತೋಮುಖ ಬೆಳವಣಿಗೆಗಾಗಿ ಬಳಸಲಾಗುತ್ತಿದೆ ಎಂದು ಹೇಳಲಾಗುತ್ತಿದೆ.

ಶಿಕ್ಷಕನಾದವನು ವಿದ್ಯಾರ್ಥಿಗಳಿಗೆ ಕಲಿಸುವ ವಿಷಯವು ಪರಿಣಾಮಕಾರಿಯಾಗಿದೆಯೇ ಇಲ್ಲವೇ ಎಂಬುದನ್ನು ನೋಡಬೇಕಿದೆ. ಬೋಧನೆಯ ಸಂದರ್ಭದಲ್ಲಿ ನಿರಂತರವಾಗಿ ತನ್ನಷ್ಟಕ್ಕೆ ತಾನೇ ಕೇಳಿಕೊಳ್ಳುತ್ತಿರಬೇಕು. ಬೋಧನೆಯ ಬಗ್ಗೆ ಅಂತರಾವಲೋಕನ ಮಾಡಿಕೊಂಡರೆ ಕಲಿಸುವ ಹಾಗೂ ಕಲಿಕೆಯ ಪ್ರಕ್ರಿಯೆಯಲ್ಲಿ ಬದಲಾವಣೆಯನ್ನು ಕಂಡು ಕೊಳ್ಳಬಹುದು. ಅಲ್ಲದೆ ಪರಿಣಾಮಾತ್ಮಕ ಬೋಧನೆ ಮಾಡಿಕೊಡಲು ಸಹಾಯಕ. ಇದರಿಂದ ವಿದ್ಯಾರ್ಥಿಗಳಿಗೆ ಕಲಿಕೆ ಸರಳವಾಗಬಲ್ಲದು. ಅಲ್ಲದೆ ವಿದ್ಯಾರ್ಥಿಗಳ ಮಾನಸಿಕ ಸಾಮರ್ಥ್ಯಾನುಸಾರ ಬೋಧಿಸಲು ಮುಂದಾಗಬಹುದು. ಇದನ್ನೇ ನಾವು ಶೈಕ್ಷಣಿಕ ಮೌಲ್ಯಮಾಪನ ಎಂದು ಕರೆಯಲಾಗುತ್ತದೆ. ಇದರಿಂದ ಶಿಕ್ಷಣದಲ್ಲಿ ಹಾಕಿಕೊಂಡ ಗುರಿಗಳನ್ನು ಯಶಸ್ವಿಯಾಗಿ ನೆರವೇರಿಸಲು ಸಾಧ್ಯ ವಾಗುವುದು. ಈ ಮೇಲಿನ ಅಂಶಗಳನ್ನು ಗಮನಿಸಿದಾಗ ನಿರಂತರವಾಗಿ ಮೌಲ್ಯಮಾಪನ ಶಿಕ್ಷಣ ವ್ಯವಸ್ಥೆಯಲ್ಲಿ ನಡೆಯುತ್ತಿರುತ್ತದೆ ಎಂಬುದನ್ನು ಮನಗಾಣಬಹುದು. ಅಲ್ಲದೆ ಶಿಕ್ಷಣ ಮತ್ತು ಮೌಲ್ಯಮಾಪನಕ್ಕೆ ನಿರಂತರ ಮತ್ತು ನಿಕಟವಾದ ಸಂಬಂಧವಿದೆ ಎಂಬುದು ತಿಳಿದು ಬರುತ್ತದೆ. ಆದರೆ ಈ ಮೌಲ್ಯಮಾಪನ ಸರಿಯಾದ ಮಾರ್ಗದಲ್ಲಿ ನಡೆಯಬೇಕಾದರೆ ಶಿಕ್ಷಣದಲ್ಲಿ ಹಾಕಿಕೊಂಡ ಗುರಿ ಸ್ಪಷ್ಟವಾಗಿರಬೇಕು. ಇಲ್ಲವಾದಲ್ಲಿ ಮೌಲ್ಯಮಾಪನ ಎಂಬ

ಪದಕ್ಕೆ ನ್ಯಾಯ ಒದಗಿಸಲಾಗದು. ಈ ತರಹದ ಗುಣ ದೋಷದಿಂದಲೇ ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಮೌಲ್ಯಮಾಪನದ ಸ್ಥಿತಿ ಒಂದು ಭಾಗದಲ್ಲಿ ಮೌಲ್ಯಯುತವಾಗಿ ನಿರ್ಧಾರ ವಾಗುತ್ತಿದೆ. ಇನ್ನೊಂದು ವಿಧದಲ್ಲಿ ಶಿಕ್ಷಣ ವ್ಯವಸ್ಥೆಯ ಗೊಂದಲಗಳಿಂದ ಮೌಲ್ಯಮಾಪನ ದೋಷಕ್ಕೆ ನಾಂದಿ ಹಾಡುತ್ತಿದೆ ಎನ್ನಬಹುದು.

**ಶೈಕ್ಷಣಿಕ ಮೌಲ್ಯಮಾಪನದ ಅರ್ಥ**

**ಡಾ. ಮಹಾಬಲೇಶ್ವರರಾವ್ ಅವರು 'ಪಠ್ಯಕ್ರಮ ಕಾರ್ಯಾಚರಣೆಯ ತತ್ವಗಳು'** ಎಂಬ ಪುಸ್ತಕದಲ್ಲಿ ಶೈಕ್ಷಣಿಕ ಮೌಲ್ಯಮಾಪನವು ವಿದ್ಯಾರ್ಥಿಯ ಸರ್ವರೀತಿಯ ಪ್ರಗತಿಯನ್ನು ಪರಿಗಣಿಸುವುದು. ಅಂದರೆ ಇದು ವಿದ್ಯಾರ್ಥಿಯ ಸಮಗ್ರ ಗುಣಾತ್ಮಕವಾದ ಹಾಗೂ ಪರಿಣಾಮಾತ್ಮಕವಾದ ಪರಿವರ್ತನೆಗಳನ್ನು ಗಣನೆಗೆ ತೆಗೆದುಕೊಳ್ಳುವುದು. ಇದು ಶೈಕ್ಷಣಿಕ ಪದ್ಧತಿಯಲ್ಲಿ ಅಳತೆ ಮಾಡುವ ಒಂದು ಉನ್ನತವಾದ ಸಾಧನವಾಗಿದೆ. ಇದು ಶಿಕ್ಷಣದ ಗುರಿ ಉದ್ದೇಶಗಳನ್ನು ಆಧರಿಸಿದೆ. ವಿದ್ಯಾರ್ಥಿಯ ದೈಹಿಕ, ಮಾನಸಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಬೆಳವಣಿಗೆ ಹಾಗೂ ವಿಕಾಸವನ್ನು ಗುರುತಿಸುವ ವಿಧಾನವಾಗಿದೆ. ಹೀಗೆ ವಿದ್ಯಾರ್ಥಿಯ ಸರ್ವಾಂಗೀಣ ಅಭಿವೃದ್ಧಿಯನ್ನು ಗುರುತಿಸುವುದೇ ಶೈಕ್ಷಣಿಕ ಮೌಲ್ಯಮಾಪನ ಎಂದು ಹೇಳಿದ್ದಾರೆ. ಈ ವಿಧಾನದ ಅರ್ಥ ಶಿಕ್ಷಕರಿಗೆ, ಶಿಕ್ಷಣ ತಜ್ಞರಿಗೆ, ಮನೋವಿಜ್ಞಾನಿಗಳಿಗೆ ಭಾಷಾ ಶಾಸ್ತ್ರಜ್ಞರಿಗೆ ತಿಳಿಸುವ ಅಗತ್ಯತೆ ಇದೆ. ಶಿಕ್ಷಣ ವ್ಯವಸ್ಥೆಯಲ್ಲಿ ಈ ವಿಧಾನ ಜಾರಿಗೆ ತಂದರೆ ಯಶಸ್ವಿಯಾಗುತ್ತೇವೆ. ಎನ್ನುವುದಕ್ಕಿಂತ ಅದನ್ನು ಬಳಸುವ ವಿಧಾನ ವಿಶಾಲಾರ್ಥ ಆಗಬೇಕಿದೆ. ಈ ವ್ಯವಸ್ಥೆಯನ್ನು ಮೇಲಿನ ಚಿಂತಕರು ಸುಧಾರಿಸುವ ಜವಬ್ಧಾರಿ ಅವರ ಮೇಲಿದೆ. ಈ ಸುಧಾರಣೆಗಳು ಯಶಸ್ವಿಯ ದಾರಿಯನ್ನು ಅನುಸರಿಸುತ್ತಿರುವ ಅಂಶಗಳು ಕಂಡು ಬಂದರೂ ಅವುಗಳಲ್ಲಿ ಇನ್ನು ಸ್ಪಷ್ಟವಾದ ಪ್ರಾಯೋಗಿಕವಾದ ನಿರ್ಣಯ ಸಂಖ್ಯೆ ಕಡಿಮೆ ಎಂದು ಹೇಳಬಹುದು. ಮಹಾಬಲೇಶ್ವರರಾವ್ ವ್ಯಾಖ್ಯಾನಕ್ಕೆ ಪುಷ್ಟೀಕರಣ ಕೊಟ್ಟು ಹೇಳುವುದಾದರೆ ಇವರ ಮಾತುಗಳನ್ನು ಪ್ರಾಯೋಗಿಕವಾಗಿ ಸಫಲತೆಯ ದಾರಿಯ ಕಡೆಗೆ ಶಿಕ್ಷಣ ವ್ಯವಸ್ಥೆ ಕೊಂಡೊಯ್ದರೆ ಶೈಕ್ಷಣಿಕ ಮೌಲ್ಯಮಾಪನ' ಎಂಬುದಕ್ಕೆ ನಿಜವಾದ ಅರ್ಥ ಪ್ರಾಪ್ತಿಯಾಗಬಲ್ಲದು ಎಂದು ಹೇಳಬಹುದು.

* **ಪ್ರೊ ಚೋರಲೋರ್ಪಡಿಲ್ಡರ** : 'ವ್ಯಕ್ತಿಯ ಸಾಮಾಜಿಕ, ಸಾಂಸ್ಕೃತಿಕ ಹಾಗೂ ವೈಜ್ಞಾನಿಕ ಅಂತಸ್ಥನ್ನು ತಿಳಿದುಕೊಳ್ಳುವಲ್ಲಿ ಬಳಸುವ ವಿಧಾನವೇ ಮೌಲ್ಯಮಾಪನ.'

* 'ಕಲಿಯುವಿಕೆಯ ಚಟುವಟಿಕೆಗಳು ಎಷ್ಟರಮಟ್ಟಿಗೆ ಫಲಕಾರಿಯಾಗಿವೆ ಎಂಬುದನ್ನು ಅರಿತುಕೊಳ್ಳುವ ಸಾಧನವು ಮೌಲ್ಯಮಾಪನವಾಗಿದೆ.'

* **ಜಾನ್ಸನ್** 'ಶೈಕ್ಷಣಿಕ ಪದ್ಧತಿಯ ಪರಿಣಾಮಗಳನ್ನು ಅಳತೆ ಮಾಡುವ ಸಾಧನವೇ ಮೌಲ್ಯಮಾಪನ. ಯಾವ ಪ್ರಕಾರವಾಗಿ ಕುರಿಗಳ ದೊಡ್ಡಿಯಿಂದ ಆಡುಗಳನ್ನು ಬೇರ್ಪಡಿಸ

ಲಾಗುವುದೋ ಹಾಗೆ ವರ್ಗದಲ್ಲಿ ವಿದ್ಯಾರ್ಥಿಗಳನ್ನು ಉತ್ತೀರ್ಣರಾದವರು ಹಾಗೂ ಅನುತ್ತೀರ್ಣರಾದವರೆಂದು ವರ್ಗೀಕರಿಸುವ ಪ್ರಯತ್ನವನ್ನು ಮೌಲ್ಯಮಾಪನವು ಮಾಡಲಾರದು ಎಂದು ವ್ಯಾಖ್ಯಾನಗಳನ್ನು ನೀಡಿ 'ಮಗುವಿನ ಸರ್ವತೋಮುಖವಾದ ವಿಕಾಸಕ್ಕೆ ನೆರವಾಗುವ ಮೌಲ್ಯಮಾಪನವೇ ಶೈಕ್ಷಣಿಕ ಮೌಲ್ಯಮಾಪನ' ಎಂದು ವ್ಯಾಖ್ಯಾನಿಸುತ್ತಾರೆ. **(ವ್ಯಾಖ್ಯಾನಗಳು: ಪಠ್ಯಕ್ರಮ ಕಾರ್ಯಾಚರಣೆಯ ತತ್ವಗಳು, ಡಾ. ಮಹಾಬಲೇಶ್ವರರಾವ್, ಪು. ಸಂ ೨೦೧)**

ಈ ಮೇಲಿನ ವ್ಯಾಖ್ಯಾನಗಳನ್ನು ಗಮನಿಸಿದಾಗ ಮೌಲ್ಯಮಾಪನ ಎಂಬುದು ಜೀವನವನ್ನು ಸೇರಿದಂತೆ ಎಲ್ಲಾ ಕ್ಷೇತ್ರದಲ್ಲೂ ನಡೆಯುವ ಒಂದು ಪ್ರಕ್ರಿಯೆ. ಶಿಕ್ಷಣದಲ್ಲಿ ಮೌಲ್ಯಮಾಪನ ಎಂಬುದು ಕಲಿಕಾ ಗುಣಮಟ್ಟವನ್ನು ಒರೆ ಹಚ್ಚುವ ಅಳತೆಯಾಗಿದೆ. ನಿರ್ದಿಷ್ಟ ಗುರಿಗಳನ್ನು ಸಾಧಿಸಲು ಮಕ್ಕಳಿಗೆ ಕೊಟ್ಟು ಕಲಿಕೆಯ ಅನುಭವಗಳನ್ನು ಗುರುತಿಸುವ ಪ್ರಕ್ರಿಯೆಯಾಗಿದೆ. ಎಂಬುದು ಸ್ಪಷ್ಟವಾಗುತ್ತದೆ.

ಶೈಕ್ಷಣಿಕ ಮೌಲ್ಯಮಾಪನವು ಶೈಕ್ಷಣಿಕ ಉದ್ದೇಶಗಳು, ಕಲಿವಿನ ಅನುಭವಗಳು ಹಾಗೂ ಮೌಲ್ಯಮಾಪನ ಬೋಧನಾ ಕಲಿಕಾ ಪ್ರಕ್ರಿಯೆಯನ್ನು ಪರಿಪೂರ್ಣಗೊಳಿಸುವ ಅಂಶಗಳಾಗಿವೆ. ಈ ಅಂಶಗಳನ್ನು ವಿಶ್ಲೇಷಿಸಿದರೆ ಶಿಕ್ಷಣದಲ್ಲಿ ಮೌಲ್ಯಮಾಪನದ ಸ್ಥಾನ ಸ್ಪಷ್ಟವಾಗುತ್ತದೆ.

ಇಂದು ಮೌಲ್ಯಮಾಪನದ ತಿಳುವಳಿಕೆ ಇಲ್ಲದವರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದೆ. ಅಲ್ಲದೆ ವಿಷಯದಲ್ಲಿ ಸಂಪೂರ್ಣ ಜ್ಞಾನವಿಲ್ಲದವರ ಸಂಖ್ಯೆಯೂ ಹೆಚ್ಚಾಗುತ್ತಿದೆ. ಇದಕ್ಕೆ ಮುಖ್ಯ ಕಾರಣ ವೃತ್ತಿಯಲ್ಲಿ ಶ್ರದ್ಧೆ ಇಲ್ಲದಿರುವುದು. ಓದುವ ಹವ್ಯಾಸದ ಕೊರತೆ ಬೋಧನೆಗೆ ಹೋಗುವ ಮುನ್ನ ವಿಷಯದಲ್ಲಿ ಪರಿಣಿತಿ ಇಲ್ಲದಿರುವುದು. ಬೋಧಿಸುವ ಶಿಕ್ಷಕರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದೆ. ಇದರಿಂದ ವಿದ್ಯಾರ್ಥಿಗಳಿಗೆ ಯಾವ ವಿಷಯದ ಜ್ಞಾನ ಸ್ಪಷ್ಟವಾಗಲಾರದು. ನಾಗರೀಕತೆ ಸಂಸ್ಕೃತಿಯಿಂದಲೂ ದೂರ ಉಳಿದು ಮಾನವೀಯ ಮೌಲ್ಯಗಳೆಂದರೇನು? ಎಂಬ ಪ್ರಶ್ನೆಗೆ ಪ್ರಶ್ನೆಯಾಗಿ ಉಳಿಯುತ್ತಿರುವ ದಿನಗಳು ಇಂದು ಬಂದಿವೆ. ತರಬೇತಿಯಲ್ಲಿ ಕಲಿತ ಚಟುವಟಿಕೆಗಳನ್ನು ವೃತ್ತಿ ಜೀವನದಲ್ಲಿ ಬೋಧಕರು ಅಳವಡಿಸಿಕೊಳ್ಳದೆ ಕೈ ಬಿಟ್ಟಿರುವುದೇ ಇದಕ್ಕೆ ಕಾರಣ ಎಂಬ ಅಂಶಗಳು ಇಂದು ಕೇಳಿ ಬರುತ್ತಿವೆ.



ಶೈಕ್ಷಣಿಕ ಮೌಲ್ಯಮಾಪನವು ಈ ಮೇಲಿನ ಅಂಶಗಳಿಂದ ಅಂದರೆ ತ್ರಿಕೇಂದ್ರಯುತ ಪ್ರಕ್ರಿಯೆಯಾಗಿದೆ. ಕಲಿವಿನ ಅನುಭವಗಳು, ಉದ್ದೇಶಗಳು ಮತ್ತು ಮೌಲ್ಯಮಾಪನದ ವರ್ಗೀಕರಣವನ್ನು ಸೂಚಿಸುತ್ತದೆ. ಖ್ಯಾತ ಶಿಕ್ಷಣ ತಜ್ಞ ಬಿ.ಎಸ್. ಬ್ಲೂಮ್‌ರವರ ಪ್ರಕಾರ ಶಿಕ್ಷಣ ಒಂದು ತ್ರಿಕೇಂದ್ರಯುತವಾದ ಪ್ರಕ್ರಿಯೆಯಾಗಿದೆ ಎಂದು ಸ್ಪಷ್ಟಪಡಿಸುತ್ತಾರೆ. ಈ ಅಂಶಗಳು ಕಲಿವಿನ ಅನುಭವಗಳು ಶೈಕ್ಷಣಿಕ ಉದ್ದೇಶಗಳು ಕಲಿವಿನ ಮಾಪನ ಎಂದು ಹೇಳುತ್ತಾರೆ. ಶೈಕ್ಷಣಿಕ ಉದ್ದೇಶಗಳು ಅಂತಿಮ ವರ್ತನೆಗೆ ಸಂಬಂಧಿಸಿ ಗುರುತಿಸುವುದು ಮತ್ತು ರೂಪಿಸುವುದನ್ನು ಒಳಗೊಂಡಿದೆ. ಮಕ್ಕಳಿಗೆ ನೀಡುವ ಕಲಿವಿನ ಅನುಭವಗಳಿಂದ ಉಂಟಾಗುವ ಇಚ್ಛಿತ/ಅಪೇಕ್ಷಿತ ವರ್ತನೆಗಳನ್ನು ಮತ್ತು ಅಂತಿಮ ವರ್ತನೆಗಳನ್ನು ಒಳಗೊಂಡಿದೆ. ಆದ್ದರಿಂದ ಈ ಉದ್ದೇಶಗಳು ಸ್ಪಷ್ಟವಾಗಿ ಮತ್ತು ನಿರ್ದಿಷ್ಟವಾಗಿರಬೇಕು. ಆದ್ದರಿಂದ ಇವುಗಳಿಗೆ ಕಲಿವಿನ ಅನುಭವಗಳು ಎನ್ನುತ್ತೇವೆ. ಕಲಿಕೆಯ ಅನುಭವಗಳನ್ನು ಯೋಜಿಸುವ ಶಿಕ್ಷಕರು ನಿರ್ದಿಷ್ಟ ವರ್ತನಾ ಬದಲಾವಣೆಗಳಿಗೆ ಅನುಗುಣವಾಗಿ ಕಲಿಕಾ ಅನುಭವಗಳನ್ನು ಆಯ್ಕೆ ಮಾಡಿ ಕ್ರಮಬದ್ಧವಾಗಿ ಸಂಘಟಿಸಬೇಕು. ಶಿಕ್ಷಕ–ವಿದ್ಯಾರ್ಥಿಗಳ ನಡುವೆ ಪರಸ್ಪರ ಅನ್ಯೋನ್ಯ ಕ್ರಿಯೆಗಳನ್ನು ಯೋಜಿಸಬೇಕು. ಶಿಕ್ಷಕರು ನೀಡಬೇಕೆಂದಿರುವ ಬೋಧನಾ ಕಲಿಕೆ ಮತ್ತು ಚಟುವಟಿಕೆಗಳ ಸರಣಿಯನ್ನು ಒಳಗೊಂಡಿರಬೇಕು. ಸೂಕ್ತವಾದ ಬೋಧನಾ ಕಲಿಕೆಯ ಮಾರ್ಗೋಪಾಯದ ಆಯ್ಕೆ, ವಿಷಯದ ಸ್ವರೂಪಕ್ಕೆ ಹೊಂದುವಂತಹ ಪದ್ಧತಿ ಮತ್ತು ತಂತ್ರಗಳನ್ನು ಒಳಗೊಂಡಿರಬೇಕು. ಮಕ್ಕಳ ಮಾನಸಿಕ ಬುದ್ಧಿಮಟ್ಟ ಮತ್ತು ಶೈಕ್ಷಣಿಕ ಉದ್ದೇಶಗಳಿಗೆ ಅನುಗುಣವಾಗಿ ಕಲಿವಿನ ಅನುಭವಗಳನ್ನು ಯೋಜಿಸಿಕೊಂಡಿರಬೇಕು. ಇದರಿಂದ ಕಲಿವಿನ ಮೌಲ್ಯಮಾಪನ ಬೋಧನಾ–ಕಲಿಕೆಯ ಪ್ರಕ್ರಿಯೆ ಮತ್ತು ಮೌಲ್ಯಮಾಪನ ಒಟ್ಟೊಟ್ಟಿಗೆ ನಡೆಯುತ್ತದೆ. ಬೋಧನೆ ಕಲಿಕೆಯ ಫಲಗಳು ಸಾಧಿಸಬೇಕಾದ ನಿರ್ದಿಷ್ಟ ಉದ್ದೇಶಗಳನ್ನು ಪ್ರತಿಬಿಂಬಿಸಬೇಕು ಎಂದು ಹೇಳಬಹುದು. ಈ ಅಂಶಗಳು ವ್ಯವಸ್ಥಿತವಾಗಿ ಯೋಜನೆ ಹಾಕಿಕೊಂಡು ನಡೆಯದೇ ಲೋಪದೋಷಗಳು ಕಂಡು ಬಂದರೆ ಮೌಲ್ಯಮಾಪನದಲ್ಲಿಯೂ ಲೋಪವಾಗಿ ಕಲಿಕೆ ಸಾರ್ವತ್ರಿಕವಾಗಿ ದೋಷದ ದಾರಿಯಲ್ಲಿ ನಡೆಯುತ್ತದೆ ಎಂಬುದನ್ನು ಬ್ಲೂಮರನ ಜ್ಞಾನ ವಲಯಗಳ ವಿಭಾಗವನ್ನು ಅಧ್ಯಯನ ಮಾಡಿದಾಗ ಸ್ಪಷ್ಟವಾಗುತ್ತದೆ.

ಡಿ.ಎಸ್.ಇ.ಆರ್.ಟಿ. ಪ್ರಕಟಿಸಿರುವ 'ಕನ್ನಡ ಸಂಪದ' ಎಂಬ ಪುಸ್ತಕದಲ್ಲಿ ಭಾಷಾ ಬೋಧನೆಯ ಮೌಲ್ಯಮಾಪನದ ಬಗ್ಗೆ ಈ ರೀತಿ ವ್ಯಾಖ್ಯಾನಿಸುತ್ತಾರೆ. 'ಭಾಷಾ ಬೋಧನೆ'ಯಲ್ಲಿ ಎರಡು ರೀತಿಯ ಉದ್ದೇಶಗಳನ್ನು ನಾವು ಗಮನಿಸಬೇಕು. ಒಂದು ಭಾಷಾಂಶಗಳ ಪರಿಣಿತಿ. ಎರಡು ಭಾಷಾ ಕೌಶಲ್ಯಗಳ ಪರಿಣಿತಿ. ಒಂದು ಮತ್ತೊಂದಕ್ಕೆ ಪೂರಕವಾದರೂ ಬೋಧನೆ ಹಾಗೂ ಮೌಲ್ಯಮಾಪನಗಳ ದೃಷ್ಟಿಯಿಂದ ಇದನ್ನು ಬೇರೆ ಬೇರೆಯಾಗಿ ಗಮನಿಸಬಹುದು. ಭಾಷಾಂಶಗಳ ಪರಿಣಿತಿ ಎಂದರೆ ಸ್ಪಷ್ಟ ಉಚ್ಚಾರಣೆ, ಶಬ್ದಭಂಡಾರ, ಸ್ವರಭಾರ, ಅಕ್ಷರಗಳ ಪರಿಚಯ, ಪದಗಳ ಪರಿಚಯ, ಪದಗಳ ಬೋಧನೆ, ವ್ಯಾಕರಣಾಂಶಗಳು, ನುಡಿಗಟ್ಟುಗಳು,

ಗಾದೆಗಳು ಇತ್ಯಾದಿ. ಎರಡನೆಯದಾಗಿ ಕೌಶಲ್ಯಗಳು ಮೇಲೆ ಹೇಳಿದ ಭಾಷೆಯ ಅಂಶಗಳು ಪ್ರತ್ಯೇಕವಾಗಿ ವಿಶ್ಲೇಷಿಸುವಂತಹುದಾದರೂ ಅವು ಕೌಶಲ್ಯಗಳಲ್ಲಿ ಹಾಸುಹೊಕ್ಕಾಗಿ ಬೆರೆತಾಗ ಕೌಶಲಗಳಾಗುತ್ತವೆ. ಈ ಕೌಶಲಗಳೆಂದರೆ ಕೇಳುವದು (ಗ್ರಹಿಕೆ) ಮಾತನಾಡುವುದು, ಓದುವುದು ಮತ್ತು ಬರೆಯುವುದು ಈ ಎರಡು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಭಾಷಾ ಶಿಕ್ಷಕರು ನಿರಂತರವಾಗಿ ಮೌಲ್ಯಮಾಪನ ಮಾಡಬೇಕು. ಹಾಗಾದಾಗ ಮಾತ್ರ ಮೌಲ್ಯಮಾಪನ ಎಂಬುದಕ್ಕೆ ಶಿಕ್ಷಣ ವ್ಯವಸ್ಥೆಯಲ್ಲಿ ಅರ್ಥಗಟ್ಟಿಗೊಳ್ಳುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಕಲಿಕೆ, ಬೋಧನೆ, ಪ್ರಶ್ನಾವಳಿ, ಪರೀಕ್ಷೆಗಳು ನಿಯಮಾನುಸಾರ ನಡೆಯದೇ ಇದ್ದಾಗ, ಮೌಲ್ಯಮಾಪನದಲ್ಲಿಯೂ ದೋಷ ಕಂಡು ಬರುತ್ತದೆ ಎಂಬುದನ್ನು ತಿಳಿಯಬಹುದಾಗಿದೆ. ಮೇಲಿನ ಅಂಶಗಳನ್ನು ಈ ಮೇಲಿನ ವ್ಯವಸ್ಥೆಯಲ್ಲಿಯೇ ಸರಿದೂಗಿಸಿಕೊಂಡು ನಡೆದಾಗ ಶೈಕ್ಷಣಿಕ ಮೌಲ್ಯಮಾಪನ ಸಮತೂಕದಲ್ಲಿ ಚಲಿಸಿ ಮಗವುವಿಗೆ ಕಲಿಸಬೇಕಾದ ವಿಷಯವನ್ನು ಸ್ಪಷ್ಟವಾಗಿ ಕಲಿಸಬಹುದು. ಆದ್ದರಿಂದ ಪ್ರಾಥಮಿಕ ಶಿಕ್ಷಣದಲ್ಲಿ ನಡೆಯುವ ಮೌಲ್ಯಮಾಪನವೆಂದು ಅರಿಯದೇ ಪ್ರತಿಯೊಂದು ಕಲಿಕೆಯ ವಿವಿಧ ಹಂತಗಳಲ್ಲಿ ಕಲಿಕೆಯ ಮೂಲಕ, ಬೋಧನೆ ನಡೆಯಬೇಕಿದೆ. ಔಪಚಾರಿಕ ನೆಲೆಯಲ್ಲಿ ಕೇವಲ ಪರೀಕ್ಷೆಗಾಗಿ ಸಿದ್ಧಪಡಿಸುವ ನಿಟ್ಟಿನಲ್ಲಿ ನಡೆಯದೇ ಪರೀಕ್ಷಾ ದೃಷ್ಟಿಯೆಂದು ಅಳತೆ ಮಾಡದೆ, ಮೌಲ್ಯಮಾಪನ ಮಕ್ಕಳಿಗೆ ವಾಣಿಜ್ಯ ರೀತಿಯಲ್ಲಿ ಪ್ರೋತ್ಸಾಹಿಸುವಂತಾಗಬಾರದು. ಇತ್ತೀಚಿನ ದಿನಮಾನದಲ್ಲಿ ಆಧುನಿಕ ಶಿಕ್ಷಣಕ್ಕೆ ಒಳಪಟ್ಟು ಸುಧಾರಿಸುತ್ತಾ ಬಂದಿರುವ ನಮ್ಮ ವ್ಯವಸ್ಥೆ ಒಂದು ಹಂತದಲ್ಲಿ ಶಿಕ್ಷಣವನ್ನು, ಮೌಲ್ಯಮಾಪನವನ್ನು, ವಾಣಿಜ್ಯ ರೀತಿಯಲ್ಲಿ ನೋಡುವ ಜನತೆ ಹೆಚ್ಚಾಗುತ್ತಿದೆ. ಇದಕ್ಕೆ ಕಾರಣ ಶಿಕ್ಷಣ ಎಂಬ ಪದ ಕೇವಲ ವೃತ್ತಿಗಾಗಿ ಎಂಬ ಸಂಕುಚಿತ ನಿಲುವಿನಿಂದ ನೋಡುವುದೇ ಈ ಸ್ಥಿತಿಗೆ ಕಾರಣವೆಂದು ಹೇಳಬಹುದು. ನಮ್ಮ ಶಿಕ್ಷಣದ ದೋಷಗಳನ್ನು ಸರಿಪಡಿಸಿಕೊಳ್ಳುವ ಅಗತ್ಯತೆ ಇಂದು ತುಂಬಾ ಇದೆ. ಶಿಕ್ಷಣದಲ್ಲಿನ ಪ್ರತಿಯೊಂದು ವ್ಯವಸ್ಥೆಯು ಪ್ರಾಮಾಣಿಕವಾಗಿ ನಡೆಯುವಂತೆ ಮಾಡುವ ಹೆಚ್ಚಿನ ಜವಾಬ್ದಾರಿ ಬೋಧಕರು ಮತ್ತು ಪೋಷಕರ ಮೇಲಿದೆ. ಶಿಕ್ಷಕರಾದವರು ವೃತ್ತಿಗೆ ತಕ್ಕ ಹಾಗೆ ಶಿಕ್ಷಣದ ಪಠ್ಯಕ್ರಮಗಳನ್ನು ಶಾರೀರಿಕ, ಬೌದ್ಧಿಕ, ಆಧ್ಯಾತ್ಮಿಕವಾಗಿ ಬೋಧನೆ ಮಾಡುವಂತ ತಾಳ್ಮೆ, ಸಂಯಮ ಶಿಕ್ಷರಲ್ಲಿ ಇಂದು ಅಗತ್ಯವಾಗಿದೆ. ಜೊತೆಗೆ ಪೋಷಕರು ಸಹ ಅಂಕಗಳನ್ನು ಮಾತ್ರ ಪರಿಗಣಿಸದಂತೆ ಆಗದೇ ಮಗುವಿನ ಚಾರಿತ್ರಿಕ ಹಾಗೂ ನಡೆ, ನುಡಿ, ಆಚಾರ, ವಿಚಾರ, ಸಂಸ್ಕೃತಿ, ನೈತಿಕ ಮೌಲ್ಯಗಳನ್ನು ಬೆಳೆಸುವಂತಹ ಶಿಕ್ಷಣದ ಅಗತ್ಯತೆ ಅಂಶಗಳು ಬೇಕಾಗಿದೆ. ಪಠ್ಯಕ್ರಮದಲ್ಲಿ ಅಳವಡಿಸಿದ ತಕ್ಷಣ ಬೋಧನೆ, ಕಲಿಕೆ, ನಡೆದು ಮೌಲ್ಯಮಾಪನದಲ್ಲಿಯೂ ಸರಿಯಾಗಿದೆ ಎಂದು ಅಂಕಿ, ಅಂಶಗಳನ್ನು ದಾಖಲಿಸಲಾಗಿತ್ತಿದೆ. ಇದರಬದಲು ಪ್ರಾಥಮಿಕ ಶಿಕ್ಷಣದಲ್ಲಿ ಬರುವ ಬೋಧನೆ ವಿದ್ಯಾರ್ಥಿ ಶಿಕ್ಷಕ, ನಾಡು ನುಡಿ ಸಂಸ್ಕೃತಿ ಹಾಗೂ ಮೌಲ್ಯಮಾಪನದಂತಹ ಅಂಶಗಳನ್ನು ಗಂಭೀರವಾಗಿ ಪರಿಗಣಿಸುವ ಅಗತ್ಯತೆ ತುಂಬಾ ಇದೆ.

ಪಠ್ಯಪುಸ್ತಕ ರಚನಾ ಸಮಿತಿ ಸರ್ಕಾರದ ಶಿಕ್ಷಣ ಸಂಸ್ಥೆಗಳು ಪ್ರಾಥಮಿಕ ಶಿಕ್ಷಣದ ಬಗೆಗೆ ಅವಲೋಕನ ಮತ್ತು ಅಂತರಾವಲೋಕನ ಎರಡನ್ನು ಮಾಡುವ ಅಗತ್ಯತೆ ಇಂದು ಇದೆ. ಇದು ಶಿಕ್ಷಣದ ವ್ಯವಸ್ಥೆಯನ್ನು ಗಮನಿಸಿದಾಗ ಸ್ಪಷ್ಟವಾಗುತ್ತದೆ. ಪ್ರಾಥಮಿಕ ಕನ್ನಡ ಭಾಷಾಪಠ್ಯಗಳ ಬಗೆಗೆ ವಿದ್ಯಾರ್ಥಿಗಳು ಕಲಿತದ್ದನ್ನು ಮೌಲ್ಯಮಾಪನ ಮಾಡುವ ಶಿಕ್ಷಕರು ಭಾಷೆಯ ಬಗೆಗೆ ಆದ್ಯತೆ ನೀಡದೇ ವಿಷಯಾಧಾರಿತವಾಗಿ ಮೌಲ್ಯಮಾಪನ ಮಾಡುವುದನ್ನು ಕಾಣುತ್ತೇವೆ. ಉದಾ: ಈ ಕೆಳಗಿನ ವಿದ್ಯಾರ್ಥಿಗಳ ಮೌಲ್ಯಮಾಪನ ಮಾಡಿದ ಉತ್ತರ ಪತ್ರಿಕೆಗಳಲ್ಲಿನ ಅಂಕಗಳು ಸ್ಪಷ್ಟವಾಗುತ್ತವೆ. ಪರಶುರಾಮ ಅಂಬಿಗೇರ ಎಂಬ ವಿದ್ಯಾರ್ಥಿಯು ಒಂದು ಪದ/ ವಾಕ್ಯದಲ್ಲಿನ ಪ್ರಶ್ನೆಗಳಿಗೆ ಉತ್ತರವನ್ನು ಈ ಕೆಳಗಿನಂತೆ ನೀಡಿದ್ದಾನೆ.

೧. ಗಾಳಿಪಟ ಯಾರು ಮಾಡಿದರು ?

ಉತ್ತರ : ನಾನು

೨. ಆಟದ ಬಯಲಿಗೆ ಯಾರು ಬಂದರು ?

ಉತ್ತರ : ರಂಗ

೩. ಪುಟ್ಟಿ ಏನನ್ನು ಕೇಳಿದಳು ?

ಉತ್ತರ : ಹಾಲು

೪. ಯಾವುದರಿಂದ ಜವಾಹರಲಾಲರ ಪಟವನ್ನು ಅಲಂಕರಿಸಿದ್ದರು ?

ಉತ್ತರ : ಹೂ..... ಎಂದು ವಿದ್ಯಾರ್ಥಿ ಉತ್ತರವನ್ನು ಬರೆದಿದ್ದಾನೆ. ವಿಷಯದ ದೃಷ್ಟಿಯಿಂದ ಕೆಲವು ಉತ್ತರಗಳು ಸರಿಯಾಗಿ ಇವೆ. ಆದರೆ ಭಾಷಾ ದೃಷ್ಟಿಯಿಂದ ಇಲ್ಲಿ ಮೌಲ್ಯಮಾಪನ ಮಾಡಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಜೊತೆಗೆ ಕೆಲವು ಸಂದರ್ಭಗಳಲ್ಲಿ ವಿಷಯಕ್ಕೂ ಆದ್ಯತೆ ನೀಡಿ ಪೂರ್ಣ ಅಂಕಗಳನ್ನು ಕೊಟ್ಟಿರುವುದನ್ನು ಕಾಣುತ್ತೇವೆ. ಭಾಷಾ ದೃಷ್ಟಿಯಿಂದ ಈ ಮೇಲಿನ ಪ್ರಶ್ನೆಗಳಿಗೆ ಉತ್ತರಗಳನ್ನು ಈ ಕೆಳಗಿನಂತೆ ಬರೆಯಬೇಕು.

೧. ನಾನು ಗಾಳಿ ಪಟ ಮಾಡಿದೆನು

೨. ಆಟದ ಬಯಲಿಗೆ ರಂಗನು ಬಂದನು.

೩. ಪುಟ್ಟಿ ಹಾಲನ್ನು ಕೇಳಿದಳು.

೪. ಜವಾಹರಲಾಲ ಪಟವನ್ನು ಹೂ ಹಾರದಿಂದ ಅಲಂಕರಿಸಿದರು. ಎಂದು ಉತ್ತರಿಸಿದಾಗ ಭಾಷಾ ಕಲಿಕೆಯ ದೃಷ್ಟಿಯಿಂದ ವಿದ್ಯಾರ್ಥಿ ಸರಿಯಾದ ಉತ್ತರವನ್ನು ನೀಡಿ ದಂತಾಗುತ್ತದೆ. ಆದರೆ ಇಲ್ಲಿ ವಿಷಯಾಧಾರಿತವಾಗಿ ಮೌಲ್ಯಮಾಪನ ಪ್ರಕ್ರಿಯೆಯನ್ನು ಮಾಡಿ ರುವುದು ಸ್ಪಷ್ಟವಾಗುತ್ತದೆ. ಬಹುತೇಕ ಉತ್ತರ ಈ ಹಿನ್ನೆಲೆಯಲ್ಲಿಯೇ ಮೌಲ್ಯಮಾಪನ

ವಾಗಿರುವುದು ಸ್ಪಷ್ಟವಾಗುತ್ತದೆ. ಆದರೆ ಇಲ್ಲಿ ಅಂಕಗಳನ್ನು ಮಾತ್ರ ಕೇಳಿದ ಪ್ರಶ್ನೆಗಳಿಗೆ ಅನುಗುಣವಾಗಿ ಅಂಕಗಳನ್ನು ಪೂರ್ಣವಾಗಿ ಕೊಡಲಾಗಿದೆ. ಇದರಿಂದ ಶಿಕ್ಷಕರು ಪ್ರಾಥಮಿಕ ಕನ್ನಡಭಾಷಾ ಪತ್ಯಗಳ ಉತ್ತರಪತ್ರಿಕೆಗಳನ್ನು ವಿಷಯಾಧಾರಿತವಾಗಿ ಮೌಲ್ಯಮಾಪನ ಮಾಡಿ ಅಂಕಗಳನ್ನು ನೀಡುತ್ತಾರೆ ಎಂಬುದು ಸ್ಪಷ್ಟವಾಗುತ್ತದೆ. ಬಹುತೇಕ ಉತ್ತರ ಪತ್ರಿಕೆಗಳೆಲ್ಲವು ಈ ಹಿನ್ನೆಲೆಯಲ್ಲಿ ಮೌಲ್ಯಮಾಪನವಾಗಿರುವುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಇನ್ನು ಕೆಲವು ಸಂದರ್ಭಗಳಲ್ಲಿ ಶಿಕ್ಷಕರು ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡುವಾಗ ಹ್ರಸ್ವಸ್ವರ, ದೀರ್ಘಸ್ವರ, ವ್ಯಂಜನ, ಒತ್ತಕ್ಷರಗಳನ್ನು ಗಮನಿಸದೆ ಅಂಕಗಳನ್ನು ಪೂರ್ಣಪ್ರಮಾಣದಲ್ಲಿ ಕೊಟ್ಟಿರುವುದನ್ನು ಕಾಣುತ್ತೇವೆ.

ಉದಾಹರಣೆಗೆ : ಶುಸ್ಮಿತ ಹಿರೇಗೌಡರ ಎಂಬ ವಿದ್ಯಾರ್ಥಿನಿಯು ಪ್ರಶ್ನೆ ಮೂರು ಪುಟ್ಟಿ ಏನನ್ನು ಕೇಳಿದಳು? ಎಂಬುದಕ್ಕೆ 'ಅಲು' ಎಂದು ಉತ್ತರ ಬರೆದಿದ್ದಾಳೆ. ಆದರೆ ಮೌಲ್ಯಮಾಪಕರು ಪೂರ್ಣ ಅಂಕ ನೀಡಿರುವುದನ್ನು ಕಾಣುತ್ತೇವೆ. ಅದೇ ತೆರನಾಗಿ ಐದನೇ ತರಗತಿಯ ವಿದ್ಯಾರ್ಥಿ ರಾಘವೇಂದ್ರನು ಯಾವ ವಿದ್ಯೆಯಿಂದ ಏಕಲವ್ಯ ನಾಯಿಯನ್ನು ಹೊಡೆದ? ಎಂಬ ಪ್ರಶ್ನೆಗೆ ಉತ್ತರವಾಗಿ ಶಬ್ಧ ವಿದ್ಯೆಯಿಂದ ಏಕಲವ್ಯ ನಾಯಿಯನ್ನು ಹೊಡೆದ ಎಂದು ಉತ್ತರ ಬರೆದಿದ್ದಾನೆ. ಆದರೆ ಮೌಲ್ಯಮಾಪಕರು ಮಾತ್ರ ಪೂರ್ಣ ಅಂಕವನ್ನು ನೀಡಿರುವುದನ್ನು ಕಾಣುತ್ತೇವೆ. ಇದೇ ವಿದ್ಯಾರ್ಥಿಯ ಉತ್ತರ ಪತ್ರಿಕೆಯನ್ನು ಗಮನಿಸಿದಾಗ ದ್ರೋಣಾಚಾರ್ಯರಿಗೆ ಹಾರಿಸು(ಆರಿಸು) ಹೇಳುತ್ತೇನೆ. (ಏಳುತ್ತೇನೆ) ಎಂಬ ಇತ್ಯಾದಿ ತಪ್ಪುಗಳನ್ನು ಮಾಡಿದ್ದಾನೆ. ಆದರೆ ಮೌಲ್ಯಮಪಕರು ಮಾತ್ರ ಪೂರ್ಣ ಅಂಕಗಳನ್ನು ನೀಡಿರುವುದನ್ನು ಕಾಣುತ್ತೇವೆ. ಇದೇ ರೀತಿಯಾಗಿ ಏಳನೇ ತರಗತಿಯವರೆಗೂ ಮೌಲ್ಯಮಾಪನ ಮಾಡಿರುವುದನ್ನು ಕಾಣುತ್ತೇವೆ. ಉದಾಹರಣೆಗೆ : ವೀರೇಶ ಪಾಟೀಲ್ ಎಂಬ ವಿದ್ಯಾರ್ಥಿಯ (ಏಳನೇ ತರಗತಿ) ಉತ್ತರ ಪತ್ರಿಕೆಯನ್ನು ಗಮನಿಸಿದಾಗ ಶ್ರೇಷ್ಟಗಾಯಕ ಎಂಬಲ್ಲಿ ಶ್ರೆಷ್ಟಗಾಯಕ, ತಾತ್ಕಾಲಿಕ ಎಂಬಲ್ಲಿ ತತ್ಕಾಲಿಕ ಎಂದು ಉತ್ತರ ಬರೆದಿದ್ದಾನೆ. ಆದರೆ ಮೌಲ್ಯಮಾಪಕರು ಮಾತ್ರ ಪೂರ್ಣ ಅಂಕ ನೀಡಿದ್ದಾರೆ. ಈ ವಿದ್ಯಾರ್ಥಿಯ ಉತ್ತರ ಪತ್ರಿಕೆಯನ್ನು ಪರಿಪೂರ್ಣವಾಗಿ ಅಧ್ಯಯನ ಮಾಡಿದಾಗ ಭಾಷಾ ದೃಷ್ಟಿಯಿಂದ ಮೌಲ್ಯಮಾಪನ ಮಾಡಿದಾಗ ಐವತ್ತು ಅಂಕಗಳಿಗೆ ಹದಿನೈದು ಅಂಕಗಳನ್ನು ಮಾತ್ರ ಕೊಡಬಹುದಾಗಿದೆ. ಆದರೆ ಮೌಲ್ಯಮಾಪಕರು ಮಾತ್ರ ೫೦ ಅಂಕಗಳಿಗೆ ೪೪ ಅಂಕಗಳನ್ನು ನೀಡಿದ್ದಾರೆ. ಈ ಎಲ್ಲಾ ಉತ್ತರ ಪತ್ರಿಕೆಗಳ ಮೌಲ್ಯಮಾಪನ ಗಮನಿಸಿದಾಗ ಕನ್ನಡಭಾಷಾ ಪತ್ಯಗಳ ಉತ್ತರ ಪತ್ರಿಕೆಗಳ ಮೌಲ್ಯಮಾಪನ ವಿಷಯಾಧಾರಿತವಾಗಿ ನಡೆಯುತ್ತದೆಯೇ ಹೊರತು ಭಾಷಾಧಾರಿತವಾಗಿ ನಡೆಯುವುದಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಒಟ್ಟಾರೆಯಾಗಿ ಅಧ್ಯಯನ ಸಂದರ್ಭದಲ್ಲಿ ಒಂದರಿಂದ ಏಳನೇ ತರಗತಿಯವರೆಗು ಕಿರುಪರೀಕ್ಷೆ, ಮಧ್ಯವಾರ್ಷಿಕ ಪರೀಕ್ಷೆ, ವಾರ್ಷಿಕ ಪರೀಕ್ಷೆಗಳನ್ನು ಕನ್ನಡ ಭಾಷೆಗೆ ಸಂಬಂಧಿಸಿದ

ಮೌಲ್ಯಮಾಪನ ಮಾಡಿದ ಪ್ರತಿ ತರಗತಿಯ ಹತ್ತತ್ತು ಉತ್ತರ ಪತ್ರಿಕೆಗಳನ್ನು ಅಧ್ಯಯನ ಸಂದರ್ಭದಲ್ಲಿ ಗಮನಿಸಲಾಗಿದೆ. ಇದರ ಆಧಾರಿತವಾಗಿ ಮೌಲ್ಯಮಾಪಕರು ಮೌಲ್ಯಮಾಪನ ಮಾಡುವಾಗ ಧ್ವನಿ, ಪದ, ವಾಕ್ಯ, ಲೇಖನ ಚಿಹ್ನೆಗಳನ್ನು ಮತ್ತು ಸ್ವರ, ವ್ಯಂಜನ, ಒತ್ತಕ್ಷರಗಳನ್ನು ಗಮನಿಸದೆ ವಿಷಯಕ್ಕೆ ಆದ್ಯತೆ ನೀಡಿ ಮೌಲ್ಯಮಾಪನ ಮಾಡುತ್ತಿರುವುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. **ಆಕರಗಳು** : (ಶಾಲಾ ಮಟ್ಟದ ದ್ವಿತೀಯ ಸೆಮಿಷ್ಟರ್ ಪರೀಕ್ಷೆ ಮಾರ್ಚ್ ೨೦೦೯ ಮಾಲ್ಯಮಾಪನ ಮಾಡಿದ ಉತ್ತರ ಪತ್ರಿಕೆಗಳು ೧ರಿಂದ ೭ನೇ ತರಗತಿ ಸ..ಹಿ.ಪ್ರಾ, ಶಾಲೆ. ಕಿಡದೂರು, ತಾ. ಕುಷ್ಟಗಿ)

## ೭.೭. ಪಾಠೋಪಕರಣಗಳು

ಪಾಠಕ್ಕೆ ಅಥವಾ ಪಾಠ ಯೋಜನೆಗೆ ಬಳಕೆಯಾಗುವ ವಸ್ತುಗಳೆಲ್ಲವು ಪಾಠೋಪಕರಣಗಳು ಎಂದು ಹೇಳಬಹುದು. ಪರಿಮಾಣಾತ್ಮಕವಾಗಿ, ಗುಣಾತ್ಮಕವಾಗಿ ಬೋಧನೆ ತಲುಪಬೇಕಾದರೆ ಪಾಠೋಪಕರಣಗಳ ಬಳಕೆ ಅವಶ್ಯಕವಾಗಿ ಬೇಕೆ ಬೇಕು. ಇದರಿಂದ ಅರ್ಥಪೂರ್ಣ ಕಲಿಕೆಯಾಗಿ ಜ್ಞಾಪಕದಲ್ಲಿಡಲು ಸಹಾಯಕವಾಗಬಲ್ಲದು. ಪ್ರತಿಯೊಂದು ಶಿಕ್ಷಣದ ಬೋಧನೆಯಲ್ಲಿ ಅವಶ್ಯಕ ಅದರಲ್ಲೂ ಮುಖ್ಯವಾಗಿ ಪ್ರಾಥಮಿಕ ಶಿಕ್ಷಣದ ಮಕ್ಕಳ ಮನಸ್ಸಿಗಂತು ಇದು ಅತ್ಯವಶ್ಯಕ ಎಂದು ಶೈಕ್ಷಣಿಕ ಮನೋವಿಜ್ಞಾನಿಗಳು ಅಭಿಪ್ರಾಯ ಪಡುತ್ತಾರೆ. ಮಕ್ಕಳ ಮನಸ್ಸು ಹಸಿಯಾದ ಗೋಡೆಯಂತೆ ಇರುವುದರಿಂದ ಅಲ್ಲಿ ಯಾವ ವಸ್ತುವನ್ನು ಬಳಕೆ ಮಾಡಿದರೆ ಬೋಧನೆ ಸಂಪೂರ್ಣವಾಗಿ ಯಶಸ್ಸನ್ನು ಕಾಣಬಲ್ಲದು ಎಂಬುದನ್ನು ಶಿಕ್ಷಣ ತಜ್ಞರು ಒಪ್ಪಿಕೊಳ್ಳುತ್ತಾರೆ. ಪಾಠಗಳಲ್ಲಿ ಕಾಣುವ ಚಿತ್ರಗಳು ಕೂಡ ಪಾಠೋಪಕರಣಗಳು ಎಂದು ಹೇಳಬಹುದು. ಇವುಗಳನ್ನು ಶಿಕ್ಷಕನಾದವನು ಬಳಸಿಕೊಳ್ಳುವ ವಿಧಾನದ ಮೇಲೆ ಬೋಧನೆ ವ್ಯವಸ್ಥೆ ನಿಂತಿರುತ್ತದೆ. ಇವುಗಳ ಬಳಕೆ ಹೆಚ್ಚಾದಷ್ಟು ಕಲಿಕೆ ಸ್ಪಷ್ಟವಾಗುತ್ತದೆ ಎಂಬುದು ಅನೇಕರ ಅಭಿಪ್ರಾಯ. ಇದನ್ನು ನಾವು ಸಹ ಒಪ್ಪಬಹುದಾಗಿದೆ.

ಪಾಠವನ್ನು ಬೋಧಿಸುವ ಶಿಕ್ಷಕರು ಕೆಲವೊಂದನ್ನು ಚಿತ್ರಗಳ ಮೂಲಕ ತೋರಿಸಬಹುದು. ಇನ್ನು ಕೆಲವು ನಿದರ್ಶನಗಳ ಮೂಲಕ ಬೋಧಿಸಬಹುದು, ಆದರೆ ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಚಿತ್ರಗಳನ್ನು ಬಳಸಿ ಪಾಠ ಮಾಡುವವರ ಸಂಖ್ಯೆ ಹೆಚ್ಚಾಗಿದೆ. ಪ್ರಕೃತಿಯಲ್ಲಿ ಇದ್ದರು ಅವುಗಳನ್ನು ಬಳಸಿಕೊಳ್ಳುವ ಬೋಧಕರ ಸಂಖ್ಯೆ ಇಂದು ಕಡಿಮೆಯಾಗಿದೆ. ಕನ್ನಡ ಕಲಿ–ನಲಿ ಮೂರನೇ ತರಗತಿಯ ಪಠ್ಯದಲ್ಲಿ 'ಜೇನು' ಎಂಬ ಪಾಠವನ್ನು ಕೊಟ್ಟಿದೆ. **(ಪು.ಸಂ.೨೮)** ಇದನ್ನು ಬೋಧಿಸುವ ಭಾಷಾ ಶಿಕ್ಷಕರು ಬೋಧಿಸುವ ಸಂದರ್ಭದಲ್ಲಿ 'ಜೇನುಗೂಡನ್ನು ತಂದು ತೋರಿಸುವವರು ಇದ್ದಾರೆ. ಆದರೆ ಇವರ ಸಂಖ್ಯೆ ಇಂದು ಕಡಿಮೆಯಾಗಿದೆ. ಕಾರಣ ವೃತ್ತಿಯಲ್ಲಿ ಆಸಕ್ತಿ ಇಲ್ಲದೆ ಇರುವುದು. ಪ್ರಕೃತಿಯಲ್ಲಿ ದೊರಕುವ ಪಾಠೋಪಕರಣಗಳ ಬಳಕೆಯಿಂದ ಬೋಧನೆ ಸ್ಪಷ್ಟವಾಗಬಲ್ಲದು. ಮಗು ನೆನಪಿನಲ್ಲಿಡಲು ಸಹಾಯಕ. ಆದ್ದರಿಂದ ಪಾಠೋಪಕರಣಗಳು ಪ್ರಕೃತಿಯಲ್ಲಿ ದೊರಕುವಂತವುಗಳನ್ನು ತಂದು

ತೋರಿಸುವುದರಿಂದ ಪರಿಣಾತ್ಮಕ, ಗುಣಾತ್ಮಕ ಬೋಧನೆಯಾಗುವುದರಲ್ಲಿ ಅನುಮಾನವಿಲ್ಲ. ನಿಧಾನವಾಗಿ ಕಲಿಯುವ ಮಗುವಿಗೂ ಕೂಡ ಇದರಿಂದ ಆಸಕ್ತಿಯನ್ನು ಪ್ರೇರೆಪಿಸಿ ಕಲಿಕೆಯಲ್ಲಿ ಸುಧಾರಣೆಗಳನ್ನು ತರಬಹುದು. ಹಾಗೆಂದ ಮಾತ್ರಕ್ಕೆ ಪ್ರಕೃತಿಯಲ್ಲಿ ದೊರೆಯುವ ವಸ್ತು ಅಥವಾ ಪ್ರಾಣಿಗಳೆಲ್ಲವನ್ನು ತಂದು ತೋರಿಸಬಹುದೇ ಎಂದು ಪ್ರಶ್ನೆ ಬರಬಹುದು. ಅದು ಅಸಾಧ್ಯವಾದ ಮಾತು. ಉದಾ: ಕನ್ನಡ ಕಲಿ-೧ನೇ ತರಗತಿಯ ಪಠ್ಯದಲ್ಲಿನ ಪಾಠ-೨ನ್ನು ಆನೆ ಬಂತೋಂದಾನೆ ಕೊಡಲಾಗಿದೆ. ಆನೆಯನ್ನು ತರಗತಿಯಲ್ಲಿ ತಂದು ತೋರಿಸಲು ಆಗದು. ಇಂತಹ ಸಂದರ್ಭದಲ್ಲಿ ಆನೆಯ ಚಿತ್ರ ತೋರಿಸಿ ಪಾಠ ಮಾಡುವುದು ಅನಿವಾರ್ಯ. ಆದರೆ ಸಂದರ್ಭ ಒದಗಿ ಬಂದರೆ ಆನೆಯನ್ನು ಸಹ ತೋರಿಸಬಹುದು. (ಪ್ರವಾಸದ ಸಂದರ್ಭದಲ್ಲಿ) ಈ ಚಿತ್ರದ ಬಳಕೆಯ ಆಕರ್ಷಣೆಯ ಮತ್ತು ಆಸಕ್ತಿಯನ್ನು ತರುವ ರೀತಿಯಲ್ಲಿ ಚಿತ್ರಗಳು ಇರಬೇಕಾದುದು ಅವಶ್ಯಕ. ಆನೆಯ ಚಿತ್ರವನ್ನು ತೋರಿಸುವಾಗ ಆನೆಯ ರೂಪರೇಷಗಳು ಇರಬೇಕು. ಆ ಚಿತ್ರ ಬೇರೆ ಪ್ರಾಣಿಯನ್ನು ಹೋಲುವ ರೀತಿಯಲ್ಲಿ ಇರಬಾರದು. ಮಕ್ಕಳ ಆಸಕ್ತಿ ಕುಂದಿ ಬೋಧನೆಯಲ್ಲಿ ಆಸಕ್ತಿ ತೋರದೆ ಇರಬಹದು. ಇನ್ನು ವ್ಯಕ್ತಿಯ ಚಿತ್ರಗಳು ಕೂಡ ಸಂದರ್ಭಾನುಸಾರ ಇರಬೇಕು. ಉದಾ: ಬಸವೇಶ್ವರರ ಬಗ್ಗೆ ಪಾಠ ಮಾಡುತ್ತಿದ್ದೇವೆ ಎಂದು ಕೊಳ್ಳೋಣ. ಆಗ ಮಗು ಪ್ರತಿಯೊಂದು ಭಾಗಗಳನ್ನು ಗುರುತಿಸುತ್ತದೆ. ಬಸವೇಶ್ವರರು ಕಿವಿಗೆ ಹಾಕಿರುವುದು ರುದ್ರಾಕ್ಷಿ ಇದು ಗೊತ್ತಿರುವ ವಿಚಾರ ಅದನ್ನು ಬಿಟ್ಟು ಚಿತ್ರದಲ್ಲಿ ಬೇರೆ ಆಭರಣ ಧರಿಸಿರುವ ಚಿತ್ರ ತೋರಿಸಿದರೆ ಅದರ ಪರಿಣಾಮ ಬೇರೆಯಾಗಬಲ್ಲದು. ಆದ್ದರಿಂದ ಪಾಠೋಪಕರಣಗಳಲ್ಲಿ ಚಿತ್ರಗಳನ್ನು ಬಳಸುವಾಗ ಗಮನದಲ್ಲಿರಿಸಿ ಬಳಸಬೇಕಾದ ಅಗತ್ಯವಿದೆ.

ಪ್ರಾಥಮಿಕ ಪಠ್ಯಗಳಲ್ಲಿ ಇಂದು ಮಕ್ಕಳಿಗೆ ಅರ್ಥಪೂರ್ಣ ಕಲಿಕೆಯಾಗಲಿ ಮತ್ತು ಜ್ಞಾಪಕದಲ್ಲಿರಲಿ ಎಂಬ ಕಾರಣದಿಂದ ಹಿಂದಿನ ಪಠ್ಯಗಳಿಗಿಂತಲೂ ಇಂದು ಚಿತ್ರಗಳನ್ನು ಬಳಸಿರುವುದು ಹೆಚ್ಚಾಗಿ ಕಂಡು ಬರುತ್ತದೆ. ೧೯೮೬ರ ಪೂರ್ವದ ಪಠ್ಯಗಳಲ್ಲಿ ಕಪ್ಪು ಬಿಳುಪಿನ ಚಿತ್ರಗಳನ್ನು ಕಾಣುತ್ತೇವೆ. ಅವುಗಳು ಆಕರ್ಷಣೀಯವಾಗಿದ್ದವು ಎಂಬುದು ಗಮನಾರ್ಹ. ಆದರೆ ಇಂದಿನ ಪಠ್ಯಗಳಲ್ಲಿ **(ಕರ್ನಾಟಕ ಸರ್ಕಾರ ಮುದ್ರಿಸಿದ ೧ರಿಂದ ೭ನೇ ತರಗತಿಯ ಪಠ್ಯಗಳು)** ಹಲವು ರೀತಿಯ ಬಣ್ಣವನ್ನು ಬಳಸಿ ಚಿತ್ರ ಕೊಡಲಾಗಿದೆ. ಆದರೆ ಅವುಗಳಲ್ಲಿ ಆಕರ್ಷಣಿಯ ಕೊರತೆಗಳನ್ನು ಕಾಣಬಹುದು. ಚಿತ್ರಗಳು ಆಕರ್ಷಣಿಯವಾದಷ್ಟು ಬೋಧನೆ ಪರಿಣಾಮಕಾರಿಯಾಗಿ ಕಲಿಕೆ ಶಾಶ್ವತವಾಗಿ ಉಳಿಯಬಲ್ಲದು. ಮನೋವಿಜ್ಞಾನಿಗಳು, ಶಿಕ್ಷಣ ತಜ್ಞರು ಉದಾಹರಣೆಗಳ ಮೂಲಕ ಪ್ರಾಯೋಗಿಕವಾಗಿ ಯಶಸ್ಸು ಕಂಡಿರುವುದನ್ನು ಕಾಣುತ್ತೇವೆ. ಆದರೆ ಇಂದಿನ ಪ್ರಾಥಮಿಕ ಕನ್ನಡಭಾಷಾ ಪಠ್ಯಗಳನ್ನು ಗಮನಿಸಿದಾಗ ಅಲ್ಲಿರುವ ಚಿತ್ರಗಳಲ್ಲಿ ಆಕರ್ಷಣೀಯ, ಮನಮೋಹಕವಾದ ವಿವರಣೆಯನ್ನು ನೀಡಿದ ಚಿತ್ರಗಳನ್ನು ನೋಡುತ್ತೇವೆ. ಉದಾಹರಣೆಗೆ ಒಂದನೇ ತರಗತಿಯ ಕನ್ನಡ ಕಲಿ-ನಲಿ

ಪುಸ್ತಕದ ಪಾಠ ೧ರಲ್ಲಿ (ಪು.ಸಂ೧) ಬಾಲಕಿಯು ರೂಪಾಯಿ ನಾಣ್ಯವನ್ನು ಮೇಲೆ ಚಿಮ್ಮುತ್ತ ಇರುವ ದೃಶ್ಯವನ್ನು ಕೋಡಲಾಗಿದೆ. ಆದರೆ ಅದು ನಾಣ್ಯದಂತಿಲ್ಲ ಜೊತೆಗೆ ಬಾಲಕಿಯ ಚಿತ್ರ ಆರೋಗ್ಯವಂತ ಬಾಲಕಿಯಂತೆ ಇಲ್ಲ. ಹಾಕಿರುವ ಬಟ್ಟೆಗಳು ಸಹ ಆಕರ್ಷಣೀಯವಾಗಿಲ್ಲ. ಇದರಿಂದ ಮಕ್ಕಳ ಮನಸ್ಸಿಗೆ ಆನಂದ ತರುವಲ್ಲಿ ಈ ಚಿತ್ರ ವಿಫಲವಾಗಿದೆ ಎಂದು ಹೇಳಬಹುದು, ಈ ತರಗತಿಯಲ್ಲಿಯೇ ಪುಟ ಸಂಖ್ಯೆ ೫ರಲ್ಲಿ 'ಒಗ್ಗಟ್ಟಿನಲ್ಲಿ ಬಲ' ಎಂಬ ಪಾಠದಲ್ಲಿನ ಚಿತ್ರದಲ್ಲಿ ಮಗನಿಗೆ ಹಲವು ಕೋಲುಗಳ ಕಟ್ಟನ್ನು ಕೊಟ್ಟು ಮಗ ಮುರಿಯುತ್ತಿರುವ ದೃಶ್ಯದ ಚಿತ್ರವಿದೆ. ಆದರೆ ಆ ಕಟ್ಟು ಕೋಲಿನ ಕಟ್ಟಿನಂತೆ ಇರದೇ ಒಂದು ಕಬ್ಬಿನ ಕೋಲಿನಂತೆ ಇದ್ದು ಹಲವು ಗಣ್ಣುಗಳಿಂದ ಕೂಡಿದಂತಿದೆ. ಇದರಲ್ಲಿ ಇನ್ನೊಂದು ದೋಷವೆಂದರೆ ಹಲವು ಕೋಲುಗಳ ಕಟ್ಟು ಎಂದಾಗ ಬೇಕಿದೆ ಏಕೆಂದರೆ ಹಲವು ಎಂದರೆ ಮಗ ಅಷ್ಟೊಂದು ಭಾರವನ್ನು ತೊಡೆಯ ಮೇಲೆ ಇಟ್ಟುಕೊಳ್ಳಬಲ್ಲದೇ ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಆದ್ದರಿಂದ ಈ ತಿದ್ದುಪಡಿಯ ಅಗತ್ಯತೆ ಇದೆ ಎಂದು ಹೇಳಬಹುದು. ಪುಟ ಸಂಖ್ಯೆ ೧೮ರಲ್ಲಿ 'ಅ' ವರ್ಣಮಾಲೆಯ ಪರಿಚಯಕ್ಕಾಗಿ 'ಅರ' ಎಂಬ ಪದ ಕಲಿಕೆಯನ್ನು 'ಅರ' ಚಿತ್ರದ ಮೂಲಕ ಕೊಟ್ಟಿರುವುದನ್ನು ಕಾಣುತ್ತೇವೆ. ಆದರೆ ಈ ಚಿತ್ರ ನೋಡಿದಾಗ 'ಅರ' ಚಿತ್ರದಂತೆ ಇರದೆ ಕ್ರಿಕೆಟ್ ಬ್ಯಾಟನಂತೆ ಇರುವುದನ್ನು ಕಾಣಬಹುದು. ಆಧುನಿಕತೆಯ ಈ ಸಂದರ್ಭದಲ್ಲಿ ಕ್ರಿಕೆಟ್ ಆಟ ಹೆಚ್ಚಿನ ಮಾನ್ಯತೆ ಪಡೆದು ಸಾಮಾಜಿಕ ಪರಿಸರದಲ್ಲಿ ಈ ಕ್ರೀಡೆಯ ಆಟ ಹೆಚ್ಚಾಗಿರುವುದು ನಮಗೆಲ್ಲರಿಗೂ ತಿಳಿದ ವಿಷಯ. ಹಾಗಾಗಿ ಮಕ್ಕಳು ತಮ್ಮ ಪರಿಸರದಲ್ಲಿ ಬ್ಯಾಟನ್ನು ನೋಡಿರುತ್ತಾರೆ. ಆಗ ಇದು ಬ್ಯಾಟಿನಂತೆ ಕಾಣುತ್ತಿರುವುದನ್ನು ನೋಡಿ ಬ್ಯಾಟ ಎಂದು ಹೇಳುವರು ಇದ್ದಾರೆ. ಇದನ್ನು ಡಾ. ಅಶೋಕಕುಮಾರ ರಂಜೇರೆ ಅವರು ಕೂಡ 'ನಮ್ಮ ಕನ್ನಡ' ಪತ್ರಿಕೆಯ 'ಹೊನ್ನಸಂಚಿಕೆ' ೫೦ (ಸಂಪಾದಕರು ಕೆ.ವಿ.ನಾರಾಯಣ)ರಲ್ಲಿ ಪ್ರಾಥಮಿಕ ಹಂತದ ಶಿಕ್ಷಣದ ಸಮಸ್ಯೆಗಳು ಎಂಬ ಲೇಖನದಲ್ಲಿ ಪ್ರಾಯೋಗಿಕವಾಗಿ ಮಕ್ಕಳನ್ನು ಪರೀಕ್ಷಿಸಿ ಈ ದೋಷವನ್ನು ದಾಖಲಿಸಿರುವುದಾಗಿ ಹೇಳುತ್ತಾರೆ. ಇದನ್ನು ನೋಡಿದ ಪ್ರತಿಯೊಬ್ಬರು 'ಬ್ಯಾಟ್' ಎಂದು ಹೇಳುವುದರಲ್ಲಿ ಯಾವುದೇ ಅನುಮಾನವಿಲ್ಲವೆಂದೇ ಹೇಳಬಹುದು. ಆದ್ದರಿಂದ 'ಅರ' ಚಿತ್ರ 'ಅರ' ಚಿತ್ರವಾಗಿ ಮಾರ್ಪಾಡು ಅಗತ್ಯತೆ ಇದೆ ಎಂದು ಹೇಳಬಹುದು.

ಎರಡನೇ ತರಗತಿಯ **'ಮೂರು ಕೊಡಲಿಗಳು'** ಎಂಬ ಪಾಠವನ್ನು ಕೊಡಲಾಗಿದೆ. ಇಲ್ಲಿ ರಂಗಪ್ಪ ಒಣಗಿದ ಮರವನ್ನು ಕಡಿಯುತ್ತಾನೆ ಎಂದು ವಿವರಿಸಿದೆ. ಆದರೆ ಇಲ್ಲಿ ಬಳಕೆಯಾದ ಪಾಠೋಪಕರಣ ಮಾತ್ರ ಹಸಿರು ಮರ ಕಡಿಯುತ್ತಿರುವ ದೃಶ್ಯವನ್ನು ಕೊಡಲಾಗಿದೆ. ಇಂತಹ ತೊಂದರೆಗಳನ್ನು ಸರಿಪಡಿಸಿಕೊಳ್ಳುವ ಅಗತ್ಯತೆ ಇಂದು ಬಹಳ ಇದೆ ಎಂಬುದು ಅಧ್ಯಯನದ ಸಂದರ್ಭದಲ್ಲಿ ಸ್ಪಷ್ಟವಾಗುತ್ತದೆ.

ಒಟ್ಟಾರೆಯಾಗಿ ಪ್ರಾಥಮಿಕ ಕನ್ನಡ ಭಾಷಾ ಪಠ್ಯಗಳಲ್ಲಿ (೧ ರಿಂದ ೭ನೇತರಗತಿ) ಪಾಠೋಪಕರಣದ ರೀತಿಯಲ್ಲಿ ಬಳಕೆಯಾಗಿರುವ ಚಿತ್ರಗಳು ಆಕರ್ಷಣೀಯವಾಗಿಲ್ಲ ಮತ್ತು ಸ್ಪಷ್ಟವಾಗಿಲ್ಲ ಎಂಬುದು ಈ ಪುಸ್ತಕಗಳ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಇದರಿಂದ ಮಕ್ಕಳ ಮನಸ್ಸನ್ನು ಕೇಂದ್ರೀಕರಿಸುವಲ್ಲಿ ವಿಫಲವಾದ ಚಿಂತ್ರಗಳ ಸಂಖ್ಯೆ ಹೆಚ್ಚಾಗಿದೆ ಎಂದು ತಿಳಿಯಬಹುದು. ಇದರಿಂದ ಮಗು ಅರ್ಥಪೂರ್ಣ ಕಲಿಕೆಯಾಗಲಿ, ಶಾಶ್ವತ ಕಲಿಕೆ ಅಸಾಧ್ಯವಾದುದು ಎಂದು ಹೇಳಬಹುದು. ಇದರಿಂದ ಮಕ್ಕಳು ಕಣ್ಣಿನ ದೋಷಕ್ಕು ಗುರಿಯಾಗ ಬಹುದು. ಇಲ್ಲಿ ಬಳಕೆಯಾದ ವಸ್ತುಗಳ ಚಿತ್ರಗಳಾಗಲಿ, ಪ್ರಾಣಿಗಳ ಚಿತ್ರಗಳಾಗಲಿ, ಯಾವುದೇ ಚಿತ್ರಗಳು ಸಹ ಆಕರ್ಷಣೀಯ ದೃಷ್ಟಿಯಿಂದ ಸೋತಿವೆ. ಆದರೆ ಕೆಲವೊಂದು ಸಂದರ್ಭದ ಚಿತ್ರಗಳು ಮಾತ್ರ ಆಕರ್ಷಣೀಯವಾಗಿದೆ. ಆದರೆ ಇವುಗಳ ಸಂಖ್ಯೆ ವಿರಳವೆಂದೇ ಹೇಳಬಹುದು. ಆದ್ದರಿಂದ 'ಕರ್ನಾಟಕ ಸರ್ಕಾರ' ಶಿಕ್ಷಣ ಸಂಸ್ಥೆಗಳು ಮತ್ತು ಪಠ್ಯಪುಸ್ತಕ ರಚನಾ ಸಮಿತಿ ಇದನ್ನು ಪರಿಶೀಲಿಸುವ ಅಗತ್ಯತೆ ತುಂಬಾ ಇದೆ ಎಂಬುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

### ೭.೮. ಸಂಸ್ಕೃತಿ

ಭಾಷೆ ಮುಖ್ಯವಾಗಿ ಸಂಪರ್ಕ ಮಾಧ್ಯಮ ಅದರ ಹಿನ್ನೆಲೆಯಲ್ಲಿ ಒಂದು ಪ್ರಾದೇಶಿಕ ನೆಲೆ, ಸಮಾಜ ಮತ್ತು ಅದು ಬಳಕೆಯಾಗುವ ಸನ್ನಿವೇಶ ಇದ್ದೇ ಇರುತ್ತದೆ. ಭಾಷೆಯನ್ನು ಬಳಸುವವರ ನಡೆ–ನುಡಿ ರೀತಿ, ರೀವಾಜುಗಳೆಲ್ಲವನ್ನು ಒಟ್ಟಾಗಿಸಿ ಸಂಸ್ಕೃತಿ ಎಂದು ಕರೆಯುತ್ತೇವೆ. ಭಾಷೆ ಎಂಬುದು ಒಂದು ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಇದರಿಂದಾಗಿ ಸಾಹಿತ್ಯಾಭ್ಯಾಸವನ್ನು ಅಧ್ಯಯನ ಮಾಡುವವರು ಆಯಾ ಸಂಸ್ಕೃತಿಯ ಒಳಪದರುಗಳನ್ನು ಅರಿಯಲು ಸಾಧ್ಯವಾಗುತ್ತದೆ. ಒಂದು ಭಾಷೆಯನ್ನು ಆಳವಾಗಿ ಅಭ್ಯಾಸಿಸುತ್ತಾ ಹೋದಂತೆಲ್ಲಾ ಅದರ ಭಾಷಾ ಪ್ರಭೇದಗಳ ಮತ್ತು ಉಪಸಂಸ್ಕೃತಿಗಳ ಅರಿವು ಉಂಟಾಗುತ್ತದೆ. ಈ ಹಂತ ಪ್ರಾರಂಭವಾಗುವದು ಓದು ಬರಹಗಳ ಕಲಿಕೆಯಿಂದ. ಪ್ರಾಥಮಿಕ ಕನ್ನಡಭಾಷಾ ಪಠ್ಯಗಳಲ್ಲಿ ಸಂಸ್ಕೃತಿಯ ಪಾಠಗಳನ್ನು, ಪದ್ಯಗಳನ್ನು ಕೊಟ್ಟಿರುತ್ತಾರೆ. **(ಉದಾಹರಣೆಗೆ ಪುಣ್ಯಕೋಟಿ ಪದ್ಯ ತರಗತಿ–೫)** ಆದರೆ ಈ ಉದ್ದೇಶದ ಹಿನ್ನೆಲೆಯಲ್ಲಿ ಬೋಧನೆ ನಡೆಯುತ್ತದೆ ಎಂದು ಹೇಳಲಾಗದು.

ಇಂದಿನ ಸಾಮಾಜಿಕ ರಚನಾ ವಿನ್ಯಾಸದ ವ್ಯವಸ್ಥೆಯಲ್ಲಿ ಮಕ್ಕಳಿಗೆ ಸಂಸ್ಕೃತಿಯ ತಿಳುವಳಿಕೆಯ ಕೊರತೆ ಇದೆ ಎಂಬ ಕೂಗು ಕೇಳಿ ಬರುತ್ತಿದೆ. ಹಾಗಾದರೆ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಇಂತಹ ಪಠ್ಯಕ್ರಮಗಳಿಲ್ಲವೇ? ಇದಕ್ಕೆಲ್ಲ ದೊರಕುವ ಉತ್ತರ, ಒಂದೆ ಪಠ್ಯಕ್ರಮವಿದೆ. ವ್ಯವಸ್ಥೆ ಸರಿಯಾಗಿಲ್ಲ ಎನ್ನುವ ಮಾತು ಸರ್ವೇ –ಸಾಮಾನ್ಯ. ಪಠ್ಯಕ್ರಮದ ವ್ಯವಸ್ಥೆಯಲ್ಲಿಯೂ ದೋಷಗಳು ಇವೆ ಎಂಬುದನ್ನು ಹೇಳಲಾಗುತ್ತದೆ. ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಲ್ಲಿ ಈ ಸಂಸ್ಕೃತಿಯನ್ನು ಬಲಪಡಿಸುವ ಸಲುವಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡು ಶಿಕ್ಷಣ

ವ್ಯವಸ್ಥೆಯಲ್ಲಿ ಬದಲಾವಣೆಗೆ ಶ್ರಮಿಸುವ ಪ್ರಯತ್ನ ನಡೆಸುತ್ತಾ ಬಂದಿವೆ. ಹಾಗಾದರೆ ಪಠ್ಯಕ್ರಮ ಮತ್ತು ಸರ್ಕಾರದ ಯೋಜನೆ ಎರಡರಲ್ಲಿಯೂ ಇದೆ ಎಂದಾಯ್ತು. ಹಾಗಾದರೆ ಏಕೆ ಇಂತಹ ಕೂಗು ಕೇಳಿ ಬರುತ್ತಿದೆ ಎಂಬುದನ್ನು ಯೋಚಿಸಬೇಕಾಗಿದೆ. ಮುಂದುವರಿದ ದೇಶ, ರಾಜ್ಯ ಎಂದು ಹೇಳಿಕೊಳ್ಳುವ ನಾವು ಸಂಸ್ಕೃತಿಯ ದೃಷ್ಟಿಯಿಂದ ಜನರುಗಳಲ್ಲಿ ಇಂತಹ ಮಾತುಗಳು ಏಕೆ ಕೇಳಿ ಬರುತ್ತಿವೆ? ಎಂಬುದನ್ನು ತಿಳಿಯಬೇಕಾಗಿದೆ. ಇಂದಿನ ಮಕ್ಕಳೇ ನಮ್ಮ ನಾಡಿನ ನಾಳಿನ ಪ್ರಜೆಗಳು ಎಂಬ ಮಾತು ಹಳೆಯ ವಿಚಾರ ಆದರೂ ಏಕೆ ಇಂದು ಭಯೋತ್ಪಾದನೆ, ನಕ್ಸಲ್ ದಾಳಿ ಚುಡಾಯಿಸುವಿಕೆ ಎಂಬ ಇತ್ಯಾದಿ ಸಾಮಾಜಿಕ ಕಳಂಕದ ಕೃತ್ಯಗಳಲ್ಲಿ ವಿದ್ಯಾರ್ಥಿಗಳು ಪಾಲ್ಗೊಳ್ಳುತ್ತಿದ್ದಾರೆ. ಅಷ್ಟೇ ಏಕೆ ಪ್ರಾಥಮಿಕ ಮತ್ತು ಪ್ರೌಢಶಾಲಾ ಮಗು ಸ್ನೇಹಿತನನ್ನು ಗುಂಡಿಟ್ಟು ಕೊಂದ, ಕೊಲ್ಲಲು ಪ್ರಯತ್ನಿಸಿದ ಎಂಬ ಅಪಾಯಕಾರಿ ಚಟುವಟಿಕೆಗಳ ಬಗ್ಗೆ ನಾವು ಇಂದಿನ ದಿನಪತ್ರಿಕೆಗಳಲ್ಲಿ ಕಾಣುತ್ತಿರುತ್ತೇವೆ. ಇದಕ್ಕೆ ಕಾರಣಗಳೇನು? ಎಂಬುದನ್ನು ನಾವೆಲ್ಲರೂ ಯೋಚಿಸಬೇಕಾಗಿದೆ. ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ನಾವು ಕಲಿಸುವ ರೀತಿಯಲ್ಲಿಯೇ ತೊಂದರೆ ಮತ್ತು ಕೊರತೆಗಳೆರಡು ಶಿಕ್ಷಣ ವ್ಯವಸ್ಥೆಯಲ್ಲಿ ಇದೆ ಎಂಬುದು ಸ್ಪಷ್ಟವಾಗುತ್ತದೆ. ಪ್ರಾಥಮಿಕ ಶಿಕ್ಷಣದ ಪಠ್ಯಗಳಲ್ಲಿ ಸಂಸ್ಕೃತಿಯ ವಿಚಾರ ಕೊಟ್ಟು ಬಿಟ್ಟರೆ ಕಲಿಕೆ ಆಗಬಲ್ಲದು ಎಂಬ ವಾತಾವರಣ ಇಂದಿನ ಶಾಲೆಗಳಲ್ಲಿ ಕಾಣುತ್ತಿಲ್ಲ. ಅವುಗಳನ್ನು ಬೋಧಿಸುವ ಶಿಕ್ಷಕರು ಮತ್ತು ಪೋಷಕರಿಬ್ಬರು ತಿಳಿಯಬೇಕಾಗಿದೆ. ಆಧುನಿಕತೆಯ ನಾಗರೀಕತೆಯಲ್ಲಿ ಪ್ರಗತಿಯ ದಾರಿಯನ್ನು ಶಿಕ್ಷಣ ವ್ಯವಸ್ಥೆಯಲ್ಲಿ ಪ್ರತಿಬಿಂಬಿಸುವ ನಾವುಗಳು ಸಂಸ್ಕೃತಿಯ ದೃಷ್ಟಿಯಿಂದ ಏಕೆ ಯೋಚನೆ ಮಾಡುತ್ತಿಲ್ಲ ಎಂಬುದನ್ನು ಅರಿಯಬೇಕಾಗಿದೆ. ವಿದ್ಯಾರ್ಥಿಯ ಚಾರಿತ್ರ್ಯವನ್ನು ನಿರ್ಮಿಸುವ ನಿಟ್ಟಿನಲ್ಲಿ ಬೋಧಕರ ಪಾತ್ರ ಪ್ರಮುಖವಾದುದಾಗಿದೆ. ಇದನ್ನು ಬೋಧಕರೇ ತಿಳಿಯಬೇಕು. ಪೋಷಕರು ಇದನ್ನು ಅರಿತು ವಿದ್ಯಾರ್ಥಿಗಳಲ್ಲಿ ಸಂಸ್ಕೃತಿಯ ಬೀಜ ಬಿತ್ತುವ ಪ್ರಯತ್ನ ನಡೆಯಬೇಕಾಗಿದೆ. ಇದನ್ನು ಸುಧಾರಿಸಲು ಶಿಕ್ಷಕರು ವೃತ್ತಿಯ ಬಗ್ಗೆ ಆಸಕ್ತಿ ಹಾಗೂ ತಾಳ್ಮೆಗಳೆರಡನ್ನು ನಿಯಂತ್ರಣದಲ್ಲಿಟ್ಟುಕೊಂಡಾಗ ಇದು ಸಾಧ್ಯ ಎಂದೆನಿಸುತ್ತದೆ. ಸೃಜನಶೀಲತೆಯ ಚಟುವಟಿಕೆಯಿಂದ ಬೋಧನೆಯ ಮೂಲಕ ಸಂಸ್ಕೃತಿಯನ್ನು ಮಕ್ಕಳಲ್ಲಿ ಕಾಣಬಹುದು.

ಸಂಸ್ಕೃತಿಯ ಬಗೆಗೆ ಇರುವ ಪಾಠವನ್ನು ಸಂಸ್ಕೃತಿಯ ಹಿನ್ನೆಲೆಯಲ್ಲಿಯೇ ಬೋಧಿಸಬೇಕಾಗಿದೆ. ಉದಾಹರಣೆಗೆ ಕನ್ನಡ ಕಸ್ತೂರಿ ಆರನೇ ತರಗತಿಯ ಪಠ್ಯಪುಸ್ತಕದ **೫ನೇ ಪುಟದಲ್ಲಿ ಸೌಜನ್ಯ** ಎಂಬ ಪಾಠವನ್ನು ಕೊಡಲಾಗಿದೆ. ಮಕ್ಕಳಿಗೆ ಸಂಸ್ಕೃತಿಯ ಬಗೆಗೆ ತಿಳಿಸುವ ಉದ್ದೇಶದಿಂದ ಈ ಪಾಠ ಕೊಟ್ಟಿದೆ. ಕರ್ತವ್ಯ ನಿಭಾಯಿಸುವ ಜವಾಬ್ದಾರಿ ಮನುಷ್ಯನದು. ಮನುಷ್ಯರೊಂದಿಗೆ ವರ್ತಿಸುವುದು ಕೂಡ ಈ ವರ್ತಿಸುವಿಕೆಯ ಸುಧಾರಣೆ ಎಂಬುದನ್ನು ಮನಗಾಣಬೇಕಿದೆ. ಸೌಜನ್ಯ ಮಾನವೀಯ ಸಂಬಂಧವನ್ನು ಅಪೇಕ್ಷಿಸುತ್ತದೆ. ಎಂಬುದು ಈ ಪಾಠದ ತಿರುಳು. ಆದರೆ ಇದನ್ನು ಅರ್ಥ ಮಾಡಿಕೊಂಡು ವಿದ್ಯಾರ್ಥಿಯ

ಮಾನಸಿಕ ಸಾಮರ್ಥ್ಯಕ್ಕೆ ಅನುಸಾರವಾಗಿ ಬೋಧನೆ ಮಾಡುವವರ ಸಂಖ್ಯೆ ಎಷ್ಟು ಎಂಬುದನ್ನು ಮನಗಾಣಬೇಕಾಗಿದೆ. ಇಂದಿನ ಶಿಕ್ಷಣದ ಬಹುಮುಖ್ಯ ಉದ್ದೇಶ ಇದಾಗಬೇಕಿದೆ. ಹಾಗಾದಾಗ ಮಾತ್ರ ಸಂಸ್ಕೃತಿಯ ಒಂದು ಭಾಗವಾದ ಸೌಜನ್ಯ ಪಾಠಕ್ಕೆ ಅರ್ಥ ಬರಲು ಸಾಧ್ಯ.

ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯ ಮತ್ತು ವಿಷಯಾಧಾರಿತ ಪಠ್ಯ, ಎರಡನ್ನು ಕ್ರೋಢೀಕರಿಸಿ ಹೇಳುವುದಾದರೆ ಶಿಕ್ಷಣದಲ್ಲಿನ ಕಲಿಸುವ ಭಾಷೆ ಐಚ್ಛಿಕ ಪಠ್ಯಗಳಲ್ಲಿ ಬರುವ ಪ್ರತಿಯೊಂದು ಹಂತಗಳು ಒಂದು ಸಂಸ್ಕೃತಿಯಿಂದ ನಡೆಯುತ್ತಿವೆ. ಆದರೆ ಭಾಷಾ ಶಿಕ್ಷಣ ಬಿಟ್ಟು ಸಂಸ್ಕೃತಿ ಇಲ್ಲ. ಇವೆಲ್ಲ ಸಂಸ್ಕೃತಿಯಲ್ಲಿ ಬರುವ ವಿವಿಧ ಆಯಾಮಗಳು. ಶಿಕ್ಷಣ, ಭಾಷೆ ಇವೆರಡು ಬಿಟ್ಟಂತೆ ಉಳಿದ ಸಂಸ್ಕೃತಿ ಯಾವುದು ಎಂದರೆ ಅದಕ್ಕೆ ಉತ್ತರ ಸಿಗಲಾರದು. ಇದು ಶಿಕ್ಷಣ ಮತ್ತು ಮಾತನಾಡುವ ಭಾಷೆಯಲ್ಲಿಯೇ ಬರುವಂತವುಗಳಾಗಿವೆ. ಆದ್ದರಿಂದ ಭಾಷೆ, ಶಿಕ್ಷಣ, ಚಾರಿತ್ರ್ಯ ಇತ್ಯಾದಿ ಅಂಶಗಳು ಸಂಸ್ಕೃತಿಯ ವಿವಿಧ ಮುಖಗಳು ಎಂದು ಹೇಳಬಹುದು.

## ೭.೯. ರಾಜ್ಯ, ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ತಿಳುವಳಿಕೆ

ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಲ್ಲಿ ಈ ಮೇಲಿನ ಅಂಶಗಳ ತಿಳುವಳಿಕೆಗಾಗಿ ಪಠ್ಯಕ್ರಮ ರಚನೆಯ ವ್ಯವಸ್ಥೆಯಲ್ಲಿ ಮಹತ್ತರವಾದ ಸ್ಥಾನ ಪಡೆದಿವೆ. ರಾಜ್ಯ, ರಾಷ್ಟ್ರದಲ್ಲಿ ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕವಾಗಿ ಸೇವೆ ಸಲ್ಲಿಸಿದವರ ಪರಿಚಯ ಹಾಗೂ ಕೊಡುಗೆಯನ್ನು ಪಠ್ಯಗಳ ರಚನೆಯಲ್ಲಿ ಕಾಣುತ್ತೇವೆ. ಜೊತೆಗೆ ನಾಡು, ನುಡಿಗಳ ವರ್ಣನೆ ಹಾಗೂ ನಾಡಹಬ್ಬಗಳ ಪರಿಚಯ, ಸಾಂಸ್ಕೃತಿಕ ನೆಲೆಗಟ್ಟಿನ ಹಿನ್ನೆಲೆಯಲ್ಲಿ ಪಠ್ಯಕ್ರಮ ರಚನೆಯಾಗಿದೆ. ಇದರ ಉದ್ದೇಶ ಮೇಲಿನ ಅಂಶಗಳ ತಿಳುವಳಿಕೆಯ ಜೊತೆಗೆ ವಿವಿದತೆಯಲ್ಲಿ ಏಕತೆಯನ್ನು ಬೆಳೆಸುವ ನಿಟ್ಟಿನಲ್ಲಿ ಪಠ್ಯಕ್ರಮಗಳು ರಚನೆಯಾಗಿವೆ. ಈ ಅಂಶಗಳನ್ನು ಕನ್ನಡ ಭಾಷಾ ಪಠ್ಯಪುಸ್ತಕಗಳಲ್ಲಿಯೂ ಕಾಣುತ್ತೇವೆ. ಉದಾಹರಣೆಗೆ : ಸಂಗೊಳ್ಳಿರಾಯಣ್ಣ (ತರಗತಿ–೫ ಪು.ಸಂ.೧೦) ಡಾ. ಸರ್ವಪಲ್ಲಿ ರಾಧಾಕೃಷ್ಣನ್ (ತರಗತಿ ೫ ೨ನೇ ಸೆಮಿಷ್ಟರ್ ಪು.ಸಂ ೧೧೫) ಭಾಷಾ ವೈವಿಧ್ಯ(ತರಗತಿ ೭ ಪು.ಸಂ೫೬) ಭಾರತ ಸೇವಾದಳ (ತರಗತಿ–೭ ಪು.ಸಂ .೩೩) ಹೀಗೆಯೆ ಹಲವು ತರಗತಿಗಳಲ್ಲಿ ರಾಜ್ಯ ರಾಷ್ಟ್ರೀಯ ತಿಳುವಳಿಕೆಗಾಗಿ ಪಠ್ಯಕ್ರಮ ರಚನೆಯಾಗಿದೆ. ಆದರೆ ಬೋಧನೆ ಮಾತ್ರ ಪಾಠಗಳ ಮೂಲ ಉದ್ದೇಶದ ಹಿನ್ನೆಲೆಯಲ್ಲಿ ನಡೆಯುವುದು ವಿರಳ. ಇದಕ್ಕೆ ಶಿಕ್ಷಕರೊಂದೇ ಕಾರಣರು ಎಂದು ಹೇಳಲು ಬರುವುದಿಲ್ಲ. ನಾವು ಕಲಿಸುವ ಕಲಿಕೆಯ ವ್ಯವಸ್ಥೆಯಲ್ಲಿನ ಈ ರೀತಿಯ ಪಠ್ಯಬೋಧನೆ ದೋಷಗಳೇ ಕಾರಣಗಳಾಗಿವೆ. ಇಂದು ನಾವು ರಾಜ್ಯದಲ್ಲಿ ಆಗಲಿ ರಾಷ್ಟ್ರದಲ್ಲಿ ಆಗಲಿ ಪ್ರಾಮಾಣಿಕವಾಗಿ ದೇಶ ಸೇವೆಯೇ ಈಶ ಸೇವೆ ಎಂಬುವವರ ಸಂಖ್ಯೆ ಕಡಿಮೆಯಾಗಿದೆ. ಇದಕ್ಕಾಗಿ ಮೊದಲು ಪ್ರತಿಯೊಬ್ಬ ಪ್ರಜೆಯು ಪ್ರಾಮಾಣಿಕನಾಗಿ ನಡೆದು ಸಾಮಾಜಿಕ ಸೇವೆಯಲ್ಲಿ

ವಿದ್ಯಾರ್ಥಿಗಳನ್ನು ತೊಡಗಿಸಿಕೊಳ್ಳುವುದು ಮುಖ್ಯ. ಸಂಸ್ಕೃತಿಯನ್ನು ಈ ರೀತಿಯಾಗಿ ಕಲಿಸುವುದರಿಂದ ಈ ಮೇಲಿನ ಅಂಶಗಳ ತಿಳುವಳಿಕೆ ಆಗಬಲ್ಲದು. ಇದರಿಂದಲೇ ಇಂದಿನ ಜಗತ್ತು ಭ್ರಷ್ಟಾಚಾರದ ದಾರಿಯಲ್ಲಿ ನಡೆಯುತ್ತಿರುವುದರಿಂದ ಇವುಗಳ ತಿಳುವಳಿಕೆಗಾಗಿ ಪ್ರಾಥಮಿಕ ಶಿಕ್ಷಣ ವ್ಯವಸ್ತೆಯಲ್ಲಿ ಸಮಗ್ರವಾಗಿ ಕಾರ್ಯನಿರ್ವಹಿಸುವಂತಹ ಶಿಕ್ಷಣದ ಅನಿವಾರ್ಯತೆ ಇಂದು ನಮ್ಮ ಸಮಾಜದಲ್ಲಿ ಅವಶ್ಯಕತೆ ಇದೆ. ಕನ್ನಡ ಭಾಷಾ ಪಠ್ಯಗಳಲ್ಲಿಯೂ ಭಾಷೆಯ ಆಯಾಮಗಳನ್ನು ನಾಡು ನುಡಿಯ ಚಿಂತನೆಯ ಹಿನ್ನೆಲೆಯಲ್ಲಿ ಪಾಠಗಳು ರಚನೆ ಆಗಬೇಕಿದೆ. ಬೋಧಿಸುವ ಕ್ರಮಗಳು ಸದೃಢವಾಗುವುದರ ಜೊತೆಗೆ ಪ್ರಾಮಾಣಿಕತೆಯ ಪರಿಕಲ್ಪನೆ ಇಂದಿನ ಶಿಕ್ಷಣ ವ್ಯವಸ್ತೆಗೆ ಅಗತ್ಯವಾಗಿದೆ. ಇದರಿಂದ ಸಂಸ್ಕೃತಿಯು ಉಳಿಯುತ್ತದೆ ಪ್ರಮಾಣಿಕತೆಯು ಬರುತ್ತದೆ.

## ೭.೧೦. ಮುದ್ರಣ

ಯಾವುದೇ ಪಠ್ಯಪುಸ್ತಕ ರಚನೆಯಲ್ಲಿ ಮುದ್ರಣದ ವ್ಯವಸ್ಥೆ ಮುಖ್ಯ. ಮುದ್ರಣ ಆಕರ್ಷಣೀಯವಾಗಿ ಸ್ಪಷ್ಟವಾಗಿ ಅಂದವಾಗಿ ಇದ್ದಲ್ಲಿ ಪಠ್ಯಪುಸ್ತಕ ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ ಓದುಗರಿಗೆ ಆಸಕ್ತಿದಾಯಕವಾಗಬಲ್ಲದು. ಪುಸ್ತಕದ ಮೌಲ್ಯ, ವಿಷಯ, ವಿಚಾರ, ಅರ್ಥಪೂರ್ಣ ಗ್ರಹಿಸುವಿಕೆಗೆ ಸಹಾಯಕವಾಗಬಲ್ಲದು. ಮುದ್ರಣ ದೋಷವಾದರೆ ಅರ್ಥದಲ್ಲಿ ವ್ಯತ್ಯಾಸವಾಗುತ್ತದೆ. ಉದಾಹರಣೆಗೆ ಪಠ್ಯಗಳಲ್ಲಿ **ಉಗುರುಗಳನ್ನು ಕಡಿಯಬಾರದು ಕತ್ತರಿಸಬೇಕು** ಎಂಬ ನೀತಿ ಪಾಠವನ್ನು ಹೇಳಲು ಪಠ್ಯಕ್ರಮದಲ್ಲಿ ಮುದ್ರಿಸಿದೆ ಎಂದು ಕೊಳ್ಳೋಣ. ಮುದ್ರಣ ದೋಷದಿಂದ **'ಉ'** ಎಂಬ ಮೊದಲ ಅಕ್ಷರ ಮುದ್ರಿತವಾಗದಿದ್ದರೆ **ಗುರುಗಳನ್ನು ಕಡಿಯಬಾರದು ಕತ್ತರಿಸಬೇಕು** ಎಂದಾಗುತ್ತದೆ. ಇದರಿಂದ ಆಗುವ ಅನಾಹುತವೇ ಬೇರೆ ಎಂದು ನೆನಪಿನಲ್ಲಿಟ್ಟುಕೊಳ್ಳುವುದು ಮುಖ್ಯ. ಮುದ್ರಣ ಆಕರ್ಷಣೆಯಲ್ಲಿ ಮತ್ತು ಅಕ್ಷರಗಳ ದೋಷಗಳು ಕಂಡು ಬಂದರೆ ಪುಸ್ತಕ ಪರಿಪೂರ್ಣವಾಗಲಾರದು. ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಲ್ಲಿ ಪಠ್ಯಪುಸ್ತಕ ರಚನಾ ಸಮಿತಿಯವರು ಇದರ ಬಗ್ಗೆ ಗಮನ ನೀಡುವುದು ಬಹಳ ಮುಖ್ಯವಾದುದು ಎಂದೇ ಹೇಳಬಹುದು. ಆದರೆ ಇಂದಿನ ಪಠ್ಯಪುಸ್ತಕಗಳು ಆಂತರಿಕವಾಗಿ ಮತ್ತು ಬಾಹ್ಯವಾಗಿ ಎರಡರಲ್ಲಿಯೂ ಆಕರ್ಷಣೀಯವಾಗಿರುವಲ್ಲಿ ವಿಫಲವಾಗಿವೆ. 'ಆಂತರಿಕ ಮತ್ತು ಬಾಹ್ಯವಾಗಿ ಎರಡರಲ್ಲಿಯೂ ಪಠ್ಯಪುಸ್ತಕಗಳು ದೋಷಗಳನ್ನು ಒಳಗೊಂಡಿದೆ ಎಂದು ನಿದರ್ಶನಗಳ ಮೂಲಕ ತೋರಿಸಬಹುದು.

**ಎ.ಎಸ್. ನಂಜುಂಡಸ್ವಾಮಿ ಬರೆದಿರುವ ಭಾಷಾ ಬೋಧನೆ ಪಠ್ಯಪುಸ್ತಕದಲ್ಲಿನ 'ಪಠ್ಯಪುಸ್ತಕ** ಎಂಬ ಲೇಖನದಲ್ಲಿ **(ಪು.ಸಂ.೧೪೩, ೧೪೪)** ಈ ರೀತಿಯಾಗಿ ಅಭಿಪ್ರಾಯ ಪಡುತ್ತಾರೆ. "ಪುಸ್ತಕಗಳ ಆಯ್ಕೆಯಲ್ಲಿ ಅವುಗಳ ಬಾಹ್ಯ ಸ್ವರೂಪಕ್ಕೂ ಆಂತರಿಕ ಸ್ವರೂಪಕ್ಕೂ ಗಮನ ಕೊಡಬೇಕು. ಆಂತರಿಕ ಸ್ವರೂಪವೆಂದರೆ ಪುಸ್ತಕದಲ್ಲಿ ಕೊಟ್ಟಿರುವ ವಿಷಯ ಬಳಸಿರುವ

ಭಾಷೆ, ಬರೆದಿರುವ ಶೈಲಿ ಮುಂತಾದವು ಸೇರಿವೆ. ಪರಿವಿಡಿಯು ಮಗುವಿನ ಅಭಿರುಚಿಗೆ ತಕ್ಕಂತೆ ಇರಬೇಕಲ್ಲದೆ, ಜೀವನಕ್ಕೆ ಸಂಬಂಧಿಸಿದುದಾಗಿರಬೇಕು. ಅವರ ಅರ್ಥಗ್ರಹಣ ಶಕ್ತಿಗೆ ಮೀರಿದ ಪದಗಳನ್ನು ಉಪಯೋಗಿಸ ಕೂಡದು. ವಾಕ್ಯಗಳು ಸಹ ಅನಾವಶ್ಯಕವಾಗಿ ದೀರ್ಘವಾಗಿ ಅಥವಾ ಕ್ಲಿಷ್ಟವಾಗಿರ ಕೂಡದು. ಭಾಷೆಗೆ ಸಂಬಂಧಿಸಿದ ಅಂಶಗಳನ್ನು ಅವುಗಳ ಉಪಯುಕ್ತತೆ ಹಾಗೂ ಸರಳತೆಗಳಿಗನುಸಾರವಾಗಿ ಪಠ್ಯಪುಸ್ತಕದಲ್ಲಿ ಅಳವಡಿಸಬೇಕು. ಸುಲಭವಾದ ಪದಗಳನ್ನು ಮೊದಲು ಬಳಸಿ, ಕ್ರಮೇಣ ಕಠಿಣವಾದ ಶಬ್ಧಗಳನ್ನು ಸೇರಿಸುತ್ತಾ ಹೋಗಬೇಕು. 'ಪಠ್ಯಪುಸ್ತಕದ ಬಾಹ್ಯ ಸ್ವರೂಪವೆಂದರೆ ಅದರ ಆಕಾರ, ಅಂದ ಚೆಂದಗಳು ಪಠ್ಯಪುಸ್ತಕದ ರಕ್ಷಾ ಕವಚವು ದಪ್ಪದಾದ ರಟ್ಟಿನಿಂದಾಗಿದ್ದರೆ ಉತ್ತಮ.' ಅದು ಆಕರ್ಷಣೀಯವಾದ ಬಣ್ಣ ಚಿತ್ರಗಳಿಂದ ಕೂಡಿರುವುದು ಅಗತ್ಯ. ನುಣುಪಾದ ಬಿಳಿಯ ಕಾಗದವನ್ನು ಪಠ್ಯಪುಸ್ತಕಗಳ ತಯಾರಿಕೆಯಲ್ಲಿ ಉಪಯೋಗಿಸುವುದು ಅಪೇಕ್ಷಣೀಯ, ಮುದ್ರಣವು ಸೊಗಸಾಗಿರಬೇಕು. ಪಠ್ಯಪುಸ್ತಕಗಳ ಬೆಲೆಯೂ ಸಹ ದುಬಾರಿಯಾಗಿರಬಾರದು. ಒಟ್ಟಿನಲ್ಲಿ ಪಠ್ಯಪುಸ್ತಕವು ಮೌಖಿಕ ಕೆಲಸ ವಾಕ್ಯ ರಚನೆ, ವ್ಯಾಕರಣ, ಕಾವ್ಯಾಭ್ಯಾಸ ಮುಂತಾದವುಗಳಿಗೆ ಸಹಾಯಕವಾಗಿರಬೇಕು. ಇವರ ಮಾತುಗಳನ್ನು ಗಮನಿಸಿದಾಗ ಸಿಗುವ ಈ ವಿವರಣೆ ಪ್ರಾಥಮಿಕ ಪಠ್ಯಗಳ ರಚನೆ ವ್ಯವಸ್ಥೆಯಲ್ಲಿ ಮುಖ್ಯವೆನಿಸುತ್ತದೆ. ಈ ಹಿನ್ನೆಲೆಯಲ್ಲಿ ರಚನೆಯಾದ ಪಠ್ಯಗಳು ಭಾಷಾ ಬೋಧನೆ ದೃಷ್ಟಿಯಿಂದ ಒಳ್ಳೆಯ ಪಠ್ಯಗಳೆಂದು ಕರೆಸಿಕೊಂಡರು ಇದು ರಚನೆಯನ್ನು ಮಾತ್ರ ಹೇಳಿಕೊಡುವ ಪ್ರಯತ್ನ ನಡೆದಿದೆ ಎಂಬ ಆಪಾದನೆಗೆ ಗುರಿಯಾಗಬಹುದು. ಆದರೂ ಇದು ಪಠ್ಯದ ಅಳವಡಿಕೆಯಿಂದ ಆಂತರಿಕ ಮತ್ತು ಬಾಹ್ಯ ರಚನೆಗಳೆರಡರಲ್ಲೂ ಇದನ್ನು ಅಳವಡಿಸಿಕೊಂಡು ರಚನೆಯಾಗಿದೆ ಎಂದು ಹೇಳಲಾಗುತ್ತಿದೆ. ಆದರೆ ಪ್ರಾಥಮಿಕ ಕನ್ನಡ ಭಾಷಾ ಪಠ್ಯಗಳನ್ನು ಗಮನಿಸಿದಾಗ ಸ್ಪಷ್ಟವಾಗುವುದಿಲ್ಲ. ಈ ಹಿನ್ನೆಲೆಯ ದೃಷ್ಟಿಯಿಂದಲೇ ಈ ಅಧ್ಯಯನ ಪ್ರಾರಂಭದಿಂದಲೇ ಇದರ ಚರ್ಚೆಯನ್ನು ಮಾಡುತ್ತಾ ಬಂದಿರುವುದನ್ನು ಕಾಣುತ್ತೇವೆ. ಅಲ್ಲದೇ ಈ ಎಲ್ಲಾ ಕನ್ನಡ ಭಾಷಾ ಪಠ್ಯಗಳಲ್ಲಿನ ಮುದ್ರಣದ ದೋಷಗಳ ಪಟ್ಟಿಯನ್ನು ಈ ಕೆಳಗಿನಂತೆ ಕೊಡಲಾಗಿದೆ.

| ಕ್ರ.ಸಂ. | ತರಗತಿ | ಪು.ಸಂ. | ಮುದ್ರಣದೋಷ | ಸರಿಯಾದ ರೂಪ |
|---|---|---|---|---|
| ೧. | ೦೧ | ೩೫ | ಔ, ಡ | ಓ, ಔ, ಡ |
| | | | ಶ, ಲ | ಳ, ಶ, ಲ |
| ೨. | ೦೧ | ೪೯ | ಯೋಗವಾಹಗಳು | ಯೋಗವಾಹಕಗಳು |
| ೩. | ೦೧ | ೫೯ | ಕರಿ ಕುರಿಮರಿ | ಕರಿಕುರಿಮರಿ |
| ೪. | ೦೧ | ೭೧ | ಹಡು ಹೇಳಿ | ಹಾಡುಹೇಳಿ |

| ೫. | ೧ರಿಂದ | ೭ನೇ ತರಗತಿ | ಉಚ್ಚಲ | ಉಚ್ಚಲ |
|---|---|---|---|---|
| ೬. | ೦೨ | ೩೬ | 'ರಾಜು ಎಲ್ಲಿ ನಿನ್ನ ತಂಗಿ'? | ರಾಜು,ಎಲ್ಲಿ ನಿನ್ನ ತಂಗಿ?" |
| ೭. | ೦೨ | ೯೬ | ನೋಣಗಳು | ನೊಣಗಳು |
| ೮. | ೦೨ | ೯೭ | ಯಾವ ಪ್ರಶ್ನೆಗಳು ಎಂದು ಕೊಟ್ಟಿಲ್ಲ | ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿರಿ |
| ೯. | ೦೩ | ೦೬ | ಪೀಡಿ | ಪೀಡಿಸು |
| ೧೦. | ೦೩ | ೦೬ | ಮೂದಲಿ | ಮೂದಲಿಸು |
| ೧೧. | ೦೩ | ೧೬ | (ಪುಟಸಂಖ್ಯೆ ಪ್ರಶ್ನೆ ಸಂಖ್ಯೆ ೮ ಮೂಡಿಲ್ಲ) ಎಂದು ಕೊಡಲಾಗಿದೆ. | ೭ ಎಂದಾಗಬೇಕು |
| ೧೨. | ೦೩ | ೩೬ | (ಪುಟ ಸಂಖ್ಯೆ ಮಂ ಮೂಡಿಲ್ಲ) | ಮಂಜು |
| ೧೩. | ೦೩ | ೬೧ | ಹಬ್ಬ ದು | ಹಬ್ಬದಂದು |
| ೧೪. | ೦೩ | ೬೨ | ಪ್ರಶ್ನೆ ಸಂಖ್ಯೆ ೩.೩ ಎಂದು ಕೊಟ್ಟಿದೆ | ೪ ಎಂದಾಗಬೇಕು |
| ೧೫. | ೩೪ | ೬೪ | ಹೇಳುರ | ಹೇಳುವವರ |
| ೧೬. | ೦೩ | ೭೯ | ಚಕ್ರವತಿ | ಚಕ್ರವರ್ತಿ |
| ೧೭. | ೦೪ | ೫೩ | ಕೊಟ್ಟಿರುವ ಸಜಾತಿ, ಗಮನಿಸಿ ಓದಿ.ಕೊಟ್ಟಿರುವ ಒಗಟು, ಇತ್ಯಾದಿ ಪದಗಳು ಸರಿಯಾಗಿ ಕಾಣುತ್ತಿಲ್ಲ. | ಸರಿಪಡಿಸಬೇಕಿದೆ |
| ೧೮. | ೦೪ | ೭೧-೭೨ | ಅಭ್ಯಾಸ ಮತ್ತು ಕ್ರಮಸಂಖ್ಯೆ ೧ರ ಪ್ರಶ್ನೆ ಎರಡು ಬಾರಿ ಮುದ್ರಣಗೊಂಡಿದೆ. | ೧ನ್ನು ತೆಗೆದು ಹಾಕಬೇಕು |

| | | | | |
|---|---|---|---|---|
| ೧೯. | ೦೫ | ೨೦ | ಪ್ರಶ್ನೆ ಸಂಖ್ಯೆ ೨.೨ ಎಂದು ಎರಡು ಬಾರಿ ಮುದ್ರಣಗೊಂಡಿದೆ. | ೨.೩ ಎಂದಾಗಬೇಕು |
| ೨೦. | ೦೫ | ೪೮ | ಪ್ರಶ್ನೆ ಸಂಖ್ಯೆ ೩.೩ ಎಂದು ಎರಡು ಬಾರಿ ಮುದ್ರಣಗೊಂಡಿದೆ. | ೩.೪ ಎಂದಾಗಬೇಕು |
| ೨೧. | ೦೫ | ೫೦ | ಶಾಂತಿ ಅಂಗಡಿಯಲ್ಲಿ ಇಲಿಯನ್ನು ಕಂಡಳು | ಶಾಂತಳು ಅಂಗಡಿಯಲ್ಲಿ ಇಲಿಯನ್ನು ಕಂಡಳು. |
| ೨೨. | ೦೬ | ೪೧ | ಮಯಾತಂತ್ರ | ಮಾಯತಂತ್ರ |
| ೨೩. | ೦೬ | ೫೦ | ಸ್ಕೌಟ್ಸ್ ಗೈಡ್ಸ್ ಪ್ರತಿಜ್ಞಾವಾಕ್ಯ ಬರದು ತರತಿಯಲ್ಲಿ ರಾಗು ಹಾಕಿ | ಸರಿಪಡಿಸಬೇಕು |
| ೨೪. | ೦೬ | ೮೦ | ದಿವಾ, ೯ಸಗಾರ | ದಿವಾನ, ಮೋಸಗಾರ |
| ೨೫. | ೦೬ | ೯೭ | ಸೇವೆ ಸಲ್ಲಿಸಿತಂತೆ | ಸೇವೆ ಸಲ್ಲಿಸಿದಂತೆ |
| ೨೬. | ೦೬ | ೯೯ | 'ನಮ್ಮ ಜನರು,' ನಮ್ಮನಾಡು' ಭಾವನೆಯನ್ನು ಕನ್ನಡ ಭಾಷೆ ಹೇಗೆ ಹುಟ್ಟಿಸಿ | 'ನಮ್ಮ ಜನರು,' ನಮ್ಮನಾಡು' ಭಾವನೆಯನ್ನು ಕನ್ನಡ ಭಾಷೆ ಹೇಗೆ ಹುಟ್ಟಿಸುತ್ತದೆ |
| ೨೭. | ೦೬ | ೧೧೯ | ಹಣೆಗೆ ಇಡುವ ತಿಲಕ ಬೊಟು | ಹಣೆಗೆ ಇಡುವ ತಿಲಕದ ಬೊಟ್ಟು |
| ೨೮. | ೦೬ | ೧೨೫ | ಗಮನಿ | ಗಮನಿಸಿ |
| ೨೯. | ೦೭ | ೩೭ | ಲಕ್ಯ | ಲಕ್ಷ |
| ೩೦. | ೦೭ | ೭೯ | ಚನ್ನಾಗಿ | ಚೆನ್ನಾಗಿ |

| | | | | |
|---|---|---|---|---|
| ೩೧. | ೦೭ | ೭೭ | | ಪ್ರಶ್ನೆಗೆ ಸಂಬಂಧಿಸಿದಂತೆ ಪದ ಕೊಡ ಬೇಕಿದೆ'ನಳಿನ' ಎಂಬ ಪದ ಕೊಡಬಹುದು. |
| ೩೨. | ೦೭ | ೮೦ | ಪಾಠದ ಎರಡು ಸಾಲುಗಳು ಸಂಪೂರ್ಣವಾಗಿ ಮುದ್ರಣಗೊಂಡಿಲ್ಲ. | ಪಾಠಕ್ಕೆ ಸಂಬಂಧಿಸಿದ ಸಾಲುಗಳು ಮುದ್ರಣವಾಗಬೇಕಿದೆ. |
| ೩೩. | ೦೭ | ೧೦೮ | ಪ್ರಶ್ನೆ ೨ರಲ್ಲಿ ಬಹು ಆಯ್ಕೆ ಪ್ರಶ್ನೆ ಯಾಗಿದ್ದು ೩, ೪ ಪ್ರಾಣಿಧರ್ಮ, ಎಂದು ಎರಡು ಆಯ್ಕೆಗಳಿಗು ಒಂದೇ ಉತ್ತರ ಕೊಡಲಾಗಿದೆ | ೪ನೇ ಬಹು ಆಯ್ಕೆ ಉತ್ತರ ಬದಲಾಗಬೇಕಿದೆ |
| ೩೪. | ೦೭ | ೧೩೮ | 'ಪದ್ಯದಿಂದ' ಎಂಬ ಪದ ಸರಿಯಾಗಿ ಮುದ್ರಣವಾಗಿಲ್ಲ | |
| ೩೫. | ೦೭ | ೧೪೫ | ಬರೆಹದಲ್ಲೀ | ಬರಹದಲ್ಲೂ |
| ೩೬. | ೦೭ | ೧೮೨ | ಛಂದಶ್ಯಾಸ್ತ | ಛಂದಶಾಸ್ತ್ರ |
| ೩೭. | ೦೭ | ೧೯೯ | ಪಾಂಡವರಲಿ | ಪಾಂಡವರಲ್ಲಿ |
| ೩೮. | ೦೧ರಿಂದ೦೭ | ೧೯೯ | ಕೆಲವು ಭಾಗಗಳಲ್ಲಿ ಪುಟ ಸಂಖ್ಯೆಗಳು ಮೂಡಿರುವುದಿಲ್ಲ. | ಪುಟ ಸಂಖ್ಯೆಯನ್ನು ಕೊಡಬೇಕಿದೆ. |

## ೭.೧೧. ಲೇಖನ ಚಿಹ್ನೆಗಳ ಬಳಕೆ

ಮಾತನಾಡುವಾಗ ವಾಕ್ಯಗಳ ಹಾಗೂ ವಾಕ್ಯ ಭಾಗಗಳ ನಡುವೆ ಸ್ವಲ್ಪ ವಿರಾಮವನ್ನು ಕೊಡುತ್ತೇವೆ. ಕಾರಣ ನಮ್ಮ ಆಲೋಚನೆ ಅಭಿಪ್ರಾಯಗಳು ಕೇಳುವವರಿಗೆ ಸ್ಪಷ್ಟವಾಗಿ

ಅರ್ಥವಾಗಲೆಂದು. ಇನ್ನು ಕೆಲವೊಮ್ಮೆ ಮಾತಿನ ವಿಶಿಷ್ಟ ಅರ್ಥಚರ್ಯಗಳನ್ನು ಧ್ವನಿಯ ಏರಿಳಿತಗಳಿಂದಲೇ ವ್ಯಕ್ತಪಡಿಸುತ್ತೇವೆ. ಈ ಪ್ರಕ್ರಿಯೆ ಬರವಣಿಗೆಯಲ್ಲೂ ಬಳಕೆಯಲ್ಲಿದೆ. ಅಂದರೆ ನಾವು ಹೇಳುವ ಉದ್ದೇಶಗಳನ್ನು ಇನ್ನೊಬ್ಬರಿಗೆ ಸ್ಪಷ್ಟಪಡಿಸಲು ಕೆಲವು ಲೇಖನ ಚಿಹ್ನೆಗಳನ್ನು ಬಳಸುತ್ತೇವೆ. ಜೊತೆಗೆ ಭಾವನೆಗಳನ್ನು ಸೂಚಿಸಲು, ಮತ್ತೊಬ್ಬರ ಮಾತುಗಳನ್ನು ವಾಕ್ಯಗಳಲ್ಲಿ ಅಳವಡಿಸಲು, ವಿವರಣೆ ಮತ್ತು ಪೂರಕ ಮಾಹಿತಿ ನೀಡಲು, ಲೇಖನಚಿಹ್ನೆಗಳು ಬರಹದಲ್ಲಿ ಮಹತ್ತರವಾದ ಪಾತ್ರವನ್ನು ವಹಿಸುತ್ತವೆ. ಅನೇಕ ಸಂದರ್ಭಗಳಲ್ಲಿ ಒಂದು ಪ್ಯಾರದಲ್ಲಿ ವಿವರಿಸುವ ಮಾಹಿತಿಯ ಕೆಲಸವನ್ನು ಒಂದೇ ಲೇಖನ ಚಿಹ್ನೆ ನಿರ್ವಹಿಸುತ್ತದೆ.

ನಮ್ಮ ಸಾಮಾಜಿಕ ಸಂವಹನ ಪರಿಣಾಮಕಾರಿ ಆಗಬೇಕಾದರೆ ನಮ್ಮ ವಿವರಣೆಯಲ್ಲಿ ಚುಕ್ಕೆ, ಗೆರೆ, ಆವರಣ, ಮುಂತಾದವುಗಳನ್ನು ಬಳಸಿದಾಗ ಓದುಗರಿಗೆ ವಿಷಯ ಸುಲಭವಾಗಿ ಅರ್ಥವಾಗುತ್ತದೆ. ಬರೆಯುವವರು ತಮಗೆ ತೋಚಿದ ರೀತಿಯಲ್ಲಿ ಚಿಹ್ನೆಗಳನ್ನು ಬಳಸಿದರೆ ಓದುಗರಿಗೆ ಗೊಂದಲ ಅನುಮಾನಗಳು ಉಂಟಾಗುತ್ತವೆ. ಅಲ್ಲದೆ ಚಿಹ್ನೆಗಳ ಬಳಕೆ ಸರಿಯಾಗಿ ನಡೆಯದಿದ್ದರೆ ಅರ್ಥ ಪರಿಪೂರ್ಣವಾಗಿ ಬದಲಾಗಬಹುದು.

**ಉದಾಹರಣೆಗೆ :** Kill him, not Leave **(ಕೊಲ್ಲು ಬಿಡ ಬೇಡ)** **Kill him not, Leave him(ಕೊಲ್ಲಬೇಡ ಬಿಡು ಅವನನ್ನು) ಎಂದಾಗುತ್ತದೆ.** ಈ ಎರಡು ವಾಕ್ಯಗಳಲ್ಲಿನ ಪದಗಳು ಒಂದೇಯಾಗಿದ್ದರೂ ಲೇಖನ ಚಿಹ್ನೆಗಳ ಬಳಕೆಯಲ್ಲಿ ಬದಲಾವಣೆ ಇರುವುದರಿಂದ ಅರ್ಥದಲ್ಲಿ ಬದಲಾವಣೆಯಾಗಿರುವುದು ಈ ವಾಕ್ಯಗಳಿಂದ ಸ್ಪಷ್ಟವಾಗುತ್ತದೆ. ಈ ದೃಷ್ಟಿಯಿಂದ ಲೇಖನ ಚಿಹ್ನೆಗಳು ಬರವಣಿಗೆಯಲ್ಲಿ ಮಹತ್ತರವಾದ ಪಾತ್ರವಹಿಸಿರುವುದನ್ನು ಕಾಣಬಹುದಾಗಿದೆ. ಪ್ರಸ್ತುತ ಅಧ್ಯಯನದಿಂದ ಕನ್ನಡಭಾಷಾ ಪಠ್ಯಪುಸ್ತಕಗಳಲ್ಲಿ ಲೇಖನ ಚಿಹ್ನೆಗಳನ್ನು ಪ್ರತ್ಯೇಕವಾಗಿ ಬೋಧನೆ ಮಾಡದೇ ಪರೋಕ್ಷವಾಗಿ ಅವುಗಳ ಅಸ್ತಿತ್ವವನ್ನು ಬೋಧನೆ ಮಾಡುತ್ತಾ ಬಂದಿರುವುದು ತಿಳಿದು ಬರುತ್ತದೆ. ಕಿರಿಯ ಪ್ರಾಥಮಿಕ ಶಾಲಾ ಮಕ್ಕಳಿಗೆ ಲೇಖನ ಚಿಹ್ನೆಗಳ ಕಲಿಕೆ ಅನಗತ್ಯವೆನಿಸಿದರೂ ಹಿರಿಯ ಪ್ರಾಥಮಿಕ ಹಂತದಲ್ಲಿ ಲೇಖನ ಚಿಹ್ನೆಗಳು ಪ್ರಾಥಮಿಕ ಹಂತದಲ್ಲಿ ಲೇಖನಚಿಹ್ನೆಗಳ ಪ್ರಾಥಮಿಕ ತಿಳುವಳಿಕೆ ಅಗತ್ಯತೆ ಇದೆ ಎಂದರೆ ತಪ್ಪಾಗಲಾರದು. ಆದರೆ ಇದನ್ನು ಬೋಧಿಸುವ ಶಿಕ್ಷಕರು ಬೋಧನೆಯಲ್ಲಿ ಖಚಿತತೆ ಇರಬೇಕಾಗುತ್ತದೆ. ಚಾರಿತ್ರಿಕವಾಗಿ ಕನ್ನಡಭಾಷಾ ಪಠ್ಯಪುಸ್ತಕಗಳನ್ನು (ಅಧ್ಯಯನ ಸಂದರ್ಭದಲ್ಲಿ ದೊರೆತ ಪಠ್ಯಪುಸ್ತಕಗಳ ಆಧಾರಿತವಾಗಿ) ಅವಲೋಕಿಸಿದಾಗ ಪಾಠಕ್ಕೂ ವ್ಯಾಕರಣದ ಭಾಗಕ್ಕೂ ಬಳಕೆ ಮಾಡಿದ ಲೇಖನ ಚಿಹ್ನೆಗಳಿಗೂ ಸಾಮ್ಯತೆ ಇದೆ. ಅಲ್ಲದೆ ಈ ಮೂರು ಮುಖ್ಯ ಅಂಶಗಳ ಮೂಲಕ ಕಲಿಸುತ್ತಿರುವುದು ಸ್ಪಷ್ಟವಾಗುತ್ತದೆ. ಸಮಕಾಲೀನ ಕನ್ನಡ ಪಠ್ಯಪುಸ್ತಕಗಳನ್ನು ಗಮನಿಸಿದಾಗ ಪಾಠ, ಪದ್ಯದಲ್ಲಿ ಬಳಕೆಯಲ್ಲಿರುವ ಲೇಖನ ಚಿಹ್ನೆಗಳನ್ನು ವ್ಯಾಕರಣದ ಭಾಗದಲ್ಲಿ ನೀಡಿರುವುದು ಸ್ವಾಗತಾರ್ಹವಾಗಿದೆ. ಆದರೆ ಇವುಗಳ ಬಗ್ಗೆ ಸಂಕ್ಷಿಪ್ತ ವಿಧಾನದ ಮೂಲಕ ಕಲಿಸುವಲ್ಲಿ ಭಾಷಾ ಪಠ್ಯಗಳು ಸೋತಿವೆ. ಅವುಗಳ ರಚನೆಯನ್ನು ಕೊಡಲಾಗಿದೆ.

ಆದರೆ ಸಂಕ್ಷಿಪ್ತವಾಗಿ ಪರಿಚಯ ಮಾಡಿಸುವ ಕೆಲಸ ನಡೆದಿಲ್ಲ. ಉದಾ : ಹೇಳುವುದಾದರೆ ೭ನೇ ತರಗತಿ ಪುಟ ಸಂಖ್ಯೆ ೧೫೧ರಲ್ಲಿ ಲೇಖನ ಚಿಹ್ನೆಗಳನ್ನು ಗಮನಿಸಿ ಉಪಯೋಗಿಸುವ ವಿಧಾನ ನೆನಪಿಸಿಕೊಳ್ಳಿ ಎಂದು ಕೇಳಲಾಗಿದೆ. ಅದನ್ನು ಈ ಕೆಳಗಿನಂತೆ ಕೊಡಲಾಗಿದೆ.

| . |
|---|
| , |
| : |
| ; |
| ? |
| ! |
| ' ' |
| " " |

ಇಲ್ಲಿ ಕೊಡಮಾಡಲ್ಪಟ್ಟ ಲೇಖನ ಚಿಹ್ನೆಗಳಲ್ಲಿ ಪೂರ್ಣವಿರಾಮ (.) ಅಲ್ಪವಿರಾಮ(,) ಪ್ರಶ್ನಾರ್ಥಕ ಚಿಹ್ನೆ (?) ಹೆಚ್ಚೆಂದರೆ ಆಶ್ಚರ್ಯಕಚಿಹ್ನೆ (!) ಗುರುತಿಸಬಲ್ಲರು. ಆದರೆ ಮಕ್ಕಳು ಈ ಮೇಲಿನ ಲೇಖನ ಚಿಹ್ನೆಗಳ ಹೆಸರನ್ನು ಗುರುತಿಸಬಲ್ಲರೇ ಹೊರತು ಅವುಗಳ

ಬಳಕೆಯ ವಿಧಾನವನ್ನು ಕಲಿಯಲಾರರು. ಇಲ್ಲಿ ಹೇಳಿ ಕೊಡುವ ಪ್ರಯತ್ನಗಳು ಸಹ ತುಂಬಾ ಕಡಿಮೆ ಎಂದೇ ಹೇಳಬಹುದು. ಆದ್ದರಿಂದ ಹಿರಿಯ ಪ್ರಾಥಮಿಕ ಕನ್ನಡ ಭಾಷಾ ಪಠ್ಯಗಳಲ್ಲಿ ಲೇಖನ ಚಿಹ್ನೆಗಳ ಬಗ್ಗೆ ಪ್ರಾಥಮಿಕ ತಿಳುವಳಿಕೆ ನೀಡುವ ಅಗತ್ಯತೆ ಇದೆ ಎಂದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಇದರ ಜೊತೆಗೆ ಕೆಲವು ತರಗತಿಗಳ ಪಠ್ಯಗಳಲ್ಲಿ ಲೇಖನ ಚಿಹ್ನೆಗಳ ಬಳಕೆಯಲ್ಲಿ ಲೋಪವಾಗಿರುವುದು ಕಂಡು ಬರುತ್ತದೆ. ಅಂತಹ ನಿದರ್ಶನಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಕನ್ನಡ ಶೈಲಿ, ಕೈಪಿಡಿ(ಸಂ. ಕೆ.ವಿ. ನಾರಾಯಣ)ಯಲ್ಲಿ ಉದ್ಧರಿತ ವಾಕ್ಯದ ಕೊನೆಯಲ್ಲಿ ಪೂರ್ಣ ವಿರಾಮವನ್ನು ಬಳಸಿ ಅನಂತರ ಉದ್ಧರಣ ಚಿಹ್ನೆಯನ್ನು ಹಾಕಬೇಕು ಎಂದು ಹೇಳಿದೆ. ಆದರೆ ಕನ್ನಡಭಾಷಾ ಪಠ್ಯಗಳ ಕೆಲವು ತರಗತಿಗಳ ಪಠ್ಯಗಳಲ್ಲಿ ಇದನ್ನು ಅನುಸರಿಸಿಲ್ಲ. ಉದಾ: ತರಗತಿ ೩ ಪುಟ ೬೦ರಲ್ಲಿ ಗಣರಾಜ್ಯ ಪಾಠವನ್ನು ಕೊಟ್ಟಿದೆ. ಇಲ್ಲಿ ಉದ್ಧರಣ ಚಿಹ್ನೆಯನ್ನು ಕೊಟ್ಟು ನಂತರ ಪೂರ್ಣವಿರಾಮವನ್ನು ಕೊಡಲಾಗಿದೆ.

ವಾಕ್ಯ : ರಜೀಯಾ : 'ನಮ್ಮ ತೋಟದಲ್ಲಿ ಮಾವಿನ ಮರವಿದೆ ನಾನು ತಳಿರು ತಂದು ತೋರಣ ಕಟ್ಟಿ ಸಿಂಗರಿಸುತ್ತೇನೆ'. ಅಂದರೆ ಇಲ್ಲಿ ಉದ್ಧರಣ ಚಿಹ್ನೆ ಬಳಸಿ ನಂತರ ಪೂರ್ಣವಿರಾಮವನ್ನು ಕೊಟ್ಟಿರುವುದನ್ನು ಕಾಣುತ್ತೇವೆ. ಇನ್ನು ಕೆಲವು ತರಗತಿಯ ಪಠ್ಯಗಳಲ್ಲಿ ಉದ್ಧರಣ ಚಿಹ್ನೆ ಮತ್ತು ವಾಕ್ಯ ಪೂರ್ಣಗೊಂಡಿದ್ದರೂ ಪೂರ್ಣವಿರಾಮ ಬಳಕೆ ಮಾಡಿರುವುದಿಲ್ಲ.

ಉದಾ: ಕಲಿ–ನಲಿ ೪ನೇ ತರಗತಿಯ ಪುಟ ೪೭ರಲ್ಲಿ ಕೊಟ್ಟಿರುವ ಮಾತನ್ನು ಯಾರು ಯಾರಿಗೆ ಹೇಳಿದರು ಎಂದು ಅಭ್ಯಾಸ ಚಟುವಟಿಕೆಯಲ್ಲಿ ಕೊಟ್ಟಿದೆ. "ಏ ಸುಮ್ಮನೆ ಇರು, ಅವ ನಿದ್ರೆ ಮಾಡಿಲ್ಲ" ಎಂಬ ಎರಡು ವಾಕ್ಯಗಳ ಕೊನೆಗೆ ಪೂರ್ಣ ವಿರಾಮವನ್ನು ಬಳಸಿಲ್ಲ. ಉಳಿದ ಇನ್ನು ಮೂರು ವಾಕ್ಯಗಳು ಈ ರೀತಿಯಾದವುಗಳಿವೆ. ಆದರೆ ಅಲ್ಲಿ ಬಳಕೆಯಾಗಿರುವುದನ್ನು ಕಾಣುತ್ತೇವೆ.

ಕನ್ನಡ ಕಸ್ತೂರಿ ೭ನೇ ತರಗತಿ ಕನ್ನಡಭಾಷಾ ಪಠ್ಯಪುಸ್ತಕ (ಪು.ಸಂ. ೧೩೧)ರಲ್ಲಿ ಭಾಷಾ ಚಟುವಟಿಕೆಯಲ್ಲಿ 'ಎಲಿಜಬತ್‌ಳಿಗೆ ವಿಲಿಯಂ ಮತ್ತು ಮೇರಿ ಅವಳಿ ಮಕ್ಕಳಿದ್ದರು. ವಿಲಿಯಂ ಜಾಣ ಆದರೆ ಸೋಮಾರಿ ಮೇರಿ ಬುದ್ಧಿವಂತೆ ಅಲ್ಲದಿದ್ದರೂ ಶ್ರಮ ಜೀವಿ ಛಲವಂತೆ' ಎಂದು ಕೊಟ್ಟಿದೆ. ಇಲ್ಲಿ ಪೂರ್ಣವಿರಾಮವನ್ನು ಉದ್ಧರಣ ಚಿಹ್ನೆ ಬಳಕೆಯ ನಂತರ ಕೊಟ್ಟಿರುವುದನ್ನು ಕಾಣುತ್ತೇವೆ.

ಕನ್ನಡ ಶೈಲಿ ಕೈಪಿಡಿ (೨, ೭) ಆವರಣದೊಳಗೆ ಅಳವಡಿಸುವ ವಾಕ್ಯ ಪೂರ್ಣವಾಗಿದ್ದಲ್ಲಿ ವಾಕ್ಯದ ಕೊನೆಯಲ್ಲಿ ಪೂರ್ಣವಿರಾಮವನ್ನು ಬಳಸಿ ಅನಂತರ ಆವರಣ ಚಿಹ್ನೆಯನ್ನು ಹಾಕಬೇಕು ಎಂದು ಹೇಳಿದೆ. ಆದರೆ ಪ್ರಾಥಮಿಕ ಪಠ್ಯಗಳಲ್ಲಿ ಕೆಲವು ಸಂದರ್ಭಗಳಲ್ಲಿ ಬಳಕೆಯಾಗಿಲ್ಲ.

ಉದಾ : (ಸೂಚನೆ : ಹೊಂದಿಸಿ ಹೇಳುವಲ್ಲಿ ಮೊದಲನೇ ಪಾಠದ ಸೂಚನೆಯನ್ನು ಅನುಸರಿಸಿ) ಎಂದು ಕೊಟ್ಟಿದೆ. ಇಲ್ಲಿ ಪೂರ್ಣವಿರಾಮ ಬಳಕೆಯಾಗದೆ ಆವರಣವನ್ನು ಪೂರ್ಣಗೊಳಿಸಿದೆ. ಏಳನೇತರಗತಿಯ ಪಠ್ಯದಲ್ಲಿ (ಪು.ಸಂ-೧೮೪) ನಾಲ್ಕು ಮಾತ್ರೆಗೆ ಒಂದು ಗಣದಂತೆ ವಿಭಾಗ ಮಾಡಿದೆ ಎಂದು ಕೊಡಲಾಗಿದೆ. ಆದರೆ ಆವರಣದ ನಂತರ ಪೂರ್ಣ ವಿರಾಮವನ್ನು ಕೊಟ್ಟಿರುವುದನ್ನು ಕಾಣುತ್ತೇವೆ.

ಇನ್ನು ಕೆಲವೊಂದು ಸಂದರ್ಭದಲ್ಲಿ ಉದ್ಧರಣ ಚಿಹ್ನೆಯನ್ನು ಬಳಸಿ ನಂತರ ಆಶ್ಚರ್ಯಕರ ಚಿಹ್ನೆ ಬಳಸಿ ವಾಕ್ಯ ಪೂರ್ಣಗೊಳಿಸಲಾಗಿದೆ.(ಶೈಲಿ ಕೈಪಿಡಿಯಲ್ಲಿ ಆಶ್ಚರ್ಯಕರ ಚಿಹ್ನೆ ಬಳಸಿ ಉದ್ಧರಣ ಚಿಹ್ನೆ ಬಳಸಬೇಕು ಎಂದು ಹೇಳಿದೆ)

ಉದಾ : ಕನ್ನಡ ಕಸ್ತೂರಿ ೭ನೇ ತರಗತಿಯ ಪಠ್ಯದಲ್ಲಿ (ಪು.ಸಂ. ೧೨೧) "ನೋಡಮ್ಮ ಎಂಥ ಕೆಲ್ಸ ಮಾಡಿಬಿಟ್ಟಿದ್ದೆ ! ಪರ್ಸ್ ಮರೆತು ಬಸ್‌ನಲ್ಲಿ ಕೂತುಬಿಟ್ಟದ್ದೆ"! 'ಯೆಂಡ ಕುಡಿಯೋದ ಬುಟ್ ರತ್ನ' ! (ತರಗತಿ ೭ ಪುಟ ೧೮೪) ಈ ಎರಡು ವಾಕ್ಯಗಳಲ್ಲಿಯೂ ಸಹ ಉದ್ಧರಣ ಚಿಹ್ನೆಯನ್ನು ಬಳಸಿ ಆಶ್ಚರ್ಯಕರ ಚಿಹ್ನೆ ಕೊಟ್ಟಿರುವುದನ್ನು ಅಧ್ಯಯನದಿಂದ ಕಂಡು ಕೊಳ್ಳಲಾಗಿದೆ.

ಕನ್ನಡ ಶೈಲಿ ಕೈಪಿಡಿಯ ಮುಂದುವರಿದ ಭಾಗದಲ್ಲಿ (ಪು.ಸಂ ೧೩) ಛಾಯಚಿತ್ರ, ಕೋಷ್ಟಕ ಮೊದಲಾದವುಗಳ ಶೀರ್ಷಿಕೆಗಳು ಪೂರ್ಣವಾಕ್ಯಗಳಿದ್ದರೆ ವಾಕ್ಯದ ಕೊನೆಯಲ್ಲಿ ಪೂರ್ಣವಿರಾಮವನ್ನು ಹಾಕಬೇಕು ಎಂದು ವಿವರಿಸಿದೆ. ಆದರೆ ಕನ್ನಡಭಾಷಾ ಪಠ್ಯಗಳ ಕೆಲವೊಂದು ಭಾಗದಲ್ಲಿ ಈ ತತ್ವವನ್ನು ಅಳವಡಿಸಿಕೊಂಡಿಲ್ಲ. ಉದಾ : ೩ನೇ ತರಗತಿಯ ಪುಟ ಸಂಖ್ಯೆ ೨೭ರಲ್ಲಿ ಕೋಷ್ಟಕ ಸಹಾಯದಿಂದ ವಾಕ್ಯಗಳನ್ನು ಮಾಡಿ ಎಂದು ಕೇಳಲಾಗಿದೆ. ಅವುಗಳನ್ನು ಈ ಕೆಳಗಿನಂತೆ ಕೊಡಲಾಗಿದೆ. ಆದರೆ ಕೋಷ್ಟಕದ ಕೊನೆಯಲ್ಲಿ ಪೂರ್ಣ ವಿರಾಮವನ್ನು ನೀಡಿಲ್ಲ.

ಮಾಡುತ್ತೇವೆ

ನಾವು [ಕೆಲಸ] → ಮಾಡಿದೆವು

ಮಾಡುವೆವು

ಗಾದೆ, ಸೂಕ್ತಿ, ಸುಭಾಷಿತ, ಸಂಘ, ಸಂಸ್ಥೆಗಳ ಹೆಸರಿನ ಕೊನೆಯಲ್ಲಿ ಪೂರ್ಣವಿರಾಮದ ಅಗತ್ಯವಿಲ್ಲವೆಂದು ಕನ್ನಡ ಶೈಲಿ ಕೈಪಿಡಿ(ಪು.ಸಂ ೧೪)ರಲ್ಲಿ ಹೇಳಿದೆ. ಆದರೆ ಕನ್ನಡ ಭಾಷಾ ಪಠ್ಯಗಳ ಕೆಲವು ಸಂದರ್ಭಗಳಲ್ಲಿ ಬಳಸಿರುವುದನ್ನು ಕಾಣಬಹುದಾಗಿದೆ. ಉದಾ : ೨ನೇ ತರಗತಿಯ ಕನ್ನಡ ಕಲಿ-ನಲಿ ಪುಸ್ತಕ ಪುಟ-೭೪ರಲ್ಲಿ ಈ ಗಾದೆ ಮಾತುಗಳನ್ನು ಓದಿ ಗೆರೆ ಹಾಕಿದ ಪದಗಳನ್ನು ಗಮನಿಸಿ ಎಂದು ಈ ಕೆಳಗಿನಂತೆ ಕೊಟ್ಟಿದೆ. ಆದರೆ ಗಾದೆಯ ಕೊನೆಯಲ್ಲಿ ಪೂರ್ಣವಿರಾಮವನ್ನು ಕೊಡಲಾಗಿದೆ.

* ಅತಿ ಆಸೆ ಗತಿಗೇಡಿಸಿತು.

* ಇದ್ರೆ ಈ ಊರು ಎದ್ರೆ ಮುಂದಿನ ಊರು.

* ತಾಳಿದವನು ಬಾಳಿಯಾನು.

* ರಟ್ಟೆ ಮುರಿದು ರೊಟ್ಟಿ ತಿನ್ನು.

ಈ ಉದಾಹರಣೆಗಳಿಂದ ಕನ್ನಡಭಾಷಾ ಪಠ್ಯಗಳಲ್ಲಿ ಲೇಖನ ಸಂದರ್ಭಗಳಲ್ಲಿ ಲೇಖನ ಚಿಹ್ನೆಯನ್ನು ವಾಕ್ಯದ ಕೊನೆಗೆ ಬಳಕೆಯಾಗಬೇಕಾದ ನಿಯಮವನ್ನು ರೂಪಿಸಿಕೊಳ್ಳಲಾಗಿದೆ. ಆದರೆ ಆ ವಾಕ್ಯ ಮುಗಿದು ಬೇರೆ ಲೈನಿನಲ್ಲಿ ಆಶ್ಚರ್ಯಕರ ಚಿಹ್ನೆ ಮುದ್ರಿತವಾಗಿರುವುದನ್ನು ಕಾಣುತ್ತೇವೆ. ಉದಾ : ತರಗತಿ ೭ ಪುಟ ಸಂಖ್ಯೆ ೧೧೮ ರಲ್ಲಿ ಸನ್ನಿವೇಶಕ್ಕೆ ತಕ್ಕ ಗಾದೆಯನ್ನು ಯೋಚಿಸಿ ಬರೆಯಿರಿ ಎಂದು ಕೇಳಿದೆ.

ಶಂಕರ ಹೊಟ್ಟೆ ತುಂಬ ಊಟ ಮಾಡಿದ್ದ ನೆರೆ ಮನೆಯ ಸುಂದರಮ್ಮ ಹುಗ್ಗಿ ಮಾಡಿದ್ದಳು ಶಂಕರನನ್ನು ಊಟಕ್ಕೆ ಕರೆಸಿದಳು ಅವನು ಒಲ್ಲೆ ಎಂದ ಆದರೂ ಮುದುಕಿ ಸುಂದರಮ್ಮ ! ಒತ್ತಾಯ ಮಾಡಿ ಹುಗ್ಗಿ ಬಡಸಿದಳು. ಎಂದು ಕೊಡಲಾಗಿದೆ. ಅಂದರೆ ಒತ್ತಾಯದ ಎಂಬ ಶಬ್ಧದ ಪೂರ್ವದಲ್ಲಿ ಮುದ್ರಿತವಾಗಿದೆ. ಒಟ್ಟಾರೆಯಾಗಿ ಪ್ರಾಥಮಿಕ ಕನ್ನಡ ಭಾಷಾ ಪಠ್ಯಗಳಲ್ಲಿ ಲೇಖನ ಚಿಹ್ನೆಗಳ ಬಳಕೆ ವಿಧಾನ ಮತ್ತು ಕಲಿಸುವ ವಿಧಾನದಲ್ಲಿ ಬದಲಾವಣೆ ಅಗತ್ಯತೆ ಇದೆ. ಪ್ರಾಥಮಿಕ ಹಂತದಲ್ಲಿ ತರಗತಿಯ ಅನುಸಾರ ಲೇಖನ ಚಿಹ್ನೆಗಳ ಬಗ್ಗೆ ಪಾಠಗಳನ್ನು ಕೊಡುವುದು ಅಗತ್ಯತೆ ಕಂಡು ಬರುತ್ತದೆ. ಈ ರೀತಿ ಕೊಟ್ಟ ತಕ್ಷಣ ಮಕ್ಕಳಿಗೆ ಲೇಖನ ಚಿಹ್ನೆಗಳ ತಿಳುವಳಿಕೆ ಬಂದು ಬಿಡುತ್ತದೆ ಎಂದು ತಿಳಿಯಲಾಗದು. ಇದರ ಜೊತೆಗೆ ಬೋಧಿಸುವ ಶಿಕ್ಷಕರು ಸಹ ಇದರ ತಿಳುವಳಿಕೆಯ ಅಗತ್ಯತೆ ಇದೆ. ಶಿಕ್ಷಕರು ಬೋಧನೆಯ ಸಂದರ್ಭಾನುಸಾರ ಕಲಿಸುವುದು ಬಹಳ ಮುಖ್ಯವಾದ ಅಂಶವಾಗಿದೆ. ಆದ್ದರಿಂದ ಕನ್ನಡಭಾಷಾ ಪಠ್ಯಗಳನ್ನು ರಚನೆ ಮಾಡುವವರು ಲೇಖನ ಚಿಹ್ನೆಗಳ ಬಳಕೆಯ ಸಂದರ್ಭದಲ್ಲಿ ಜಾಗೃತಗೊಂಡು ಮುದ್ರಣ ಮಾಡಿಸುವ ಕ್ರಮ ಕೈಗೊಳ್ಳಬೇಕಾದ ಅಗತ್ಯತೆ ಇದೆ ಎಂಬುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಸ್ವಾತಂತ್ರ್ಯದ ನಂತರ ಪ್ರಾಥಮಿಕ ಶಿಕ್ಷಣ ಬೆಳೆದು ಬಂದಿರುವುದನ್ನು ಗಮನಿಸಿದಾಗ ಯಾವುದೇ ಒಂದು ಹಂತದಲ್ಲಿ ಗುಣಾತ್ಮಕ ಪರಿಣಾತ್ಮಕವಾಗಿ ಬದಲಾವಣೆಯನ್ನು ಹೊಂದಿರುವುದು ನಿಜವಾದ ಸಂಗತಿ. ಆದರೆ ಇದು ಕೆಲವು ಹಂತಗಳಲ್ಲಿ ಸೋತಿರುವುದಂತೂ ನಿಜ. ಏಕೆಂದರೆ ಸ್ವಾತಂತ್ರ್ಯಪೂರ್ವದಲ್ಲಿ ಪ್ರಾಥಮಿಕ ಶಿಕ್ಷಣ ಪಡೆದ ವ್ಯಕ್ತಿ ಕನ್ನಡ ಭಾಷೆಯ ವಿವಿಧ ಆಯಾಮಗಳನ್ನು ಸ್ಪಷ್ಟವಾಗಿ ತಿಳಿದಿರುತ್ತಾನೆ. ಅಲ್ಲದೆ ಉಚ್ಚಾರಣೆಯಿಂದ ರಚನೆಯ ವಿವಿಧ ಹಂತಗಳಲ್ಲಿ ಪರಿಣಿತಿಯನ್ನು ಪಡೆದವರಾಗಿರುತ್ತಾರೆ. ಅವನ ಯೋಚನೆಗಳೆಲ್ಲವು ಹೆಚ್ಚಾನು ಹೆಚ್ಚು ವಸ್ತುನಿಷ್ಠ ಮಾದರಿಗಳಲ್ಲಿಯೇ ಇರುತ್ತವೆ. ಅವುಗಳೆಲ್ಲ ಮಾದರಿಯಾಗಿರುವುದನ್ನು ಕಾಣುತ್ತೇವೆ. ಆದರೆ ೧೯೮೦ರ ನಂತರದಲ್ಲಿ ಪ್ರಾಥಮಿಕ ಶಿಕ್ಷಣ ಪಡೆದ ವ್ಯಕ್ತಿಯನ್ನು ಗಮನಿಸಿದಾಗ ವಸ್ತುನಿಷ್ಠವಾದ ಸಮಾಜಮುಖಿ ಚಿಂತನೆಗಳಿಗಿಂತ ವ್ಯಕ್ತಿ ನಿಷ್ಠ ಮಾದರಿಯ

ಬೆಳವಣಿಗೆಗಳು ಹೆಚ್ಚಾಗಿವೆ. ಮಾನವನ ಬದುಕು ಇಂದು ಸಂಕುಚಿತಗೊಳ್ಳುತ್ತಿದೆ. ಸಂಸ್ಕೃತಿ ಎಂಬ ನಾಗರೀಕತೆಯು ಜಾಯಮಾನದಿಂದ ದೂರವಾಗುತ್ತಿದ್ದಾನೆ. ಜೊತೆಗೆ ಸ್ವಾರ್ಥಿಯಾಗುತ್ತಿದ್ದಾನೆ ಎಂಬ ಕೂಗು ಸಾಮಾಜಿಕ ವ್ಯವಸ್ಥೆಯಲ್ಲಿ ಇಂದು ಸರ್ವೇಸಾಮಾನ್ಯವಾಗಿ ಕೇಳಿ ಬರುತ್ತಿದೆ. ನೈತಿಕ ಮೌಲ್ಯದಿಂದ ಮತ್ತು ಮಾನವೀಯ ಮೌಲ್ಯಗಳಿಂದ ದೂರ ವಾಗುತ್ತಿದ್ದಾನೆ. ಇದು ನಮ್ಮ ಭಾಷೆಯ ಬೆಳವಣಿಗೆಯಲ್ಲಿನ ಲೋಪ ದೋಷಗಳನ್ನು ತೋರಿಸುತ್ತದೆ. ಏಕೆಂದರೆ ಸಂಸ್ಕೃತಿಯನ್ನು ಬೆಳೆಸುವುದು ಮತ್ತು ಅಳಿಸುವುದು ಭಾಷೆ ಎಂಬ ಮಾಧ್ಯಮ ಮುಖ್ಯವಾದುದು. ಆದ್ದರಿಂದಲೇ ಸಂಸ್ಕೃತಿ ಮತ್ತು ಭಾಷೆ ಒಂದು ನಾಣ್ಯದ ಎರಡು ಮುಖಗಳಂತಿವೆ. ಅವುಗಳೆರಡರಲ್ಲಿಯೂ ವ್ಯತ್ಯಾಸವಾದರೂ ನಾಗರೀಕತೆ ಮತ್ತು ಮಾನವನ ಚಾರಿತ್ರಿಕ ಅಂಶಗಳ ಮೇಲೆ ಪ್ರಭಾವ ಬೀರುತ್ತದೆ. ಶಿಕ್ಷಣದ ಭಾಷಾ ಕಲಿಕೆಯಲ್ಲಿನ ಸಮಸ್ಯೆಗಳನ್ನು ಸುಧಾರಿಸಿಕೊಳ್ಳಬೇಕಾಗಿದೆ. ಔಪಚಾರಿಕ ಶಿಕ್ಷಣದಲ್ಲಿ ಪ್ರಾರಂಭದಿಂದಲೂ ಭಾಷೆ ಚೌಕಟ್ಟಿನ ಬಗ್ಗೆ ಸುಧಾರಣೆಯ ಅಂಶಗಳನ್ನು ತರುವುದು ಇಂದು ಅನಿವಾರ್ಯವಾಗಿದೆ. ನಾವು ಹಾಕಿಕೊಂಡಿರುವ ಭಾಷಾ ಯೋಜನೆಗಳು ಏಕೆ ಪ್ರಾಮಾಣಿಕವಾಗಿ ಪ್ರಗತಿಯನ್ನು ಕಾಣುತ್ತಿಲ್ಲ. ಕಂಡರೂ ಅದು ಯಾವ ಅರ್ಥದಲ್ಲಿ ಕಂಡುಕೊಂಡಿದೆ ಎಂಬುದನ್ನು ಇಂದು ಅರಿತುಕೊಳ್ಳಬೇಕಾಗಿದೆ. ಭಾಷಾ ನಿಯಮಗಳನ್ನು ರಚಿಸುತ್ತಾ, ಬದಲಾಯಿಸುತ್ತಾ ಹೋಗುವ ಮೊದಲು ಸಂಸ್ಕೃತಿಯನ್ನು, ಭಾಷೆಯನ್ನು ಉಳಿಸಲು ಭಾಷಾ ಬೆಳವಣಿಗೆಗೆ ಪೂರಕವಾಗಬಲ್ಲದು ಎಂಬುದನ್ನು ಯೋಚಿಸಿ ನಿರ್ಧಾರ ತೆಗೆದು ಕೊಳ್ಳಬೇಕಾಗಿದೆ. ಇಂದಿನ ಪ್ರಾಥಮಿಕ ಶಿಕ್ಷಣದಲ್ಲಿ ಭಾಷಾ ವ್ಯವಸ್ಥೆಯ ತಿಳುವಳಿಕೆ ಪಠ್ಯಗಳಲ್ಲಿ ಅಗತ್ಯವಾಗಿದೆ ಎಂಬುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

೧೯೮೬ರ ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯನ್ವಯ ಕರ್ನಾಟಕ ರಾಜ್ಯದಲ್ಲಿ ಸಂಚಲನವನ್ನು ಮೂಡಿಸಿತಲ್ಲದೆ ಪ್ರಾಥಮಿಕ ಶಿಕ್ಷಣ ಸುಧಾರಣೆಗೆ ಪ್ರಯತ್ನಿಸಿತು. ಜೊತೆಗೆ ಕಲಿಕೆಯಲ್ಲಿ ಸರಳತೆಯನ್ನು ಕಂಡುಕೊಳ್ಳುವ ಪ್ರಯತ್ನಕ್ಕೆ ನಾಂದಿ ಆಯಿತು. ೧೯೯೦ರ ಸರ್ವರಿಗೂ ಶಿಕ್ಷಣ ಘೋಷಣೆ ಮತ್ತು 'ಸರ್ವಶಿಕ್ಷಾ ಅಭಿಯಾನ' ಆರಂಭವಾದಂದಿನಿಂದ 'ಅಜಿಂಪ್ರೇಮ್‌ಜಿ' ಇಸ್ಕಾನ್ ಪ್ರಜಾಹಿತ ಇತ್ಯಾದಿ ಹಲವಾರು ಸಂಸ್ಥೆಗಳು ಪ್ರಾಥಮಿಕ ಶಿಕ್ಷಣದ ಉನ್ನತಿಗಾಗಿ ಶ್ರಮಿಸಲು ಪ್ರಯತ್ನಿಸಿದೆ. ಹಾಗೆಯೇ ರಾಜ್ಯ ಸರ್ಕಾರವು ಜೊತೆ ಜೊತೆಯಾಗಿ ಕೈಜೋಡಿಸಿರುವುದನ್ನು ಕಾಣುತ್ತೇವೆ. ಸರ್ಕಾರ ಕೂಡ ಇದಕ್ಕೆ ಹಿಂದೆ ಬೀಳದೆ ಸಮುದಾಯದತ್ತ ಶಾಲೆ, ಶಾಲಾಭಿವೃದ್ಧಿ ಮೇಲ್ವಿಚಾರಣಾ ಸಮಿತಿಯನ್ನು ಸ್ಥಾಪಿಸಿದೆ. ಶಾಲೆ ಮತ್ತು ಸಮುದಾಯದ ನಡುವೆ ಬಾಂಧವ್ಯ ಹೆಚ್ಚಿಸುವ ಪ್ರಯತ್ನ ಮಾಡಿದೆ. ಆದರೆ ಇವುಗಳ ಬಗ್ಗೆ ಟೀಕಾ ಪ್ರಹಾರ ನಡೆಯುತ್ತಲೇ ಇದೆ. ಇಷ್ಟೆಲ್ಲಾ ಟೀಕಾ ಪ್ರಹಾರ ಮತ್ತು ಲೋಪ ದೋಷಗಳ ನಡುವೆಯೂ ಪ್ರಾಥಮಿಕ ಶಿಕ್ಷಣದ ವಿವರಣೆ ಹಾಗೂ ಅಂಕಿ ಅಂಶಗಳನ್ನು ಪರಿಶೀಲಿಸಿದರೆ ಶಿಕ್ಷಣರಂಗದ ಬುನಾದಿ ವ್ಯವಸ್ಥೆಯಲ್ಲಿ ಸಾಕಷ್ಟು ಪ್ರಗತಿ, ಬದಲಾವಣೆಗಳನ್ನು ಕಂಡಿದೆ. ಪಠ್ಯಪುಸ್ತಕ ರಚನೆಯಲ್ಲಿ ಹಲವಾರು ಬದಲಾವಣೆಯನ್ನು ತರಲಾಗಿದೆ. ಶಾಲೆಗಳಲ್ಲಿ ಶಿಕ್ಷಕರ ಸಂಖ್ಯೆಯನ್ನು ಸಹ ಹೆಚ್ಚಿಸಿದೆ. ಕಟ್ಟಡ ಸೌಲಭ್ಯಗಳನ್ನು

ಒದಗಿಸಿದೆ. ಮಕ್ಕಳ ನೊಂದಣಿ ಉಳಿಕೆ ಪ್ರಮಾಣ ಅಧಿಕಗೊಂಡಿದೆ. ಇಷ್ಟೆಲ್ಲಾ ಸೌಲಭ್ಯಗಳನ್ನು ಒದಗಿಸುವ ಮಟ್ಟಕ್ಕೆ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆಯಲ್ಲಿ ಕಾಣುತ್ತೇವೆ. ಇನ್ನೂ ಹಲವಾರು ಶಾಲೆಗಳಲ್ಲಿ ಶಿಕ್ಷಕರೂ, ಕಟ್ಟಡಗಳ ಕೊರತೆಯಿಂದ ಸುಧಾರಣೆಗಳನ್ನು ಕಾಣದೇ ನರಳುತ್ತಿರುವುದನ್ನು ಕಾಣುತ್ತೇವೆ. ಒಂದು ಶಾಲೆಗೆ ಒಬ್ಬ ಶಿಕ್ಷಕನಿರುವ ಶಾಲೆಗಳು ಇನ್ನೂ ಉಳಿದಿರುವುದು ವಿಪರ್ಯಾಸ. ಅಂದರೆ ಇನ್ನು ಕೆಲವೊಂದು ವಿಚಾರಗಳಲ್ಲಿ ಪ್ರಾಥಮಿಕ ಶಿಕ್ಷಣ ಸೋತಿದೆ ಎಂದು ಹೇಳಬಹುದು. ಸುಭದ್ರ ಕಟ್ಟಡ, ಕುಡಿಯುವ ನೀರಿನ ಸಮಸ್ಯೆ, ವಿದ್ಯುಚ್ಛಕ್ತಿ ಕೊರತೆ, ಕ್ರೀಡಾಂಗಣ ಇಲ್ಲದಿರುವುದು ಅಲ್ಲದೇ ಆಂಗ್ಲ ಮಾಧ್ಯಮದ ಪ್ರಭಾವದಿಂದಾಗಿ ಅನೇಕ ಶಾಲೆಗಳು ಮುಚ್ಚುತ್ತ ಬರುವ ದಾರಿಯಲ್ಲಿ ನಿಂತಿವೆ. ಅನುದಾನಿತ ಶಾಲೆಗಳಲ್ಲಿ ಶಿಕ್ಷಕರನ್ನು ನೇಮಿಸಿಕೊಳ್ಳುತ್ತಿಲ್ಲ. ನೇಮಿಸಿಕೊಂಡರೂ ವಿದ್ಯಾರ್ಹತೆ ಪಡೆದವರನ್ನು ನೇಮಿಸಿಕೊಳ್ಳುತ್ತಿಲ್ಲ. ಇದರ ಜೊತೆಗೆ ಶಿಕ್ಷಕರಿಗೆ ಸರ್ಕಾರಿ ಕೆಲಸ ಹಾಗೂ ಶೈಕ್ಷಣಿಕ ಕೆಲಸದ ಚಟುವಟಿಕೆಗಳಿಂದಾಗಿ ಬೋಧನೆಯಲ್ಲಿ ತೊಡಗಿಸಿಕೊಳ್ಳುವುದು ಕಷ್ಟವಾಗುತ್ತಿದೆ.

**ಡಾ. ಮಹಾಬಲೇಶ್ವರರಾವ್ ಅವರು 'ಆಧುನಿಕ ಶಿಕ್ಷಣದ ಒಲವುಗಳು'** ಎಂಬ ಪುಸ್ತಕದಲ್ಲಿ ಪ್ರಾಥಮಿಕ ಶಿಕ್ಷಣದ ಸೋಲುಗಳನ್ನು ಈ ರೀತಿಯಾಗಿ ವ್ಯಾಖ್ಯಾನಿಸುತ್ತಾರೆ. "ಶಾಲಾಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ನೇಮಕಗಳಲ್ಲಿ ರಾಜಕೀಯ ನೇತಾರರ ಹಸ್ತಕ್ಷೇಪ ಮತ್ತು ಅಕ್ಷರ ದಾಸೋಹದ ಮೇಲುಸ್ತುವಾರಿ ಇತ್ಯಾದಿ ಕಾರ್ಯಗಳಿಂದಾಗಿ ಶಾಲಾ ವಿರಸ, ಅನಗತ್ಯ ಒತ್ತಡ, ಉದ್ಭವಿಸಿ ಬೋಧನೆ ಕಲಿಕೆಯ ಮೇಲೆ ಪ್ರಭಾವ ಬೀರುತ್ತದೆ ಎಂದಿದ್ದಾರೆ." "ಕರ್ನಾಟಕದ ಪ್ರಾಥಮಿಕ ಶಿಕ್ಷಣ ಸಂಖ್ಯಾತ್ಮಕವಾಗಿ ಬೆಳೆದಿದೆ. ಆದರೆ ಇತ್ತೀಚಿನ ಕರ್ನಾಟಕ ರಾಜ್ಯ ಗುಣ ಮೌಲ್ಯಾಂಕನದ ಪರೀಕ್ಷೆಗಳಿಂದ ತಿಳಿದು ಬಂದಂತೆ ಚೈತನ್ಯ ಕಲಿಕೆಯ ಅವಶ್ಯಕ ಕನಿಷ್ಟ ಮಟ್ಟಗಳು ಇತ್ಯಾದಿ ಕಾರ್ಯಕ್ರಮಗಳಿಂದ ಶಿಕ್ಷಣದ ಗುಣಮಟ್ಟ ವೃದ್ಧಿಯಾದದ್ದು ಕಂಡು ಬರುವುದಿಲ್ಲ. ಗಣಿತ, ಭಾಷೆಗಳು ಮತ್ತು ವಿಜ್ಞಾನದಂತ ವಿಷಯಗಳ ಮೂಲಕ ಪರಿಕಲ್ಪನೆಗಳು ಕಲಿಕೆಯಲ್ಲಿ ವಿದ್ಯಾರ್ಥಿಗಳ ಸಾಧನೆ ನಿರಾಶಾದಾಯಕವಾಗಿದೆ. ರಾಜ್ಯ ಸರಕಾರ ಶಾಲೆಗಳನ್ನು ಸ್ಥಾಪಿಸಿರುವುದರ ಬಗ್ಗೆ ತೋರುತ್ತಿರುವ ಉತ್ಸಾಹದ ಇಮ್ಮಡಿ, ಮುಮ್ಮಡಿ ಉತ್ಸಾಹವನ್ನು ಪ್ರಾಥಮಿಕ ಶಿಕ್ಷಣದ ಗುಣಾತ್ಮಕ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಪ್ರದರ್ಶಿಸುವುದು ಸದ್ಯದ ಸಂದರ್ಭದಲ್ಲಿ ಅತ್ಯಂತ ಜರೂರಿನ ಸಂಗತಿಯಾಗಿದೆ ಎಂದು ಅಭಿಪ್ರಾಯ ಪಡುತ್ತಾರೆ." ಇವರ ಮಾತುಗಳ ವಿವರಣೆಯಿಂದ ತಿಳಿದು ಬರುವುದೇನೆಂದರೆ ದಿನಕ್ಕೊಂದು ನಿಯಮಗಳನ್ನು ಹಾಕಿಕೊಳ್ಳುವ ನಮ್ಮ ಸರ್ಕಾರ ಅದರ ವೈಫಲ್ಯವನ್ನು ಅರಿತು ಇನ್ನೊಂದು ಕಾರ್ಯಕ್ರಮ ಹಾಕಿಕೊಳ್ಳಲು ಪ್ರಯತ್ನಿಸುತ್ತದೆ. ಇದರಿಂದ ಯಾವುದು ಪರಿಪೂರ್ಣವಾಗದೇ ಕಲಿಕೆ ಸಂಕುಚಿತದ ದಾರಿಯನ್ನು ಕಂಡುಕೊಳ್ಳುತ್ತಿದೆ ಎಂದು ಹೇಳಲು ಪ್ರಯತ್ನಿಸಿದ್ದಾರೆ.

•••

ಅಧ್ಯಾಯ : ಎಂಟು

# ಸಮಾರೋಪ

ಪಠ್ಯಪುಸ್ತಕಗಳು ಒಂದು ನಾಡಿನ ಸಾಂಸ್ಕೃತಿಕ ಮತ್ತು ಚಾರಿತ್ರಿಕ ಪ್ರತೀಕಗಳು. ಇಂತಹ ಪಠ್ಯಪುಸ್ತಕಗಳ ಸ್ವರೂಪವನ್ನು ಕುರಿತು ಚಾರಿತ್ರಿಕವಾಗಿ ವಿದ್ವಾಂಸರುಗಳು ರಚನೆ ಮಾಡುತ್ತಾ ಬಂದಿದ್ದಾರೆ. ಶೈಕ್ಷಣಿಕವಾಗಿ ಮಕ್ಕಳು ಅನೌಪಚಾರಿಕ ನೆಲೆಯ ಕಲಿಕೆಯನ್ನು ಪಲ್ಲಟಗೊಳಿಸಿ ಔಪಚಾರಿಕ ನೆಲೆಗೆ ದಾಟುವುದು ಪಠ್ಯಪುಸ್ತಕಗಳಿಂದಲೆ. ಹಾಗಾಗಿ ಪಠ್ಯಪುಸ್ತಕಗಳು ನಮ್ಮ ಪ್ರಜಾಪ್ರಭುತ್ವವನ್ನು ಅರ್ಥ ಮಾಡಿಕೊಡುವಲ್ಲಿ ಇವುಗಳ ಪಾತ್ರ ಮಹತ್ತರವಾಗಿದೆ.

ಪ್ರಸ್ತುತ ಮಹಾಪ್ರಬಂಧದಲ್ಲಿ ಪ್ರಾಥಮಿಕ ಹಂತದ ಕನ್ನಡಭಾಷಾ ಪಠ್ಯಪುಸ್ತಕಗಳ ಭಾಷಿಕ ಮತ್ತು ಶೈಕ್ಷಣಿಕ ಅಧ್ಯಯನವನ್ನು ವಿವಿಧ ನೆಲೆಗಳಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಒಟ್ಟು ಎಂಟು ಅಧ್ಯಾಯಗಳಲ್ಲಿ ತೆಗೆದುಕೊಂಡಿರುವ ಸಮಸ್ಯೆಯನ್ನು ನಿದರ್ಶನ ಸಹಿತವಾಗಿ ಚರ್ಚೆ ಮಾಡಲಾಗಿದೆ. ಮುಖ್ಯವಾಗಿ ಕನ್ನಡಭಾಷಾ ಪಠ್ಯಗಳ ಸ್ವರೂಪವನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಧ್ವನಿ, ಪದ, ವಾಕ್ಯಗಳ ಬಳಕೆ ಹಾಗೂ ಬೋಧನೆ, ಶಿಕ್ಷಕ, ವಿದ್ಯಾರ್ಥಿ, ಪರೀಕ್ಷೆ, ಮೌಲ್ಯಮಾಪನ, ಲೇಖನ ಚಿಹ್ನೆಗಳ ಬಳಕೆ ಮುಂತಾದ ಆಯಾಮಗಳೆಲ್ಲವು ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿ ರಚನೆ ಆಗಿದೆಯೋ ಇಲ್ಲವೋ ಎಂಬುದನ್ನು ವಿಶ್ಲೇಷಿಸಲಾಗಿದೆ. ಅಲ್ಲದೆ ಈ ಮೇಲಿನ ಶಿಕ್ಷಣದ ಅಂಶಗಳನ್ನು ಹೆಕ್ಕಿ ತೋರಿಸಲಾಗಿದೆ. ಅವುಗಳಿಗೆ ಕಾರಣಗಳನ್ನು ಶೈಕ್ಷಣಿಕ ಮನೋವಿಜ್ಞಾನಿಗಳು, ಭಾಷಾ ಚಿಂತಕರು, ಶಿಕ್ಷಣ ಚಿಂತಕರು ಚರ್ಚೆ ಮಾಡಿರುವ ವಿಧಾನಗಳನ್ನು ಗಮನಿಸಿ ತೀರ್ಮಾನಕ್ಕೆ ಬರಲಾಗಿದೆ.

ಸಮಕಾಲೀನ ಪ್ರಥಮ ಕನ್ನಡ ಭಾಷಾ ಪಠ್ಯಪುಸ್ತಕಗಳ ಭಾಷಿಕ ಮತ್ತು ಶೈಕ್ಷಣಿಕ ಅಧ್ಯಯನ ಕೈಗೊಳ್ಳುವಾಗ ಅದರ ಹಿಂದೆ ಹಲವು ಉದ್ದೇಶಗಳನ್ನು ಹೊಂದಿದೆ. ಸಾಮಾನ್ಯವಾಗಿ ಕನ್ನಡ ಪಠ್ಯಪುಸ್ತಕಗಳ ಚಾರಿತ್ರಿಕ ಬೆಳವಣಿಗೆಯನ್ನು ಗಮನಿಸಿದಾಗ ಪಠ್ಯದಲ್ಲಿ ಬಳಕೆಯಾಗಿರುವ ವ್ಯಾಕರಣ ಅಂಶಗಳು ಹೆಚ್ಚು ಸಂಸ್ಕೃತ ಭಾಷೆಯ ಮಾದರಿಯಲ್ಲಿವೆ. ಹಾಗೆಯೇ ನಾಲ್ಕು ಕೌಶಲಗಳು ಕೂಡ ಸಮರ್ಪಕವಾಗಿ ಅಳವಡಿಕೆಯಾಗಿಲ್ಲ ಎಂಬ ಅಭಿಪ್ರಾಯವೂ ಇದೆ. ಈ ಸಂದರ್ಭದಲ್ಲಿ ಬೋಧನ ವಿಧಾನ ಮತ್ತು ಮೌಲ್ಯಮಾಪನದ ಬಗ್ಗೆ ಆತಂಕದ

ಮಾತುಗಳು ಕೇಳಿ ಬರುತ್ತಿವೆ. ಶೈಕ್ಷಣಿಕ ಮನೋವಿಜ್ಞಾನಿಗಳು ಪಠ್ಯಕ್ರಮ ಮತ್ತು ಅಭ್ಯಾಸ ಚಟುವಟಿಕೆ, ತರಗತಿಯ ಮಕ್ಕಳ ಮಾನಸಿಕ ವಯೋಮಾನಕ್ಕೆ ಅನುಗುಣವಾಗಿ ರಚನೆಯಾಗಿಲ್ಲ ಎಂಬ ಅಂಶ ಸಾರ್ವಜನಿಕರಲ್ಲಿ ಆತಂಕ ಮೂಡಿಸಿದೆ. ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಇದು ನಿಜವೇ? ಎಂಬ ಪ್ರಶ್ನೆಯೊಂದಿಗೆ ಭಾಷಿಕ ಮತ್ತು ಶೈಕ್ಷಣಿಕ ವಿಷಯಗಳ ಮೂಲಕ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಇದೆ ಪ್ರಸ್ತುತ ಅಧ್ಯಯನದ ಸಮಸ್ಯೆ ಮತ್ತು ಉದ್ದೇಶ ಎಂದರೆ ತಪ್ಪಾಗಲಾರದು. ಇಂತಹ ಮಹಾದುದ್ದೇಶವನ್ನು ಇಟ್ಟುಕೊಂಡು ಸಾಗಿರುವ ಈ ಅಧ್ಯಯನ ಅದರದೇ ಆದ ಸ್ವರೂಪವನ್ನು ಹೊಂದಿದೆ.

ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆಯ ಶೀರ್ಷಿಕೆ ಅಡಿಯಲ್ಲಿ ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿಯನ್ನು ಕುರಿತು ಚರ್ಚಿಸುವಾಗ ಪ್ರಸ್ತುತ ಅಧ್ಯಯನ ಹೇಗೆ ಸಮಾಜಮುಖಿಯಾಗಿದೆ ಎಂಬುದನ್ನು ನಿದರ್ಶನದ ಮೂಲಕ ವಿಶ್ಲೇಷಿಸಲಾಗಿದೆ. ಇಂತಹ ಉದ್ದೇಶವನ್ನು ಇಟ್ಟುಕೊಂಡು ಆಗಿರುವ ಕೆಲಸಗಳ ವಿವರಗಳೊಂದಿಗೆ ಒಂದು ಸಮೀಕ್ಷೆಯನ್ನು ಸಹ ಮಾಡಲಾಗಿದೆ. ಈ ಸಮೀಕ್ಷೆಯಲ್ಲಿ ಪಿಎಚ್.ಡಿ.ಮಹಾಪ್ರಬಂಧಗಳು, ಎಂ.ಫಿಲ್. ಪ್ರಬಂಧಗಳು, ಎಂ.ಎ. ಶಿಕ್ಷಣ, ಎಂ.ಇಡಿ. ಸ್ನಾತಕೋತ್ತರ ಪದವಿಗೆ ಸಂಬಂಧಿಸಿದ ಕಿರುಪ್ರಬಂಧಗಳು, ಸಂಶೋಧನಾ ಲೇಖನಗಳು, ಬಿಡಿ ಬಿಡಿ ಕೃತಿಗಳು, ನಿಯತಕಾಲಿಕೆಗಳನ್ನು ಹೀಗೆ ವರ್ಗೀಕರಿಸುವುದರ ಮೂಲಕ ಇಲ್ಲಿ ನಡೆದ ಅಧ್ಯಯನಗಳ ಆಶಯವನ್ನು ಕುರಿತು ಚರ್ಚೆ ಮಾಡಲಾಗಿದೆ. ಇದರಿಂದ ಪ್ರಸ್ತುತ ಅಧ್ಯಯನ ಹೇಗೆ ಭಿನ್ನವಾಗಿದೆ ಎಂಬುದು ತಿಳಿದು ಬರುವುದರ ಜೊತೆಗೆ ಮುಂದೆ ಕೈಗೊಳ್ಳಬಹುದಾದ ಯೋಜನೆಗಳ ಬಗ್ಗೆ ಮಾಹಿತಿ ಪೂರೈಸುವ ವಿಧಾನವೂ ಆಗಿದೆ.

ಶಿಕ್ಷಣ ಎನ್ನುವುದು ಸ್ಥಗಿತವಾದ ವಿಚಾರವಲ್ಲ. ಅದೊಂದು ಚಲನಶೀಲವಾದ ಚಾರಿತ್ರಿಕ ಹಿನ್ನೆಲೆಯುಳ್ಳ ಅಧ್ಯಯನ ಕ್ರಮ. ಭಾರತೀಯ ಸಂದರ್ಭದಲ್ಲಿ ಶಿಕ್ಷಣ ಪರಂಪರೆ ಹೇಗೆ ಕಾಲದಿಂದ ಕಾಲಕ್ಕೆ ಅಧ್ಯಯನಕ್ಕೆ ಒಳಗಾಗಿ ಬಂದಿದೆ ಎಂಬುದನ್ನು ಗಮನಿಸುವಂತಹ ಅಂಶವಾಗಿದೆ. ಇಂತಹ ಚಾರಿತ್ರಿಕ ವಿವರಗಳು ತೆಗೆದುಕೊಳ್ಳುವ ನಿರ್ಧಾರಗಳಿಗೆ ಚಾರಿತ್ರಿಕ ವಿಚಾರಾಂಶಗಳನ್ನು ಒದಗಿಸಿಕೊಡುತ್ತವೆ. ಸಮಕಾಲೀನ ಪಠ್ಯಪುಸ್ತಕಗಳ ರಚನೆಯನ್ನು ಕುರಿತು ಭಾಗದಲ್ಲಿ ಚರ್ಚೆ ಮಾಡಲಾಗಿದೆ. ಪ್ರಸ್ತುತ ಈ ಭಾಗದ ಎಲ್ಲಾ ಅಧ್ಯಾಯಗಳು ಸಂಶೋಧನೆಯ ಕೇಂದ್ರ ಭಾಗವಾಗಿ ಚರ್ಚಿತವಾಗಿವೆ ಎಂದರೆ ತಪ್ಪಾಗಲಾರದು. ಮುಖ್ಯವಾಗಿ ಧ್ವನಿರಚನೆ, ಪದರಚನೆ, ವಾಕ್ಯರಚನೆ ಮತ್ತು ಪದಕೋಶ ಭಾಗಗಳು ಪಠ್ಯಪುಸ್ತಕಗಳ ನಿರ್ಮಾಣದಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ. ಸಮಕಾಲೀನ ಕನ್ನಡದಲ್ಲಿ ಈ ನಾಲ್ಕು ಭಾಷಿಕ ಅಂಶಗಳು ಸಾಂಸ್ಕೃತಿಕ ಮಾದರಿಯಲ್ಲೇ ಇವೆ. ಈ ಹಿನ್ನೆಲೆಯಿಂದ ಬಳಕೆಯ ಮಾತಿಗೂ ಬರಹದ ಮಾತಿಗೂ ಅಂತರವಿದೆ ಎನಿಸುತ್ತದೆ. ಈ ರೀತಿಯ ಅಂತರವನ್ನು ಕಡಿಮೆ ಮಾಡುವುದರ ಮೂಲಕ ಮಕ್ಕಳ ಕಲಿಕೆಯನ್ನು ಪರಿಣಾಮಕಾರಿ

ಗೊಳಿಸಬಹುದು ಎಂಬುದು ಇಂದಿನ ಆಧುನಿಕ ಚಿಂತಕರ ಅಭಿಪ್ರಾಯವಾಗಿದೆ. ಪ್ರಾಥಮಿಕ ಹಂತದ ಕನ್ನಡಭಾಷಾ ಪಠ್ಯಗಳಲ್ಲಿ ಬೋಧನೆ ಮಾಡುತ್ತಿರುವ ವ್ಯಾಕರಣ ಅಂಶಗಳಾದ ಸಂಧಿ, ಸಮಾಸ, ವಿರುದ್ಧಾರ್ಥಕ ಪದ, ನಿಷೇದಾರ್ಥಕ ಪದ ಹಾಗೂ ಲಿಂಗ, ವಚನಗಳು, ಸಾಂಪ್ರದಾಯಿಕವಾಗಿವೆ ಎಂಬ ಕೂಗು ಇತ್ತೀಚಿನ ದಿನಮಾನಗಳ ವಿದ್ವಾಂಸರ ಮಾತುಗಳಲ್ಲಿ ಕೇಳುತ್ತಿದ್ದೇವೆ. ಅಂದರೆ ಕೇವಲ ಕಂಠಪಾಠ ಮಾಡಿ ಒಪ್ಪಿಸುವ ಕೆಲಸ ಜರುಗಿದೆ ಎಂದಿದ್ದಾರೆ. ಅವು ನಮ್ಮ ನೆನಪಿನ ಅಂಗಳದಲ್ಲಿ ಉಳಿಯುತ್ತಿಲ್ಲ ಎಂಬ ಅಂಶವನ್ನು ಸಹ ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಲು ಮುಂದಾಗಿದ್ದಾರೆ. ಇದಕ್ಕೆ ಕಾರಣಗಳೇನು? ಬಹುಶಃ ನಾವು ಮಾತನಾಡುವ ಕನ್ನಡ ಹಾಗೂ ಶಾಲೆಗಳಲ್ಲಿ ಕಲಿಯುವ, ಕಲಿಸುವ ಕನ್ನಡದ ನಡುವೆ ಅಂತರ ಜಾಸ್ತಿ ಇದೆ. ಈ ಹಿನ್ನೆಲೆಯಿಂದಲೇ ನಮ್ಮ ಮಕ್ಕಳಿಗೆ ಕನ್ನಡದ ಕಲಿಕೆ ಕಷ್ಟವಾಗುತ್ತಿದೆ ಎಂದರೆ ತಪ್ಪಾಗಲಾರದು. ಇಂದಿನ ವ್ಯಾಕರಣ ಕಲಿಸುವ ಬೋಧನೆ ಕೇವಲ ಪರೀಕ್ಷೆ ಬರೆದು ಅಂಕ ಗಳಿಸುವ ವಿಷಯವಾಗಿ ಮಾತ್ರ ಉಳಿದಿದೆ. ಅದು ನಮ್ಮ ಜೀವನ ನಿರ್ವಹಣೆಯ ಮುಖ್ಯ ಭಾಗವಾಗಿ ಅಥವಾ ಶೈಕ್ಷಣಿಕ ಚಟುವಟಿಕೆಯನ್ನು ನಿರ್ವಹಿಸುವ, ವಿಸ್ತರಿಸುವ ಭಾಗವಾಗಿ ಮುಂದುವರಿಯಬೇಕಿದೆ. ಅಂದರೆ ಪ್ರಾಥಮಿಕ ಹಂತದಲ್ಲಿ ಕಲಿಯುವ ವ್ಯಾಕರಣಾಂಶಗಳು ಕ್ರಿಯಾತ್ಮಕ ಸೃಜನಾತ್ಮಕ ಮತ್ತು ಪ್ರೇರಣಾತ್ಮಕ ಭಾಗಗಳಾಗಿ ಉಳಿಯಬೇಕಾಗಿದೆ.

ಇಂತಹ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕೆ.ವಿ. ನಾರಾಯಣ, ಡಿ.ಎನ್. ಶಂಕರಭಟ್ಟರು ಹಾಗೂ ಕನ್ನಡವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನದ ಅಧ್ಯಾಪಕರು ಮತ್ತು ಇತರ ವಿದ್ವಾಂಸರುಗಳು ಇತ್ತೀಚಿನ ದಿನಗಳಲ್ಲಿ ತಮ್ಮ ಬರಹಗಳಲ್ಲಿ ಮಂಡಿಸುತ್ತಿದ್ದಾರೆ. ಅಂದರೆ ಕನ್ನಡ ಭಾಷೆಯಲ್ಲಿ ಸಂಸ್ಕೃತ ಪದಗಳಿಗೆ ಮಾನ್ಯತೆ ನೀಡುವ ಹಾಗೆ ಹಿಂದಿ, ಇಂಗ್ಲೀಶ್, ಪರ್ಶಿಯನ್, ಅರೇಬಿಕ್ ಮೊದಲಾದ ಭಾಷೆಗಳಿಂದ ಬಂದಿರುವ ಪದಗಳಿಗೆ ಮಾನ್ಯತೆ ನೀಡುತ್ತಿಲ್ಲದಿರುವುದು ಪ್ರಾಥಮಿಕ ಪಠ್ಯಗಳನ್ನು ಗಮನಿಸಿದಾಗ ಸ್ಪಷ್ಟವಾಗುತ್ತದೆ ಎಂದು ಹೇಳುತ್ತಾರೆ. ಅಂದರೆ ತಾರತಮ್ಯ ನೀಡುತ್ತಿದ್ದಾರೆಂದು ಅವರು ಅಭಿಪ್ರಾಯ ಪಡುತ್ತಾರೆ. ಸಂಸ್ಕೃತದ ವ್ಯಾಕರಣ ಅಂಶಗಳನ್ನು ಬರಹದಲ್ಲಿರುವಂತೆ ಉಚ್ಚಾರಣೆ ಮಾಡಿದರೆ ಮಾತ್ರ ಶುದ್ಧವಾದ ಕನ್ನಡದ ಉಚ್ಚಾಣೆವಾಗುವುದೆಂದು ಸಂಪ್ರದಾಯ ವಾದಿಗಳು ಬಿಂಬಿಸುತ್ತಾ ಬಂದಿದ್ದಾರೆ. ಆದರೆ ಆಧುನಿಕ ಚಿಂತಕರು ಕನ್ನಡದಲ್ಲಿ ಇತರೆ ಭಾಷೆಗಳಿಂದ ಬಂದಿರುವ ವ್ಯಾಕರಣಾಂಶಗಳನ್ನು ಅಶುದ್ಧವಾದ ರಚನೆ ಎಂದು ವಿಶ್ಲೇಷಿಸುವಲ್ಲಿ ಸಫಲರಾಗಿದ್ದಾರೆ. ಆದರೆ ಈ ತಿಳುವಳಿಕೆಯನ್ನು ಸಾಮಾಜಿಕರಲ್ಲಿ ಬರುವಂತೆ ಮಾಡಬೇಕಾದ ಅವಶ್ಯಕತೆ ಇಂದು ಇದೆ. ಶಾಲೆಯ ಆವರಣದಲ್ಲಿ ಮಕ್ಕಳಿಗೆ ವ್ಯಾಕರಣವನ್ನು ಕಲಿಸುವಾಗ ಸಂದಿ, ಸಮಾಸವನ್ನು ಬಿಡಿಸಿ ಬೋಧನೆ ಮಾಡುವುದು ಇಂದು ಅನಗತ್ಯವಾದ ಹೊರೆಯಾಗುತ್ತಿದೆ. ಏಕೆಂದರೆ ಒಂದು ಭಾಷೆಯನ್ನು ಕಟ್ಟುವುದು ಸರಿಯಾದ ಕ್ರಮ. ಅಂದರೆ ಇದರ ಅರ್ಥ

ಮಕ್ಕಳಿಗೆ ಪದಗಳನ್ನು ಕೂಡಿಸುವ ಕೌಶಲವನ್ನು ಬೋಧನೆ ಮಾಡಬೇಕೇ ವಿನಃ ಪದಗಳನ್ನು ವಿಭಜನೆ ಮಾಡುವುದನ್ನು ಬೋಧನೆ ಮಾಡುವುದು ಸರಿಯಾದ ಕ್ರಮವಲ್ಲ.

ಶಾಲೆಗಳಲ್ಲಿ ವ್ಯಾಕರಣ ಬೋಧಿಸುವಾಗ ಕನ್ನಡದ್ದಲ್ಲದ ವ್ಯಾಕರಣಾಂಶಗಳನ್ನು ಬೋಧಿಸುವುದನ್ನು ಕಾಣುತ್ತೇವೆ. ಉದಾಹರಣೆಗೆ ಕನ್ನಡ ಸಂಧಿಗಳನ್ನು ಬೋಧನೆ ಮಾಡುವಾಗ ಶ್ಚುತ್ವಸಂಧಿ, ಛತ್ವಸಂಧಿ, ವೃದ್ಧಿಸಂಧಿ ಎಂಬ ಪರಿಭಾಷೆಗಳನ್ನು ಬಳಕೆ ಮಾಡುವುದು ಅನಗತ್ಯವಾದ ಹೊರೆಯಾಗಿದೆ ಎಂಬುದು ಪ್ರಾಥಮಿಕ ಪಠ್ಯಗಳನ್ನು ಗಮನಿಸಿದಾಗ ಸ್ಪಷ್ಟವಾಗುತ್ತದೆ. ಇದರ ಬದಲು ಸಂಧಿ ಪದಗಳಲ್ಲಿ ನಡೆದಿರುವ ಧ್ವನಿ ಬದಲಾವಣೆಗಳನ್ನು ಪರಿಚಯಿಸುವುದು ಸೂಕ್ತ ಕ್ರಮವೆಂದು ಹೇಳಬಹುದು. ಶಾಲೆಯ ಆವರಣದಲ್ಲಿ ಮಕ್ಕಳಿಗೆ ವ್ಯಾಕರಣ ಭಾಗಗಳನ್ನು ಪರಿಚಯಿಸುವುದಕ್ಕೆ ೪೯ ಅಕ್ಷರಗಳನ್ನು ಬಳಸುತ್ತಾ ಬಂದಿದ್ದಾರೆ. ಇದಕ್ಕೆ ಬದಲು ಕೇವಲ ೩೩ ಅಕ್ಷರಗಳನ್ನು ಬಳಸಿಕೊಂಡು ಸಮಗ್ರ ಕನ್ನಡ ವ್ಯಾಕರಣವನ್ನು ವಿಶ್ಲೇಷಿಸಬಹುದು ಎಂದು ಆಧುನಿಕ ಚಿಂತಕರು ಅಭಿಪ್ರಾಯಪಡುತ್ತಾರೆ.

ಕನ್ನಡ ಸಂಧಿಗಳನ್ನು ಬೋಧನೆ ಮಾಡುವಾಗ ಸಂಸ್ಕೃತದ ಸಂಧಿಗಳು ಮತ್ತು ಕನ್ನಡದ ಸಂಧಿಗಳೆಂದು ವರ್ಗೀಕರಿಸಿ ಬೋಧನೆ ಮಾಡಲಾಗುತ್ತದೆ. ಅಲ್ಲದೆ ಸಮಾಸ ಪರಿಚಯದ ಸಂದರ್ಭದಲ್ಲೂ ಸಹ ಸಂಸ್ಕೃತ ಕನ್ನಡ ಪದಗಳ ಮಿಶ್ರಣದ ಪದಗಳನ್ನು ಬಿಡಿಸಿ ವರ್ಗೀಕರಿಸಿ ಬೋಧನೆ ಮಾಡುವುದನ್ನು ಕಾಣುತ್ತೇವೆ. ಇದರ ಹಿಂದಿರುವ ಉದ್ದೇಶ ಕನ್ನಡ ಮತ್ತು ಸಂಸ್ಕೃತ ಭಾಷೆಗಳು ಬೇರೆ ಬೇರೆ ಭಾಷಾ ಪರಿವಾರಕ್ಕೆ ಸೇರಿದವುಗಳಾಗಿವೆ. ಆದರೆ ಪಠ್ಯದಲ್ಲಿ ಮಾತ್ರ ಸುದೀರ್ಘವಾಗಿ ಬಳಕೆಯಾಗಿವೆ. ಅಲ್ಲದೆ ಈ ಎರಡು ಭಾಷೆಗಳ ಭಾಷಿಕ ನಿಯಮಗಳು ಬೇರೆ ಬೇರೆಯಾಗಿವೆ. ಆದರೂ ಸಹ ಪಠ್ಯಗಳಲ್ಲಿ ಬಳಕೆಯಲ್ಲಿವೆ. ಉದಾಹರಣೆಗೆ : ವೈನೋದಕ ಈ ಪದವನ್ನು ಎರಡು ರೀತಿಯಲ್ಲಿ ವಿಭಜಿಸಲು ಸಾಧ್ಯ. ಒಂದು ವೈನ್+ಉದಕ ಎಂದು, ಎರಡನೆಯದಾಗಿ ವೈನು+ಉದಕ ಎಂದು ವಿಭಜಿಸಬಹುದು. ಮೊದಲನೆಯ ರಚನೆ ಇಂಗ್ಲೀಶ್‌ನ ಉಚ್ಚಾರಣೆಯಂತೆ ವ್ಯಂಜನಾಂತ್ಯವಾಗಿ ಬಳಸಲಾಗಿದೆ. ಎರಡನೇ ಮಾದರಿಯಲ್ಲಿ ಇಂಗ್ಲೀಶ್ ಪದವನ್ನು ಸ್ವರಾಂತ್ಯಗೊಳಿಸಿ ವಿಭಜಿಸಲಾಗಿದೆ. ವೈನು+ ಉದಕ = ವೈನೋದಕ ಎನ್ನುವಾಗ ಕನ್ನಡ ಸಂಧಿ ಸಂದರ್ಭದಲ್ಲಿ 'ಉ' ಲೋಪವಾಗಿ ಲೋಪಸಂಧಿಯಾಗಿದೆ. ಆದರೆ ಸಂಸ್ಕೃತ ಸಂಧಿ ನಿಯಮದ ಪ್ರಕಾರ ಗುಣಸಂಧಿ ನಿಯಮವಿದೆ. ಆದರೆ ಗುಣಸಂಧಿ ರಚಿಸುವಾಗ ಸಂಸ್ಕೃತ ಮತ್ತು ಸಂಸ್ಕೃತ ಪದಗಳು ಸೇರಿಸಿ ರಚನೆ ಮಾಡುವುದನ್ನು ಕಾಣುತ್ತೇವೆ. ಇಂತಹ ಮಾದರಿಗಳು ಕನ್ನಡ ಭಾಷೆಯಲ್ಲಿ ಬಳಕೆಯಲ್ಲಿವೆ. ಹೀಗೆ ಬಳಕೆಯಲ್ಲಿರುವ ಮಾದರಿಗಳನ್ನು ಸಂಸ್ಕೃತ ಸಂಧಿ ನಿಯಮದಲ್ಲಿ ವಿವರಿಸಬೇಕೆ? ಅಥವಾ ಕನ್ನಡ ಸಂಧಿ ನಿಯಮದಲ್ಲಿ ವಿವರಿಸಬೇಕೆ? ಎಂಬುದು ಪ್ರಶ್ನೆಯಾಗಿದೆ. ಇಂತಹ ಸಮಸ್ಯೆಗಳಿಗೆ ಪರಿಹಾರವನ್ನು ಕನ್ನಡಪರ ರಾಷ್ಟ್ರ ಚಿಂತಕರು, ಶಿಕ್ಷಣ ತಜ್ಞರು, ಮನೋವಿಜ್ಞಾನಿಗಳು ಒಂದು ವೇದಿಕೆಯಲ್ಲಿ ಚರ್ಚೆ ಮಾಡಿ ನಿರ್ಧಾರಕ್ಕೆ ಬರಬೇಕಾಗಿದೆ.

ಮೂರನೇ ಭಾಗದಲ್ಲಿ ಸಮಕಾಲೀನ ಸಂದರ್ಭದ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆಯನ್ನು ಕುರಿತು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಕರ್ನಾಟಕದಲ್ಲಿ ಭಾಷಾ ನೀತಿಗೂ ಹಾಗೂ ಶಿಕ್ಷಣ ನೀತಿಗೂ ಪರಸ್ಪರ ಸಂಬಂಧವಿಲ್ಲವೆಂದೆನಿಸುತ್ತದೆ. ಸರ್ಕಾರಗಳು ಬದಲಾದಂತೆ ಶಿಕ್ಷಣ ನೀತಿಗಳು ಬದಲಾವಣೆಗೊಳಗಾಗುತ್ತಿವೆ. ಆದರೆ ಭಾಷಾ ನೀತಿ ಮಾತ್ರ ಯಾವ ಬದಲಾವಣೆಗೆ ಒಳಗಾಗದೆ ತಟಸ್ಥವಾಗಿದೆ. ಇಂದಿನ ಕರ್ನಾಟಕದ ಭಾಷಿಕರ ಬರಹಗಳನ್ನು ಗಮನಿಸಿದಾಗ ಶಿಕ್ಷಣ ನೀತಿ ಒಳಗೆ ಎಲ್ಲರೂ ಇದ್ದಾರೆ. ಆದರೆ ಭಾಷಾ ನೀತಿಯಲ್ಲಿ ಹೊರಗುಳಿದಿದ್ದಾರೆ. ಇಂತಹ ವಿವರಗಳೊಂದಿಗೆ ಪ್ರಸ್ತುತ ಅಧ್ಯಯನದಲ್ಲಿ ಚರ್ಚೆ ಮಾಡಲಾಗಿದೆ.

ಪ್ರಸ್ತುತ ಅಧ್ಯಯನದ ಈ ಎಲ್ಲಾ ವಿವರಗಳನ್ನು ಗಮನಿಸಿದಾಗ ಅದರದೇ ಆದ ಮಹತ್ವವನ್ನು ಹೊಂದಿದೆ. ಶೈಕ್ಷಣಿಕ ಕ್ಷೇತ್ರಕ್ಕೆ ಇದರ ಪ್ರಯೋಜನ ಅನನ್ಯವಾದದ್ದು. ಹೇಗೆಂದರೆ ಪ್ರಾಥಮಿಕ ಶಿಕ್ಷಣ ಇಲಾಖೆಯು ಮುಂದಿನ ದಿನಗಳಲ್ಲಿ ಶೈಕ್ಷಣಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವಾಗ ಇಂತಹ ಅಧ್ಯಯನಗಳು ಸಹಾಯಕ್ಕೆ ಬರುತ್ತವೆ ಎಂದರೆ ಅತಿಶಯೋಕ್ತಿ ಆಗಲಾರದು. ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ಕುರಿತು ಮಾತನಾಡುವ ಸಂದರ್ಭದಲ್ಲಿ ಕನ್ನಡ 'ಕಲಿ–ನಲಿ' ಒಂದು, ಎರಡು, ಮೂರು, ನಾಲ್ಕು, ಕನ್ನಡ ಕಸ್ತೂರಿ–೫ ಹೀಗೆ ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕಗಳನ್ನು ಮಾತ್ರ ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಹೀಗೆಯೇ ತೆಗೆದುಕೊಂಡ ವಿಚಾರಗಳನ್ನು ಒಂದು ಚೌಕಟ್ಟಿಗೆ ಅಳವಡಿಸಿಕೊಳ್ಳಬೇಕಾದ ಕ್ರಮ ಸಂಶೋಧನೆಯಲ್ಲಿ ಮಹತ್ತರವಾದ ಪಾತ್ರವನ್ನು ವಹಿಸುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಈಗಾಗಲೇ ಚಾಲ್ತಿಯಲ್ಲಿರುವ ಕನ್ನಡ ಭಾಷಾ ಪಠ್ಯಗಳನ್ನು ಗಮನದಲ್ಲಿಟ್ಟುಕೊಂಡು ವಿವರಣೆಯ ಮೂಲಕ ವಿಶ್ಲೇಷಣೆ ಮಾಡಲಾಗಿದೆ. ವಿಶ್ಲೇಷಣೆ ಮಾಡುವಾಗ ಕ್ಷೇತ್ರಕಾರ್ಯ ಆಧಾರಿತ ಮಾಹಿತಿಯನ್ನು ತುಂಬಾ ಕಡಿಮೆ ಪ್ರಮಾಣದಲ್ಲಿ ಬಳಸಲಾಗಿದೆ. ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯಗಳನ್ನು ಸಾಹಿತ್ಯಿಕ ನೆಲೆಯಲ್ಲಿ ಅಧ್ಯಯನ ಮಾಡದೇ ಭಾಷಿಕ ಮತ್ತು ಶೈಕ್ಷಣಿಕ (ಧ್ವನಿ, ಪದ, ವಾಕ್ಯ, ಪದಕೋಶ, ಬೋಧನೆ, ಪಠ್ಯಕ್ರಮ, ಶಿಕ್ಷಕ, ವಿದ್ಯಾರ್ಥಿ, ಪರೀಕ್ಷೆ, ಪ್ರಶ್ನೆಪತ್ರಿಕೆ, ಮೌಲ್ಯಮಾಪನ ಇತ್ಯಾದಿ) ನೆಲೆಯಲ್ಲಿ ಅಧ್ಯಯನ ಮಾಡಿದೆ. ಜೊತೆಗೆ ವಿಶ್ಲೇಷಣೆ ಸಂದರ್ಭದಲ್ಲಿ ಭಾಷಾ ತಜ್ಞರು, ಶೈಕ್ಷಣಿಕ ಮನೋವಿಜ್ಞಾನಿಗಳು ಮತ್ತು ಶಿಕ್ಷಣ ತಜ್ಞರನ್ನು ಸಂದರ್ಶಿಸಿ ಅವರು ನೀಡಿದ ವಿಧಾನಗಳನ್ನು ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡು ಚರ್ಚಿಸಲಾಗಿದೆ. ಅಲ್ಲದೆ ಈಗಾಗಲೇ ಕರ್ನಾಟಕ ಸರ್ಕಾರ ಪ್ರಕಟಿಸಿರುವ ಶಿಕ್ಷಕರ ಕೈಪಿಡಿ, ಕನಿಷ್ಠ ಕಲಿಕಾ ಮಟ್ಟ, ಬೋಧನೆ ವ್ಯವಸ್ಥೆ, ಪಾಠೋಪಕರಣಗಳಂತಹ ಅಂಶಗಳು ಹಾಗೂ ಸಂಶೋಧನಾ ಬರಹಗಳನ್ನು ಬಳಸಿಕೊಳ್ಳುವುದರ ಮೂಲಕ ಅಧ್ಯಯನದ ವೈಧಾನಿಕತೆಯನ್ನು ರೂಪಿಸಿಕೊಳ್ಳಲಾಗಿದೆ.

ಹೀಗೆ ರೂಪಿಸಿದ ಅಧ್ಯಯನದಿಂದ ಶೈಕ್ಷಣಿಕವಾಗಿ ಹಲವಾರು ಪ್ರಯೋಜನಗಳು ಇವೆ. ಪ್ರಾಚೀನ ಕಾಲದಿಂದ ಬ್ರಿಟೀಶ್ ಕಾಲದವರೆಗೂ ರಚನೆಯಾದ ಪಠ್ಯಕ್ರಮವು ಧಾರ್ಮಿಕ ಹಿನ್ನೆಲೆಯಿಂದ ರಚನೆಯಾಗಿರುವುದು ತಿಳಿದು ಬಂದಿದೆ. ಹಾಗೆಯೇ ಸ್ವಾತಂತ್ರದ ನಂತರದಲ್ಲಿ ರಚನೆಯಾದ ಪಠ್ಯಕ್ರಮವು ಪ್ರಾದೇಶಿಕತೆಗಿಂತ ರಾಷ್ಟ್ರೀಯತೆಗೆ ಹೆಚ್ಚು ಒತ್ತು ಕೊಟ್ಟ ಅಂಶಗಳು ಬಿಂಬಿತವಾಗಿವೆ. ಗದ್ಯ ಮತ್ತು ಪದ್ಯ ಎರಡರಲ್ಲೂ ರಾಷ್ಟ್ರಾಭಿಮಾನ ಮತ್ತು ರಾಷ್ಟ್ರ ನಾಯಕರ ಕುರಿತಾದ ವಿಚಾರಗಳು, ಕನ್ನಡ ನಾಡು ನುಡಿ, ಸಂಸ್ಕೃತಿಯನ್ನು ಬಿಂಬಿಸುವ ಪಠ್ಯಗಳು ರೂಪಸಾದೃಶ ವಿಧಾನದಿಂದ ರಚನೆಯಾಗಿವೆ. ಹಾಗೆಯೆ ಕನ್ನಡ ವರ್ಣಮಾಲೆಯಲ್ಲಿ ಬೋಧನೆ ಮಾಡುವಾಗ 'ಅ' ದಿಂದ 'ಳ' ವರೆಗಿನ ಕಲಿಸುವ ವಿಧಾನ ಮಾತ್ರ ಚಾಲನೆ ಇತ್ತು. ಆದರೆ ೧೯ನೇ ಶತಮಾನದ ನಂತರದಲ್ಲಿ ಭಾಷಾ ವಿಜ್ಞಾನ ಪ್ರವೇಶ ಪಡೆದ ಮೇಲೆ ಬೋಧನೆಯ ವಿಧಾನದಲ್ಲಿ, ಪಠ್ಯಕ್ರಮ ರಚನೆಯಲ್ಲಿ ಹಲವಾರು ಬದಲಾವಣೆಗಳು ಆಗಿವೆ. ಅದರಲ್ಲೂ ಸಮಕಾಲೀನ ಸಂದರ್ಭದಲ್ಲಿ ರ, ಗ, ಸ, ದ, ಅ ಎಂಬ ಭಾಷಾ ವೈಧಾನಿಕ ವಿಧಾನ ಇಂದು ಮಕ್ಕಳ ಅಕ್ಷರ ಕಲಿಕೆಗೆ ಪೂರಕವಾಗಿ ಪರಿಣಾಮಕಾರಿಯಾಗಿದೆ. ಆದರೆ ಈ ವಿಧಾನ ಅಕ್ಷರಗಳ ರಚನಾ ದೃಷ್ಟಿಯಿಂದ ಮಾತ್ರ ಒಳಿತು.

ಪ್ರಸ್ತುತ ಅಧ್ಯಯನದಲ್ಲಿ ಕೆಲವು ಕೊರತೆಗಳನ್ನು ಅಧ್ಯಯನ ಫಲಿತದಲ್ಲಿ ದಾಖಲಿಸಲಾಗಿದೆ. ಅಭ್ಯಾಸದ ಭಾಗಕ್ಕೂ ಪಾಠಕ್ಕೂ ಸಂಬಂಧವಿಲ್ಲದೆ ಇರುವ ಅಂಶಗಳನ್ನು ಶೋಧಿಸಲಾಗಿದೆ. ಹೀಗೆಯೇ ಹಲವಾರು ವಿಷಯಗಳು ಋಣಾತ್ಮಕವಾಗಿ ಮತ್ತು ಧನಾತ್ಮಕವಾಗಿ ಇರುವುದನ್ನು ಗಮನಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಪ್ರಸ್ತುತ ಅಧ್ಯಯನ ಮುಂದಿನ ದಿನಗಳಲ್ಲಿ ಪ್ರಥಮ ಭಾಷೆ, ದ್ವಿತೀಯ ಭಾಷೆ ತೃತೀಯ ಭಾಷೆಯನ್ನುಕಲಿಯುವ ವಿದ್ಯಾರ್ಥಿಗಳ ಪಠ್ಯ ವಿಶ್ಲೇಷಣೆಗೆ ದಾರಿ ತೋರಿದರೆ ಈ ಪ್ರಯತ್ನ ಸಾರ್ಥಕವೆನಿಸುತ್ತದೆ. ಅಲ್ಲದೆ ಎರಡನೇ ಭಾಷೆಯಾಗಿ ಬಳಕೆಯಲ್ಲಿರುವ ಪಠ್ಯಗಳ ರಚನೆ ಕುರಿತು ಅಧ್ಯಯನಕ್ಕೆ ಸಹಾಯಕವಾಗುವುದು. ಹಾಗೆಯೇ ಸಮಾಜ, ವಿಜ್ಞಾನ ಪಠ್ಯಗಳ ವಿಶ್ಲೇಷಣೆಯೂ ಸಹ ಈ ಮಾದರಿಯಲ್ಲಿ ಜರುಗಿದರೆ ಒಳ್ಳೆಯದು. ಒಟ್ಟಾರೆ ಸಂಸ್ಕೃತ ವ್ಯಾಕರಣದ ನಿಯಮದಡಿ ಕನ್ನಡ ಭಾಷೆಯ ರಚನೆಯ ವಿಶ್ಲೇಷಣೆ ಹೇಗೆ ಭಿನ್ನ ಎಂಬುದು ಪ್ರಸ್ತುತ ಅಧ್ಯಯನದಿಂದ ತಿಳಿದು ಬಂದಿದೆ. ಕನ್ನಡ ಭಾಷೆಯಲ್ಲಿ ಈ ಮಾದರಿ ಗೊಂದಲಗಳು ಇರುವುದಕ್ಕೆ ಪ್ರಮುಖವಾದ ಕಾರಣವೆಂದರೆ ಹಳಗನ್ನಡದ ವೈಯಾಕರಣಿಗಳು ಸಂಸ್ಕೃತ ವ್ಯಾಕರಣವನ್ನು ಮಾದರಿಯಾಗಿರಿಸಿಕೊಂಡಿರುವುದು ಒಂದು ಕಾರಣವಾಗಿದೆ. ಜೊತೆಗೆ ಸಂಸ್ಕೃತ ಭಾಷೆಯೇ ದೇವ ಭಾಷೆ, ಶಾಸ್ತ್ರ ಅಧ್ಯಯನಕ್ಕೆ ಯೋಗ್ಯವಾದ ಭಾಷೆ ಎಂಬ ನಂಬಿಕೆ ಇದ್ದುದು ಕಾರಣವಾಗಿದೆ.

• **ಅಧ್ಯಯನದ ಫಲಿತಗಳು**

* ಪ್ರಚಲಿತ ಶಿಕ್ಷಣ ವ್ಯವಸ್ಥೆಯಲ್ಲಿ ಯೋಜನೆಗಳು ಹೆಚ್ಚಾಗಿವೆ. ಆದರೆ ಬೋಧನಾ ವಿಧಾನಗಳು ಅಥವಾ ಕಲಿಕೆಯ ವಿಧಾನಗಳನ್ನು ಕುರಿತು ಸಂಶೋಧನೆಗಳು ತುಂಬಾ ಕಡಿಮೆ ಪ್ರಮಾಣದಲ್ಲಿ ನಡೆದಿವೆ ಎಂಬುದು ಅಧ್ಯಯನದ ಸಮೀಕ್ಷೆಯಿಂದ ತಿಳಿದು ಬಂದಿದೆ.

* ಪ್ರಾಚೀನ ಕಾಲದಿಂದ ಬ್ರಿಟೀಶರ ಕಾಲದವರೆಗೆ ರಚನೆಯಾದ ಪಠ್ಯಕ್ರಮವು ಧಾರ್ಮಿಕ ಹಿನ್ನೆಲೆಯಲ್ಲಿ ರಚನೆಯಾಗಿರುವುದು ಈ ಅಧ್ಯಯನದಿಂದ ತಿಳಿದು ಬಂದಿದೆ.

* ಚಾರಿತ್ರಿಕವಾಗಿ ರಚನೆಯಾದ ಪಠ್ಯಗಳನ್ನು ಅಧ್ಯಯನ ಮಾಡಿದಾಗ ಆಯಾ ಕಾಲಕ್ಕೆ ತಕ್ಕಂತೆ ರಚನಾ ಸ್ವರೂಪದಲ್ಲಿ ಬದಲಾವಣೆಯಾಗಿರುವುದು ಪ್ರಸ್ತುತ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

* ಸ್ವಾತಂತ್ರ್ಯದ ನಂತರದಲ್ಲಿ ರಚನೆಯಾದ ಪಠ್ಯಕ್ರಮವು ಪ್ರಾದೇಶಿಕತೆಗಿಂತ ರಾಷ್ಟ್ರೀಯತೆಗೆ ಹೆಚ್ಚು ಒತ್ತು ಕೊಟ್ಟ ಅಂಶಗಳು ಪ್ರತಿಬಿಂಬಿತವಾಗುತ್ತವೆ. ಗದ್ಯ, ಪದ್ಯ ಎರಡರಲ್ಲೂ ರಾಷ್ಟ್ರಾಭಿಮಾನ, ರಾಷ್ಟ್ರನಾಯಕರ ಕುರಿತಾದ ವಿಚಾರಗಳು ಗಮನಾರ್ಹವಾಗಿವೆ. ಕನ್ನಡನಾಡು, ನುಡಿ, ಸಂಸ್ಕೃತಿಯನ್ನು ದೇಶದ ಒಂದು ಅಂಗವಾಗಿ ನೋಡುವ ಪರಿಪಾಠವಾಗಿದೆ ಎಂಬುದು ಈ ಅಧ್ಯಯನದಿಂದ ತಿಳಿದು ಬರುತ್ತದೆ.

* ಪ್ರಸ್ತುತ ಅಧ್ಯಯನದಿಂದ ಕನ್ನಡಭಾಷಾ ಪಠ್ಯಗಳು ರೂಪಸಾದೃಶ್ಯ ವಿಧಾನದಿಂದ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಆದರೆ ಈ ವಿಧಾನ ಬೋಧನೆಯಲ್ಲಿ ಒಂದು ವಿಧಾನವಷ್ಟೇ. ಅದೇ ಪ್ರಧಾನವಲ್ಲ ಎಂಬುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

* ಕನ್ನಡದ ವರ್ಣಗಳನ್ನು (ಧ್ವನಿಗಳನ್ನು) 'ಅ' ದಿಂದ 'ಳ' ವರೆಗಿನ ಅಕ್ಷರಗಳನ್ನು ಕಲಿಸುವುದು ಸಾಂಪ್ರದಾಯಕ ವಿಧಾನವಾಗಿದ್ದು, ಭಾಷಾ ವೈಜ್ಞಾನಿಕ ವಿಧಾನದಿಂದ 'ರ ಗ ಸ ದ ಅ' ಎಂಬ ವಿಧಾನದಲ್ಲಿ ಕಲಿಸುತ್ತಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಆದರೆ ಈ ವಿಧಾನದಿಂದ ಮಕ್ಕಳ ಕಲಿಕೆ ಸ್ಪಷ್ಟವಾಗದೆ ಇರುವ ಅಂಶವನ್ನು ಕಂಡುಕೊಳ್ಳಲಾಗಿದೆ.

* ಧ್ವನಿ, ಪದ, ವಾಕ್ಯ ಮತ್ತು ಪದಕೋಶಗಳ ಸ್ವರೂಪವನ್ನು ಬೇರೆ ಬೇರೆ ವಿಧಾನದಿಂದ ಬೋಧನೆ ಮಾಡುತ್ತಿರುವುದು ಪ್ರಸ್ತುತ ಅಧ್ಯಯನದಿಂದ ತಿಳಿದು ಬರುತ್ತಿದೆಯಾದರೂ ಈ ವಿಧಾನ ಎಲ್ಲಾ ಸಂದರ್ಭಗಳಲ್ಲಿಯೂ ಬಳಕೆಯಾಗದೆ ಇರುವುದನ್ನು ಗುರುತಿಸಲಾಗಿದೆ.

* ಒಂದರಿಂದ ಏಳನೇ ತರಗತಿಯವರೆಗೆ ರಚನೆಯಾದ ಕನ್ನಡ ಭಾಷಾ ಪಠ್ಯಕ್ರಮವು ಸಾಮಾಜಿಕ ವರ್ಗಗಳು ಮತ್ತು ಶಿಕ್ಷಣಕ್ಕೆ ಪರಸ್ಪರ ಸಂಬಂಧ ಇಲ್ಲದಂತೆ ರಚನೆಯಾಗಿವೆ. ಹೇಗೆಂದರೆ ಔಪಚಾರಿಕ ಶಿಕ್ಷಣದಲ್ಲಿ ಒಂದು ರೂಪವನ್ನು ಕಲಿಸಿದರೆ ಅನೌಪಚಾರಿಕ ನೆಲೆಯಲ್ಲಿ ಇನ್ನೊಂದನ್ನು ಕಲಿಸುತ್ತಿರುವುದು ಈ ಅಧ್ಯಯನದಿಂದ ತಿಳಿಯಲಾಗಿದೆ.

* ಪ್ರಚಲಿತ ಪ್ರಾಥಮಿಕ ಕನ್ನಡಭಾಷಾ ಪಠ್ಯಗಳಲ್ಲಿ ನೂತನವಾದ ಹೊಸ ಹೊಸ ಚಟುವಟಿಕೆಗಳು ಸೇರ್ಪಡೆಯಾಗಿವೆ. ಆದರೆ ಕನ್ನಡ ಕಲಿಕೆ ಸಾರ್ವತ್ರಿಕವಾಗಿ ನಡೆಯಲು ಬುನಾದಿ ಹಾಕಿ ಕೊಟ್ಟಿದೆಯಾದರೂ ಸಮರ್ಪಕವಾಗಿ ಕಲಿಕೆಯಾಗುತ್ತಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

* ಕನ್ನಡಭಾಷಾ ಪಠ್ಯಗಳ ಪಠ್ಯಕ್ರಮ ಹಲವು ಹಂತಗಳಲ್ಲಿ ಪರಿಷ್ಕರಣೆ ನಡೆದು ರಚನೆಯಾದುದಾಗಿದೆ. ಇದರಿಂದ ವಿದ್ಯಾರ್ಥಿಗಳಿಗೆ ಸುಲಭವಾಗುವ ಹಾಗೂ ಬೋಧನಾ ವಿಧಾನ ಸರಳ ರೀತಿಯಲ್ಲಿ ನಡೆಯುವಂತಹ ಮಾದರಿಯನ್ನು ಅನುಸರಿಸಲಾಗಿದೆ ಯಾದರೂ ಕೆಲವು ಸಂದರ್ಭಗಳಲ್ಲಿ ಈ ಮೇಲಿನ ನಿಯಮ ಅಳವಡಿಕೆಯಾಗದೇ ಇರುವುದು ಸಹ ಅಧ್ಯಯನದಿಂದ ತಿಳಿದು ಬರುತ್ತದೆ.

* ಈ ಪಠ್ಯಗಳ ಕೆಲವೊಂದು ಭಾಗದಲ್ಲಿ ಪಾಠಕ್ಕೂ ಅಭ್ಯಾಸ ಚಟುವಟಿಕೆಗೂ ಸಂಬಂಧ ಇಲ್ಲದೆ ಇರುವುದು ಈ ಅಧ್ಯಯನದಿಂದ ತಿಳಿದು ಬರುತ್ತದೆ.

* ಪ್ರಚಲಿತ ಕನ್ನಡಭಾಷಾ ಪಠ್ಯಗಳಲ್ಲಿ ಕನ್ನಡ ಭಾಷಾ ಕೌಶಲಗಳನ್ನು ಬೋಧಿಸಿ ಕಲಿಕೆಯ ಮೌಲ್ಯಮಾಪನವು ಅಭ್ಯಾಸ ಚಟುವಟಿಕೆಯ ಮೂಲಕ ನಡೆಯುತ್ತಿರುವುದು ಈ ಅಧ್ಯಯನದಿಂದ ಸ್ಪಷ್ಟವಾಗಿದೆ.

* ಪಠ್ಯಕ್ರಮ ರಚನೆಯಾನುಸಾರ ಪಾಠೋಪಕರಣಗಳ ಬಳಕೆಯಾಗದೆ ಬೇರೆ ಇನ್ನೊಂದು ವಸ್ತುವನ್ನು ಅಥವಾ ವ್ಯಕ್ತಿಯನ್ನು ಪ್ರತಿಬಿಂಬಿಸುವ ಚಿತ್ರಗಳು ರಚನೆಯಾಗಿರುವುದು ಈ ಅಧ್ಯಯನದಿಂದ ಸ್ಪಷ್ಟವಾಗಿದೆ.

* ಲೇಖನ ಚಿಹ್ನೆಗಳ ಬಗ್ಗೆ ತರಗತಿಗನುಗುಣವಾಗಿ ವ್ಯಾಖ್ಯಾನಗಳನ್ನು ಕೊಡದೆ ಪೂರ್ವ ಪ್ರಾಥಮಿಕ ಹಂತದಲ್ಲಿ ವಿವರಿಸುವ ಪ್ರಯತ್ನಗಳು ನಡೆದಿರುವ ಅಂಶ ಕಂಡುಬರುತ್ತದೆ. ಜೊತೆಗೆ ಈ ಎಲ್ಲಾ ಪಠ್ಯಗಳಲ್ಲಿನ ಪಾಠ/ಪದ್ಯ ಹಾಗೂ ಅಭ್ಯಾಸ ಚಟುವಟಿಕೆಯಲ್ಲಿ ಲೇಖನ ಚಿಹ್ನೆಗಳು ಸಮರ್ಪಕವಾಗಿ ಬಳಕೆಯಾಗದೆ ಇರುವುದು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

• **ಮುಂದೆ ನಡೆಯಬಹುದಾದ ಅಧ್ಯಯನ ಸಾಧ್ಯತೆಗಳು**

ಈ ಒಂದು ಅಧ್ಯಯನದಲ್ಲಿ ಪ್ರಾಥಮಿಕ ಹಂತದಲ್ಲಿ ಭಾಷಿಕ ಮತ್ತು ಶೈಕ್ಷಣಿಕವಾಗಿ ಕೈಗೊಂಡಿರುವ ನಿರ್ಧಾರಗಳನ್ನು ಕನ್ನಡ ಪಠ್ಯಗಳ ಮೂಲಕ ಚರ್ಚಿಸಲಾಗಿದೆ. ಅಲ್ಲದೆ ಸಮಸ್ಯೆಗಳನ್ನು ಮಾತ್ರ ಗುರುತಿಸಿದೆ.

* ಪ್ರಾಥಮಿಕ ಹಂತದ ಪ್ರಚಲಿತ ಪಠ್ಯಗಳು : ಭಾಷಿಕ ಅಧ್ಯಯನ
* ಪ್ರಥಮ ಭಾಷೆಯಾಗಿ ಕನ್ನಡವನ್ನು ಕಲಿಯುವ ಮಕ್ಕಳ ಭಾಷಿಕ ಮತ್ತು ಶೈಕ್ಷಣಿಕ ಅಧ್ಯಯನ (ಪ್ರಾಥಮಿಕ ಶಾಲೆಯ ಮಕ್ಕಳನ್ನು ಅನುಲಕ್ಷಿಸಿ)

• • •

# ಅನುಬಂಧಗಳು

* ಪರಾಮರ್ಶನ ಗ್ರಂಥಗಳು
* ಅಧ್ಯಯನಕ್ಕೆ ಬಳಸಿಕೊಂಡ ಪ್ರಾಥಮಿಕ ಕನ್ನಡ ಭಾಷಾ ಪಠ್ಯಪುಸ್ತಕಗಳು
* ಪ್ರಸ್ತುತ ಅಧ್ಯಯನಕ್ಕಾಗಿ ಪರಾಮರ್ಶಿಸಲಾದ ಪಿಎಚ್.ಡಿ. ಮಹಾಪ್ರಬಂಧಗಳು
* ಎಂ.ಫಿಲ್ ಪ್ರಬಂಧಗಳು
* ಎಂ.ಎ. ಶಿಕ್ಷಣ ಪದವಿಯ ಕಿರುಪ್ರಬಂಧಗಳು
* ಎಂ.ಇಡಿ. ಪದವಿಯ ಕಿರುಪ್ರಬಂಧಗಳು

# ಪರಾಮರ್ಶನ ಗ್ರಂಥಗಳು


* **ಅನಸೂಯ ವಿ ಪರಗಿ** : ಮಾತೃಭಾಷೆ ಕನ್ನಡ ತತ್ವ ಮತ್ತು ಬೋಧನಾ ಮಾರ್ಗ, ವಿವೇಕ ಪ್ರಕಾಶನ ಚಿಕ್ಕಬಳ್ಳಾಪುರ, ೨೦೦೭.
* **ಅಮರ್‌ಜಿತ್ ಸಿನ್ಹಾ** : ಕನ್ನಡಕ್ಕೆ ಅನುವಾದ ಶ್ರೀನಿವಾಸ ಕಾರ್ಕಳ, ಪ್ರಾಥಮಿಕ ಶಿಕ್ಷಣ ದಲ್ಲಿ ಶಾಲೆಯ ಪರಿಣಾಮಕಾರಿಯಾಗಲು ಸಮುದಾಯ ಆಧಾರಿತ ನಿಗಾವಹಿಸುವಿಕೆ ಮತ್ತು ಮೌಲ್ಯಮಾಪನ, ಪ್ರಕಾಶನ ಎವ್.ಇ.ಜಿ. ಕರ್ನಾಟಕ ವಿಭಾಗ ಬೆಂಗಳೂರು.
* **ಅರವಿಂದ ಚೊಕ್ಕಾಡಿ** : ಬದುಕಿಗಾಗಿ ಶಿಕ್ಷಣ,ಲೋಹಿಯಾ ಪ್ರಕಾಶನ,ಬಳ್ಳಾರಿ, ೨೦೦೭
* **ಅರವಿಂದ ಚೊಕ್ಕಾಡಿ** : ಶಿಕ್ಷಣದಲ್ಲಿ ವ್ಯಕ್ತಿತ್ವ ವಿಕಾಸ, ಸುಮುಖ ಪ್ರಕಾಶನ, ಬೆಂಗಳೂರು, ೨೦೦೭.
* **ಅಶೋಕಕುಮಾರ ರಂಜೇರೆ** : ಭಾಷೆ ಮತ್ತು ಶಿಕ್ಷಣ, ನಿಧಿ ಪ್ರಕಾಶನ ಹೊಸಪೇಟೆ, ೨೦೦೫.
* **ಇಂದೂಧರ ಹೊನ್ನಾಪುರ** : ಸಂವಾದ, ಪೆಬ್ರವರಿ, ೨೦೦೮.
* **ಇಂದುಮತಿರಾವ್** : ಪೋರ್ಟೇಜ್ ಪ್ರಾರಂಭ 'ಶಿಶು ಶಿಕ್ಷಣದ ಮಾರ್ಗದರ್ಶಿ' ತಯಾರಿಸಿದವರು : ಸಿ.ಬಿ.ಆರ್ ನೆಟ್ ವರ್ಕ್ (ದಕ್ಷಿಣ ಏಷಿಯಾ) ೧೩೪, ೧ನೇಬ್ಲಾಕ್ ೬ನೇ ಮುಖ್ಯ ರಸ್ತೆ ಬನಶಂಕರಿ ೩ನೇ ಹಂತ ಬೆಂಗಳೂರು.
* **ಎನ್.ಸಿ.ಇ.ಆರ್.ಟಿ** : ಕನ್ನಡ ೨ ಶಿಕ್ಷಕರ ಕೈಪಿಡಿ ಪ್ರಾದೇಶಿಕ ಶಿಕ್ಷಣ ಸಂಸ್ಥೆ, ಮೈಸೂರು, ೧೯೯೮.
* **ಎನ್ಕೆ** : ಸಮಗ್ರ ಶಿಕ್ಷಣ, ಪ್ರಸಾರಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
* **ಒಂದು ಬೃಹತ್ ಯೋಜನೆ** : (ಬ್ಲೂಪ್ರಿಂಟ್) ಕನ್ನಡದ ಸರ್ವಾಂಗೀಣ ಪ್ರಗತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೮.
* **ಓಬಳೇಶ ಘಟ್ಟಿ** : ಭಾರತೀಯ ಶಿಕ್ಷಣ ಮತ್ತು ಪ್ರಚಲಿತ ಸಮಸ್ಯೆಗಳು, ಶಿವಗಂಗಾ ಪ್ರಕಾಶನ, ತೋರಣಘಟ್ಟ,
* **ಓಂಕಾರ ಕಾಕಡೆ** : ಮಹಾಜನ ವರದಿ, ಕನ್ನಡಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬.

* **ಅಂಗಡಿ ಎಸ್.ಎಸ್.** : ಕನ್ನಡ ವ್ಯಾಕರಣ ಪರಿಭಾಷೆ, ವಿದ್ಯಾನಿಧಿ ಪ್ರಕಾಶನ ಗದಗ, ೨೦೦೫–೦೬.
* **ಅಂಗಡಿ ಎಸ್.ಎಸ್**: ಕನ್ನಡ ಕ್ರಿಯಾರೂಪಗಳು, ಪ್ರಸಾರಾಂಗ,ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.
* **ಅಂಗಡಿ ಎಸ್.ಎಸ್.** : ಸಂಬಂಧ ವಾಚಕಗಳು ಮತ್ತು ಸಂಭೋದನೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೨.
* **ಕರಜಗಿ ಆರ್.ಡಿ** : ಭಾರತದ ಶಿಕ್ಷಣ ಚರಿತ್ರೆ, ಶ್ರೀಪ್ರಕಾಶನ, ಧಾರವಾಡ, ೧೯೯೩.
* **ಕವರಿ ವ್ಹಿ.ಕೆ.** : ಶಾಲಾ ಸಂಕುಲ ಯೋಜನೆ, ಜೀವನ ಶಿಕ್ಷಣ ಪತ್ರಿಕೆ ಪ್ರಕಾಶನ, ಧಾರವಾಡ–೮.
* **ಕಡಿವಾಳ ಜೆ.ಎ.** : ಪ್ರಾಥಮಿಕ ಶಾಲಾ ಮಕ್ಕಳ ವರ್ತನಾ ಸಮಸ್ಯೆಗಳು, ಪ್ರಕಟಣೆ, ಜೀವನ ಶಿಕ್ಷಣ ಪತ್ರಿಕೆಯ ಶತಮಾನೋತ್ತರ ಬೆಳ್ಳಿಹಬ್ಬ ಸಮಿತಿಯ ಪರವಾಗಿ, ೧೯೯೦.
* **ಕನ್ನಡ ಶೈಲಿ ಕೈಪಿಡಿ** : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫.
* **ಕನ್ನಡ ಸಾಹಿತ್ಯ ಪರಿಷತ್ತು** : ಸಂಕ್ಷಿಪ್ತ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ೧೯೭೫.
* **ಕರ್ನಾಟಕ ಸರ್ಕಾರ** : ಶಿಕ್ಷಕರ ಮಾರ್ಗದರ್ಶಿಕೆ, ತರಗತಿ–೧, ಪ್ರಕಾಶನ ಪಠ್ಯಪುಸ್ತಕಗಳ ನಿರ್ದೇಶನಾಲಯ ಬೆಂಗಳೂರು, ೧೯೮೮.
* **ಕರ್ನಾಟಕ ಸರ್ಕಾರ** : 'ಸೃಜನ' ಮುಖ್ಯಶಿಕ್ಷಕರ ತರಬೇತಿ ಸಂಚಿಕೆ, ಡಿ.ಎಸ್.ಇ.ಆರ್.ಟಿ. ಪ್ರಕಾಶನ, ಸಾರ್ವಜನಿಕ ಶಿಕ್ಷಣ ಇಲಾಖೆ, ೨೦೦೫.
* **ಕರ್ನಾಟಕ ಸರ್ಕಾರ** : 'ಚಿಣ್ಣರ ಅಂಗಳ,' ಅಭ್ಯಾಸ ಪುಸ್ತಕ, ಡಿ.ಎಸ್.ಇ.ಆರ್.ಟಿ, ಸರ್ವಶಿಕ್ಷಣ ಅಭಿಯಾನ, ೨೦೦೮–೦೯.
* **ಕರ್ನಾಟಕ ಸರ್ಕಾರ** : ಕೆ.ಎಸ್ ಕ್ಯೂ.ಎ.ಓ ಶಾಲಾ ಕೈಪಿಡಿ, ಕರ್ನಾಟಕ ಶಾಲಾ ಗುಣಮಟ್ಟ ಮೌಲ್ಯಾಂಕನ ಸಂಸ್ಥೆ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಮಲ್ಲೇಶ್ವರಂ, ಬೆಂಗಳೂರು–೩, ೨೦೦೫,
* **ಕರ್ನಾಟಕ ಸರ್ಕಾರ** : ಒಂದರಿಂದ ಹತ್ತನೇ ತರಗತಿಯ ಹೊಸ ಪಠ್ಯವಸ್ತುವಿನ ಮುಖ್ಯಾಂಶಗಳು, ರಾಜ್ಯಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ೨೦೦೨,
* **ಕರ್ನಾಟಕ ಸರ್ಕಾರ** : 'ಪ್ರೇರಣ' ಪ್ರಾಥಮಿಕ ಶಾಲಾ ಶಿಕ್ಷಕರಿಗಾಗಿ ಸಂಪನ್ಮೂಲ ಸಾಹಿತ್ಯ, ಡಿ.ಎಸ್.ಇ.ಆರ್.ಟಿ. ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು,
* **ಕರ್ನಾಟಕ ಸರ್ಕಾರ** : ಗುಣಮಂಥನ, ೫ಮತ್ತು ೭ನೇತರಗತಿ (ಮೌಲ್ಯಾಂಕನ ಪೂರಕ ಸಾಹಿತ್ಯ ಕೈಪಿಡಿ) ೨೦೦೭.

* **ಕರ್ನಾಟಕ ಸರ್ಕಾರ** : ಶಿಕ್ಷಕರ ಕೈಪಿಡಿ ನಲಿ-ಕಲಿ, ೨ನೇ ತರಗತಿ ಭಾಷೆ ಜನಶಾಲಾ ಕಾರ್ಯಕ್ರಮ ಕರ್ನಾಟಕ ಪ್ರಕಾಶನ, ಡಿ.ಎಸ್.ಇ.ಆರ್.ಟಿ, ಬೆಂಗಳೂರು.
* **ಕರ್ನಾಟಕ ಸರ್ಕಾರ** : ಚುಚ್ಚಿ ಚಿನ್ನಾ/ಚಿನ್ನರ ಚುಕ್ಕಿ(ಒಂದು ಎರಡು ಮತ್ತು ಮೂರನೇ ತರಗತಿ ಕನ್ನಡ, ಗಣಿತ ಮತ್ತು ಪರಿಸರ ಅಧ್ಯಯನ) ಅಂತರ್ ಕ್ರಿಯಾತ್ಮಕ ರೇಡಿಯೋ ಶಿಕ್ಷಣ ಕಾರ್ಯಕ್ರಮ, ಶಿಕ್ಷಕರ ಮಾರ್ಗದರ್ಶನ ಪ್ರಕಟಣೆ, ಎಜ್ಯೂಕೇಷನ್ ಡೆವಲೊಪ್- ಮೆಂಟ್ ಸೆಂಟರ್, ೨೦೦೬.
* **ಕರ್ನಾಟಕ ಸರ್ಕಾರ** : ಸಮಕ್ಷಮ, ಗುಣಾತ್ಮಕ ಶಾಲಾ ಶಿಕ್ಷಣದತ್ತ ಸಮುದಾಯ, ಡಿ.ಎಸ್.ಇ.ಆರ್.ಟಿ, ಪ್ರಕಾಶನ, ಬೆಂಗಳೂರು.
* **ಕರ್ನಾಟಕ ಸರ್ಕಾರ** : ನೀಲಿ ನಕ್ಷೆ ಮತ್ತು ಪ್ರಶ್ನೆಪತ್ರಿಕೆ, ಡಿ.ಎಸ್.ಇ.ಆರ್.ಟಿ, ಪ್ರಕಾಶನ ಡಿ.ಎಸ್.ಇ.ಆರ್.ಟಿ, ೨೦೦೫.
* **ಕರ್ನಾಟಕ ಸರ್ಕಾರ** : ಆಧುನಿಕ ಶಿಕ್ಷಣದಲ್ಲಿ ಮನೋವಿಜ್ಞಾನ, ಡಿ.ಎಸ್.ಇ.ಆರ್.ಟಿ, ಪ್ರಕಾಶನ, ಬೆಂಗಳೂರು, ೨೦೦೪.
* **ಕರ್ನಾಟಕ ಸರ್ಕಾರ** : ಪಠ್ಯಕ್ರಮ ಮತ್ತು ಶೈಕ್ಷಣಿಕ ತಂತ್ರಶಾಸ್ತ್ರ, ಪ್ರಕಾಶನ, ಡಿ.ಎಸ್.ಇ.ಆರ್.ಟಿ
* **ಕಾಶಿನಾಥ ಎಚ್.ಎಂ**: ರಾಷ್ಟ್ರೀಯ ಶಿಕ್ಷಣ ನೀತಿ-೧೯೮೬ ತೃಪ್ತಿ ಪ್ರಕಾಶನ, ಧಾರವಾಡ, ೧೯೮೮.
* **ಕಿಕ್ಕೇರಿ ವೀರನಾರಾಯಣ** : ಸಂಪಾದಕ : ಡಾ. ಸಿ.ಆರ್. ಚಂದ್ರಶೇಖರ್, ಮಕ್ಕಳಲ್ಲಿ ಸೃಜನಶೀಲತೆಯನ್ನು ವೃದ್ಧಿಸುವುದು ಹೇಗೆ ? ನವಕರ್ನಾಟಕ ಪ್ರಕಾಶನ, ೨೦೦೭.
* **ಕಿಕ್ಕೇರಿ ವೀರನಾರಾಯಣ** : ಚಂದ್ರಶೇಖರ ಸಿ.ಆರ್. ಆಟವೇ ಪಾಠವಾಗುವುದು ಹೇಗೆ? ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೭.
* **ಕುಮಾರ್ ಟಿ.ಎಂ** : ಪ್ರಾಥಮಿಕ ಶಿಕ್ಷಣ, ಶ್ರೀದೇವಿ ಪ್ರಕಾಶನ, ಬೆಂಗಳೂರು, ೨೦೦೪.
* **ಕುಲಕರ್ಣಿ ಕೆ.ಜಿ** : ಡಾ. ಮಹಾಬಲೇಶ್ವರರಾವ್, ಪಠ್ಯಕ್ರಮ ಕಾರ್ಯಾಚರಣೆಯ ತತ್ವಗಳು, ಪ್ರದೀಪ ಪ್ರಕಾಶನ, ಗದಗ, ೨೦೦೭.
* **ಕುಲಕರ್ಣಿ ಕೆ.ಜಿ.** : ಶಿಕ್ಷಣದ ಪರಿಕಲ್ಪನಾತ್ಮಕ ಬುನಾದಿಗಳು, ಪ್ರದೀಪ ಪ್ರಕಾಶನ, ಗದಗ, ೨೦೦೩-೦೪.
* **ಕೃಷ್ಣ ಪರಮೇಶ್ವರಭಟ್ಟ** : ನಾಗಭೂಷಣ ಸಿ, ಕನ್ನಡ : ರಚನೆ ಮತ್ತು ಬಳಕೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.
* **ಕೃಷ್ಣಪ್ಪ ಎಸ್.** : ಬೋಧನಾ ನಿಯಮಗಳು ಮತ್ತು ಶಿಕ್ಷಣ ಸಮಸ್ಯೆಗಳು, ಡಿ.ವಿ.ಕೆ. ಮೂರ್ತಿ ಮೈಸೂರು, ೧೯೮೨.

* **ಕೃಷ್ಣಪ್ಪ ಎಸ್** : ಬೋಧನಾ ತತ್ವಗಳು ಮತ್ತು ಆಧುನಿಕ ಕ್ರಮಗಳು, ಚೇತನ ಬುಕ್ ಹೌಸ್ ಬೆಂಗಳೂರು, ೨೦೦೦.
* **ಕೃಷ್ಣಶಾಸ್ತ್ರಿ ಬಾಳಿಲ ಸಿ.ಎಚ್.** : ಶಿಕ್ಷಣ ನೋಟ, ಜ್ಞಾನಗಂಗಾ ಪುಸ್ತಕ ಮಳಿಗೆ ಪುತ್ತೂರು, ದಕ್ಷಿಣ ಕನ್ನಡ, ೨೦೦೭.
* **ಕೃಷ್ಣಶಾಸ್ತ್ರಿ ಬಾಳಿಲ** : ಶಿಕ್ಷಕ–ವಿದ್ಯಾರ್ಥಿ, ಶಾರದಾ ಬುಕ್ ಹೌಸ್, ಪುತ್ತೂರು, ೧೯೯೭.
* **ಕೇರಳ ಸರ್ಕಾರ** : ಭಾಷಾ ಪರಿಚಯ–೨ನೇ ತರಗತಿ, ವಿದ್ಯಾಭ್ಯಾಸ ಇಲಾಖೆ ಪ್ರಕಾಶನ
* **ಕೃಷ್ಣಮೂರ್ತಿ ಜೆ.** : ಅನುವಾದಕರು : ರಾಘವೇಂದ್ರರಾವ್ ಎಚ್.ಎಸ್. ಶಿಕ್ಷಣ ಮತ್ತು ಜೀವನ, ಪ್ರಕಾಶಕರು ಶಿಕ್ಷಣಕೇಂದ್ರ, ಕೃಷ್ಣಮೂರ್ತಿ ಫೌಂಡೇಶನ್ ಇಂಡಿಯಾ, ಬೆಂಗಳೂರು, ೨೦೦೩.
* **ಕೆಂಪೇಗೌಡ ಕೆ** : ಸಾಮಾನ್ಯ ಭಾಷಾ ವಿಜ್ಞಾನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ಮೈಸೂರು, ೧೯೯೬.
* **ಗಂಗಾಧರಪ್ಪ ಎಸ್.ಆರ್** : ಶಿಕ್ಷಣದ ಮೂಲತತ್ವಗಳು, ರೇಖಾ ಪ್ರಕಾಶನ ದಾವಣಗೆರೆ, ೨೦೦೪.
* **ಗಣೇಶ್ ಆರ್** : ಭಾಷೆ – ಸಾಹಿತ್ಯ ಕುರಿತ ವಿವೇಚನೆಗಳು, ವಸಂತ ಪ್ರಕಾಶನ, ಬೆಂಗಳೂರು–೫೬೦೦೫೩.
* **ಗುರುಲಿಂಗ ಕಾಪಸೆ** : ಕನ್ನಡ ಕಾವಲು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೫.
* **ಗೊರವರ ಬ. ಸೋ** : ಕನ್ನಡ ರಚನಾತ್ಮಕ ಮತ್ತು ಸಮಾಜೋಭಾಷಿಕ ಅಧ್ಯಯನ ಲಡಾಯಿ ಪ್ರಕಾಶನ, ಗದಗ.
* **ಗೋಪಾಲಕೃಷ್ಣಯ್ಯ ಕೆ.ಎಲ್** : ನವಕರ್ನಾಟಕ ಪ್ರೌಢಶಾಲಾ ಕನ್ನಡ ಕೈಪಿಡಿ, ನವಕರ್ನಾಟಕ ಪ್ರಕಾಶನ, ೧೯೯೪.
* **ಗೋವಿಂದರಾಜು ಸಿ.ಆರ್** : ಗೋಕಾಕ್ ವರದಿ, ಕನ್ನಡಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬.
* **ಚಿದಾನಂದಮೂರ್ತಿ ಎಂ** : ಭಾಷಾ ವಿಜ್ಞಾನದ ಮೂಲ ತತ್ವಗಳು, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೧೯೬೫.
* **ಚಿದಾನಂದಮೂರ್ತಿ ಎಂ** : ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಪ್ನ ಬುಕ್ ಹೌಸ್, ಬೆಂಗಳೂರು, ೧೯೭೯.

* **ಚಂದ್ರಶೇಖರ ಸಿ.ಆರ್** : ನಿಮ್ಮ ಮಕ್ಕಳ ಬೆಳವಣಿಗೆ ಚೆನ್ನಾಗಿದೆಯೇ? ನವಕರ್ನಾಟಕ ಪ್ರಕಾಶನ, ೨೦೦೭.
* **ಚಂದ್ರಶೇಖರಯ್ಯ ಪಿ** : ಪರಿಣಾಮಕಾರಿ ಓದು ಏನು? ಹೇಗೆ? ನವ ಕರ್ನಾಟಕ ಪ್ರಕಾಶನ, ೨೦೦೮.
* **ಜಗದೀಶ ಬಸಾಪುರ**: ಶೈಕ್ಷಣಿಕ ಮನೋವಿಜ್ಞಾನ, ಅಭಿಷೇಕ ಪ್ರಕಾಶನ, ಹೂವಿನಹಡಗಲಿ,೨೦೦೬.
* **ಜವರೇಗೌಡ ದೇ** : ಕನ್ನಡ ಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೭.
* **ಜೇನ್‌ಸಾಹಿ ಮತ್ತು ರೋಷನ್‌ಸಾಹಿ** : ಅನುವಾದ, ದಿವ್ಯಜ್ಯೋತಿ, ಕಲಿಕೆಯಲ್ಲಿ ಕಲೆ ಶಿಕ್ಷಕರಿಗಾಗಿ ಸಂಪನ್ಮೂಲ ಪುಸ್ತಕ, ನವಕರ್ನಾಟಕ ಪ್ರಕಾಶನ, ೨೦೦೮.
* **ಜಯಣ್ಣ ಸಿ.ವಿ** : ಶೈಕ್ಷಣಿಕ ಮನೋವಿಜ್ಞಾನದ ಬುನಾದಿಗಳು, ಸಪ್ನ ಬುಕ್ ಹೌಸ್, ಬೆಂಗಳೂರು.
* **ಜಯಣ್ಣ ಸಿ.ವಿ** : ಕಲಿಕೆ ಮತ್ತು ಬೋಧನೆಯಲ್ಲಿ ಮನೋವಿಜ್ಞಾನ, ಸಪ್ನ ಬುಕ್‌ಹೌಸ್ ಬೆಂಗಳೂರು, ೨೦೦೫.
* **ಜಯಣ್ಣ ಸಿ. ವಿ ಮತ್ತು ರುದ್ರಾಣಿ ವಿ. ಸಿ** : ಕನ್ನಡ ವಿಷಯಾಧಾರಿತ ಬೋಧನಾ ಪದ್ಧತಿ ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೬.
* **ಜ್ಯೋತ್ಸ್ನಾಕಾಮತ** : ಕರ್ನಾಟಕದ ಶಿಕ್ಷಣ ಪರಂಪರೆ, ಕನ್ನಡ ಅಧ್ಯಯನ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ, ೧೯೮೮.
* **ತಿರುಮಲೇಶ ಕೆ.ವಿ** : 'ನಮ್ಮ ಕನ್ನಡ' ಅಭಿನವ ಪ್ರಕಾಶನ, ಬೆಂಗಳೂರು, ೨೦೦೬.
* **ಧಾರವಾಡಕರ ಯು** : 'ಕನ್ನಡಭಾಷಾಶಾಸ್ತ್ರ' ಗೀತಾಬುಕ್ ಹೌಸ್,ಮೈಸೂರು, ೧೯೫೧
* **ದೇವರಕೊಂಡಾರೆಡ್ಡಿ** : ಲಿಪಿಯ ಹುಟ್ಟು ಮತ್ತು ಬೆಳವಣಿಗೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨.
* **ದೇವರಾಜ್ ಎಚ್. ಎಲ್** : ಪ್ರೌಢಶಾಲಾ ಶಿಕ್ಷಣದಲ್ಲಿ ವಿಜ್ಞಾನ ಬೋಧನೆ, ಅಂಶು ಪ್ರಕಾಶನ, ಹೊಸಪೇಟೆ, ೨೦೦೮.
* **ದೇಸಾಯಿ ಜಿ.ಎನ್, ದೇಸಾಯಿ ಎಸ್.ಜಿ. ಶ್ರೀಮತಿ ದೇಸಾಯಿ ಎಸ್.ಜಿ** : ಶಿಕ್ಷಣದ ತತ್ವಗಳು, (ತಾತ್ವಿಕತೆ ಮತ್ತು ಸಾಮಾಜಿಕ) ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೧.
* **ದೇಸಾಯಿ ಜಿ.ಎನ್** : ಪ್ರಾಥಮಿಕ ಶಿಕ್ಷಣ, ವಿದ್ಯಾನಿಧಿ ಪ್ರಕಾಶನ, ೧೯೯೯.
* **ನರಸಿಂಹಚಾರ್ ಎಲ್** : ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಭಾರತೀಯ ಪ್ರಕಾಶನ, ಮೈಸೂರು, ೧೯೯೨.

* **ನರಸಿಂಹರಾವ್ ಕೆ.ವಿ.ವಿ.ಎಲ್** : EValuaution in Language Education, ಪ್ರಸಾರಾಂಗ, CIIL Mysore, 1980.

* **ನರಸಿಂಹಮೂರ್ತಿ ಎ. ವಿ** : ಕನ್ನಡ ಲಿಪಿಯ ಉಗಮ ಮತ್ತು ವಿಕಾಸ, ವಿವೇಕ ಹಂಸ ಪ್ರಕಾಶನ ಬೆಂಗಳೂರು-೧೯೯೯

* **ನಾಗಪ್ಪ ಟಿ.ಆರ್** : ಪಠ್ಯಪುಸ್ತಕ ರಚನೆ, ಚಾಮುಂಡಿಪುರಂ, ಮೈಸೂರು, ೧೯೮೮.

* **ನಾಗಪ್ಪ ಬಿ.ಕೆ.** : 'ಶಿಕ್ಷಣ', ಚೇತನ ಬುಕ್‌ಹೌಸ್, ಮೈಸೂರು, ೧೯೯೭.

* **ನಾಗರಾಜ ಎಚ್** : ಪ್ರಾಥಮಿಕ ಶಾಲಾ ವ್ಯಾಕರಣ, ಜನಪದ ಪ್ರಕಾಶನ, ಬೆಂಗಳೂರು.

* **ನಾಡೋಜ ಪಾಟೀಲ ಪುಟ್ಟಪ್ಪ** : ನಾಡು-ನುಡಿ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೭.

* **ನಾರಾಯಣ ಕೆ.ವಿ** : 'ಭಾಷೆ', ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೫.

* **ನಾರಾಯಣ ಕೆ.ವಿ** : ನಮ್ಮೊಡನೆ ನಮ್ಮ ನುಡಿ, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೫.

* **ನಾರಾಯಣ ಕೆ.ವಿ (ಸಂ) ಸುಜ್ಞಾನಮೂರ್ತಿ, ಕನಕೇಶಮೂರ್ತಿ ಬಿ.ಜಿ.** : 'ನಮ್ಮ ಕನ್ನಡ' ಸಂಚಿಕೆ-೨೫ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೭.

* **ನಾರಾಯಣ ಕೆ.ವಿ (ಸಂ)** : ನಮ್ಮ ಕನ್ನಡ ಸಂಚಿಕೆ-೪೮ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

* **ನಾರಾಯಣ ಕೆ.ವಿ (ಸಂ)** : ನಮ್ಮ ಕನ್ನಡ ಸಂಚಿಕೆ-೫೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

* **ನಾರಾಯಣ ಕೆ.ವಿ (ಸಂ)** : ನಮ್ಮ ಕನ್ನಡ ಸಂಚಿಕೆ-೫೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

* **ನಾರಾಯಣ ಕೆ.ವಿ** : ಮತ್ತೆ ಭಾಷೆಯ ಸುತ್ತಮುತ್ತ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ, ಬೆಂಗಳೂರು, ೨೦೦೧.

* **ನಾರಾಯಣ ಕೆ.ವಿ** : ಕನ್ನಡ ಜಗತ್ತು : ಅರ್ಧಶತಮಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

* **ನಾರಾಯಣ ಕೆ.ವಿ (ಸಂ)** : ಹೊನ್ನ ಸಂಚಿಕೆ-೫೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

* **ನಾಯಕ್ ಜೆ.ಪಿ** : ಕನ್ನಡಕ್ಕೆ ಅನುವಾದ, ಮಹಾಬಲೇಶ್ವರರಾವ್, ಶಿಕ್ಷಣ ಆಯೋಗ-ಪೂರ್ವೋತ್ತರ, ಐ.ಬಿ.ಎಚ್. ಪ್ರಕಾಶನ, ೧೯೮೭.

* **ನಾರಾಯಣ ಘಟ್ಟ ಎ.ಆರ್** : ಶಿಕ್ಷಣ ಮಾಧ್ಯಮ ಸಮಗ್ರ ಚಿಂತನ, ಪ್ರಕಾಶಕರು ಗೀತಾ ಕುಟೀರ, ಬೆಂಗಳೂರು, ೧೯೯೩.
* **ನಿತ್ಯಾನಂದ ಬಿ ಶೆಟ್ಟಿ** : ಅರಿವು-ಬರಹ, ೧೯೯೬.
* **ನಂಜುಂಡಸ್ವಾಮಿ ಎ ಎಸ್** : ಭಾಷಾ ಬೋಧನೆ, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೯.
* **ನಂಜುಂಡಸ್ವಾಮಿ ಎ.ಎಸ್** : ಭಾರತೀಯ ಶಿಕ್ಷಣದ ಇತಿಹಾಸ, ಸಮಾಜಪುಸ್ತಕಾಲಯ ಧಾರವಾಡ, ೧೯೯೪.
* **ನಂಜೇಗೌಡ ಸಿ.ಜಿ, ಪ್ರಸಾದ್ ಶೇಖರ್** : ಪಠ್ಯಕ್ರಮ ಕಾರ್ಯಾಚರಣೆಯ ತತ್ವಗಳು, ಎಸ್. ಎಂ. ವಿ. ಪ್ರಕಾಶನ, ಕೋಲಾರ.
* **ಡಿ.ಎಸ್.ಇ.ಆರ್.ಟಿ** : ಬಹುಮುಖಿ-೨, ಬಹುವರ್ಗ ಬೋಧನೆ, ಸಂಚಿಕೆ-೩, ಭಾಗ-೩, ರಾಜ್ಯ ಶೈಕ್ಷಣಿಕ ಸಂಶೋಧನಾ ತರಬೇತಿ ಇಲಾಖೆ, ಬೆಂಗಳೂರು, ೨೦೦೬.
* **ಡಿ.ಎಸ್.ಇ.ಆರ್.ಟಿ** : ಚೈತನ್ಯ ಶಿಕ್ಷಕರ ಸಾಹಿತ್ಯ ಡಿ.ಎಸ್.ಇ.ಆರ್.ಟಿ- ೨೦೦೦.
* **ಡಿ.ಎಸ್.ಇ.ಆರ್.ಟಿ** : 'ಕನ್ನಡ ಸಂಪದ' ಡಿ.ಎಸ್.ಇ.ಆರ್.ಟಿ. ಪ್ರಕಾಶನ, ೨೦೦೫.
* **ಡಿ.ಎಸ್.ಇ.ಆರ್.ಟಿ** : 'ಸೌರಭ', ತ್ರೈಮಾಸಿಕ ಪದ್ಧತಿ ತರಬೇತಿ ಸಂಚಿಕೆ, ಡಿ.ಎಸ್.ಇ.ಆರ್.ಟಿ. ೨೦೦೪.
* **ಡಿ.ಎಸ್.ಇ.ಆರ್.ಟಿ** : ಸೇವಾನಿರತ ಶಿಕ್ಷಕರ ಶಿಕ್ಷಣ ಸಂಚಿಕೆ, ಪ್ರಾಥಮಿಕ ಶಾಲಾ ಶಿಕ್ಷಕರಿಗಾಗಿ ಎನ್.ಸಿ.ಇ.ಆರ್.ಟಿ, ಡಿ.ಎಸ್.ಇ.ಆರ್.ಟಿ, ಪ್ರಕಾಶನ, ೧೯೮೯-೯೦.
* **ಡಿ.ಎಸ್.ಇ.ಆರ್.ಟಿ** : ಪ್ರೌಢಶಾಲಾ ಪರಿಷ್ಕೃತ ಪಠ್ಯವಸ್ತು, ೧೯೯೯-೨೦೦೦, ಪಠ್ಯಪುಸ್ತಕ ನಿರ್ದೇಶನಾಲಯ, ಡಿ.ಎಸ್.ಇ.ಆರ್.ಟಿ, ೧೯೯೯.
* **ಡಿ.ಎಸ್.ಇ.ಆರ್.ಟಿ** : ಚುಕ್ಕಿ ಚಿನ್ನಾ, ನಾಲ್ಕು ಮತ್ತು ಐದನೇ ತರಗತಿ, ಅಂತರ್ ಕ್ರಿಯಾತ್ಮಕ ರೇಡಿಯೋ ಶಿಕ್ಷಣ ಕಾರ್ಯಕ್ರಮ 'ಶಿಕ್ಷಕರ ಮಾರ್ಗದರ್ಶಿ' ಪ್ರಕಾಶನ, ಎಜುಕೇಶನ್ ಡೆವಲಪ್‌ಮೆಂಟ್ ಸೆಂಟರ್ ಇಂಕ್.
* **ಡಿ.ಎಸ್.ಇ.ಆರ್.ಟಿ** : 'ಸೌರಭ', ಡಿ.ಎಸ್.ಇ.ಆರ್.ಟಿ, ಪ್ರಕಾಶನ, ಬೆಂಗಳೂರು, ೨೦೦೭.
* **ಡಿ.ಎಸ್.ಇ.ಆರ್.ಟಿ** : 'ಬಿಂಬ-ಶಿಕ್ಷಕರ ಸಾಹಿತ್ಯ' ಡಿ.ಎಸ್.ಇ.ಆರ್.ಟಿ, ಪ್ರಕಾಶನ, ಬೆಂಗಳೂರು.
* **ಡಿ.ಎಸ್.ಇ.ಆರ್.ಟಿ** : ಪ್ರಾಥಮಿಕ ಶಿಕ್ಷಣದಲ್ಲಿ ಕನಿಷ್ಟ ಕಲಿಕಾ ಹಂತಗಳು, ಡಿ.ಎಸ್.ಇ.ಆರ್.ಟಿ, ೧೯೯೨.

* **ಡಿ.ಎಸ್.ಇ.ಆರ್.ಟಿ** : ಭಾಷಾ ಬೋಧನೆ : 'ಕಲಿಕೆಯ ಕನಿಷ್ಠ ಮಟ್ಟಗಳು,' ಶಿಕ್ಷಕರ ಕೈಪಿಡಿ, (ತರಗತಿ ೩ ಮತ್ತು ೪) ಡಿ.ಎಸ್.ಇ.ಆರ್.ಟಿ, ೧೯೯೫.
* **ಡಿ.ಎಸ್.ಇ.ಆರ್.ಟಿ** : ಬಹುಮುಖಿ-೨ ಸಂಚಿಕೆ-೨, ಭಾಗ-೨, ರಾಜ್ಯಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಪ್ರಕಾಶನ, ೨೦೦೬.
* **ಡಿ.ಎಸ್.ಇ.ಆರ್.ಟಿ** : ಬಹುಮುಖಿ-೨ ಸಂಚಿಕೆ-೩, ಭಾಗ-೧, ರಾಜ್ಯಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು, ೨೦೦೬.
* **ಪಠ್ಯಪುಸ್ತಕ ನಿರ್ದೇಶನಾಲಯ** : ಕನ್ನಡಭಾರತಿ-೨, ಪ್ರಕಾಶಕರು, ಹೆಚ್.ಸಿ. ಬಸವಣ್ಣ, ಜೆ.ಎಸ್.ಎಸ್ ಪ್ರಿಂಟಿಂಗ್ ಪ್ರೆಸ್, ಸರಸ್ವತಿಪುರಂ, ಮೈಸೂರು, ೧೯೯೪.
* **ಪಠ್ಯರಚನಾ ಸಮಿತಿ** : ಕನ್ನಡ ಪ್ರವೇಶ ಭಾರತಿ ಭಾಗ-೧, ಭಾಗ-೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
* **ಪಾಂಡುರಂಗಬಾಬು. ಡಿ (ಸಂ)** : ನಮ್ಮ ಕನ್ನಡ ಸಂಚಿಕೆ-೬೦, ಶಾಲೆಗಳಲ್ಲಿ ಕನ್ನಡ ಬೋಧನೆ ಮತ್ತು ಕಲಿಕೆ, ೨೦೦೫.
* **ಪಾಂಡುರಂಗಬಾಬು ಡಿ** : ನುಡಿನೋಟ, ಆಕಾಶ್ ಪ್ರಕಾಶನ, ಪಾದೇಕಲ್ಲು, ೨೦೦೫.
* **ನರಸಿಂಹಭಟ್ಟ** : ಶಿಕ್ಷಣ-ಶೋಧನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು,೨೦೦೪.
* **ಪುರುಷೋತ್ತಮ ಜಿ** : ಕಿವಿ ಮೊರೆತ, ತಲೆಸುತ್ತು, ನವಕರ್ನಾಟಕ ಪ್ರಕಾಶನ, ೨೦೦೮.
* **ಪುರುಷೋತ್ತಮ ಜಿ** : ಕಿವುಡು ಮಗು ಮಾತಾಡಬಲ್ಲದು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೮.
* **ಪುರುಷೋತ್ತಮ ಜಿ** : ಕಲಿಕೆಯ ತೊಂದರೆಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೯.
* **ಪ್ರಕಾಶ್‌ರಾವ್ ಪಯ್ಯಾರ್** : ಕನ್ನಡ ನಾಡು ನುಡಿ ರಕ್ಷಣೆ ಯಾಕೆ ಮತ್ತು ಹೇಗೆ? ಧ್ವನಿ ಪ್ರತಿಷ್ಠಾನ, ಯು. ಎ. ಇ, ೨೦೦೫.
* **ಪ್ರಶಾಂತ ಎಚ್. ಡಿ** : ಶಾಲಾ ಶಿಕ್ಷಣದ ವಿಕೇಂದ್ರೀಕರಣ ಎಸ್.ಡಿ.ಎಂ.ಸಿ. ಕಾರ್ಯಕ್ಷಮತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.
* **ಪ್ರಶಾಂತ ಎಚ್.ಡಿ** : ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.
* **ಪಂಡಿತ್ ಸಿ. ಕೃಷ್ಣ** : ಶಾಲೆಗಳಲ್ಲಿ ಕನ್ನಡ ಬೋಧನೆ, ಪ್ರಕಾಶನ, ಗೀತಾ ಬುಕ್ ಹೌಸ್, ಮೈಸೂರು, ೧೯೯೦.
* **ಬರಗೂರು ರಾಮಚಂದ್ರಪ್ಪ** : 'ಕನ್ನಡ ಪ್ರಜ್ಞೆ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

* **ಬಸವರಾಜ ಕೋಡಗುಂಟಿ** : ಮಕ್ಕಳ ಭಾಷಾ ವಿಜ್ಞಾನ ಮತ್ತು ಇತರ ಲೇಖನಗಳು, ಬಂಡಾರ ಪ್ರಕಾಶನ, ಮಸ್ಕಿ, ೨೦೦೭.
* **ಭಟ್ಟ ಬೆತ್ತಗೇರಿ ಜೆ.ಪಿ** : ಪಠ್ಯಕ್ರಮ ತತ್ವಗಳು ಮತ್ತು ಯೋಜನೆ, ಪದ್ಮ ಪ್ರಕಾಶನ ಕಾಸರಕೋಡ, ೨೦೦೦.
* **ಭರತ್ ಭೂಷಣ್ ಬಿ** : ಶಿಕ್ಷಣದ ತಾತ್ವಿಕ ಹಾಗೂ ಸಾಮಾಜಿಕ ಆಧಾರಗಳು, ನವೀನ ಪ್ರಕಾಶನ, ಹರಿಹರ, ೧೯೯೫.
* **ಭಾಸ್ಕರರಾವ್ ಬಿ** : ಇಂದಿನ ಶಿಕ್ಷಣ ಪದ್ಧತಿ ಅಸಂಗತ, ಅವೈಜ್ಞಾನಿಕ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೮೨.
* **ಮಂಜುನಾಥ ಬೇದ್ರೆ ಎನ್** : ಆಡಿ ಕಲಿಯೋಣ? ಕನ್ನಡ ಬೇದ್ರೆ ಪ್ರತಿಷ್ಠಾನ, ಚಿತ್ರದುರ್ಗ ನವಕರ್ನಾಟಕ ಪ್ರಕಾಶನ, ಬೆಂಗಳೂರು.
* **ಮರುಳಯ್ಯ ಸಾ.ಶಿ** : ಕನ್ನಡ ಭಾಷಾಲೋಕ ಮತ್ತು ಪೂರಕ ಸಾಹಿತ್ಯ, ಸಪ್ನ ಬುಕ್ ಹೌಸ್, ೨೦೦೭.
* **ಮಲ್ಲಿಕಾರ್ಜುನ ಭ, ಯದುರಾಜನ್ ಎಸ್.ಎಸ್** : 'ನಿರಂತರ,' ಪ್ರಸಾರಾಂಗ ಭಾರತೀಯ ಭಾಷೆಗಳ ಕೇಂದ್ರ ಸಂಸ್ಥಾನ ಮಾನಸಗಂಗೋತ್ರಿ ಮೈಸೂರು, ೨೦೦೦.
* **ಮಹದೇವ ಬಣಕಾರ** : ಆಂಗ್ಲರ ಆಡಳಿತದಲ್ಲಿ ಕನ್ನಡ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೮೬.
* **ಮಹಾದೇವಯ್ಯ ಪಿ** : ಕನ್ನಡ ಬಳಕೆ, ಸಾಮಾಜಿಕ ವಿನ್ಯಾಸ, ವಿಜಯಲಕ್ಷ್ಮಿ ಪ್ರಕಾಶನ, ಮೈಸೂರು, ೨೦೦೬.
* **ಮಹಾತ್ಮಗಾಂಧೀಜಿ ಮೋ.ಕ** : ವಿದ್ಯಾರ್ಥಿಗಳು ರಾ.ಶ್ರೀ. ಹುಕ್ಕೇರಿಕರ ಪ್ರಕಾಶನ ಧಾರವಾಡ.
* **ಮಹಾಬಲೇಶ್ವರರಾವ್** : ಆಧುನಿಕ ಶಿಕ್ಷಣದ ಒಲವುಗಳು, ಪ್ರದೀಪ ಪ್ರಕಾಶನ ಗದಗ, ೨೦೦೭.
* **ಮಹಾಬಲೇಶ್ವರರಾವ್** : ಶಿಕ್ಷಣದಲ್ಲಿ ಮನೋವಿಜ್ಞಾನ, ನವಕರ್ನಾಟಕ ಪ್ರಕಾಶನ, ೨೦೦೮.
* **ಮಹಾಬಲೇಶ್ವರರಾವ್ ಎಂ.ಎಂ** : ವಿದ್ಯಾಮಾನ ಚಿಂತನ ಬರಹಗಳು, ಸ್ವಾಗತ ಸಮಿತಿ, ಉಡುಪಿ, ೨೦೦೭.
* **ಮಹಾಬಲೇಶ್ವರರಾವ್ ಎಂ.ಎಂ** : ಕ್ರಿಯಾ ಸಂಶೋಧನೆ, ಹಳೆ ವಿದ್ಯಾರ್ಥಿ ಪ್ರಕಾಶನ, ಉಡುಪಿ, ೨೦೦೩.
* **ಮಹಾಬಲೇಶ್ವರರಾವ್ ಎಂ.ಎಂ** : ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಬೋಧನೆ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೩.

* **ಮಹಾಬಲೇಶ್ವರರಾವ್ ಎಂ.ಎಂ** : 'ಸ್ಥಿತ್ಯಂತರ,' ಕನ್ನಡ ಪ್ರಚಲಿತ ಪ್ರಕಾಶನ, ಪುತ್ತೂರು–ದಕ್ಷಿಣ ಕನ್ನಡ, ೨೦೦೫.
* **ಮಹಾಬಲೇಶ್ವರರಾವ್ ಎಂ.ಎಂ** : ಪ್ರಶ್ನೆಪತ್ರಿಕೆ ರಚನೆಯ ವಿದಿ ವಿಧಾನಗಳು,
* **ಮಹಾಬಲೇಶ್ವರರಾವ್ ಎಂ.ಎಂ** : 'ಶಿಕ್ಷಣ ಚಿಂತನ,' ಸುರಾಬುಕ್ಸ್ (ಪ್ರೈವೇಟ್) ಲಿಮಿಟೆಡ್, ಚೆನ್ನೈ, ಎರ್ನಾಕುಳಂ, ೨೦೦೭.
* **ಮಹಾಬಲೇಶ್ವರರಾವ್ ಎಂ.ಎಂ** : ಬುದ್ಧಿಶಕ್ತಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೬.
* **ಮಹಾಬಲೇಶ್ವರರಾವ್ ಎಂ.ಎಂ** : 'ರಾಷ್ಟ್ರೀಯ ಶಿಕ್ಷಣ ನೀತಿ' ೧೯೮೬ ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೧೯೯೮.
* **ಮಹಾಬಲೇಶ್ವರರಾವ್ ಎಂ.ಎಂ** : ಸಮೂಹ ಶಿಕ್ಷಣ ಶೋಧ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬.
* **ಯದುರಾಜನ್ ಎಸ್.ಎಸ್** : ರಾಷ್ಟ್ರೀಯ ಪಠ್ಯಕ್ರಮ ನೆಲೆಗಟ್ಟು, ಎನ್.ಸಿ.ಇ.ಆರ್.ಟಿ, ೨೦೦೫.
* **ಯಾದವಾಡ ಎಸ್.ಬಿ** : ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೪.
* **ರವೀಂದ್ರನಾಥ ಕೆ** : ಕರ್ನಾಟಕ ಮಠಗಳು ಮತ್ತು ಕನ್ನಡ ಸಾಹಿತ್ಯ ಪ್ರಭುದೇವರ ಜನ ಕಲ್ಯಾಣ ಸಂಸ್ಥೆ, ಸಂಡೂರು, ೨೦೦೭.
* **ರಹಮತ್ ತರೀಕೆರೆ** : ಕನ್ನಡ ಸಂಶೋಧನೆ ತಾತ್ವಿಕ ವಿಚಾರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.
* **ರಾಜ್ಯಮಟ್ಟದ ಸಂಪನ್ಮೂಲ ಘಟಕ** : ಶಿಕ್ಷಕರ ಕೈಪಿಡಿ, ಪ್ರಾಥಮಿಕ ಶಿಕ್ಷಣದಲ್ಲಿ ಕನಿಷ್ಠ ಕಲಿಕಾ ಹಂತಗಳು, ಡಿ.ಎಸ್.ಇ.ಆರ್.ಟಿ, ಬೆಂಗಳೂರು, ೧೯೯೩.
* **ರಾಜ್ಯಮಟ್ಟದ ಸಂಪನ್ಮೂಲ ಘಟಕ** : ಶಿಕ್ಷಕರ ಕೈಪಿಡಿ, ಪ್ರಾಥಮಿಕ ಶಿಕ್ಷಣದಲ್ಲಿ ಕನಿಷ್ಠ ಕಲಿಕಾ ಹಂತಗಳು, ಡಿ.ಎಸ್.ಇ.ಆರ್.ಟಿ, ಬೆಂಗಳೂರು, ೧೯೯೮.
* **ರಾಜ್ಯಸಂಪನ್ಮೂಲ ಕೇಂದ್ರ** : ನಾಡು ನುಡಿ, ಬೋಧಕರ ಕೈಪಿಡಿ, ಪ್ರಕಟಣೆ, ರಾಜ್ಯ ಸಂಪನ್ಮೂಲ ಕೇಂದ್ರ ಕರ್ನಾಟಕ ಮತ್ತು ಲೋಕಶಿಕ್ಷಣ ನಿರ್ದೇಶನಾಲಯ, ಕರ್ನಾಟಕ ರಾಜ್ಯ ಸಾಕ್ಷರತಾ ಮಿಷನ್ ಪ್ರಾಧಿಕಾರ, ೨೦೦೩.
* **ರಾಜೇಶ್ ಇ ಬೆಳ್ಳರ್** : ಪಠ್ಯಕ್ರಮ ಸಂವಹನಾ ತತ್ವಗಳು, ಕಾವೇರಿ ಪ್ರಕಾಶನ, ಬೆಂಗಳೂರು, ೨೦೦೪.
* **ರಾಮಚಂದ್ರ ಜೋಯಿಸ್ ಎಂ. ಎಸ್, ನರಹರಿ ವಿ** : ಆಧುನಿಕ ಭಾರತೀಯ ಶಿಕ್ಷಣ ತಿರುವುಗಳು ಮತ್ತು ಸಮಸ್ಯೆಗಳು, ಗೀತಾ ಬುಕ್ ಹೌಸ್, ಮೈಸೂರು.

* **ರಾಮನಾಥ್ ಎಚ್.ಕೆ** : ಕನ್ನಡ ಭಾಷೆಯ ಬಳಕೆ, ಸಂಸ್ಕೃತಿ ಬುಕ್ ಏಜೆನ್ಸೀಸ್, ಮೈಸೂರು, ೨೦೦೬.
* **ರಾಮನಾಥ ಎಚ್.ಕೆ** : ಕನ್ನಡ ಭಾಷೆಯ ಬಳಕೆ, ಪ್ರಕಾಶನ, ಸಂಸ್ಕೃತಿ ಪಬ್ಲಿಷಿಂಗ್ ಹೌಸ್ ಮೈಸೂರು, ೨೦೦೬.
* **ರಾಮಯ್ಯ ಎಂ.ಆರ್** : ಶಿಕ್ಷಣದ ಮನಶಾಸ್ತ್ರ, ೧೯೯೩. .
* **ರಾಮೇಶ್ವರ ಎ.ಕೆ** : ಮಕ್ಕಳ ಕಾವ್ಯ, (ಪ್ರಚಾರೋಪನ್ಯಾಸ ಮಾಲೆ) ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.
* **ರಾಜಶೇಖರಯ್ಯ ಕೆ.ಎನ್** : ಶಿಕ್ಷಣ ಮತ್ತು ಮನೋವಿಕಾಸ, ಸುಮುಖ ಪ್ರಕಾಶನ, ಬೆಂಗಳೂರು, ೨೦೦೬.
* **ರಾಜಶೇಖರಯ್ಯ ಕೆ.ಎನ್** : ಕಲಿಕಾ ಪ್ರಕ್ರಿಯೆಗಳು, ಚೇತನ ಬುಕ್ ಹೌಸ್, ಬೆಂಗಳೂರು, ೨೦೦೭.
* **ರೇಣುಕಪ್ರಸನ್ನ ಮ. ಗಂ** : ಮತ್ತಷ್ಟು ಶೈಕ್ಷಣಿಕ ಚಿಂತನೆಗಳು, ಸಂವಹನ, ಶಿವರಾಂಪೇಟೆ, ಮೈಸೂರು, ೧೯೯೬.
* **ರೇಣುಕಪ್ರಸನ್ನ ಮ.ಗಂ** : 'ಒರೆಗಲ್ಲು,' ಅಧ್ಯಾಪಕರ ಸಂಘ, ಜೆ.ಎಸ್.ಎಸ್. ಕಾಲೇಜು, ಮೈಸೂರು, ೧೯೭೫.
* **ರೇಣುಕಪ್ರಸನ್ನ ಮ.ಗಂ** : ಪ್ರಚಲಿತ ಶಿಕ್ಷಣ ಒಂದು ಚಿಂತನೆ, ಅಧ್ಯಾಪಕರ ಸಂಘ, ಜೆ.ಎಸ್.ಎಸ್. ಕಾಲೇಜು, ಮೈಸೂರು, ೧೯೭೮.
* **ರೇಣುಕಪ್ಪ ಬಿ.ಎಸ್**: ಶಿಕ್ಷಣದ ಬುನಾದಿ, ಶಿವಾರ್ಚಿತ ಪ್ರಕಾಶನ,ತುಮಕೂರು, ೨೦೦೪.
* **ಲಲಿತಾಂಬ ವೃಷಬೇಣದ್ರಸ್ವಾಮಿ** : ಮಕ್ಕಳ ಶಿಕ್ಷಣ ಚಿಂತನೆಗಳು, ಮಹಿಳಾ ಸಾಹಿತ್ಯಿಕ ನವನಗರ ಹುಬ್ಬಳ್ಳಿ, ೧೯೯೭.
* **ಲಿಂಗದೇವರು ಹಳೆಮನೆ, ಕಿಕ್ಕೇರಿ ನಾರಾಯಣ,ಎಸ್.ಎಸ್. ಯದುರಾಜನ್** : ರಾಷ್ಟ್ರೀಯ ಪಠ್ಯಕ್ರಮ ನೆಲೆಗಟ್ಟು, ಎನ್.ಸಿ.ಇಆರ್.ಟಿ, ೨೦೦೫.
* **ವೀರಪ್ಪ ಎನ್.ಎಸ್** : ಭಾರತೀಯ ಶಿಕ್ಷಣದ ಇತಿಹಾಸ, (ಕ್ರಿಶ ೮೦೦-೧೯೮೪) ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
* **ವೀರಭದ್ರಪ್ಪ ಬಿ.ವಿ** : ಶಿಕ್ಷಣ ಮತ್ತು ಸಂಸ್ಕೃತಿ, ನವಕರ್ನಾಟಕ ಪ್ರಕಾಶನ, ೨೦೦೫.
* **ಶಂಕರಭಟ್ ಡಿ.ಎನ್** : ಕನ್ನಡ ನುಡಿಯ ಬಗೆಗೆ ಚಿಂತನೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೨೦೦೬.
* **ಶಂಕರಭಟ್ ಡಿ.ಎನ್** : ಕನ್ನಡ ಪದಗಳ ಒಳರಚನೆ, ಭಾಷಾ ಪ್ರಕಾಶನ, ಮೈಸೂರು, ೧೯೯೯.

* **ಶಂಕರಭಟ್ ಡಿ.ಎನ್** : ಭಾಷೆಯ ಬಗೆಗೆ ನೀವೇನು ಬಲ್ಲಿರಿ? ಭಾಷಾ ಪ್ರಕಾಶನ, ೧೯೭೦.
* **ಶಂಕರಭಟ್ ಡಿ.ಎನ್** : ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ, ಭಾಷಾ ಪ್ರಕಾಶನ, ೨೦೦೦.
* **ಶಂಕರಭಟ್ ಡಿ.ಎನ್** : ಇಂಗ್ಲೀಶ್ ಪದಗಳಿಗೆ ಕನ್ನಡದ್ದೇ ಪದಗಳು, ಭಾಷಾ ಪ್ರಕಾಶನ, ಹೆಗ್ಗೋಡು–ಸಾಗರ, ೨೦೦೮.
* **ಶಂಕರಭಟ್ ಡಿ.ಎನ್** : ಮಾತಿನ ಒಳಗುಟ್ಟು, ಭಾಷಾ ಪ್ರಕಾಶನ, ಹೆಗ್ಗೋಡು, ಸಾಗರ–೨೦೦೮
* **ಶಂಕರಭಟ್ ಡಿ.ಎನ್** : ಕನ್ನಡ ನುಡಿ ನಡೆದು ಬಂದ ದಾರಿ. ಭಾಷಾ ಪ್ರಕಾಶನ, ಹೆಗ್ಗೋಡು, ಸಾಗರ.
* **ಶಂಕರಭಟ್ ಡಿ.ಎನ್** : ಕನ್ನಡ ಬರಹವನ್ನು ಸರಿಪಡಿಸೋಣ! ಭಾಷಾ ಪ್ರಕಾಶನ, ಮೈಸೂರು, ೨೦೦೫.
* **ಶಂಕರಭಟ್ ಡಿ.ಎನ್** : ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದು? ಭಾಷಾ ಪ್ರಕಾಶನ, ಮೈಸೂರು, ೨೦೦೫.
* **ಶಾಂತಾ ನಾಗರಾಜ್, ಚಂದ್ರಶೇಖರ್ ಸಿ.ಆರ್ (ಸಂ)** : ಶಾಲಾ ಮಕ್ಕಳ ಪೋಷಕರಿಗೆ ಕಿವಿಮಾತು, ನವ ಕರ್ನಾಟಕ ಪ್ರಕಾಶನ, ೨೦೦೭.
* **ಶಿರೂರ ಬಿ.ವ್ಹಿ** : ಸಂಶೋಧನಾ ಸ್ವರೂಪ, ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ,೨೦೦೦.
* **ಶ್ರೀಧರಮೂರ್ತಿ ಸಿ.ವಿ : ರಾಮ ನಮನ,** (ಡಾ.ಎಚ್.ಕೆ.ರಾಮನಾಥ್ ಅಭಿನಂದನ ಗ್ರಂಥ) ಕಲಾಸುರುಚಿ ಪ್ರಕಾಶನ, ಮೈಸೂರು, ೨೦೦೭.
* **ಶ್ರೀನಾಥಶಾಸ್ತ್ರೀ ಚಿ.ವಿ,ಡಾ. ಎನ್.ಎಸ್. ರಘುನಾಥ,ಡಾ. ಜಿ.ಪುರುಷೋತ್ತಮ, ಡಾ. ಸಿ.ಆರ್. ಚಂದ್ರಶೇಖರ್, ಡಾ. ಜಿ.ರಾಮಕೃಷ್ಣ,** : 'ಶಿಕ್ಷಣದ ಭಾಷೆ ಮತ್ತು ಬುದ್ಧಿವಂತಿಕೆ,' ನವಕರ್ನಾಟಕ ಪ್ರಕಾಶನ, ೨೦೦೬.
* **ಶ್ರೀನಿವಾಸ ಹಾವನೂರ** : ಹೊಸಗನ್ನಡದ ಅರುಣೋದಯ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
* **ಶ್ರೀಧರ ಎಸ್.ಎನ್**. ಇಂದಿನ ಕನ್ನಡ ರಚನೆ ಮತ್ತು ಬಳಕೆ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೫.
* **ಶ್ಯಾಮಲಾ ಕುಮಾರಿ ಬಿ**. ಮೊದಲ ಹೆಜ್ಜೆ, ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು, ೧೯೮೭.

* **ಶ್ಯಾಮಲಾ ಕುಮಾರಿ ಬಿ** : ಹೊಸ ಹೆಜ್ಜೆ, ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆ ಮಾನಸ ಗಂಗೋತ್ರಿ, ಮೈಸೂರು.
* **ಸದಾನಂದ ಕನವಳ್ಳಿ** : ವೀರಶೈವ ಸಾಹಿತ್ಯ ಸಮೀಕ್ಷೆ, ಚನ್ನಪ್ಪ ಕೆರಿಮನಿ, ಮಹಾಕವಿ ಪಂಪ ಪ್ರಕಾಶನ, ಲಕ್ಷ್ಮೇಶ್ವರ, ೧೯೭೬.
* **ಸರ್ವಶಿಕ್ಷಣ ಅಭಿಯಾನ** : ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ, ಪ್ರಾಥಮಿಕ ಶಿಕ್ಷಣ ಮತ್ತು ಸಾಕ್ಷರತಾ ಇಲಾಖೆ,
* **ಸರ್ವಶಿಕ್ಷಣ ಅಭಿಯಾನ** : ಗುಣಾತ್ಮಕ ಸಂಚಿತ ಯೋಜನೆಯ ಉಸ್ತುವಾರಿ ಮಾರ್ಗಸೂಚಿ, ಬಾನುಲಿ ಪ್ರಸಾರ ಕೈಪಿಡಿ, ಕೇಳಿ–ಕಲಿ, ತರಗತಿ–೩ ಮತ್ತು ೪, ಅಂತರ್ ಕ್ರಿಯಾತ್ಮಕ ಕಾಯಕ್ರಮ, ಡಿ.ಎಸ್.ಇ.ಆರ್.ಟಿ, ಸಾರ್ವಜನಿಕ ಶಿಕ್ಷಣ ಇಲಾಖೆ, ೨೦೦೪.
* **ಸಾರ್ವಜನಿಕ ಶಿಕ್ಷಣ ಇಲಾಖೆ** : ಕನ್ನಡ ಭಾಷಾ ಬೋಧನೆ, ಯೋಜನಾ ಕಾರ್ಯ ತರಗತಿಯಲ್ಲಿ ಮೌಲ್ಯಮಾಪನ, ಡಿ.ಎಸ್.ಇ.ಆರ್.ಟಿ, ೨೦೦೫.
* **ಸಾರ್ವಜನಿಕ ಶಿಕ್ಷಣ ಇಲಾಖೆ** : ಬಾನುಲಿ ಪ್ರಸಾರ ಕೈಪಿಡಿ. ಕೇಳಿ–ಕಲಿ ಅಂತರ ಕ್ರಿಯಾತ್ಮಕ ಕಾರ್ಯಕ್ರಮ, ತರಗತಿ–೩ ಮತ್ತು ೪ ಡಿ.ಎಸ್.ಇ.ಆರ್.ಟಿ, ೨೦೦೨–೦೩.
* **ಸಾರ್ವಜನಿಕ ಶಿಕ್ಷಣ ಇಲಾಖೆ** : ಪ್ರಾಥಮಿಕ ಶಾಲಾ ಶೈಕ್ಷಣಿಕ ಮಾರ್ಗದರ್ಶಿ, ಡಿ.ಎಸ್.ಇ.ಆರ್.ಟಿ, ೨೦೦೭–೦೮.
* **ಸಾರ್ವಜನಿಕ ಶಿಕ್ಷಣ ಇಲಾಖೆ** : ಚೈತನ್ಯ –೨ ಶಿಕ್ಷಕರ ಸಾಹಿತ್ಯ–ಕನ್ನಡ, ೫, ೬ ಮತ್ತು ೭ನೇ ತರಗತಿ ಡಿ.ಎಸ್.ಇ.ಆರ್.ಟಿ, ಬೆಂಗಳೂರು, ೨೦೦೨.
* **ಸಾರ್ವಜನಿಕ ಶಿಕ್ಷಣ ಇಲಾಖೆ** : ಬಾನುಲಿ ಪ್ರಸಾರ ಕೈಪಿಡಿ, ಕೇಳಿ–ಕಲಿ ಅಂತರ ಕ್ರಿಯಾತ್ಮಕ ಕಾರ್ಯಕ್ರಮ, ಸರ್ವಶಿಕ್ಷಾ ಅಭಿಯಾನ, ತರಗತಿ–೫, ಡಿ.ಎಸ್.ಇ.ಆರ್.ಟಿ, ಪ್ರಕಾಶನ, ೨೦೦೨.
* **ಸಾಂಬಮೂರ್ತಿ** : ಕನ್ನಡದಲ್ಲಿ ಪ್ರತ್ಯಯಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೬.
* **ಸುರೇಶ್ ಕೆ.ಎಂ** : ಕಲಿಕೆ ಮತ್ತು ಬೋಧನೆಯ ಮನೋವಿಜ್ಞಾನ, ಸುಮುಖಪ್ರಕಾಶನ, ಬೆಂಗಳೂರು, ೨೦೦೬.
* **ಸಂಗಮೇಶ ಸವದತ್ತಿಮಠ** : ತೌಲನಿಕ ದ್ರಾವಿಡ ಭಾಷಾ ವಿಜ್ಞಾನ, ರೂಪರಶ್ಮಿ ಪ್ರಕಾಶನ, ಕಲಬುರ್ಗಿ, ೨೦೦೧.

* **ಸಂಗಮೇಶ ಸವದತ್ತಿಮಠ** : ದ್ರಾವಿಡ ಭಾಷಾ ವ್ಯಾಸಂಗ, ರೂಪರಶ್ಮಿ ಪ್ರಕಾಶನ, ಕಲಬುರ್ಗಿ, ೧೯೯೦.
* **ಹಮೀದ್ ಮಂಜೇಶ್ವರ್, ತುಕಾರಾಮ ಎಕ್ಕಾರು, ಶಿವಪ್ರಕಾಶ ಎನ್:** ಶಾಲಾ ಶಿಕ್ಷಣದಲ್ಲಿ ಯೋಜನೆ ಕಲಿಕೆಯಿಂದ ಅನ್ವೇಷಣೆಯತ್ತ, ಪ್ರಕಾಶಕರು, ಮಗು ಮಧುರ ಕಲಿಕೆ, ಮಂಗಳೂರು, ೨೦೦೫.
* **ಹಿರೇಮಠ ಸಿ.ಜಿ, ತಳವಾರ ಜಿ.ಕೆ. ಉಗರಗೋಳ ಎಂ.ಬಿ** : ಆಧುನಿಕ ಶಿಕ್ಷಣದ ಒಲವುಗಳು, ನಿಶಾಂತ ಪ್ರಕಾಶನ, ಸೀಮಿಕೇರಿ ಬಾಗಲಕೋಟೆ.
* **ಹೆಗಡೆ ಆರ್.ಡಿ, ಇರ್ಫಾನ್ ಹಬೀಬ್, ಪ್ರಭಾತ್ ಪಟ್ನಾಯಕ, ಸಿ.ಪಿ. ಚಂದ್ರಶೇಖರ್, ಕೆ.ಎಂ,ಶ್ರೀ ಮಾಲಿ, ಶಮೀಮ್ ಅಖ್ತರ್, ಅರ್ಜುನ್‌ದೇವ್, ವಿಜೇಂದ್ರ ಶರ್ಮ, ಅನುಭೂತಿ ಮೌರ್ಯ** : 'ಭಾರತದಲ್ಲಿ ಶಿಕ್ಷಣ ಸವಾಲು ಸಾಧ್ಯತೆ', ಪ್ರಕಾಶನ, ಚೇತನ ಪುಸ್ತಕ, ೨೦೦೮.

• • •

# ಅಧ್ಯಯನಕ್ಕೆ ಬಳಸಿಕೊಂಡ ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯಪುಸ್ತಕಗಳು

* **ಕನ್ನಡ ಕಲಿ–ನಲಿ–೧** : ಅಭ್ಯಾಸ ಸಹಿತ ಪಠ್ಯಪುಸ್ತಕ, ಕರ್ನಾಟಕ ಸರ್ಕಾರ, ೨೦೦೭.
* **ಕನ್ನಡ ಕಲಿ–ನಲಿ–೨** : ಪಠ್ಯಸಹಿತ ಅಭ್ಯಾಸ ಪುಸ್ತಕ, ಕರ್ನಾಟಕ ಸರ್ಕಾರ, ೨೦೦೭.
* **ಕನ್ನಡ ಕಲಿ–ನಲಿ–೩** : ಅಭ್ಯಾಸ ಸಹಿತ ಪಠ್ಯಪುಸ್ತಕ, ಕರ್ನಾಟಕ ಸರ್ಕಾರ, ೨೦೦೭.
* **ಕನ್ನಡ ಕಲಿ–ನಲಿ–೪** : ಅಭ್ಯಾಸ ಸಹಿತ ಪಠ್ಯಪುಸ್ತಕ, ಕರ್ನಾಟಕ ಸರ್ಕಾರ, ೨೦೦೮.
* **ಕನ್ನಡ ಕಸ್ತೂರಿ–೫** : ಮೊದಲನೇ ಸೆಮಿಸ್ಟರ್, ಅಭ್ಯಾಸ ಸಹಿತ ಪಠ್ಯಪುಸ್ತಕ, ಕರ್ನಾಟಕ ಸರ್ಕಾರ, ೨೦೦೮.
* **ಕನ್ನಡ ಕಸ್ತೂರಿ–೫** : ಎರಡನೇ ಸೆಮಿಸ್ಟರ್, ಅಭ್ಯಾಸ ಸಹಿತ ಪಠ್ಯಪುಸ್ತಕ, ಕರ್ನಾಟಕ ಸರ್ಕಾರ, ೨೦೦೮.
* **ಕನ್ನಡ ಕಸ್ತೂರಿ–೬** : ಅಭ್ಯಾಸ ಸಹಿತ ಪಠ್ಯಪುಸ್ತಕ, ಕರ್ನಾಟಕ ಸರ್ಕಾರ, ೨೦೦೮.
* **ಕನ್ನಡ ಕಸ್ತೂರಿ–೭** : ಅಭ್ಯಾಸ ಸಹಿತ ಪಠ್ಯಪುಸ್ತಕ, ಕರ್ನಾಟಕ ಸರ್ಕಾರ, ೨೦೦೮.

• • •

# ಪ್ರಸ್ತುತ ಅಧ್ಯಯನಕ್ಕಾಗಿ ಪರಾಮರ್ಶಿಸಲಾದ ಪಿಎಚ್.ಡಿ. ಮಹಾಪ್ರಬಂಧಗಳು

* **ಕುಮಾರಸ್ವಾಮಿ.ಕೆ.ಎಚ್** : ಶೈಕ್ಷಣಿಕ ಸಮಾಜಶಾಸ್ತ್ರೀಯ ಒಂದು ತೌಲನಿಕ ಅಧ್ಯಯನ, ಮಾರ್ಗದರ್ಶಕರು:ಡಾ.ಕುಮಾರಸ್ವಾಮಿ.ಕೆ.ಎಚ್.ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ..
* **ಗಜಾನನ ನಾಯ್ಕ** : ಇಂಗ್ಲೀಷ್ ಗೀತಗಳು ಪೂರ್ವದ ಭಾಷಾಂತರ ಪ್ರಕ್ರಿಯೆ, (೧೮೫೦-೧೯೨೦) ಮಾರ್ಗದರ್ಶಕರು : ಡಾ. ಎಂ.ಉಷಾ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.
* **ಜಗದೀಶ ಬಿ** : A Critical Evaluaution of Kannada Text Books on Karnataka ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ.
* **Dakshinamurthy K** : An interaction effect of Teachers Teaching Effectiveness Teachechers Personality and Teachers Attitude on Academic Achivements Studing in Secondary schools, Guide : Dr. P. Basava Kumaraiah, Kuvempu University
* **ನಂದಾ ಆರ್** : Lexical study of Primary Text 1 to 5th Standard Text (ಒಂದನೇ ತರಗತಿಯಿಂದ ೫ನೇ ತರಗತಿಯವರೆಗಿನ ಕನ್ನಡ ಪಠ್ಯಪುಸ್ತಕಗಳಲ್ಲಿನ ಪದಗಳ ಅಧ್ಯಯನ) ಮಾರ್ಗದರ್ಶಕರು, ಅನ್ವಬ್ ಧಾರವಾಡ ವಿಶ್ವವಿದ್ಯಾಲಯ, ಧಾರವಾಡ
* **ಪ್ರಕಾಶ ಬಿ** : ದಕ್ಷಿಣ ಕನ್ನಡದ ಪ್ರಾಥಮಿಕ ಮತ್ತು ಪ್ರೌಢಶಾಲಾ ಕನ್ನಡ ಪಠ್ಯಪುಸ್ತಕಗಳ ರಾಜನಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಸ್ವರೂಪಗಳ ಅಧ್ಯಯನ, ಮಾರ್ಗದರ್ಶಕರು, ಪ್ರೊ. ಉಪ್ಪಂಗಳ ರಾಮಭಟ್ಟ, ೨೦೦೯.
* **ಪಾರ್ವತಮ್ಮ ಜಿ.ಎಚ್** : ಕಿರಿಯ ಪ್ರಾಥಮಿಕ ಶಾಲಾ ಶಿಕ್ಷಣದ ಮೂಲಕ ಮೂಲಭೂತ ಗ್ರಹಿಕೆಗಳ ಮತ್ತು ಕೌಶಲಗಳ ಸಾಧನೆ, ಮಾರ್ಗದರ್ಶಕರು, ಡಾ.ಕೆ.ಯಶೋಧರ ಮೈಸೂರು ವಿಶ್ವವಿದ್ಯಾಲಯ, ಮೈಸೂರು.
* **ಭೀಮಣ್ಣ ಮೇಟಿ** : ಕನ್ನಡ ಭಾಷೆಯ ಕಲಿಕೆಯ ಸಮಸ್ಯೆಗಳು, (ಗುಲಬರ್ಗಾಜಿಲ್ಲೆಯ ಉರ್ದು ಭಾಷಿಕ ಪ್ರೌಢಶಾಲಾ ಮಕ್ಕಳನ್ನು ಅನುಲಕ್ಷಿಸಿ) ಮಾರ್ಗದರ್ಶಕರು, ಡಾ. ಪಿ.ಮಹಾದೇವಯ್ಯ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

* **ಮಹಾಬಲೇಶ್ವರಾರವ್** : ಪ್ರೌಢಶಾಲಾ ರೇಡಿಯೋ ಕನ್ನಡ ಪಾಠಗಳು, ಒಂದು ಮೌಲ್ಯಮಾಪನ, ಮಂಗಳೂರು ವಿಶ್ವವಿದ್ಯಾಲಯ, ೧೯೯೪.
* **ಮಂಜುಳಾ ಎಸ್.ಕೆ** : ಮಕ್ಕಳಲ್ಲಿ ವಾಕ್ಯರಚನಾ ನಿಯಮಗಳ ಬೆಳವಣಿಗೆ, ಮಾರ್ಗದರ್ಶಕರು, ಕೆ.ವಿ.ನಾರಾಯಣ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.
* **ಸವಿತ ಕೆ.** ಪ್ರಾಥಮಿಕ ಶಿಕ್ಷಣದಲ್ಲಿ ಲಿಂಗಸಂಬಂಧಿ ಆಯಾಮಗಳು, ಸಮಾಜೋ ಆರ್ಥಿಕ ಅಂಶಗಳು, ಮಾರ್ಗದರ್ಶಕರು, ಡಾ.ಎಚ್.ಡಿ. ಪ್ರಶಾಂತ.
* **ಸೋಮಕ್ಕ ಎಂ** : ಲಂಬಾಣಿ ಮಕ್ಕಳ ಕಲಿಕಾ ಸಮಸ್ಯೆಗಳು, (ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಯ ಮಕ್ಕಳನ್ನು ಅನುಲಕ್ಷಿಸಿ) ಮಾರ್ಗದರ್ಶಕರು, ಡಾ. ಪಿ.ಮಹಾದೇವಯ್ಯ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.
* **ಸೋಮಶೇಖರಪ್ಪ ಸಿ.ಎ** : ಭಾರತದಲ್ಲಿ ವಿದ್ಯಾರ್ಥಿ ಅಶಾಂತಿ ಸಮಸ್ಯೆ, ಮಾರ್ಗದರ್ಶಕರು , ಎಚ್. ಮಣ್ಣವಡ್ಡರ ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ.
* **Syed Trif Ahmad** : Rehabilitaion of The Neglected Children , A Case Study Of Two N.G.O. s.i.n. South Delhi, Guide- Dr. Vighnesh N Bhat, KuvemPu University.
* **ಶಿವಸ್ವಾಮಿ ಎಸ್** : ಪದವಿ ತರಗತಿಗಳಲ್ಲಿ ಕನ್ನಡ ಭಾಷಾ ಸಾಹಿತ್ಯ ಕಲಿಕೆ ಒಂದು ವಿವೇಚನೆ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ.

• • •

## ಎಂ.ಫಿಲ್ ಪ್ರಬಂಧಗಳು

* **ಬಸವರಾಜ ಕೋಡಗುಂಟಿ** : ಮಕ್ಕಳ ಭಾಷೆ ಒಂದು ಅಧ್ಯಯನ ಮಾರ್ಗದರ್ಶಕರು, ಸಂಗಮೇಶ ಸೌದತ್ತಿಮಠ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.
* **ತಿಪ್ಪನಾಯಕ್ ಎಸ್.ಪಿ** : ಕನ್ನಡ ಸಂಧಿ, ಸಮಸ್ಯೆಯ ಸ್ವರೂಪ ಒಂದುಅಧ್ಯಯನ ಮಾರ್ಗದರ್ಶಕರು, ಡಾ. ಪಿ.ಮಹಾದೇವಯ್ಯ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.
* **ವರಲಕ್ಷ್ಮಿ ಎಚ್.** ಉನ್ನತ ಶಿಕ್ಷಣದಲ್ಲಿ ಕನ್ನಡ, ಮಾರ್ಗದರ್ಶಕರು ಡಾ. ಮಾಧವ ಪೆರಾಜೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.
* **ಸಿದ್ಧಲಿಂಗಪ್ಪ, ದೇಶಮುಖ್ ಎಸ್** : ಪ್ರೌಢಶಾಲಾ ಮಕ್ಕಳ ಕನ್ನಡದ ಬಳಕೆಯಲ್ಲಿ ಕಾಗುಣಿತ ದೋಷಗಳು, ಮಾರ್ಗದರ್ಶಕರು, ಕೃಷ್ಣಪರಮೇಶ್ವರಭಟ್, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೨೦೦೭-೦೮.

• • •

# ಎಂ.ಎ. ಶಿಕ್ಷಣ ಪದವಿಯ ಕಿರುಪ್ರಬಂಧಗಳು

* **ಅಶೋಕ ಆರ್ ರೆಡ್ಡಿ** : ಪ್ರಾಥಮಿಕ ಶಾಲಾ ಶಿಕ್ಷಕರ ಶೈಕ್ಷಣಿಕ ಆಡಳಿತದ ಬಗೆಗೆ ಹೊಂದಿರುವ ಮನೋವೃತ್ತಿ ಕುರಿತು ಒಂದು ಅಧ್ಯಯನ, ಮಾರ್ಗದರ್ಶಕರು, ಹೂವಿನಭಾವಿ ಬಿ.ಎಲ್, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.
* **ಚನ್ನಬಸವಪ್ಪ ಸಜ್ಜನಶೆಟ್ಟಿ** : ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳಲ್ಲಿ ವೈಜ್ಞಾನಿಕ, ಶಾಬ್ದಿಕ, ಸೃಜನಾತ್ಮಕತೆ ಕುರಿತು ಒಂದು ಅಧ್ಯಯನ, ಮಾರ್ಗದರ್ಶಕರು, ಡಾ. ಹೂವಿನಬಾವಿ ಬಿ.ಎಲ್, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.
* **ಚಿದಾನಂದ ಎನ್. ಮಡಿವಾಳ** : ಪ್ರೌಢಶಾಲಾ ವಿದ್ಯಾರ್ಥಿಗಳ ಪರಿಸರ ವಿಜ್ಞಾನದ ಸಾಧನ ಅಳೆಯುವ ಕುರಿತು ಒಂದು ಅಧ್ಯಯನ, ಮಾರ್ಗದರ್ಶಕರು, ಡಾ.ಹೂವಿನಬಾವಿ ಬಿ.ಎಲ್, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.
* **ಭೀಮಾಶಂಕರ ಎಂ ಅತನೂರೆ** : ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳ ಓದುಗಾರಿಕೆಯ ಸಾಮರ್ಥ್ಯ ಕುರಿತು ಒಂದು ಅಧ್ಯಯನ, ಮಾರ್ಗದರ್ಶಕರು, ಡಾ. ಹೂವಿನಭಾವಿ ಬಿ.ಎಲ್, ಗುಲಬರ್ಗಾ ವಿಶ್ವವಿದ್ಯಾಲಯ.
* **ವಿಜಯರಾಜೇಂದ್ರ ಬಿ** : ರಾಯಚೂರು ತಾಲೂಕಿನ ಪ್ರಾಥಮಿಕ ಶಾಲಾ ಶಿಕ್ಷಕರಮೌಲ್ಯಗಳ ಮೌಲ್ಯಮಾಪನ ಕುರಿತು ಒಂದು ಅಧ್ಯಯನ, ಮಾರ್ಗದರ್ಶಕರು, ಹೂವಿನಬಾವಿ ಬಿ.ಎಲ್ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

• • •

# ಎಂ.ಇಡಿ. ಪದವಿಯ ಕಿರುಪ್ರಬಂಧಗಳು

* **ಕಲಾವತಿ ಬಿ** : ಏಳನೇ ತರಗತಿಯ ವಿದ್ಯಾರ್ಥಿಗಳು ಕನ್ನಡದಲ್ಲಿ ಲೇಖನ ಚಿಹ್ನೆಗಳನ್ನು ಬಳಸುವಾಗ ಮಾಡುವ ದೋಷಗಳ ಒಂದು ತೌಲನಿಕ ಅಧ್ಯಯನ, ಮಾರ್ಗದರ್ಶಕರು, ಎಚ್.ಎಸ್. ಜಯ್ಯಪ್ಪ, ಕುವೆಂಪು ವಿಶ್ವವಿದ್ಯಾಲಯ, (ಬಿ.ಇ.ಎ)

* **ತಿಪ್ಪೇಸ್ವಾಮಿ ಎಚ್** : ಪುನರ್ವಸತಿ ಶಾಲೆಗಳಲ್ಲಿರುವ ಬಾಲಕಾರ್ಮಿಕರ ಸ್ಥಿತಿಗತಿಗಳು ಸಮಾಜಶಾಸ್ತ್ರೀಯ ಅಧ್ಯಯನ, (ವಿಶೇಷವಾಗಿ ದಾವಣಗೇರೆ ತಾಲೂಕಿಗೆ ಸಂಬಂಧಿಸಿ ದಂತೆ) ಮಾರ್ಗದರ್ಶಕರು, ಸಂಜಿನಪ್ಪ ಬಿ.ಎಚ್. ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, (ಬಿ.ಇ.ಎ).

* **ನಾರನಗೌಡ್ರು ಮಂಜುನಾಥ** : ಏಳನೇ ತರಗತಿಯ ಪ್ರಚಲಿತ ಕನ್ನಡ ಪಠ್ಯಪುಸ್ತಕದಲ್ಲಿನ ನೈತಿಕ ಮೌಲ್ಯಗಳನ್ನು ಗುರುತಿಸುವ ಬಗ್ಗೆ ಒಂದು ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ, ೨೦೦೦.

* **ಪುಷ್ಪಾವತಿ ಎಸ್.ಕೆ** : ಐದನೇ ತರಗತಿಯ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಕನ್ನಡ ಓದುಗಾರಿಕೆಯಲ್ಲಿ ಮಾಡುವ ದೋಷಗಳ ತೌಲನಿಕ ಅಧ್ಯಯನ, ಮಾರ್ಗದರ್ಶಕರು, ಮೇರಿಸುವರ್ಣ ಕುವೆಂಪು ವಿಶ್ವವಿದ್ಯಾಲಯ, ೨೦೦೨.

* **ಬಸವರಾಜ ಹಿರೇಮಠ** : ಕುಷ್ಟಗಿ ತಾಲ್ಲೂಕಿನ ಹಿರೇಮನ್ನಾಪುರ ಗ್ರಾಮದ ಐದನೇ ತರಗತಿ ವಿದ್ಯಾರ್ಥಿಗಳ ಕನ್ನಡ ಭಾಷೆಯ ಓದುಗಾರಿಕೆಯಲ್ಲಿನ ದೋಷಗಳ ಕುರಿತು ಒಂದು ಅಧ್ಯಯನ, ಮಾರ್ಗದರ್ಶಕರು, ಮೇರಿ ಸುವರ್ಣ,ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ.

* **ಮಲ್ಲಮ್ಮ** : ಹಿರಿಯ ಪ್ರಾಥಮಿಕ ಶಾಲಾ ಕಲಿಕಾ ಸಾಧನೆಯ ಮೇಲೆ ಕರ್ನಾಟಕ ಶಾಲಾ ಗುಣಮಟ್ಟ ಮೌಲ್ಯಾಂಕದ ಸಂಸ್ಥೆಯ ಪರಿಣಾಮ ಹಾಗೂ ಶಿಕ್ಷಕರ ಅಭಿಪ್ರಾಯ, ಮಾರ್ಗದರ್ಶಕರು, ಉಮಾದೇವಿ ಕುವೆಂಪು ವಿಶ್ವವಿದ್ಯಾಲಯ (ಬಿ.ಇ.ಎ).

* **ಮಂಜುನಾಥಗೌಡ ಟಿ** : ಪ್ರಾಥಮಿಕ ಆಂಗ್ಲ ಮಾಧ್ಯಮ ಶಾಲಾ ಮಕ್ಕಳ ಕನ್ನಡ ಭಾಷೆಯ ಓದುಗಾರಿಕೆಯಲ್ಲಿನ ದೋಷಗಳ ಒಂದು ವಿಶ್ಲೇಷಣಾತ್ಮಕ ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ, ೨೦೦೦.

* **ರವೀಂದ್ರ ಗ. ಕರ್ಜಗಿ** : ಏಳನೇ ತರಗತಿಯ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಕನ್ನಡ ಸಂಯುಕ್ತಾಕ್ಷರ ಪದಗಳಲ್ಲಿ ಮಾಡುವ ಸ್ಖಾಲಿತ್ಯಗಳ ತೌಲನಿಕ ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ (ಬಿ.ಇ.ಎ), ೨೦೦೫.

* **ರಾಜೀವ್ ಇ** : ಪ್ರಸ್ತುತ ಶಾಲಾ ಹಂತದಲ್ಲಿ ವಚನಗಳ ಅಳವಡಿಕೆಯ ಔಚಿತ್ಯತೆ ಹಾಗೂ ತರಗತಿವಾರು ಕನ್ನಡ ಭಾಷಾ ಪಠ್ಯಕ್ರಮದಲ್ಲಿನ ವಚನಗಳಲ್ಲಿನ ಮೌಲ್ಯಗಳನ್ನು ಕುರಿತು ಒಂದು ವಿಶ್ಲೇಷಣಾತ್ಮಕ ಅಧ್ಯಯನ, ಮಾರ್ಗದರ್ಶಕರು, ಮೇರಿ ಸುವರ್ಣ ಕುವೆಂಪು ವಿಶ್ವವಿದ್ಯಾಲಯ, (ಬಿ.ಇ.ಎ),೨೦೦೫.

* **ವೀರಭದ್ರಪ್ಪ ಕೆ** : ಆರನೇ ತರಗತಿಯ ಕನ್ನಡ ಭಾಷಾ ಪಠ್ಯ ಪುಸ್ತಕದಲ್ಲಿನ ಮೌಲ್ಯಗಳ ಒಂದು ವಿಶ್ಲೇಷಣಾತ್ಮಕ ಅಧ್ಯಯನ ಮಾರ್ಗದರ್ಶಕರು, ಬಸವಕುಮಾರಯ್ಯ ಪಿ. ಕುವೆಂಪು ವಿಶ್ವವಿದ್ಯಾಲಯ, (ಬಿ.ಇ.ಎ)

• • •

